had intrigued and besieged their capital; and in spite of the entreaties of the princess, Anantavirya slew them both at once.

In the capital they were received with great rejoicings.

Some days afterwards, when told of her approaching marriage, Kanakasri laments and obtains permission to join the holy order with 4000 virgins under Svayamprabha guru.

Aparajita married Vijaya, and to them was born a daughter called Sumati. When Sumati was of marriageable age, Svayambara was proclaimed and several princes were assembled. Just as the princess was entering the Svayambara hall a Khechari in a Vimana says Remember! In Pushkalardha, E Mandara—Bharata, Nandanapura there was king Mahendra and his wife Anantamati. I, Anantasri was first born and you, Dhanasri next. Once we went to the pleasure garden. We had heard the law (dharma) from Nandagupta famous for the three guptis. We were carried away by Vajranga of Tripura. His wife Vajramalini felt sorry and jealous. By the power called ***parnalaghu vidya*** we were safely thrown near a lake in the forest of Bhimatavi. There we took sanyas and died. I became Navamike to Soudharmendra and you became Rati to Kubera. We met in Nandisvaradvipa and knowing each other worshipped Jina there together and vowed that if either of us go astray in mortal world the other should reclaim. You now forget and are about to do what you ought not." Sumati thanked her sister for the timely advice and promised to join her soon. The angel went her ways. Then Sumati obtaining the permission of her parents, joined the holy order with 500 princesses.

Anantavirya after a life lasting for period of 84 lakhs of pubba passed away to the seventh (nether) world.

§ 7. ACHYUTENDRA.

Aparajita leaving the kingdom to his son Arinjaya joined the holy order under Svayamprabha Tirthesa. He became an *ekavihari*, went to Siddhagiri, spent himself in prayopagamana and became *Achyutendra*.

He went to Nandisvaradvipa, performed Mahamahima. In the last of the sixteen Jinalayas near Mandara Mountain, he saw a Khechara. This was his brother Anantavirya who after spending 24,000 years in the first indraka called Sunanta of the first hell called Ratnaprabhe, and many other lives, was born as Meghanada son of Simhanada and Meghamalini of Gaganavallabhapura N. Vijayardha, and became an Ardha chakraverti after his father. In that capacity he went to Nandisvaradvipa where he met Achyutendra his brother in a former birth and learnt about their past lives from him.

Meghanada returning home left the kingdom to his son Simhanada and took Jina diksha under Abhinahdana muni with desire for moksha lakshmi. Rigorously taking to tapas and finishing by *Upasarga* he became Pratindra in Achyutakalpa and joined his brother there.

§ 8. VAJRAYUDHA.

Their period spent there

Achyutendra (Aparajita) was born as *Vajrayudha* son of Kshemankara Tirthankara and Kanakachitre of Ratnasan-chayapura—Mangalavau country—S bank of the Sita R E videha-Jambudvipa.

Vajrayudha married Lakshmivati and to them Pratindra (Anantavirya) was born as Sahasrayudha.

Sahasrayudha married Manohare to whom was born Kanakasanti.

Kshemankara renounced and took to tapas.

To the court of Vajrayudha came a Charvaka who questioned the truth of the Jaina doctrines. Vajrayudha refutes arguments and proves the superiority of Jainism.

The king on another occasion being informed of the *in* come of a new Chakrayudha went to make puja to it. He had not finished when he learnt that Kshemankara muni had attained kevalajnana. Vajrayudha went to him and paid the customary respects.

Returning to the capital, and finishing the chakra puja the king proceeded on a conquest of the world *(digvijaya).* Soon the six khandas of Bharata were won and the Emperor was as happy as ever on his throne.

Kanakasanti, the famous grandson of the Emperor, married Kanakamale daughter of Merumali of Sivamandirapura and his wife Amitamale. He also married Vasantasena daughter of Jayasena ot Prishatkasarapura and his wife Jayangana. Thus happy with his wives, one day he went for pleasure to Tuhinadri, and finding Vipula munindra there prostrated, heard the law (dharma), got tired of life, and took Jina diksha, while his wives returned to Ratnasanchapura and took dikshe under Vimalamati.

After some days the Emperor, learning that Kanakasanti muni had attained kevalajnana, went to pay him respects. Returuing home he got *nirvega*, resigned the kingdom to his son, and became a nirgrantha, under Kshemarkara Tirthankaru.

§ 9. AHAMINDRA AMITAVIKRAMA.

When Sahasrayudha learnt that Vajrayudha muni had attained Kevalajnana, crowned his son Pritinkara, and took to tapas under Pihitasravagaru. Vajrayudha muni finishing by *prayopagamana* in Siddadri, goes to the last of the nine *graivayakas*, and becomes *Ahamindra* under the name *Amitavikrama.* Sahasrayudhamuni, also finishing by prayopagamana, becomes Ahamindra under the name of Kanti prabha in the same graiveyaka.

§ 10. MEGHARATHA.

Their period (31 sagaras) being spent they were next born as sons to Ghanaratha of Pundarikinipura -Pushkalavati country E Videha—N bank of the Sita River. The first was *Megharatha* by Monohari and the other Dridharatha by Pritimati.

Megharatha married Priyamitre, and Dridharatha Sumati; and their sons were respectively Nandivardhana and Varasena.

Ghanaratha, renouncing in favour of Megaratha, got into the special *sibika* sent by Devendra and attained kevalajnana.

King Megharatha paid customary respects. On another occasion finding that personal beauty is transient, the king with intention of renouncing, offered the government to Dridharatha who was also bent on renouncing. They therefore crowned Nandivardhana, and took Jina diksha under Ghanaratha Tirthankara.

§ 11. MAHENDRA.

Finishing in the manner of Tirthankara sage Megharatha was born as Mahendra in Sarvardha Siddi the highest of the five *anuttares.* Dhridharatha is also born in the same *kalpa* as Indrachandra.

§ 12. SANTIJINA.

When Mahendra's period is spent in the Sarvartha Siddhi, he is born as *Santinatha* the 16th Tirthankar, son of Visvasena of Hastinapura and his queen Indradevi, while Indrachandra is born to Visvasena and Yasas vati as Chakrayudha.

MASULIPATAM,
*10th April 1929.*

PROF. R. TATA. M.A., L.T.,
*District Educational Officer, W. Godavery.*

# ಪೊನ್ನನ ಶಾಂತಿಪುರಾಣಂ.

## ಮುನ್ನುಡಿ.

ಕವಿಜನದೊಳ್ ರತ್ನತ್ರಯ |
ಪವಿತ್ರಮೆನೆ ನೆಗಟ್ದ ಪಂಪನುಂ ಪೊನ್ನಿಗನುಂ ||
ಕವಿರನ್ನನುಮಿೂಮೂವರ್ |
ಕವಿಗಳ್ ಜಿನಸಮಯದೀಪಕರ್ ಪೆಱರೊಳರೇ ||

ಎಂದು ಅಜಿತಪುರಾಣದಲ್ಲಿ ರನ್ನನು ಶ್ಲಾಘಿಸುವ ಕವಿರತ್ನತ್ರಯದಲ್ಲಿ ಪೊನ್ನನೊಬ್ಬನೆಂದು ಹೇಳಿದ ಬಳಿಕ ಪೊನ್ನನ ಕವಿತಾಚಾತುರ್ಯವನ್ನು ಕನ್ನಡಿಗರೆಲ್ಲರೂ ಮೆಚ್ಚುವರಲ್ಲದೆ ಈವರೆಗೆ ಪ್ರಚುರವಾಗದೆ ಕಾರಣಾಂತರಗಳಿಂದ ಕೆಲವರಿಗೆ ಮಾತ್ರವೇ ಪರಿಚಿತನಾಗಿದ್ದ ಪೊನ್ನನ ಪರಿಚಯವನ್ನು ಅಖಿಲ ಕರ್ಣಾಟಕ್ಕೆ ಪರಿಚಯಮಾಡಿಸುವ ಪುಣ್ಯಕ್ಕೆ ಭಾಜನರಾದ ಸಂಪಾದಕಮಂಡಲಿಯ ಮ. ರಾ. ಎ. ವೆಂಕಟರಾಯರೂ, ಶ್ರೀವರ್ಮಾ, ಅಳಲಯದ ಶೇಷಯ್ಯಂಗಾರ್ಯರೂ, ಇವರ ಸಮಕ್ಕೆ ಸಮಯಕ್ಕೊದಗಿದ ಪಿ. ಪಿ. ಅಂಡ್ ಪಿ. ಹೌಸ್, ಲಿಮಿಟೆಡ್ ಮುದ್ರಣಾಲಯದ ಅಧಿಕಾರಿಗಳೂ, ಮತ್ತಿನ ಕನ್ನಡಿಗರೂ ಧನ್ಯರೇ ಸರಿ. ಮಿತ್ರಮಂಡಲಿಯವರೂ, ಕನ್ನಡದೇಶಭಾಷಾಸೇವೆಗೆಂದು ದೃಢಸಂಕಲ್ಪವುಳ್ಳ ಮಹಾಜನರೂ ಇಂತಹ ಶಾಂತಿಪುರಾಣಕ್ಕೆ ಮುನ್ನುಡಿಯನ್ನು ನೀನೇ ಬರೆಯತಕ್ಕುದು ಎಂದು ಎಷ್ಟೋ ಆಭ್ಯಂತರಗಳು ಬಂದರೂ ಸಮಾಧಾನದಿಂದ ತಡೆದು ನನ್ನಿಂದ ಬರೆಯಿಸಿದಲ್ಲದೆ ತೀರದೆಂದು ಈ ಅಲ್ಪಜ್ಞನಿಗೆ ಈ ಮಹಾಕೃತಿಯ ಮುನ್ನುಡಿಯನ್ನು ಬರೆವ ಪುಣ್ಯವೂ ಲಭಿಸಿದುದು ಆಶ್ಚರ್ಯ. ಇಲ್ಲ—ಆಶ್ಚರ್ಯವಲ್ಲ. ಹೂವಿಂದ ನಾರೂ ಮುಡಿಗೇರುವಂತೆ ಮೇಲೆ ಹೇಳಿದ ಮಹಾಶಯರ ಸದಾಶ್ರಯದಿಂದ ಈ ಪುಣ್ಯವು ದೊರೆತುದು ಆಶ್ಚರ್ಯವಲ್ಲ. ಆದರೆ ವಾಚಕಮಂಡಲಿಗೂ ವಿದ್ವನ್ಮಂಡಲಿಗೂ ಕೈಮುಗಿದು ಮುನ್ನುಡಿಗೂ ಮೊದಲನುಡಿಯೊಂದು ಹೇಳಬೇಕಾಗಿರುವುದು. ಅದನ್ನು ಕೇಳಿ ಮುಂದಣ ಲೇಖನವನ್ನು ಓದಬಹುದು.

ಅನೇಕವರ್ಷಗಳ ಹಿಂದೆ ನಾನು ಶಾಂತಿಪುರಾಣವನ್ನು ಒಂದೆರಡುಸಾರಿ ಓದಿ ನನ್ನ ಅಲ್ಪಮತಿಗೆ ತೋರಿದಂತೆ ಒಂದೆರಡು ಸಂಗತಿಗಳನ್ನು ಬರೆದಿಟ್ಟಿದ್ದೆನು. ಅದು ಸರಿಯೋ! ತಪ್ಪೋ! ತಿಳಿಯದೆ ತೆಪ್ಪನೆ ಹದಿನಾಲ್ಕು ವರ್ಷಗಳವರೆಗೆ ತೂಕಡಿಸುತ್ತಿದ್ದ ನನ್ನನ್ನು ಎಬ್ಬಿಸಿ "ಏನು! ನೀನು ಬರೆದಿರುವುದು ಶಾಂತಿಪುರಾಣದ ವಿಷಯ, ನೋಡುವ! ಮತ್ತೊಮ್ಮೆ ಬರೆದು ತೋರಿಸು" ಎಂದು ನಮ್ಮ ಮಿತ್ರರು ಹೇಳಿದುದನ್ನು ಕೇಳಿ ಅಂದಿನಿಂದ ಇಂದಿನವರೆಗೆ ಸ್ಥಾಣುವಿನಂತೆ ಕನ್ನಡವಾಙ್ಮಯದಲ್ಲಿ ಏಕರೀತಿಯಾಗಿ ಅಪರಿಚಿತನಾಗಿಯೋ ಅಲ್ಪಮತಿಯಾಗಿಯೋ ಅಂದು ಬರೆದು ಬಹಿರಂಗದಲ್ಲಿ ಹೇಳಲೊಲ್ಲದೆ ಮೌನದಿಂದಿದ್ದ ನನ್ನ ಮಾತುಗಳನ್ನು ಈಗ ಬಹಿರಂಗಪಡಿಸುವುದರಿಂದ ನನಗೆ ಗುಣವೂ ಉಂಟು; ದೋಷವೂ ಉಂಟು. ಗುಣವೇನೆಂದರೆ ತಪ್ಪುಗಳನ್ನು ತಿದ್ದುವ ವಿದ್ವಾಂಸರೂ ವಿದ್ಯಾರ್ಥಿಗಳೂ ನೋಡದೆ ಬಿಡರೆಂಬುದು; ಇದರಿಂದ ಮುಖ್ಯವಾಗಿ ಭಾಷಾಸೇವೆಯನ್ನು ಇವರು ಮಾಡಿದಂತಾಗುವುದು. ದೋಷದೇನೆಂದರೆ—ನನ್ನ ಬರಹದಲ್ಲಿರುವ ದೋಷವನ್ನು ತಿದ್ದುವುದರಿಂದ ನನಗೇನಾದರೂ ಪ್ರಮಾದವುಂಟಾದೀತೆಂಬ ಭಯ. ಇವೆರಡರೊಳಗೆ ಗುಣವೇ ಲಕ್ಷ್ಯವೆಂದು ತೀರ್ಮಾನಮಾಡಿ ದೋಷವನ್ನು ಲಕ್ಷ್ಯವಿಡದೆ, ಬರೆದಂತೆ ಮತ್ತೊಮ್ಮೆ ಬರೆದು ಹೇಳುವೆನು. ವಾಚಕಮಹಾಶಯರೇ! ಕ್ಷಮೆ ಇರಲಿ,

### ಶಾಂತಿಪುರಾಣವನ್ನು ಬರೆದ ಕಥೆ:—

ವೆಂಗೀ ವಿಷಯವೆಂಬುದೊಂದು ಮಾನಾಡು. ಅದರಲ್ಲಿ ಅಗ್ಗದ ಕಮ್ಮೆ ನಾಡು. ಅಲ್ಲಿ ಪುಂಗನೂರೆಂಬುದು ಊರು. ಅಲ್ಲಿ ಕೌಂಡಿನ್ಯಗೋತ್ರದ ನಾಗಮಯ್ಯನೆಂಬ ಜೈನಬ್ರಾಹ್ಮಣನಿದ್ದನು. ಇವನಿಗೆ ಮಲ್ಲಪ್ಪ—ಪುನ್ನಮಯ್ಯನೆಂಬ ಇಬ್ಬರು ಕುಮಾರರು. ಇವರು ತಮ್ಮ ಗುರುಗಳಾದ ಜಿನಚಂದ್ರದೇವರ ಪರೋಕ್ಷದಲ್ಲಿ ಗುರುಭಕ್ತಿಪೂರ್ವಕವಾಗಿ ಭೂಭುಜರಱಿವಂತೆ, ಸಮಸ್ತದ್ವಿಜರಱಿವಂತೆ, ಅಖಿಳಮುನಿಪರಱಿವಂತೆ ಪೊನ್ನಮಹಾಕವಿಯಿಂದ ಪುರಾಣಚೂಡಾಮಣಿಯೆಂಬ ಶಾಂತಿಪುರಾಣವನ್ನು ಬರೆಯಿಸಿದರು.

ಮಲ್ಲಪ್ಪನು ಅಮ್ಮನಭಕ್ತನೆಂದೂ ಪೊನ್ನಮಯ್ಯನಣ್ಣನಭಕ್ತನೆಂದೂ ಪ್ರಸಿದ್ಧರಾಗಿದ್ದುದಲ್ಲದೆ ಬಲದೇವವಾಸುದೇವರಂತೆಯೂ, ರಾಮಲಕ್ಷ್ಮಣರಂತೆಯೂ, ಭೀಮಾರ್ಜುನರಂತೆಯೂ ಶ್ಲಾಘನೀಯರಾದ ಇವರ ಸಂತತಿಯನ್ನು ಕುರಿತು ಶಾಂತಿಪುರಾಣದಲ್ಲಿ ಏನೂ ಹೇಳಿಲ್ಲ. ಅಜಿತಪುರಾಣದಲ್ಲಿ ಪ್ರಥಮಾಶ್ವಾಸದಲ್ಲಿ ದೊರೆತ ಸಂಗತಿಗಳೂ ಇಲ್ಲಿ ಇಲ್ಲ. ಇವರೊಳಗೆ ಪೊನ್ನಮಯ್ಯನ ಮರಣವನ್ನು ಕುರಿತು:—

ಪರಮದ್ರೋಹರೊಳೊಂದಿ ತನ್ನೊಳಿಱಿಯಲ್ ಗೋವಿಂದರಂ ಬಪ್ಪುರ್ವದುಂ |
ಸೆರಗಂ ಪಾರದೆ ತಾಗಿ "ತೈಲಪನೃಪಂ ಬಾೞ್ಗೆ"ಂದು ಬಾಳ್ಗಿತ್ತು ಮ ||
ಚ್ಚರದಿಂ ಸಾರ್ಚಿದರಂ ಪಡಲ್ವಡಿಸಿ ಕಾವೇರೀಸರಿತ್ತೀರದೊಳ್ |
ಸುರಲೋಕಾತಿಥಿಯಾದ ಪೊನ್ನನೆ ವಲಂ ಗಂಡಂ ಪೆಱರ್ ಗಂಡರೇ ||

ತಲೆ ಪಗೆವರ ಕೆಯ್ಯೊಳ್ ಸುರ |
ಲಲನೆಯ ತೋಳೊಳಗೆ ಪತಿಯ ಭಂಡಾರದೊಳಂ ||
ನೆಲಸೆ ಸುಭಟರ್ಕಳೊಳ್ ಮೂ ||
ದಲೆ ನೆಗೞ್ದುದು ಪೊನ್ನನನ್ನನಾವನೊ ಮೊನೆಯೊಳ್ ||

ಎಂದಲ್ಲದೆ ಪೊನ್ನಮಯ್ಯನ ಸಂತತಿಯ ಸಂಗತಿಯೇನೂ ಇಲ್ಲ. ಇನ್ನು ಶ್ರೀಮದಾಹವಮಲ್ಲದೇವಸಾಮ್ರಾಜ್ಯಲಕ್ಷ್ಮೀಪ್ರವರ್ಧಮಾನ ಹೇತುಭೂತನಿಜಾದೇಶಪರಂಪರಾಪ್ರಕಾಶಿತ ಪರಿಜ್ಞಾನಾತಿಶಯನುಮಪ್ರತಿಮಲ್ಲನುಮೆನಿಪ ಮಲ್ಲಪಂಗೆ—ಅಪ್ಪಕಬ್ಬೆ ಕುಲವಧುವಾಗೆ ಅವರಿಗೆ—ಗುಂಡಮಯ್ಯ, ಎಳಮಯ್ಯ, ಪೊನ್ನಮಯ್ಯ, ಆಹವಮಲ್ಲ, ವಲ್ಲರೆಂಬ ಪುರುಷರತ್ನಗಳೂ, ಅತ್ತಿಮಬ್ಬೆ, ಗುಂಡಮಬ್ಬೆ, ನಾಗಿಯಬ್ಬೆಯರೆಂಬ ಕನ್ಯಾರತ್ನಗಳೂ ಹುಟ್ಟಿದುವು. ಪ್ರಾಪ್ತವಯಸ್ಕೆಯರಾಗಲು ಅತ್ತಿಮಬ್ಬೆ, ಗುಂಡಮಬ್ಬೆಯೆಂಬಿಬ್ಬರನ್ನೂ ಚಾಳುಕ್ಯಚಕ್ರವರ್ತಿಯ ಮಹಾಮಂತ್ರಿಯಾದ ದಲ್ಲಪನ ಮಗನಾದ ನಾಗದೇವನಿಗೆ ಕೊಟ್ಟು ಮದುವೆಮಾಡಿದರು. ಈ ಅತ್ತಿಮಬ್ಬೆಗೂ, ನಾಗದೇವನಿಗೂ ಅಣ್ಣಿಗದೇವನೆಂಬ ತೈಲನಪಡೆವಳ (ನನ್ನಿನಾರಾಯಣ) ಮಗನು ಹುಟ್ಟಿದನು. ಅತ್ತಿಮಬ್ಬೆಯ ಗಂಡನಾದ ನಾಗದೇವನು ಒರಟರಮಲ್ಲನೆಂದು ಪ್ರಸಿದ್ಧಿಪಡೆದು ಅನೇಕ ಸಂಗ್ರಾಮಗಳಲ್ಲಿ ಜಯಶೀಲನಾಗಿ ಕೊನೆಗೆ ರಣರಂಗದಲ್ಲಿ ಮಡಿದು ದೇವಲೋಕಕ್ಕೆ ಹೋಗಲು, ಗುಂಡಮಬ್ಬೆ ಸಹಗಮನವನ್ನು ಮಾಡಿದಳು. ಅತ್ತಿಮಬ್ಬೆ ಅಸಿಧಾರಾವ್ರತಂಗಳನ್ನು ಧರಿಯಿಸಿ ದಾನಚಿಂತಾಮಣಿಯೆಂದು ಪ್ರಖ್ಯಾತಿವಡೆದು—

ಪೊನ್ನಿಗನುಂ ಮಲ್ಲಪನುಂ |
ಪೊನ್ನನಿನಟ್ಟಿಯೆ ಪುರಾಣ ಚೂಡಾಮಣಿಯುಂ ||
ಮುನ್ನಂ ಪೇೞಿಸಿದಂತೆ ಗು |
ಣೋನ್ನತ ಕವಿರತ್ನನಿಂದಿಂದಂ ಪೇೞಿಸಿದಳ್ ||

ಎಂದು ಅಜಿತಪುರಾಣದ ಪ್ರಥಮಾಶ್ವಾಸದಲ್ಲಿ ಹೇಳಿರುವುದು.

ಈ ಅತ್ತಿಮಬ್ಬೆಯ ಕಾಲದಲ್ಲಿಯೇ ಶಾಂತಿಪುರಾಣವು ಪ್ರಸಿದ್ಧವಾಗಿದ್ದು ಪ್ರತಿಗಳು ದೊರೆಯದೆ ಹೋದುದರಿಂದ—

ಎಸೆಯದೆ ಪೂೞ್ದು ಕೆಟ್ಟಪುದು ಶಾಂತಿಪುರಾಣಮುದಂ ನೆಗೞ್ಚುವೆಂ |
ವಸುಧೆಯೊಳೆನ್ನ ತಂದೆಯು ಪರೋಕ್ಷದೊಳೆಂದು ಸಹಸ್ರಪುಸ್ತಕ ||
ಪ್ರಸರಮನತ್ತಿಮಬ್ಬೆ ಪರಮಾದರದಿಂ ಬರೆಯಲ್ಕೆವೇೞ್ದಪೆಂ |
ಪಸದಳಮದ್ವಿತೀಯಮುಸಮುಂ ಸಲೆ ಭಾವಿಸಲೆಯ್ದೆ ಬಣ್ಣಿಸಲ್ ||

ಎಂಬ ಪದ್ಯದಿಂದ ಶಾಂತಿಪುರಾಣದ ಸಹಸ್ರಪ್ರತಿಗಳನ್ನು ಬರೆಯಿಸಿ ಶಾಸ್ತ್ರದಾನವನ್ನು ಮಾಡಿದಳೆಂಬುದು ಸ್ಪಷ್ಟವಾಗುತ್ತದೆ.

ಪೊನ್ನನು ಶಾಂತಿಪುರಾಣದಲ್ಲಿ ಸ್ವವಿಷಯವಾಗಿಯಾಗಲಿ, ಮಲ್ಲಪನ ಸಂತತಿಯ ವಿಷಯವಾಗಿಯಾಗಲಿ ಮತ್ತೇನೂ ಬರೆಯಲಿಲ್ಲ. ಈ ವಿಷಯದಲ್ಲಿ ವಿಕ್ರಮಾರ್ಜುನವಿಜಯದೊಳಗೆ ಆದಿಪಂಪನೂ, ಅಜಿತಪುರಾಣದಲ್ಲಿ ಕವಿರನ್ನನೂ ತಂತಮ್ಮ ದೇಶಕಾಲಗಳನ್ನು ಸ್ಪಷ್ಟವಾಗಿ ಹೇಳಿರುವಂತೆ ಪೊನ್ನನು ಹೇಳದಿರುವುದು ವಿಚಿತ್ರವಾಗಿರುವುದು.

ಗುರುಪರಂಪರೆಯಲ್ಲಿ ಮೊದಲು ಕಾಣೂರ್ಗಣದ ಅರ್ಹನಂದಿ, ಪುರಿಮಂಡಲ, ವೀರಣಂದಿ, ಬೆಟ್ಟದ ದಾಮನಂದಿ, ಚಂದಿನಂದಿ, ಬಳಿಕ ಕೃತಿನಾಯಕನಾದ ಜಿನಚಂದ್ರಮುನಿಗಳ ಹೆಸರುಗಳನ್ನು ಯಥೋಚಿತವಾಗಿ ಸ್ತುತಿಯಿಸಿರುವನು.

ಈ ಜಿನಚಂದ್ರಮುನಿಗಳು ಕವಿವಾದಿವಾಗ್ಮಿಗಮಕಿಗಳಿಗೆ ಆಧಾರರಾಗಿಯೂ, ಶಿಬಿ, ಕರ್ಣ ರಘೂದ್ವಹರೇ ಮೊದಲಾದ ಪೂರ್ವಿಕರ ಸದ್ಗುಣವನ್ನು ಪಡೆದವರೂ, ನೂತನ ಧರ್ಮರಾಜನೋ ಎಂಬಂತೆ ತ್ಯಾಗಿಗಳೂ, ನವೀನ ಸಮಂತಭದ್ರ, ಪೂಜ್ಯಪಾದ ಅಕಳಂಕ ಸ್ವಾಮಿಗಳೂ ಆಗಿದ್ದುದರಿಂದ ಇವರು ಬಹು ಪ್ರಸಿದ್ಧರಾದ ಆಚಾರ್ಯರಾಗಿದ್ದರು. ಅದುಕಾರಣದಿಂದ—

ಎನಗೆ ಜಿನೇಂದ್ರ ಧರ್ಮಮೆ ಶರಣ್ ಮೊನೆಗೊಡ್ಡಿದ ಭೂರಿವೈರಿ ಸಾ |
ಧನ ಹರಣಂ ದಲೆಂದೆ ಜಿನಚಂದ್ರಮುನೀಂದ್ರರ ಪಾದಮೂಲದೊಳ್ ||
ವಿನಮಿತರಾಗಿ ಕೊಂಡು ಕೊನೆವರ್ ಸಲೆ ವಾಣಿಯವಾಡಿಯೊಳ್ ಮಹಾ |
ವನಿಪರದೇನಗಣ್ಯಕೃತಪುಣ್ಯಮೊ ಭಾವಿಸೆ ತನ್ಮುನೀಂದ್ರರಾ ||

ಎಂದು ಹೊಗಳುವುದೂ ಸಹಜವೇ ಸರಿ. ಕೊನೆಗೆ—

ಜಿನಚಂದ್ರ ಮುನೀಂದ್ರನೆ ಶಾಂ |
ತಿನಾಥನೀಶಾಂತಿನಾಥನಾ ಜಿನಚಂದ್ರಂ ||
ಜಿನಚಂದ್ರಮುನೀಂದ್ರನೆ ಶಾಂ |
ತಿನಾಥನಾದೊಂ ಭವಾವಳೀವಿರಮಣದೊಳ್ ||

ಎಂಬಲ್ಲಿ ಅತಿಶಯೋಕ್ತಿ ಇದ್ದರೂ ಇರಬಹುದು.

## ೨. ಶಾಂತಿಪುರಾಣದಲ್ಲಿ ಪೊನ್ನ.

ಪೊನ್ನಂ, ಪೊನ್ನಿಗಂ, ಪುನ್ನಮಾರ್ಯಂ, ಸವಣಂ, ಕುರುಳ್ಗಳಸವಣಂ, ಉಭಯಕವಿಚಕ್ರವರ್ತಿ, ಸೌಜನ್ಯಕಂದಾಂಕುರಂ, ಪಾಪೇಭಕಂಠೀರವಂ ಮೊದಲಾದ ಹೆಸರುಗಳು ದೊರೆವುವು.

ಭುವನದ ಕನ್ನಡ ಸಕ್ಕದ |
ಕವಿಗಳ್ ಸಲೆ ಸಾಲೆ ಸೋಲೆ ಸವಣಂಗಿತ್ತಂ ||
ಸವಿವೇಕಮುಭಯಕವಿಚ |
ಕ್ರವರ್ತಿವೆಸರಂ ನಿಜಾಹಿತೋಷ್ಣಂ ಕೃಷ್ಣಂ ||

ಕವಿತಾವಿಳಾಸಮಂ ಚಕ್ಕಿ।
ಕ್ರವರ್ತಿ ತಾನಿದ್ದುರ್ ಮಚ್ಚಿ ಪೆಸರ್ಗೊಂಡೆರಡುಂ ॥
ಕವಿತೆಯೊಳಮುಭಯಕವಿಚ ।
ಕ್ರವರ್ತಿಯೆನೆ ನೆಗಟ್ದನೀ ಕುರುಳ್ಗಳ ಸವಣಂ ॥

ಎಂಬಿವು ಮೊದಲಾದ ಪದ್ಯಗಳಿಂದ ಪೊನ್ನನ ಕವಿತ್ವಕ್ಕೆ ಮೆಚ್ಚಿ ಉಭಯಕವಿಚಕ್ರವರ್ತಿಯೆಂಬ ಹೆಸರನ್ನು ಕೃಷ್ಣನರೇಂದ್ರನು ಕೊಟ್ಟುದು ನಿಶ್ಚಯವಾಗುವುದು. ಇದಕ್ಕನುಗುಣವಾಗಿ—

ದೊರೆಯಿಲ್ಲೆನೆ ಪೊರೆಯಿಲ್ಲೆನೆ ।
ನೆರವಿಲ್ಲೆನೆ ಸಮಱ ಸಕ್ಕದಂ ಕನ್ನಡಮೆಂ ॥
ಬೆರಡುಂ ಕವಿತೆಯನಮಳ್ಕೆ ।
ತ್ತರಂತಿರೊಡನಡಪಿದಂ ಕುರುಳ್ಗಳ ಸವಣಂ ॥
ನೇರಿದುವೆನಿಪೆರಡುಂ ಕವಿ ।
ತಾರಸವಿಾಸವಣನೊರ್ವ್ವನೊಳ್ ನೆಲಸಿದುವಿ ॥
ನ್ನಾರಾರ ಕವಿತ್ವಮುಮವಿ ।
ಚಾರಿತರಮಣೀಯಮಲ್ಲಿ ಪುರುಳರಸುವುದೇ ॥
ಎರೆದೆಡೆವಪ್ಪ್ರವನುಂ ಮ ।
ಚ್ಚರಿಸುವನುಂ ನುಡಿಗೆ ಸಕ್ಕದಂ ಕನ್ನಡಮೆಂ ॥
ಬೆರಡುಂ ಕವಿತೆಯ ಬಲ್ಮೆಗೆ ।
ಬೆರಲೆತ್ತಿದನಿಳೆಯೊಳೀಕುರುಳ್ಗಳ ಸವಣಂ ॥

ಎಂಬುದರಿಂದ ಸಂಸ್ಕೃತ ಕನ್ನಡಗಳನ್ನು ಜವಳಿಗಳಂತೆ ಸಲಹುತ್ತ ಬಂದನೆಂದು ಸ್ಪಷ್ಟವಾಗುವುದು.

ಪೂರ್ವಕವಿಗಳ ವಿಷಯದಲ್ಲಿಯೂ ತನ್ನ ಸಮಕಾಲದ ಕವಿಗಳ ವಿಷಯದಲ್ಲಿಯೂ ಸಂಪ್ರದಾಯದಂತೆ ಪದ್ಯಗಳನ್ನು ಬರೆದಿರುವನಾದರೂ ಕಾಳಿದಾಸ ಅಸಗರ ಹೆಸರುಗಳಲ್ಲದೆ ಮತ್ತಾವ ಕವಿಗಳ ಹೆಸರನ್ನೂ ಹೇಳದಿರುವುದರಿಂದ ಈತನು ಬಹು ಪ್ರಾಚೀನ ಕವಿಯೆಂದೇ ಹೇಳಬೇಕು.

ಕನ್ನಡಗವಿತೆಯೊಳಸಗಂ ।
ಗನ್ನೂರ್ಮಡಿ ರೇಖೆಗಗ್ಗಳಂ ಸಕ್ಕದದೊಳ್ ॥
ಮುನ್ನುಳ್ಳ ಕಾಳಿದಾಸಂ ।
ಗನ್ನಾಲ್ವಡಿ ರಚನೆಯೊಳ್ ಕುರುಳ್ಗಳ ಸವಣಂ ॥

ಎಂಬುದರಿಂದ ಪ್ರಖ್ಯಾತರಾಗಿದ್ದ ಕಾಳಿದಾಸ, ಅಸಗ ಕವಿಗಳಿಗೂ ಶ್ರೇಷ್ಠನೆಂಬುದು ಆತ್ಮಸ್ತುತಿಯಾಗಿದ್ದರೂ ಇರಬಹುದು. ತನ್ನ ಕಾಲದ ಕವಿಗಳನ್ನು ತೃಣಕ್ಕೆಣೆಯಾಗಿಯೇ ಕಂಡಿರಬೇಕು. ಏಕೆಂದರೆ:—

ಆಯ್ದು ಕಷಾಯೋದಕದೊಳ್ ।
ತೊಯ್ದಸಗಂಬೊಲ್ ನೃಪೇಂದ್ರಸಭೆಯೆಂಬ ಕೊಳ ॥
ಕ್ಕುಯ್ದಲಸದಲೆದು ಸೆಲೆಯೊಳ್ ।
ಪೊಯ್ದಂ ಕವಿಚಕ್ರವರ್ತಿ ಕವಿಚೀವರಮಂ ॥

ಪೊನ್ನನ ಕವಿತ್ವವು ನೇಮಿಚಂದ್ರ, ತಿರುಮಲಾರ್ಯಕವಿಗಳ ಕವಿತ್ವದಂತೆ ಪಂಡಿತರಿಗೆ ಮಾತ್ರವೇ ರಂಜಕವಾದುದೆಂದು ಹೇಳತಕ್ಕುದಲ್ಲ. ಅನೇಕ ಕವಿಗಳ ಮತವಿದು—ಮೂಢರಿಗೂ, ಅಕ್ಷರ ಹೀನರಿಗೂ ಹೇಳಿ ಪ್ರಯೋಜನವಿಲ್ಲ; ಅವರ ಮೆಚ್ಚುಗೆ ಅಗತ್ಯವಿಲ್ಲ; ತಿಳಿದ ಪಂಡಿತನೊಬ್ಬನಾದರೂ ಸೈಯೆಂದರೆ ಸಾಕು ಎಂಬುದು ಬಹುಮತ. ಪೊನ್ನನು ಇಂತಹ ಅಭಿಪ್ರಾಯದಿಂದ ಬರೆಯಲಿಲ್ಲ. ಆದುದರಿಂದ ಪಂಡಿತಪಾಮರರೆಲ್ಲರಿಗೂ ರಂಜಕವಾಗಿ ಬರೆವ ಸಾಮರ್ಥ್ಯವು ಅನ್ಯಾದೃಶವಾದುದು.

ಅತಿಗಂಭೀರಮೃದೂಕ್ತಿ ವಕ್ತ್ರದೊಳೊಡಂಬಟ್ಟೊಪ್ಪೆ ಕೇಳ್ದಂ ಬಹು |
ಶ್ರುತನಲ್ಪಶ್ರುತನೆನ್ನದಾರ ಕಿವಿಗಂ ನುಣ್ಪಿಂಪಿನೊಳ್ ಕೂಡೆ ಪಂ ||
ಡಿತರುಂ ಮೂರ್ಖರುಮೆಕ್ಕೆಯಿಂ ಪೊಗೞೆ ಪೇೞಲ್ ಬಾಜಿಸಲ್ ಮುಂ ಸರ |
ಸ್ವತಿಯಂ ಸಾಧಿಸೆ ಸಂದ ಸಯ್ಪು ಸವಣಂಗಕ್ಕುಂ ಪೆಱರ್ಗ್ಗಕ್ಕುಮೇ ||

ಎಂದು ಹೇಳುವ ಅಭಿಪ್ರಾಯಕ್ಕೂ—

.... .... .... ಕಟ್ಟೆಯುಮೇನೊ ಮಾಲೆಗಾ |
ಱನ ಪೊಸಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿ ಪೋಗದೇ ||

ಎಂಬ ಜನ್ನನ ಅಭಿಪ್ರಾಯಕ್ಕೂ,

ವಿದಗ್ಧಜನದ ಮನಮನಲೆಯಲೆ ವೇಡಾ

ಎಂಬ ಪಂಪನ ಮತಕ್ಕೂ ಎಷ್ಟೋ ತಾರತಮ್ಯವಿರುವುದು.

ಪೊನ್ನನು ಅಸಹಾಯದಿಂದ ಕವಿತ್ವವನ್ನು ಮಾಡಬಲ್ಲವನು. ರನ್ನನು ಗದಾಯುದ್ಧದಲ್ಲಿ ಕೇಶಿಯಿಂದ ತಿದ್ದಿಸಿಕೊಂಡಂತೆ ಹೇಳಿಕೊಂಡಿರುವನು. ಇದನ್ನು

ರನ್ನಂ ವೈಯ್ಯಾಕರಣಂ |
ಜನ್ನಂ ಮೇಣ್ ಕವಿಗಳೊಳಗೆ ವೈಯಾಕರಣಂ ||
ಪೊನ್ನನಸಹಾಯಕವಿ ಮೇಣ್ |
ಜನ್ನಿಗನಸಹಾಯಸುಕವಿ ಕವಿಚಕ್ರಿಗಳೊಳ್ ||

ಎಂಬ ಅನಂತನಾಥಪುರಾಣದ ಪದ್ಯವು ಸಮರ್ಥಿಸುವುದು.

ಪಂಪನು:—

ಕದಳೀ ಗರ್ಭಶ್ಯಾಮಂ |
ಮೃದುಕುಟಿಲಶಿರೋರುಹಂ ಸರೋರುಹವದನಂ ||
ಮೃದುಮಧ್ಯಮತನು ಹಿತಮಿತ |
ಮೃದುವಚನಂ ಲಲಿತಮಧುರಸುಂದರವೇಷಂ ||

ಎಂದು ಮೊದಲಾಗಿ ತನ್ನನ್ನು ವರ್ಣಿಸಿಕೊಂಡಿರುವಹಾಗೂ;

ತರುಣಿಯರ ಕುರುಳನಿಳಿಪಲ್....

ಎಂದು ಮೊದಲಾದ ಜನ್ನನು ಹೇಳಿಕೊಂಡಿರುವಹಾಗೂ ಸ್ವವಿಷಯವನ್ನು ಪೊನ್ನನು ಹೇಳದಿರುವುದರಿಂದ ಇವನು ಸವಣನೇ ಸರಿಯಾದರೂ ಕುರುಳ್ಗಳ ಸವಣಂ ಎಂಬುದರಿಂದ ಮಂಡೆಯನ್ನು ಬೋಳಿಸದೆ ಕುರುಳ್ಗಳನ್ನು ಬೆಳಸಿದ ಸವಣನಾಗಿರಬೇಕೆಂದು ಊಹಿಸಬಹುದು. ಪೊನ್ನನ ಆಕಾರಕ್ಕೆ—

ಸಮವೃತ್ತ ಸಂಧಿ ಲಕ್ಷಣ |
ಸಮನ್ವಿತಂ ಜಾತ್ಯಲಂಕೃತಭ್ರಾಜಿತ ಮು ||
ತ್ತಮಕಾವ್ಯಬಂಧದಂತಾ |
ದಮಿತಾರಿಗೆ ಸಾಜಮೊಪ್ಪುಗುಂ....||

ಎಂಬ ಪದ್ಯವೇನಾದರೂ ಸಂಬಂಧಿಸಿರಬಹುದೋ ಹೇಳಲಾಗದು. ಆತ್ಮಸ್ತುತಿಯಲ್ಲಿಯೂ ಮಿತವಾಗಿಯೇ ಇರತಕ್ಕವನೆಂದು ಮಾತ್ರ ಹೇಳಬಹುದೇಕೆಂದರೆ:—

ಅಮಿತ ಗುಣವರ್ಣನ ಪ್ರ |
ಕ್ರಮಕ್ಕೆ ಸಲೆ ನಾಣ್ಚಿ ತಲೆಯನೆಱಗಿದ ಸುಜನೋ |
ತ್ತಮರಂತೆ .... ....||

ಎಂದು ಹೇಳಿರುವನು. ಇವನ ಕವಿತ್ವದ ಥಾಟಿಯ ವಿಷಯದಲ್ಲಿ ಅನೇಕ ಪದ್ಯಗಳಿರುವುವಾದರೂ

ತನ್ನದೇ ಒಂದು ರೀತಿಯೆಂದೂ, ತಡೆಯಿಲ್ಲದೆ ಹೆದರದೆ ತೊಡಕುಗೊಳ್ಳದೆ ಗಂಭೀರವಾಗಿ ಹೇಳುವ ಶಕ್ತಿ ತನ್ನದೊಂದೇ ಎಂದೂ ಬಗೆದಿದ್ದಂತೆ ಕಾಣುವುದು.

ಅತಿಶಯವರ್ಣಕ್ರಮಮೊಂ !
ದುತೆಱಂ ಪದರಚನೆಯೊಂದು ತೆಱನರ್ಥಮದೊಂ ||
ದುತೆಱಂ ಬೆಡಗುಂ ಬೇಱೊಂ |
ದುತೆಱಂ ನುಡಿಗೆನೆ ಮನಕ್ಕೆವರೆ (ಹಳಿ) ನುಡಿದಂ ||
ಪದದಪ್ಪದೆಯುಂ ಬಗೆ ಬೆದ |
ರದೆಯುಂ ಕಥೆ ಕಿಡದೆಯುಂ ಭವಾವಳಿ ತಡಮಾ ||
ಡದೆಯುಂ ಸವಿತವದೆಯು ಮಂ |
ಬುದನಿನದನತಂದ್ರನಿಂದ್ರನಾ ಜಿನಚಂದ್ರಂ ||

ಸವಿ ತವದಂತು ಪೇೞಿಸಿದರೆಂದೊಡೆ ಶಾಂತಿಪುರಾಣಮೇಂ ಕರಂ |
ನವರಸಮೇ ಸಮರ್ಥಯುತಮೇ ಮೃದುಬಂಧನಮೇ ಪ್ರಸನ್ನಮೇ ||

ಎಂಬಿವುಮೊದಲಾದ ವಾಕ್ಯಗಳು ಉಚಿತವೆಂದೇ ಹೇಳಬೇಕು.

ಸಾಮಾನ್ಯವಾಗಿ ಕವಿಗಳು ಹೇಳಿಕೊಳ್ಳುವಂತೆ—

ಶಾಂತಿ ಪುರಾಣದ ರೇಖೆಗ |
ಳಂತುಱದೞಗವಿಯ ರೇಖೆ ಬರ್ಕ್ಕುಮೆ ಶಶಭೃ ||
ತ್ಕಾಂತಿಗೆ ಮಿಂಚುಂಬುಬು ಸಮ |
ನೆಂತಕ್ಕುಮೊ ದೊರೆಗಮೊರೆಗಮೆಣೆಗಂ ತೊಣೆಗಂ ||

ಎಂಬುದನ್ನು ಪೊನ್ನನು ಹೇಳುವುದು ಸಹಜ.

೧. **ಶಾಂತಿಪುರಾಣ**
೨. **ಭುವನೈಕ ರಾಮಾಭ್ಯುದಯ**
೩. **ಗತಪ್ರತ್ಯಾಗತ**
೪. **ಜಿನಾಕ್ಷರಮಾಲೆ**

ಎಂಬಿವು ನಾಲ್ಕು ಪೊನ್ನಕವಿಯ ಕೃತಿಗಳು.

ಭುವನೈಕರಾಮಾಭ್ಯುದಯವೆಂಬುದು ಹದಿನಾಲ್ಕು ಆಶ್ವಾಸಗಳುಳ್ಳ ಮಹಾಕಾವ್ಯವಾಗಿರಬೇಕು.

ವಿದಿತ ಭುವನೈಕರಾಮಾ |
ಭ್ಯುದಯಕ್ಕಂ ಬೆಲೆಗಮಾವುದಂತರ ಮಿಂತೀ ||
ಪದಿನಾಲ್ಕುಂ ಭುವನಂಗಳ್ |
ಪದಿನಾಲ್ಕಾಶ್ವಾಸರಚನೆಗಂ ಬೆಲೆಯಕ್ಕುಂ ||

ಎಂದು ಶಾಂತಿಪುರಾಣದಲ್ಲಿ ಹೇಳಿರುವುದು. ಈ ಗ್ರಂಥದಿಂದ—

ಉದಯಾಸ್ತೋನ್ನತ ಶೈಲಸೇತು ಹಿಮವತ್ಕುತ್ಕೀಲಪರ್ಯಂತ ಸಂ |
ಪದೆಯಂ ವಾರ್ಧಿತರಂಗರಂಗನಿನದತ್ಕಾಂಚೀಕಲಾಪಾಂಚಿತಾ ||
ಸ್ಪದೆಯಂ ಸಾಧಿಸಿ ಕಬ್ಬಿಗಂಗೆ ನೆಲನಂ ನಿರ್ವ್ಯಾಜದಿಂದಂ ನಿಮಿ ||
ರ್ಚಿದ ಗೆಲ್ಲಂ ಭುವನೈಕರಾಮಹಿಸಂಗಕ್ಕುಂ ಪೆಱರ್ಗ್ಗಕ್ಕುಮೇ ||
.... .... .... ಆನೆಯಮೇಲೆಯು ಮಾಳನೇಲೆಯುಂ |
ಕುದುರೆಯ ಮೇಲೆಯುಂ ಪರಿದುದೊಂದೆ ಗಜಂ ಭುವನೈಕರಾಮನಾ ||

ಎಂಬ ಪದ್ಯಗಳನ್ನು ಶಬ್ದಮಣಿದರ್ಪಣದಲ್ಲಿ ಕೇಶಿರಾಜನು ಉದ್ಧರಿಸಿರುವನು.

## ೩. ಶಾಂತಿಪುರಾಣದ ಕಥಾಭಾಗ.

ಶಾಂತಿತೀರ್ಥಂಕರರ ಭವಾವಳಿಯಲ್ಲಿ:—

| | | | | | | | |
|---|---|---|---|---|---|---|---|
| ೧. | ಶ್ರೀಷೇಣ | vi | 59ವ—92 | ೨. | ಭೋಗ ಭೂಮಿಜ | vi | 97ವ—vii 12 |
| ೩. | ಶ್ರೀದೇವ | vii | 12ವ—42 | ೪. | ಅಮಿತತೇಜ | vii | 42ವ—71ವ |
| ೫. | ಮಣಿಚೂಳ | vii | 72—79 | ೬. | ಅಪರಾಜಿತ | vii | 79ವ—i 77—iv, 111 |
| ೭. | ಅಚ್ಯುತೇಂದ್ರ | iv | 111 | ೮. | ವಜ್ರಾಯುಧ | vii | 114—ix 30 |
| ೯. | ಅಹಮಿಂದ್ರ | ix | 30ವ—38 | ೧೦. | ಮೇಘರಥ | ix | 42—120 |
| ೧೧. | ಮಹೇಂದ್ರ | ix | 120ವ—212ವ | ೧೨. | ಶಾಂತಿನಾಥತೀರ್ಥಂಕರ | ix | 215ವ—216 |

ಇದು ಕಾಲಕ್ರಮವನ್ನು ಅನುಸರಿಸಿದೆ. ಆದರೆ ಕವಿ ಅಪರಾಜಿತಭವದಿಂದ ಆರಂಭಿಸಿರುವನು ಅಚ್ಯುತೇಂದ್ರನಾಗಿದ್ದು ಅಮಿತತೇಜ ಮತ್ತು ಮಣಿಚೂಳ ಭವಗಳನ್ನು ತಾನಾಗಿಯೇ ಹೇಳುತ್ತಾನೆ. ವಿಜಯಕೇವಲಿಗಳಿಂದ ಶ್ರೀಷೇಣ, ಭೋಗಭೂಮಿಜ, ಶ್ರೀದೇವಭವಗಳನ್ನು ಹೇಳಿಸಿರುವನು. ಉಳಿದ ಭವಗಳನ್ನು ಕಾಲಕ್ರಮದಲ್ಲಿ ಹೇಳಿರುವನು.

ಆದಿಪುರಾಣದಲ್ಲಿ ಭವಾವಳಿಗಳ ಕ್ರಮವನ್ನು ಎರಡನೆಯ ಆಶ್ವಾಸದಲ್ಲಿಯೇ ಪೀಠಿಕಾಕ್ರಮದಿಂದ:-

> ಈಗಳ್ ನೀನಿರ್ದು ನೋನಿಸೆ ನೋಂತು ಮಹಾಬಳಂ ಲಲಿತಾಂಗಂ ವಜ್ರಜಂಘಂ |
> ಭೋಗ ಭೂಮಿಜಂ ಶ್ರೀಧರದೇವಂ ಸುವಿಧಿನರಾಧಿಪನಚ್ಯುತೇಂದ್ರಂ ||
> ಸಾಗರಾಂತಂ ನೆಲನೆನಿತನಿತುಮಂ ಚಕ್ರದಿಂ ಬೆಸಕೆಯ್ಸಿ ವಜ್ರನಾಭಿ |
> ಯಾಗಿ ಸರ್ವಾರ್ಥಸಿದ್ಧಿಯೊಳ್ ಪುಟ್ಟಿ ಭರತದೊಳಿನ್ನಾದಿದೇವನಪ್ಪೆಂ ||

ಎಂದು ಹೇಳಿ ಇದೇ ಕ್ರಮವನ್ನು ಅನುಸರಿಸಿ ಕಥೆಯನ್ನು ವಿಸ್ತರಿಸಿರುವುದು.

ಚಂದ್ರಪ್ರಭ ಪುರಾಣದಲ್ಲಿ ಶ್ರೀಧರಸ್ವಾಮಿಗಳಿಂದ ಪದ್ಮನಾಭನು ಪೂರ್ವಭವಗಳನ್ನು ತಿಳಿದು ದೀಕ್ಷೆಗೊಂಡು ಸಮಾಧಿಯಿಂದ ಮುಡಿಪಿ ಅಹಮಿಂದ್ರನಾಗಿ ಬಳಿಕ ಚಂದ್ರಪ್ರಭತೀರ್ಥಕರಸ್ವಾಮಿಯಾಗಿ ಅವತರಿಸಿದಂತೆ ಹೇಳಿರುವುದು,

ಅಜಿತ ಪುರಾಣದಲ್ಲಿಯೂ ಮಲ್ಲಿನಾಥಪುರಾಣದಲ್ಲಿಯೂ ವಿಸ್ತಾರವಾದ ಭವಾವಳಿಗಳಿಲ್ಲ. ಅರಸ, ಬಳಿಕ ಅಹಮಿಂದ್ರ, ಆಬಳಿಕ ತೀರ್ಥಾವತರಣ ಏಮೂರೇ ಹೇಳಿರುವುವು.

ಇದಕ್ಕಾಗಿಯೇ 'ಭವಾವಳಿ ತಡಮಾಡದೆಯುಂ' ಎಂದು ಶಾಂತಿಪುರಾಣದಲ್ಲಿ ಒತ್ತಿ ಹೇಳಬೇಕಾಗಿರುವುದು.

ಕಥಾಭಾಗದಲ್ಲಿ ನಮ್ಮ ಶಾಂತಿಪುರಾಣಕ್ಕೂ ಶ್ರೀಪುರಾಣವನ್ನು ಅನುಸರಿಸಿರುವ ಶಾಂತೀಶ್ವರ ಪುರಾಣಕ್ಕೂ ಕೆಲವೆಡೆಗಳಲ್ಲಿ ವ್ಯತ್ಯಾಸಗಳು ಕಾಣಬರುವುವು. ಉದಾಹರಣೆಗಾಗಿ ಒಂದೆರಡನ್ನು ಮಾತ್ರವೇತಿಳಿಸಿ ವಾಚಕರು ತಾವಾಗಿಯೇ ನೋಡಲೆಂದು ಇಲ್ಲಿ ಹೇಳುವೆನು.

ಐದನೆಯ ಆಶ್ವಾಸದಲ್ಲಿಯ ತ್ರಿಪೃಷ್ಠಚರಿತ್ರೆ ಸಾಮಾನ್ಯವಾಗಿ ಜೈನರಲ್ಲಿ ಬಹುಪ್ರಸಿದ್ಧವಾದುದು ಇದರಲ್ಲಿ ಸ್ವಯಂಪ್ರಭೆಯ ಸ್ವಯಂಬರಕ್ಕೆ ಹಿಂದೆ ಅರ್ಕಕೀರ್ತಿಗೂ ಜ್ಯೋತಿರ್ಮಾಲೆಗೂ ಮದುವೆಯಾದಂತೆ ಹೇಳಿರುವುದು. ಶ್ರೀಪುರಾಣದಲ್ಲಿ ಈ ವಿವಾಹವು ಸ್ವಯಂಪ್ರಭಾಸ್ವಯಂವರವಾದ ಬಳಿಕೇ ವಿಶದವಾಗುವುದು.

ಇಲ್ಲಿ ತ್ರಿಪೃಷ್ಠನ ಸಾಹಸಗಳನ್ನು ಸಂಭಿನ್ನನೆಂಬ ನೈಮಿತ್ತಿಕನು ಜ್ವಲನಜಟಿಮಹಾರಾಜನು ಮಂತ್ರಿಗಳೊಡನೆ ಒಡ್ಡೋಲಗದಲ್ಲಿದ್ದಾಗ ವರ್ಣಿಸಿದಂತೆ ಹೇಳಿರುವುದು; ಶ್ರೀಪುರಾಣದಲ್ಲ ಸಭಾವಿಸರ್ಜನೆಯಾದಮೇಲೆ ಹೇಳಿದಂತೆ ಕಾಣುವುದು.

ಇಲ್ಲಿ ಜ್ವಲನಜಟಿರಾಜನು ತಪಸ್ಸಿಗೆ ಹೋದನೆಂಬ ವಾರ್ತೆಯನ್ನು ಕೇಳಿದಮೇಲೆ ಪ್ರಜಾಪತಿ ರಾಜನು ತಪಸ್ಸಿಗೆ ಹೋದಂತೆ ಹೇಳಿರುವುದು; ಶ್ರೀಪುರಾಣದಲ್ಲಿ ಇವೆರಡೂ ಹಿಂದು ಮುಂದಾಗಿ ಹೇಳಲ್ಪಟ್ಟಿರುವುವು.

ಇಲ್ಲಿ ತ್ರಿಪೃಷ್ಠನ ಅಣ್ಣನಾದ ವಿಜಯನು ಪಿಹಿತಾಸ್ರವ ಸ್ವಾಮಿಗಳಲ್ಲಿ ದೀಕ್ಷೆಗೊಂಡಂತೆ ಹೇಳಿರುವುದು; ಶ್ರೀ ಪುರಾಣದಲ್ಲಿ ಗುರುಗಳು ಸ್ವರ್ಣಕುಂಭಯೋಗೀಂದ್ರರೆಂದು ಹೇಳಿರುವುದು.

ವಿಶಾಖಭೂತಿ ಅವಿಧೇಯರಾದ ರಾಜರನ್ನು ದಂಡಿಸಲೆಂದು ವಿಶ್ವನಂದಿಯನ್ನು ದೂರದೇಶದ ಯುದ್ಧಕ್ಕೆ ಕಳುಹಲು, ಅವನಿಗೂ ತಿಳಿಯದೆ ಅವನ ಮಗನಾದ ವಿಶಾಖನಂದಿ ವಿಶ್ವನಂದಿಯ ಉಪವನವನ್ನು ಆಕ್ರಮಿಸಿದನೆಂದು ಹೇಳಿರುವುದು. (ಎಮಗಮುಱಿಪದೆ ನಿನ್ನ ಪರೋಕ್ಷದೊಳ್). ಇವರಿಬ್ಬರಿಗೂ ನಡೆದ ಯುದ್ಧವನ್ನು ಶಾಂತೀಶ್ವರಪುರಾಣದ ಕಮಲಭವನಂತೆ ವರ್ಣಿಸಲಿಲ್ಲವಾದರೂ

ಮುನಿದೆಮ್ಮಂ ಕೊಲಲೊಡ್ಡಿದಂದಿನ ಶಿಲಾಸ್ತಂಭಕ್ಕೆ ಕೆಯ್ನೀಡಿದಂ |
ದಿನ ಕಿಟ್ಟಿಂದಿನ ಕಾದಿದಂದಿನ ಕಪಿತ್ಥೋರ್ವೀಜದಿಂ ವೋದಿದಂ ||
ದಿನ ಗೆಲ್ದಂದಿನ ಗೆಲ್ದು ಕೊಡೆ ಬನಮಂ ಕೊಂಡಂದಿನಾ ನಿನ್ನ ಗ |
ರ್ಜನೆಯುಂ ಬೀರಮುಮಿಾಗಳೆಂತು ಪುಡಿಯೊಳ್ ಬಿಟ್ದೀ ಪೊರಳ್ದಪ್ಪುರ್ದೇ ||

ಎಂಬ ಮುಂದಣ ಪದ್ಯದಿಂದ ಊಹಿಸಬೇಕಾಗಿರುವುದು.

ಶ್ರೀಪುರಾಣವನ್ನು ನೋಡಿದರೆ ವಿಶಾಖಭೂತಿ ಉಪಾಯದಿಂದ ವಿಶ್ವನಂದಿಯನ್ನು ಹೊರಡಿಸಿ ತನ್ನ ಮಗನಾದ ವಿಶಾಖನಂದಿಗೆ ವಿಶ್ವನಂದಿಯ ಉಪವನವನ್ನು ಸ್ವಾಧೀನಪಡಿಸಿದಂತೆ ಕಾಣುವುದು. ಇದೇ ಅರ್ಥವುಳ್ಳ ವರ್ಧಮಾನಪುರಾಣದ

ಅದಿರದೆ ವೀರವೈರಿಭಟರಂ ಘಟಕೋಟಿಗೆ ಪಾಡಿಗಂಡು ನು |
ಗ್ಗಿರ್ದ ಪಿರಿದಪ್ಪ ಕಲ್ಲನಿಡುಗಂಬಮನೊಂದೆ ಕರಾಗ್ರದಿಂದಮೆ ||
ತ್ತಿದ ಕಪಿಕತ್ಥಮಂ ಘನಕಪಿತ್ಥಮನಾಬನದೊಳ್ ಕಡಂಗಿ ಕಿ |
ತ್ತಿದಟದು ಪೋದುದೇ ನಿನಗಮಿಾ ತೆಱದಿಂ ಕಿಡುವಂತುಟಾದುದೇ ||

ಧರೆ ಪೊಗಟ್ವ ನಿನ್ನ ಮುನ್ನಿನ |
ಪಿರಿದಪ್ಪಾ ಶಕ್ತಿ ಮುಕ್ತಿವೆತ್ತುದೆಯೊಂದಾ ||
ಪುರವಣಿಸೆ ಬಿಟ್ದು ಪುಡಿಯೊಳ್ |
ಪೊರಳ್ವ ದೌರ್ಬಲ್ಯಮಿಲ್ಲಿ ಪಲ್ಲವಿಸಿದುದೇ ||

ಮತ್ತು ಶಾಂತೀಶ್ವರಪುರಾಣದಲ್ಲಿಯ ಕಪಟಚಿತ್ತನಪ್ಪ ವಿಶಾಖಭೂತಿಭೂಪಂ ಎಂಬ ವಾಕ್ಯದಿಂದಲೂ,

ಗಿಡುವೆಂಬಂತಾ ಕಪಿತ್ಥಾವನಿಜಮನುಱದಾವೇಗದಿಂ ಕಿಟ್ಟಿ ಕಾಯ್ಪಿಂ |
ಸಿಡಿಲೆಂಬೀ ಹಸ್ತದಿಂ ನೀನಡಸಿ ಪೊಡೆದು ಕಲ್ಕಂಬಮಂ ಪಿಟ್ಟುಗೆಯ್ದಾ ||
ಕಡುಬಲ್ಪೇನೆತ್ತ ಪೋಯ್ತೋ ಬಡಪಸು ನಸುಸೋಂಕಲ್ಕಣಂ ವಿಶ್ವನಂದೀ |
ಕೆಡೆದೈ ಚೌವಟ್ಟದಾ ಬೆಂಬುಡಿಕೆಯೊಳೆನುತುಂ ಸಾಡೆಯುಂ ನೋಡಿ ನಕ್ಕಂ ||

ತಿಳಿಯಬಹುದು, ಈ ಸಂದರ್ಭದಲ್ಲಿ ಕಾವ್ಯಾವಲೋಕನದಲ್ಲಿ ಉದ್ಧೃತವಾಗಿರುವ—

ಮುನಿಸಿಂ ಮೇಲೆತ್ತಿ ಬರ್ಪ್ಪಂದಿನ ವಿಪುಳಶಿಲಾಸ್ತಂಭಮಂ ಕೀಱಿ ಕಿಟ್ಟಿಂ |
ದಿನ ಬೆಂಕೊಂಡಟ್ಟೆ ಕೊಲ್ವಂದಿನ ತಿರಿಪಿ ಕಪಿತ್ಥಾವನೀಜಾತದಿಂದಂ ||
ಬನದೊಳ್ ಮೆಯ್ವೆರ್ಚಿ ಪೊಯ್ವಂದಿನ ನಿಜಭುಜವಿಕ್ರಾಂತ ಮೇನಾದುದಿಂತೀ |
ಜನಮೆಲ್ಲಂ ನೋಡೆ ಚೌವಟ್ಟದ ಬಿಸುಪುಡಿಯೊಳ್ ಬಿಟ್ದು ಸಾವಂತುಟಾಯ್ತೇ ||

ಎಂಬ ಪದ್ಯವು ಆವ ಕಾವ್ಯದಲ್ಲಿರುವುದೋ ತಿಳಿಯಲಿಲ್ಲ.

ಶಾಂತಿಪುರಾಣದಲ್ಲಿ:—ವಿಶಾಖಭೂತಿ ವಿಶ್ವನಂದಿಗಳು ತಪಂಬಟ್ಟು ಶತಾರಕಲ್ಪಕ್ಕೆ ಹೋದಂತೆ ಹೇಳಿರುವುದು; ಶ್ರೀಪುರಾಣದಲ್ಲಿಯೂ ಶಾಂತೀಶ್ವರಪುರಾಣದಲ್ಲಿಯೂ (vii—38) ಇವರು ಶುಕ್ರ ಕಲ್ಪಕ್ಕೆ ಹೋದರೆಂದು ಹೇಳಿರುವುದು.

ಹೀಗೆ ಶಾಂತಿಪುರಾಣಕ್ಕೂ ಶಾಂತೀಶ್ವರಪುರಾಣಕ್ಕೂ ಅಲ್ಲಲ್ಲಿ ಭೇದವು ಕಾಣುವುದು.

ತ್ರಿಪೃಷ್ಠಚರಿತ್ರೆಯನ್ನೇ ಮುಂದುವರಿಸಿದರೆ ವರ್ಧಮಾನಪುರಾಣವಾಗುವುದೆಂದು ಹೇಳಬೇಕಾ ಗಿಲ್ಲ; ಆದಿಪುರಾಣದಲ್ಲಿ ಭರತಚಕ್ರವರ್ತಿಯ ಮಗನಾದ ಮರೀಚಿಯೇ ತ್ರಿಪೃಷ್ಠನಾಗಿ ಭವಾವಳೀ ವಿರಮಣದಲ್ಲಿ ವರ್ಧಮಾನಸ್ವಾಮಿಯಾದುದು.

ಈ ತ್ರಿಪೃಷ್ಠಚರಿತೆಯೇ ತಮಿಳಲ್ಲಿ ಚೂಳಾಮಣಿಯೆಂಬ ಪ್ರಾಚೀನಕಾವ್ಯದಲ್ಲಿ ಹೇಳಲ್ಪಟ್ಟಿ ರುವುದು.

## ೪. ಆಗಮ-ಧರ್ಮ ಭಾಗಗಳು.

ಶಾಸ್ತ್ರಸಂಬಂಧವಾದ ವಿಷಯಗಳನ್ನು ಹೇಳುವಲ್ಲಿ ಪೊನ್ನನು ಬಹು ಜಾಗರೂಕತೆಯಿಂದ ಸಂಕ್ಷೇಪ ಶಬ್ದವನ್ನು ಇಟ್ಟು ಹೇಳುವನು. ಉದಾ:—

೧. ಎಂದು ದೇಶ ಸಕಲ ಪ್ರವರಗುಣಸ್ಥಾನವ್ರತರೂಪಮಂ ಸಂಕ್ಷೇಪದೊಳ್ ವಿಜಯಕೇವಳಿ ಬೆಸಸುವುದುಂ, vi—56 ವ;

೨. ಧರ್ಮಮಂ ಬೆಸಗೊಳೆ ಸಂಕ್ಷೇಪದೊಳ್ ಯಶೋಧರ ಮುನಿ ನುಡಿದಂ. vii—2 ವ.

೩. ತದನಂತರಂ ಭೂಚರಪರಮಗುರು ಲೋಕವಿಭಾಗಮುಮನಕಲಂಕಾಚಾರಸಾರಂಸಂಕ್ಷೇಪ ರೂಪದಿಂದ ಮಿಂತೆಂದು ಬೆಸಸುಗುಂ—

ಆದರೆ ಕರ್ಮಸ್ವರೂಪವನ್ನು ಹೇಳುವಲ್ಲಿ:—xii—6 ವ.

ಕರ್ಮಪ್ರಕೃತಿಯನನಘಂ ಸ್ಥೂಲಸ್ವರೂಪದಿಂ ಬೆಸಸೆ—xii 12
ಎಂದು ವಿಸ್ತರಿಸಿಯೇ ಹೇಳಿರುವನು.

ಆದರೂ ಸಂಕ್ಷೇಪವೆಂದು ಹೇಳಿದೆಡೆಗಳಲ್ಲಿ ಸ್ಪಷ್ಟವಾಗಿಯೂ ಉಚಿತೋಕ್ತಿಗಳಿಂದಲೂ ಧರ್ಮ ವನ್ನು ತಿಳಿಸಿರುವುದರಿಂದ, ಮಿಕ್ಕ ಪುರಾಣಗಳಲ್ಲಿಯ ಧರ್ಮಭಾಗಗಳ ವಿವರಣೆಗಳನ್ನೂ ಶಾಂತಿಪುರಾ ಣದ ಭಾಗಗಳನ್ನೂ ತುಲನೆಮಾಡಿ ನೋಡಿದಲ್ಲಿ ಶಾಂತಿಪುರಾಣವಾವ ವಿಧದಲ್ಲಿಯೂ ಸಮನಾಗಿಯೇ ತೂಗಬಹುದು. ಕರ್ಮಸ್ವರೂಪದಲ್ಲಿ ಆದಿಪುರಾಣವೇ ಸಾಲದೆಂದು ಹೇಳಬಹುದು. ಧ್ಯಾನ; ಕಷಾಯ ವಿಷಯಗಳಲ್ಲಿ ಎರಡೂ ಸಮನಾಗಿಯೇ ಇರುವುವಲ್ಲದೆ ಶಬ್ದಗಳಲ್ಲಿಯೂ ಬಹಳವಾಗಿ ಭೇದ ವಿಲ್ಲ. ಪುರಾಣದ ಲಕ್ಷಣಗಳನ್ನು ಹೇಳುವಲ್ಲಿ ಮೊದಲಲ್ಲಿ ಲೋಕವಿಭಾಗವನ್ನು ಹೇಳುವ ಪಂಪನ ಲೋಕವಿಭಾಗದ ವರ್ಣನೆ ಸರಿಯಾಗಿಲ್ಲ. ಏಕೆಂದರೆ? ಇದನ್ನು ಒಂದೇ ಕಡೆಯಲ್ಲಿ ಜೋಡಿಸಿ ಬರೆಯದೆ ತತ್ತದುಚಿತಸಂದರ್ಭಗಳಲ್ಲಿ ಹೇಳಿರುವುದರಿಂದ ಲೋಕವಿಭಾಗವನ್ನು ಆದಿಪುರಾಣದಿಂದ ಆಯ್ದು ಜೋಡಿಸಬೇಕಾಗುವುದು. ಕಲ್ಪಗಳ ಸಂಗತಿಯನ್ನಾಗಲಿ, ನರಕ ಪಟಲಗಳನ್ನಾಗಲಿ ತಿಳಿಯ ಬೇಕಾದರೆ ಅಲ್ಲಲ್ಲಿ ಹುಡುಕಬೇಕಾಗುವುದು. ನರಕದ ವರ್ಣನೆಯಂತೂ ಓದಿದೊಡನೆ ಆರಿಗೂ ಅಸಹ್ಯವಾಗಿಯೇ ಇರತಕ್ಕುದಷ್ಟೆ, ಇಬ್ಬರೂ ಅದಕ್ಕೆ ತಕ್ಕ ವರ್ಣನೆಯನ್ನೇ ಮಾಡಿರುವರು. ಅಜಿತ ಪುರಾಣದಲ್ಲಿಯ ಲೋಕವಿಭಾಗವೇ ಒಂದು ವಿಷಯದಲ್ಲಿ ಉತ್ತಮವೆನ್ನಬಹುದು. ಏಕೆಂದರೆ ಲೋಕ ಸ್ವರೂಪವೆಲ್ಲವನ್ನೂ ಒಂದೇ ಕಡೆ ಜೋಡಿಸಿ ಬರೆದಿರುವುದರಿಂದ ಇದಕ್ಕೆ ರನ್ನನು. ಇವರಿಬ್ಬರ ಕಾವ್ಯ ಗಳನ್ನೂ ನೋಡಿ—ಸಮಜೋಡಣೆ ಮಾಡಿರಬೇಕೆಂದು ತೋರುವುದು. ಕರ್ಮಪ್ರಕೃತಿಯ ವಿಷಯ ದಲ್ಲಿ ಪೊನ್ನನನ್ನು ಅನುಸರಿಸಿದಂತೆ ಕಾಣುವುದು; ನಾಮಕರ್ಮವನ್ನು ಮಾತ್ರ ಶಾಂತಿಪುರಾಣದಲ್ಲಿ ವಿಸ್ತರಿಸದೆ ಇರುವುದರಿಂದ, ರನ್ನನು ವಿಸ್ತಾರವಾಗಿ ಹೇಳಬೇಕಾಯ್ತು. ಜ್ಞಾನಾವರಣೀಯ

ಕರ್ಮದಲ್ಲಿ ಚಂದ್ರಪ್ರಭಪುರಾಣದ ವಿಸ್ತಾರವು ಇನ್ನೆಲ್ಲಿಯೂ ಇಲ್ಲ; ಇದನ್ನು ಆಧುನಿಕರಾದ ಮನ ಶ್ಯಾಸ್ತ್ರವಿದರು ಪರಿಶೀಲಿಸಿದರೆ ಲಾಭವುಂಟು.

ಜನ್ಮಾಭಿಷೇಕವನ್ನು ರನ್ನನು ವಿಸ್ತಾರವಾಗಿ ಬರೆದಿರುವುದರಲ್ಲಿ ಕಥಾಸಂದರ್ಭವು ಸ್ವಲ್ಪ ವಾದರೂ ವರ್ಣನೆಯಲ್ಲಿ ಪ್ರತಿಭೆ ಮಿತಿಮೀರಿ ಹೋಗಿರುವುದು. ಆಗಮಭಾಗಗಳಲ್ಲಿ ಕೆಲವು ಆದಿ ಪುರಾಣದಲ್ಲಿ ಇರುವುವು; ಕೆಲವು ಇಲ್ಲ; ಕೆಲವು ಶಾಂತಿಪುರಾಣದಲ್ಲಿ ಕಾಣಬಹುದು; ಕೆಲವು ಇಲ್ಲ. ಇವೆರಡರಲ್ಲಿಯ ಸಂದೇಹಾಂಶಗಳನ್ನು ಸರಿಮಾಡಿ ಕಾವ್ಯವನ್ನು ಸ್ಫುಟವಾಗಿ ಕವಿರತ್ನನು ಬರೆದನೆಂದು ಹೇಳುವ—

ಎನಿತೊಳವು ಮನದ ಸಂದೆಯ |
ಮನಿತು ಮಸಂದಿಗ್ಧಮೆನಿಸುಗುಂ ಧರ್ಮದೊಳ ||
ಪ್ಪನುರಾಗ ಮೊದವುಗುಂ ರ |
ತ್ನನ ಪೇೞ್ದ ಜಿತನ ಪುರಾಣಮಂ ಕೇಳಲೊಡಂ ||

ಪೆಱಪೊಳವುಳ್ಳುವಿಲ್ಲಿಯೊಳವಾಗಮ ಭಾಷೆಗಳಿಲ್ಲಿಯುಳ್ಳುವಂ |
ಪೆಱವುಳಿ ಕಾಣಲಾಗದೆನೆ ಪಂಪನ ಪೊನ್ನನ ಪೇೞ್ದ ಕಬ್ಬದೊಳ್ ||
ನೆಱೆಯೆ ಪರಿಸ್ಫುಟಂ ನೆಱೆಯದಿರ್ದುದುಮಂ ನುಡಿದೆಯ್ದೆ ಬಲ್ಮೆ ಕ |
ಣ್ದೆಱೆಯೆ ನೆಗೞ್ಚಿದಂ ಕವಿಚತುರ್ಮುಖನಾಗಮವೇದಿಯಪ್ಪುದಂ ||

ರನ್ನನು ಆಗಮವಿಸ್ತಾರವನ್ನು ಮಾಡಲಿಕ್ಕೆ ಹಿಂದಿನ ಪುರಾಣಗಳ ಸಹಾಯವೂ ದೊರೆತುದಲ್ಲದೆ ಇವನು ಬರೆದ ಅಜಿತಪುರಾಣದಲ್ಲಿ ಕಥಾಭಾಗವೂ ಸ್ವಲ್ಪವಷ್ಟೆ. ಆದರಿಂದ ಕೆಲವೆಡೆಗಳಲ್ಲಿ ಶಾಂತಿ ಪುರಾಣದಲ್ಲಿ ವಿಸ್ತಾರವಾಗಿರಲಾರದು. ಇದಲ್ಲದೆ ಪಂಪನು—

ಇದುವೆ ಸುಕವಿಪ್ರಮೋದ |
ಪ್ರದಮಿದುವೆ ಸಮಸ್ತ ಭವ್ಯಲೋಕ ಪ್ರಮುದ ||
ಪ್ರದಮೆನೆ ನೆಗೞ್ದಾದಿಪುರಾ |
ಣದೊಳಱಿವುದು ಕಾವ್ಯಧರ್ಮಮಂ ಧರ್ಮಮುಮಂ ||

ಎಂದು ಉದ್ದೇಶವಿಟ್ಟಂತೆ ಕಾವ್ಯಧರ್ಮವನ್ನೂ, ಧರ್ಮವನ್ನೂ ಪ್ರಕಟಿಸುವ ಉದ್ದೇಶದಿಂದ ಶಾಂತಿ ಪುರಾಣವನ್ನು ಬರೆದಿರಲಿಕ್ಕಿಲ್ಲ. ರನ್ನನು—

ಜಿನರ್ಗಂ ತ್ರಿಕಾಲಯೋಗಂ |
ಜಿನರ್ಗಂ ಸ್ವಾಧ್ಯಾಯಮಯ್ದು ಮೂ ಸಮಿತಿಗಳುಂ ||
ಜಿನರ್ಗವೊಳವುಳ್ಳೊಡಂ ನೆಱೆ |
ಯೆ ನೋಡಿ ನಂಬುಗೆ ಮಹಾಪುರಾಣದೆ ವಿಬುಧರ್ ||

ಎಂದು ಹೇಳಿಕೊಳ್ಳಬೇಕಾದರೆ ಅವನ ಕಾಲದಲ್ಲಿಯೇ ಜೈನಾಗಮವನ್ನು ತಿಳಿದವರು ಕಡಿಮೆಯಾಗಿದ್ದ ರೆಂದು ಹೇಳಬೇಕು. ಪೊನ್ನನ ಕಾಲಕ್ಕೂ ರನ್ನನ ಕಾಲಕ್ಕೂ 50, 60 ವರ್ಷಗಳಂತರವಿದ್ದರೂ ಇದರೊಳಗೆ ಮತದಲ್ಲಿ ಜ್ಞಾನವು ಕಡಿಮೆಯಾಗಲಿಕ್ಕೆ ಸಾವಕಾಶವೆಷ್ಟು ಬೇಕು?

ಅತಿ ವಿಸ್ತಾರವಾದ ವರ್ಣನೆಯಲ್ಲಿ ಪೊನ್ನನಿಗೆ ಅಭಿರುಚಿಯಿಲ್ಲ. ಅವನಿಗೆ ಇದರಿಂದ ಕಥೆಯ ಸ್ವಾರಸ್ಯವು ಕೆಡದಿರಬೇಕಲ್ಲವೇ? "ಕಥೆ ಕಿಡದೆಯುಂ ಸವಿ ತವದೆಯುಂ" ಹೇಳಬೇಕಷ್ಟೆ? ಆದರೂ ಸ್ವಯಂಬರ, ವಸಂತಕಾಲ, ಜಲಕ್ರೀಡೆ, • ಕಾಳೆಗ, ಚಂದ್ರಿಕಾವಿಹರಣ. ಇವೇ ಮೊದಲಾದ ಪ್ರಸ್ತಾವದಲ್ಲಿ ಕಾವ್ಯಲಕ್ಷಣಕ್ಕೆ ತಕ್ಕಂತೆ ವರ್ಣನೆಯನ್ನು ತಕ್ಕಷ್ಟುಟ್ಟಿಗೆ ವಿಸ್ತರಿಸಿಯೇ ಇರುವನು. ಚಾರ್ವಾಕನ್ಯಾಯವನ್ನು ಚರ್ಚಿಸುವಲ್ಲಿ ಪಂಪನಂತೆಯೇ ವಿಸ್ತರಿಸಿರುವುದೂ ಅಲ್ಲದೆ ಪದಪ್ರಯೋಗ ದಲ್ಲಿಯೂ ಪಂಪನಂತಿರುವುದು ಆಶ್ಚರ್ಯವೇ ಸರಿ. ಆದರೆ ಇದು ಶಾಸ್ತ್ರವಿಷಯವಾದುದರಿಂದ

ಶಾಸ್ತ್ರಕ್ಕೆ ತಕ್ಕ ಪದಗಳು ಇಬ್ಬರಲ್ಲಿಯೂ ಸಮನಾಗಿರುವುದೂ ಸಹಜವೇ ಸರಿ. ಶಾಂತಿನಾಥನ ರಾಜ್ಯ ವಿಸ್ತಾರವನ್ನು ವರ್ಣಿಸುವಲ್ಲಿಯೂ ಪಂಪನ ಆದಿಪುರಾಣದ ವರ್ಣನೆಯೊಡನೆ ತುಲನೆಮಾಡಬಹುದು.

ಇವೆಲ್ಲವನ್ನೂ ನೋಡಿದರೆ ಶಾಂತಿಪುರಾಣದ ಕಥೆಯನ್ನು ಇದಕ್ಕೂ ಸಂಗ್ರಹವಾಗಿ ಬರೆವುದು ಸಾಧ್ಯವಲ್ಲವೆನ್ನಬೇಕು. ಸಂಪ್ರದಾಯದ ವರ್ಣನೆಗಳನ್ನು ಉಳಿದರೂ, ಕಾವ್ಯಲಕ್ಷಣವನ್ನು ಕೆಡಿಸ ದಿರಬೇಕಲ್ಲವೇ? ಮಲ್ಲಿನಾಥ ಪುರಾಣದ ಕಥಾಭಾಗವನ್ನು ನೋಡಿದರೆ, ಸಣ್ಣ ಕಥೆಯಿಂದ ವಿಸ್ತಾರ ವಾದ ಕಾವ್ಯವನ್ನು ಸಮೆದ ನಾಗಚಂದ್ರನ ಚಾತುರ್ಯವನ್ನು ನೋಡಿ ಶಾಂತಿಪುರಾಣವು ಇದಕ್ಕೂ ವಿಸ್ತಾರವಾದರೂ ಆಗಬಹುದು; ಸಂಗ್ರಹವಾಗುವುದು ಸಾಧ್ಯವಲ್ಲವೆಂದು ನಿರ್ಣಯಿಸಬಹುದು.

## ೫. ಶಾಸ್ತ್ರಭಾಗವಿಚಾರ.

೧. ನರಕಬಿಲಂಗಳ್ ಆದಿ v—81 ವ
ಶಾಂತಿ vii—84 ವ
ಅಜಿತ xi—6 ವ

ಶಾಂತಿಪುರಾಣ, ಅಜಿತಪುರಾಣಗಳಂತೆ ಇವಕ್ಕೆ ಎರಡೆರಡು ಹೆಸರುಗಳು ಆದಿಪುರಾಣದಲ್ಲಿಲ್ಲ.

೨. ತೀರ್ಥಕರ ಷೋಡಶಭಾವನೆಗಳು:—ಆದಿಪುರಾಣದಲ್ಲಿ vi—33 ವಚನದಲ್ಲಿ ವಿಸ್ತರಿಸಿ ಬರೆದಿಲ್ಲ. ಶಾಂತಿಪುರಾಣದಲ್ಲಿ ix—115-116ರಲ್ಲಿ ವಿಸ್ತರಿಸಿರುವುದು.

೩. ದ್ವಾದಶಾನುಪ್ರೇಕ್ಷೆಗಳು:—ಶಾಂತಿಪುರಾಣ xi-111 ವ ಸೂಚನೆಮಾತ್ರವೇ ಇರುವುದು; ಅಜಿತಪುರಾಣ vi-61 ವ ವಿಸ್ತರಿಸಿರುವುದು.

೪. ನಾಮಕರ್ಮ:—ಶಾಂತಿಪುರಾಣ xii- 11 ವಚನವನ್ನು ಅಜಿತಪುರಾಣವು ವಿಸ್ತರಿಸಿ ಹೇಳುವುದು. ಉಳಿದ ಕರ್ಮಗಳು ಎರಡರಲ್ಲಿ ಸಮನಾಗಿಯೇ ವರ್ಣಿತ ವಾಗಿರುವುವು.

೫. ಷೋಡಶಸ್ವಪ್ನ:—ಆದಿಪುರಾಣದಲ್ಲಿ ರಗಳೆ, ಶಾಂತಿಪುರಾಣದಲ್ಲಿ ix-201-208 ಪದ್ಯ ಗಳು; ಅಜಿತಪುರಾಣದಲ್ಲಿ iii-12 ಒಂದೇ ಪದ್ಯ.

೬. ಮೇಲೆ ಹೇಳಿದ ಸ್ವಪ್ನಗಳಿಗೆ ಫಲ:—ಆದಿಪುರಾಣದಲ್ಲಿ ಇವಕ್ಕೆ ಒಂದೊಂದಾಗಿ ಫಲವನ್ನು ಹೇಳಿಲ್ಲ; ಶಾಂತಿಪುರಾಣದಲ್ಲಿ ಒಂದೊಂದರ ಫಲ ವನ್ನೂ ಹೇಳಿರುವಂತೆ ಅಜಿತಪುರಾಣದಲ್ಲಿಯೂ ಇಲ್ಲ.

೭. ಚಕ್ರವರ್ತಿಯ ರಾಜ್ಯವಿಸ್ತಾರದಲ್ಲಿ ಮೂರು ಪುರಾಣಗಳಲ್ಲಿ ಸಾಮಾನ್ಯವಾಗಿ ಒಂದೇ ವಿಧವಾಗಿದ್ದರೂ, ಕೆಲಕೆಲವೆಡೆಗಳಲ್ಲಿ ಭೇದವುಂಟು—

| | ಆದಿ. | ಅಜಿತ. | ಶಾಂತಿ. |
|---|---|---|---|
| ದುರ್ಗಭೂಮಿ | 72000 | 78000 | 78000 |
| ಮ್ಲೇಚ್ಛರಾಜ್ಯ | 18000 | 16000 | 18000 |
| ಸಂವಾಹನ | 16000 | 14000 | 14000 |
| ದ್ರೋಣಾಮುಖ | 85000 | 95000 | 96000 |

೮. ಮೊದಲ ಮೂರು ಕಲ್ಯಾಣಗಳ ತಿಥಿಗಳು ಶಾಂತಿಪುರಾಣದಲ್ಲಿರುವಹಾಗೆ ಶಾಂತೀಶ್ವರ ಪುರಾಣದಲ್ಲಿಯಾಗಲಿ ಸುಮತಿಸಾಗರದಲ್ಲಿಯಾಗಲಿ ಇಲ್ಲ. ಆದರೆ ಸುಮತಿಸಾಗರಕ್ಕೂ ಆದಿಪುರಾ ಣಕ್ಕೂ ನಮ್ಮ ಅಜಿತಪುರಾಣಕ್ಕೂ ಈ ತಿಥಿಗಳಲ್ಲಿ ಭೇದವಿರುವುದರಿಂದ ಸುಮತಿಸಾಗರದ ಆಧಾರ ವನ್ನು ಅಂಗೀಕರಿಸತಕ್ಕುದೇ ಎಂಬ ಸಂಶಯವಾಗುವುದು.

ಗರ್ಭಾವತರಣ:—(ಪೊನ್ನ) ಫಾಲ್ಗುಣಶುದ್ಧ ಪಂಚಮಿ ಭರಣಿ.
(ಕಮಲಭವ) ಭಾದ್ರಪದ ಬಹುಳ ಸಪ್ತಮಿ ಭರಣಿ.
ಜನ್ಮಾವತರಣ:—(ಪೊನ್ನ) ಕಾರ್ತಿಕ ಶುದ್ಧ ಚತುರ್ದಶಿ ಭರಣಿ.
(ಕಮಲಭವ) ಜ್ಯೇಷ್ಠ ಬಹುಳ ಚತುರ್ದಶಿ.
ದೀಕ್ಷಾಗ್ರಹಣ:—(ಪೊನ್ನ) ಜ್ಯೇಷ್ಠ ಶುದ್ಧ ಚತುರ್ದಶಿ ಭರಣಿ.
(ಕಮಲಭವ) ಜ್ಯೇಷ್ಠ ಬಹುಳ ಚತುರ್ಥಿ ಭರಣಿ.

## ೬. ಶಾಂತಿಪುರಾಣದಲ್ಲಿಯ ಪುರಾಣಲಕ್ಷಣ.

ಮುನಿಮಾರ್ಗೋಕ್ತ ಪುರಾಣ ಪದ್ಧತಿಗೆ ಲೋಕಾಕಾರಮುಂ ತೀರ್ಥವ |
ರ್ತನಮುಂ ವ್ಯಾಪ್ತ ಚತುರ್ಗತಿಸ್ಥಿತಿಗಳುಂ ಭಾಸ್ವತ್ತಪೋದಾನ ಕೀ ||
ರ್ತನಮುಂ ತತ್ಫಲಸಿದ್ಧಿಯುಂ ನೆಗಟ್ದುದೆಯ್ದಂಗಂ ಕವಿಪ್ರೋಕ್ತ ಕಾ |
ವ್ಯನಿಬಂಧೋಚಿತಮೆಂಟು ದೇಶನಗರೀರಾಜ್ಯೋತ್ಸವಾಖ್ಯಾನದಿಂ ||

ಎಂದು ಜನ್ನನು ಅನಂತಪುರಾಣದಲ್ಲಿ ಹೇಳುವ (1. 66.) ಪುರಾಣಲಕ್ಷಣವನ್ನೂ

ಆ ಪುರಾಣಕ್ಕಂ ಲೋಕಾಕಾರ ಕಥನಮುಂ, ದೇಶನಿವೇಶೋಪದೇಶಮುಂ, ನಗರಸಂಪತ್ಪರಿವರ್ಣನಮುಂ, ರಾಜ್ಯರಾಮಣೀಯಕಾಖ್ಯಾನಮುಂ, ತೀರ್ಥಮಹಿಮಸಮರ್ಥನಮುಂ, ಚತುರ್ಗತಿಸ್ವರೂಪ ನಿರೂಪಣಮುಂ, ತಪೋದಾನವಿಧಾನವರ್ಣನಮುಂ, ತತ್ಫಳಪ್ರಾಪ್ತಿಪ್ರಕಟನಮುಮೆಂದಿಂತವಯವಂಗಳೆಂಟಕ್ಕುಂ

ಎಂದು ಪಂಪನು ಆದಿಪುರಾಣದಲ್ಲಿ (1—42ವ) ಹೇಳುವ ಪುರಾಣಲಕ್ಷಣವನ್ನೂ ತುಲನೆ ಮಾಡಿ ಪಂಪನು ಹೇಳುವುದನ್ನೇ ಒರೆಗಲ್ಲಾಗಿ ಭಾವಿಸಿ ಶಾಂತಿಪುರಾಣವನ್ನು ನೋಡಿದಲ್ಲಿ ಮೇಲೆ ಹೇಳಿದ ಎಂಟಂಗಗಳೂ ಇಲ್ಲಿ ಕಾಣಬರುವುವು.

೧. ಲೋಕಾಕಾರ xii 6ವ—11; ಮತ್ತು 50—51ವ
೨. ದೇಶನಿವೇಶ i 56—68.
೩. ನಗರ iii 3—12
೪. ರಾಜ್ಯ iv 68—69
೫. ತೀರ್ಥಕರಮಹಿಮೆ vi 40—41
೬. ಚತುರ್ಗತಿಸ್ವರೂಪ—
(a) ನಾರಕ vii 62ವ—101 (b) ತಿರ್ಯಕ್ ix 45—49
(b) ನರ vi 87. xii—11ವ, (d) ದೇವ vii 10—42
೭. (a) ತಪಸ್ಸು ix. 105—108 xi—111ವ
(b) ದಾನ vi 71—74
೮. ತತ್ಫಲಪ್ರಾಪ್ತಿ vi 123. vii 20.

ಉತ್ತಮಪಾತ್ರದಾನದ ಫಲವೇ ತೀರ್ಥಕರವೆಂದು ಬೋಧಿಸುವುದಲ್ಲವೇ ಶಾಂತಿಪುರಾಣ?

## ೭. ವರ್ಣನಾಭಾಗ

ಮಹಾಕಾವ್ಯದಲ್ಲಿ ಇಂತಿಷ್ಟು ವರ್ಣನೆಗಳಿರಬೇಕೆಂದು ಕವಿಗಳು ಹೇಳುವರು

ಉದಧಿ ಪುರಾಧಿಪ ಸುರ ಮಂ |
ತ್ರಿ ದೂತ ಗಮನಾಜಿ ವಿರಹ ಪರಿಣಯ ಸುರತ ||
ತರ್ು ದಿನೇಶ ಚಂದ್ರ ಮಧು ಕುಭೃ |
ದುದಕ ವನಸ್ಪತಿಯೆ ಕೃತಿಗೆ ಪದಿನೆಂಟಂಗಂ ||

ಎಂದು ಉದಯಾದಿತ್ಯಾಲಂಕಾರದಲ್ಲಿ ಹೇಳಿರುವ ಮಹಾಕಾವ್ಯಲಕ್ಷಣವು ಶಾಂತಿಪುರಾಣದಲ್ಲಿ ಇರುವುದೇ ಎಂದು ತರ್ಕಿಸುವರಿಗೆ ಕ್ರಮವಾಗಿ

೧. I 56
೨. i 58—65
೩. i 66—70. iv 45—52ವ
೪. iv 35—52
೫. ii 35ವ—51
೬. ii 51ವ
೭. iv 4—5
೮. iv 7 ಮತ್ತು xi 71
೯. viii 87
೧೦. vi 1—20
೧೧. viii 97—98
೧೨. vii 123
೧೩. viii 60
೧೪. viii 70—72
೧೫. vi — 109
೧೬. ii 89—119
೧೭. viii 28—30
೧೮. vii 123—145

ಇವಲ್ಲದೆ ಇನ್ನೂ ಅನೇಕ ಕಡೆಗಳಲ್ಲಿ ವರ್ಣನಾಭಾಗಗಳನ್ನು ಓದಿ ಆನಂದಿಸಬಹುದು.

## ೮. ನವರಸಗಳು.

೧. viii 22 39 40 87.
೨. v 26
೩. iv 79
೪. vii 59. ix 52
೫. iv 62 iv 30
೬. iv 69 70 73
೭. ii 23 73
೮. iv 12 vii 94
೯. ix 106.

ಇವು ಮೊದಲಾದ ಪದ್ಯಗಳಲ್ಲಿ ನವರಸಗಳನ್ನು ಕ್ರಮವಾಗಿ ತಿಳಿಯಬಹುದು.

## ೯. ವಿದ್ಯೆಗಳು.

ಕಮಲಭವನ ಶಾಂತೀಶ್ವರ ಪುರಾಣದಲ್ಲಿ

ಪ್ರಜ್ಞಪ್ತೆ, ಕಾಮರೂಪಿಣಿ, ಅಗ್ನಿಸ್ತಂಭಿನಿ, ವಿಶ್ವಪ್ರಭೆ, ಪ್ರತಿಪೂತಗಾಮಿನಿ, ಆಕಾಶಗಾಮಿನಿ ಉತ್ಪಾದಿನಿ, ವಸಂತಕಾರಿಣಿ, ಆವೇಶಿನಿ, ಪ್ರಸ್ಥಾಪಿನಿ, ಪ್ರಹರಿಣಿ, ಪ್ರಮೋಹಿನಿ, ಸಂಕ್ರಾಮಣಿ, ಆವರ್ತಿನಿ, ಸಂಗ್ರಹಿಣಿ, ಭಂಜಿನಿ, ಘಟ್ಟನಿ, ಪ್ರಹಾಪಿನಿ, ಪ್ರಭಾತಿನಿ, ಪ್ರವರ್ತಿನಿ, ವಿಪ್ರರೋದಿನಿ, ಪ್ರಲಾಪಿನಿ, ವಿಕ್ಷೇಪಣಿ, ಶಬರಿ, ಚಾಂಡಾಳಿ, ಮಾತಂಗಿ, ಗೌರಿ, ಖಟ್ವಾಂಗಿ, ಮುದ್ದಿನಿ, ಶತಶಂಕಿನಿ, ಕುಶಾಂಡಿ, ವಿರಳವೇಗೆ, ಮಹಾವೇಗೆ, ಮನೋವೇಗೆ, ಚಪಲವೇಗೆ, ಪರ್ಣಲಘು, ಲಘುರಶ್ರೇಣಿ, ಪ್ರಭಾತಿನಿ, ಪ್ರಭಂಕರಿ, ವೇಗಾವತಿ, ವೈತಾಳಿ, ಸರ್ವವಿದ್ಯಾಚ್ಛೇದಿನಿ, ಮಹಾಜ್ವಾಳಿನಿ, ಯುದ್ಧವೀರ್ಯೆ, ಬದ್ಧಮೋಚಿನಿ, ಪ್ರಹರಣಾವರಣೆ, ಭ್ರಮರಿ, ಅಭೋಗಿನಿ—ಮೊದಲಾಗಿ ವಸುಸ್ತ ವಿದ್ಯಂಗಳೆಂದು ಹೇಳಿರುವುದು ( ಕ. ಶಾಂತೀಶ್ವರ vii—1ವ)

ನಮ್ಮ ಪೊನ್ನನ ಶಾಂತಿಪುರಾಣದಲ್ಲಿ

ರೂಪಪರಾವರ್ತನ ii—66
ಗಗನಗಾಮಿನಿ 111—60ವ
ಮಹಾಬಲ vi—27ವ
ಹೇತಿವಿದಾರಿಣಿ vi—37ವ

| | | | |
|---|---|---|---|
| ಪರ್ಣಲಘು | iv 96ವ | ಬಂಧವಿಮೋಚನಿ | vi 37ವ |
| ಬಹುರೂಪಿಣಿ | vi 34ವ | ಅವಲೋಕಿನಿ | ix 6ವ |
| ಘೋಷಣವಿದ್ಯೆ | vi. 34ವ | ಬಳಾಭಿದಾನಂ- | vi-37ವ |

ಈ ವಿದ್ಯೆಗಳ ಹೆಸರುಗಳು ದೊರಕುತ್ತವೆ.

ಇಂತಹ ವಿದ್ಯೆಗಳನ್ನು ಸಾಧಿಸಿದ ಖೇಚರರು ವಿದ್ಯಾಧರರಾಗುವರು. ಇವನ್ನು ಸಾಧಿಸಿ ರಾವಣನೇ ಮೊದಲಾದ ಅಸುರರು ಲೋಕಕಂಟಕರಾಗಿ ವಾಸುದೇವನೊಡನೆ ಪ್ರತಿವಾಸುದೇವರೆನಿಸಿ ಯುದ್ಧಮಾಡಿ ಸತ್ತರು.

## ೧೦. ಛಂದಸ್ಸು.

ಆದಿಪುರಾಣ, ಶಾಂತಿಪುರಾಣ, ಅಜಿತಪುರಾಣಗಳಲ್ಲಿ ದೊರಕುವ ಹಲವು ಛಂದಸ್ಸಿನ ಪದ್ಯಗಳ ಸಂಖ್ಯೆ ಈ ಕೆಳಗೆ ತೋರಿಸಿರುವಂತೆ ಕೊಟ್ಟಿರುವುದು. (ಇಲ್ಲಿ ಸ್ವಲ್ಪ ತಪ್ಪಿದ್ದರೂ ಇರಬಹುದು.)

| | ಆದಿ | ಶಾಂತಿ | ಅಜಿತ |
|---|---|---|---|
| ಕಂದ | 1026 | 1169 | 582 |
| ಮತ್ತೇಭ (ಶಾರ್ದೂಲ) | 214 | 157 | 72 |
| ಚಂಪಕ (ಉತ್ಪಲ) | 211 | 233 | 87 |
| ಮಹಾಸ್ರಗ್ಧರ (ಸ್ರಗ್ಧರ) | 125 | 28 | 35 |
| ಪೃಥ್ವಿ | 24 | 5 | — |
| ಅಕ್ಕರ | 4 | 5 | — |
| ಶಾರ್ಙ್ಗ | 1 | — | — |
| ಉಜ್ವಲ | 4 | — | — |
| ರಗಳೆ | 2 | 1 | 2 |
| ಹರಿಣಿ | 2 | 20 | 2 |
| ಮಾಲಿನಿ | 7 | 4 | 9 |
| ತ್ರಿಪದಿ | 2 | 3 | — |
| ಉತ್ಸಾಹ | 1 | — | — |
| ಮಲ್ಲಿಕಾಮಾಲೆ | — | 3 | — |
| ಮಂದಾಕ್ರಾಂತ | — | 3 | — |
| ಶಿಖರಿಣಿ | — | 2 | — |
| ತರಳ | — | 1 | — |
| ಆರ್ಯೆ | — | — | 1 |
| ಇಂದ್ರವಜ್ರ | — | — | 1 |
| ಒಟ್ಟು | 1623 | 1636 | 791 |

ಮೇಗಣ ಪಟ್ಟಿಯಿಂದ ಪೊನ್ನನಲ್ಲಿ ವೃತ್ತಗಳ ಜಾತಿ ಬಹಳ; ರನ್ನನಿಗೆ ಕೆಲವು ಪ್ರಾಚೀನವೆಂದೂ ತತ್ಕಾಲಕ್ಕೆ ತಕ್ಕುವಲ್ಲವೆಂದೂ ತಿಳಿದಿರಬಹುದು. ಶಾಂತಿಪುರಾಣದಲ್ಲಿಯ ಸಂಖ್ಯೆಗೂ ಅಧಿಕವಾಗಿ ಆದಿಪುರಾಣದಲ್ಲಿಯೂ ಅಜಿತಪುರಾಣದಲ್ಲಿಯೂ ಮತ್ತೇಭ ಮಹಾಸ್ರಗ್ಧರಗಳು ಇರುವುವು. ಇವು ಶಾಂತಿರಸಕ್ಕೆ ಅಷ್ಟು ಸೊಗಯಿಸಲಾರವು. ಸಮವೃತ್ತಗಳಲ್ಲಿ ಇವು ಮೃದೂಕ್ತಿಯನ್ನು ಹೇಳಲಾರವು. ವೀರ, ಅದ್ಭುತ, ಭಯಾನಕ ರಸಗಳಿಗೆ ಇವು ತಕ್ಕುವು. ಶಾಂತಿರಸಕ್ಕೆ ಚಂಪಕವು ತಕ್ಕುದೆಂದು ಕಾಣುವುದು.

## ೧೧. ಶಾಂತಿಪುರಾಣದ ಕನ್ನಡ.

ತಾನು ಬರೆವ ಕನ್ನಡವು ತಿರುಳಗನ್ನಡವೆಂದು ಹೇಳಲಿಕ್ಕೆ—

ರಾಜ ಸುಧಾನಿಯು ಪುಟವಹ? ।
ಸಾಜದ ಪುಲಿಗೆಱೆಯ ತಿರುಳಗನ್ನಡದೊಳ್ ನಿ ॥
ರ್ವ್ಯಾಜದೆಸಕದೊಳ್ ಪುದಿದೊಂ ।
ದೋಜೆಯ ಬಲವನಿಯ ಕವಿತೆ ಪಂಪನ ಕವಿತೆ ॥

ಎಂದು ಪಂಪನು ವಿಕ್ರಮಾರ್ಜುನವಿಜಯದಲ್ಲಿ ಹೇಳಿಕೊಂಡಿರುವನು.

ರನ್ನನು ಹಾಗೆಯೇ

ಕನ್ನಡಮೆರಡಱು ನೂಱಱ ।
ಕನ್ನಡಮಾ ತಿರುಳಗನ್ನಡಂ ಮಧುರಮ್ಯೋ ॥
ತ್ಪನ್ನಂ ಸಂಸ್ಕೃತಮೆನೆ ಸಂ ।
ಪನ್ನಂ ನೆಗಟ್ಬುಭಯಕವಿತೆಯೊಳ್ ಕವಿರನ್ನಂ ॥

ಎಂದು ಗದಾಯುದ್ಧದಲ್ಲಿ ಹೇಳಿಕೊಂಡಿರುವನು.

ಪೊನ್ನನಾದರೆ ಹೀಗೆ ತನ್ನ ಕನ್ನಡವನ್ನು ಹೊಗಳಿಕೊಂಡಿಲ್ಲ. ಆದರೂ ಆದಿಪುರಾಣದ ಕನ್ನಡದಹಾಗೆ ತಿರುಳಗನ್ನಡವನ್ನೇ ಬರೆದಿರುವನು. ಕೇಶಿರಾಜನ ಶಬ್ದಮಣಿದರ್ಪಣದ ಸೂತ್ರಗಳಿಗೆ ಅನುಸರಿಸಿದಂತೆಯೇ ಬರೆದಿರುವನು. ಈತನು ಪ್ರೌಢಕವಿಯಾದುದರಿಂದ ಇವನ ಪ್ರಯೋಗಮಾರ್ಗವೇ ತನಗೆ ಲಕ್ಷ್ಯವೆಂದು ದರ್ಪಣಕಾರನು ಸ್ಪಷ್ಟವಾಗಿ—

ಗಜಗನ ಗುಣನಂದಿಯ ಮನ ।
ಸಿಜನಸಗನ ಚಂದ್ರಭಟ್ಟ ಗುಣವರ್ಮಶ್ರೀ ॥
ವಿಜಯರ ಹೊನ್ನನ ಹಂಪನ ।
ಸುಜನೋತ್ತಂಸನ ಸುಮಾರ್ಗಮಿದಱೊಳೆ ಲಕ್ಷ್ಯಂ ॥

ಎಂದು ಹೇಳಿರುವುದರಿಂದ ಪ್ರಯೋಗದಲ್ಲಿ ಪೊನ್ನನ ಮಾರ್ಗವು ಸುಮಾರ್ಗವೆಂದೇ ಹೇಳತಕ್ಕುದು.

ಆದರೂ ಈ ಎರಡು ಪುರಾಣಗಳೊಳಗೆ ಪ್ರಯೋಗಗಳಲ್ಲಿ ಅಲ್ಲಲ್ಲಿ ಸ್ವಲ್ಪ ತಾರತಮ್ಯವು ಕಾಣಬರುವುದು. ಆದಿಪುರಾಣದಲ್ಲಿ ಹೊಸಗನ್ನಡದ ಪ್ರಯೋಗಗಳಂತೆ ಕಾಣುವ ಪ್ರಯೋಗಗಳು ಅಧಿಕವೆಂದೂ ಹೇಳಬಹುದು. ಉದಾಹರಣೆಗಾಗಿ ಕೆಲವು:—

೧. ತಿಂಗಳಿಂಗೆ, ಆದಿ v-9; vi—16 ಶ. ದ ಸೂ 48.
ಪೋಲುವುಡೆ, ಅಜಿತ ii—71; ಭಯಂಗೊಳುಗುಂ, ಗದಾ x—8;
ಪವನಜ, (ಪ್ರಥಮಾವಿಭಕ್ತಿ) ಗದಾ. vi-42; ಕಲುನಿಲೆನಿಂದಂ, ಅಜಿತ xii. 4.

೨. ಒಲ್ (ವೊಲ್ ಎಂಬಲ್ಲಿಗೆ) ಅಜಿತ ii 20; vii-3.

೩. [ಬಿಂದುಲೋಪ] ತೌಕಲ್ ತವುಕಲ್, ಶಾಂತಿ v. 71; ಜಾದು, ಶಾಂತಿ iv-33.
ನಾಟು, ಆದಿ ix-45 ಶ. ದ ನಾಂಟು.

೪. [ದ್ವಿತೀಯಾವಿಭಕ್ತಿಯ ಅ] ಲಕ್ಷ್ಮಿಯ, ಆದಿ i -71; ಮೆಯ್ಯ ಆದಿ vii-56;
ಮನವ, ಅಜಿತ ii 88; ಶಾಂತಿ iv. 104 ಸಂತತಿಯ?

೫. ಅಕಾರಕ್ಕೆ ಒಕಾರ—ಅನುಕರಿಪೊ಼ ಅಜಿತ i. 25 ಆರ್ದ್ರಿರ್ದ್ರಪೊ಼ iv 51.
ಲಘುಕರ್ಮನಾದಪೊ಼, v. 46.

ತಣಿರ್ಪೊ಼, ಆದಿ vi 47; ಕುಡುರ್ಪೊ಼, x. 9; ಚಿಂತಿಸಿದೊಂಗಂ, i. 37.

ಶಾಂತಿಪುರಾಣದಲ್ಲಿ ಇಂತಹ ಪ್ರಯೋಗಗಳು ಅಧಿಕವಾಗಿವೆ.        1. 47.

೬. ಆದಿಪುರಾಣದಲ್ಲಿ ದೊರಕುವ—ಸಯಿಸುವೆವು, ನಿಂದೆವು, ಕೃತಾರ್ಥರೆಮಾದಪ್ಪೆವು (ix. 76, 92, 10) ಮೊದಲಾದ ಸಂಶಯಾಸ್ಪದವಾದ ಪ್ರಯೋಗಳು ಶಾಂತಿಪುರಾಣದಲ್ಲಿ ದೊರಕುವುದಿಲ್ಲ.

೭. ದರ್ಪಣಕಾರನು ಸೂತ್ರ 71ರ ಪ್ರಯೋಗದಲ್ಲಿ—
ಕಳ್ ಎಂಬ ಧಾತುವಿಂಗೆಲ್ಲಿಯುಂ ದ್ವಿತ್ವಮಿಲ್ಲ—ಕಳಲ್ವೋದಂ,
ಕಳಲ್ಬಂದಂ, ಕಳದೆ ಬಂದಂ........ಎಂದು ಹೇಳಿರುವನಾದರೂ

ಕಳ್ದ ಎಂಬ ಪ್ರಯೋಗವು ಶಾಂತಿ i-88; ಆದಿ vi-7ರಲ್ಲಿ ದೊರಕುವುದರಿಂದ ಇದೇ ಸುಮಾರ್ಗವಲ್ಲದೆ ಕಳದೆ ಎಂಬುದು ಮಾರ್ಗವಲ್ಲ.

೮. ಶಿಥಿಲದ್ವಿತ್ವದಲ್ಲಿ ಶಾಂತಿಪುರಾಣದಲ್ಲಿ ಸಂಶಯುವೇ ಹುಟ್ಟುವುದಿಲ್ಲ.

ಅಗಲ್ದುರದೊಳ್   ಆದಿ xii-119.
ಕೊರಲ್ಗೆ   ಅಜಿತ ii 43; ಅರಲ್ಗಳ್   ಅಜಿತ vi-38;
ಅಗಲ್ದ   ಗದಾ ii-54; viii. 22.

ಕೇಶಿರಾಜನು ತಿರಸ್ಕರಿಸುವ ತೆಲುಗಿನ ಶಿಥಿಲವು ರನ್ನನ ಗದಾಯುದ್ಧವನ್ನು ಹೇಗೋ ಪ್ರವೇಶಿಸಿರುವುದು ಆಶ್ಚರ್ಯ:—(ಸೂತ್ರ 59)

ದ್ರೋಣ....vii. 81;   ಬ್ರಹ್ಮರ್ ii. 22.

ಇಂತಹ ಆಂಧ್ರರ ಶಿಥಿಲವು ಆದಿಪುರಾಣದಲ್ಲಿಯಾಗಲಿ, ಶಾಂತಿಪುರಾಣದಲ್ಲಿಯಾಗಲಿ ಇಲ್ಲ.

೯. ಕಂದಾರ್ಧದ ಕೊನೆಯಲ್ಲಿ ಲಘುವನ್ನಿಟ್ಟ ಪದ್ಯವು ಶಾಂತಿಪುರಾಣದಲ್ಲಿ ದೊರಕಲಿಲ್ಲ. ಆದರೆ

ಮುಕ್ಕುಳಿಸಿ ಯುಗುಟ್ವ ಮಧುವಿಂ |
ಮಿಕ್ಕೆಸೆವಾಮೋದಮಿದಱ ತಣ್ಗಂಪಿನೊಳೊಳ ||
ಪೊಕ್ಕುದೆನೆ ಮಧುವ ಕಂಪಂ |
ಮುಕ್ಕುಳಿಸಿದ ವಕುಳಮಾರುಮಂ ಸೊಕ್ಕಿಸದೇ ||

ಎಂಬ ಆದಿಪುರಾಣದ (xi 124) ಪ್ರಯೋಗವೂ ಗದಾಯುದ್ಧದ iii-6-iv ಮತ್ತು 15 ಪ್ರಯೋಗವೂ ಸಂಶಯುವಾದ ಪ್ರಯೋಗಗಳು.

೧೦. ಮೆಱೆ—ಸಕರ್ಮಕವಾಗಿ ಜೈನಪ್ರಯೋಗವುಂಟು. ಬೇರೆ ಪ್ರಯೋಗವೂ ನಮ್ಮ ಈ ಮೂವರು ಪುರಾಣಕವಿಗಳಲ್ಲಿ ಇಲ್ಲ.

ಮೇಣ್—ವಿಕಲ್ಪಾರ್ಥದಲ್ಲಿಯೇ ಪ್ರಯೋಗವಲ್ಲದೆ ಜೈನೇತರರಂತೆ 'ಮತ್ತು' ಎಂಬರ್ಥದಲ್ಲಿ ಇಲ್ಲ.

೧೧. ಸಂಸ್ಕೃತವಲ್ಲದೆ ಇತರ ಭಾಷೆಯಿಂದ ಬಂದಿರಬಹುದಾದ ಶಬ್ದಗಳು:—

ಭಾವು ii    ; ಆದರೆ iii 105; ಹೋಯಿರೆ viii 20—

ಇವು ಅನುಕರಣ ಶಬ್ದಗಳು. ಶಾಂತಿಪುರಾಣದಲ್ಲಿ ಇವು ಹೆಚ್ಚಾಗಿಲ್ಲ.

ಆದಿಪುರಾಣದಲ್ಲಿ ಅನುಕರಣವಲ್ಲದ ಶಬ್ದಗಳು:—

ಸರಿಗೆ   v 33; xi. 22
ಜಟ್ಟಿಗರ್   viii 48
ಠಾಣ   xi 36
ತಕ್ಕು ?   xiv 134

ಅಜಿತಪುರಾಣದಲ್ಲಿ ಇಂತಹ ಶಬ್ದಗಳು ಇನ್ನೂ ಹೆಚ್ಚಾಗಿವೆ: –

ಒಕ್ಕಣಿಸು i. 83
ಕವಣಿಸು 20
ಜುಂಕ v. 5
ಜೆಕಿರ ,,
ಸಿಪಿರ
ಸಿಪ್ಪು ....

೧೨. ಕೇಶಿರಾಜನ ಧಾತುಪಾಠವು ಅಸಮಗ್ರವೆಂದು ಹೇಳಬೇಕಾಗಿಲ್ಲ.

| | | | |
|---|---|---|---|
| ಅವಚಱು | ಶಾಂತಿ i 63; | ಆದಿ ii 37; | xi 130. |
| ಪೊದಳ್ | ii 2 | ಆದಿ i. 5 | |
| ಒಣರ್ | ಶಾಂತಿ i 87 | ಆದಿ ii 45. | |
| ಬೀಱಿಕ್ಕೊಳ್ | iv. 105; | ಆದಿ xi 134 | |
| ಅವ್ವಳಿಸು | ii 98; | ಆದಿ iv 12 | |
| ತಟ್ಕಯಿಸು | ii 117 | ಆದಿ ii 20 | |
| ಈಱಿಕ್ಕೊಳ್ | iii 29 | ಆದಿ i 84 | |
| ಗೆಡೆಗೊಳ್ | iii 29 | ಆದಿ xi 154 | |
| ಆಟಂದು | iii 74 | ಆದಿ ix 60 | |
| ತೆರಳ್ | iii 92 | ಆದಿ i 62 | |
| ಪೂಣ್ (ಬಿಲ್ಗೆ) | iv 23 | ಆದಿ xii 103 | |
| ಈಡಾಡು | v 26 | ಆದಿ ix 37 | |
| ಬಾಯ್ಕೊಳ್ | v 139 | ಆದಿ xiv 29 | |
| ಸಣ್ಣಿಸು | iv 29 ವ | ಆದಿ xi 47 | |

ಇವೇ ಮೊದಲಾದ ಅನೇಕ ಧಾತುಗಳನ್ನು ಧಾತುಪಾಠಕ್ಕೆ ಸೇರಿಸಬೇಕಾಗಿರುವುದು.

೧೩. ಪ್ರಾಚೀನವಾದ ಕನ್ನಡದಲ್ಲಿ ಮುಖ್ಯವಾಗಿ ಗಮನಿಸತಕ್ಕುದು ಱ. ೞ ಪ್ರಯೋಗ. ಇವು ಪ್ರಾಸದಲ್ಲಿ ದೊರಕುವ ಪದ್ಯಗಳ ಸಂಖ್ಯೆಯನ್ನು ಈ ಕೆಳಗೆ ತೋರಿಸಿದೆ:—

| | ಆದಿ. | ಶಾಂತಿ. | ಅಜಿತ. |
|---|---|---|---|
| ಱ | 27 | 32 | 14 |
| ೞ | 10 | 17 | 6 |

ರನ್ನನ ಅಜಿತಪುರಾಣದಲ್ಲಿ ಒಂದೆಡೆಯಲ್ಲಿ ಱಕಾರವು ತಪ್ಪಿದೆ (v. 55)

ಆದಿಪುರಾಣದಲ್ಲಿಯೂ ಶಾಂತಿಪುರಾಣದಲ್ಲಿಯೂ ಱ ತಪ್ಪಿಲ್ಲ. ೞಕಾರದಲ್ಲ ಆದಿಪುರಾಣದಲ್ಲಿ ಎರಡುಕಡೆ ತಪ್ಪಿದೆ.

ಬಾಸುೞ್, ಮುೞುಗು—

ಶಾಂತಿಪುರಾಣದಲ್ಲಿ ಒಂದೆಡೆ ತಪ್ಪಿದೆ—

ಮುೞುಗು.

ಶೃಂಗಾರಕವಿಯೂ, ಕೇಶಿರಾಜನೂ ಒಪ್ಪದಿರುವ ಕುಳ, ಕ್ಷಳ, ಕನ್ನಡ ಲ, ಮೂರನ್ನೂ ಪ್ರಾಸ ದಲ್ಲಿಡುವುದು ತಪ್ಪಾದರೆ ಆದಿಪುರಾಣದ

ನೆಲಸಿರ್ದ್ದ ವಜ್ರ ಪಂಜರ |
ಮಳಱುವಿನಂ ಪಾಯ್ದು ಸಿಂಧುರಾರಾತಿಯನು ||
ಜ್ಜ್ವಳತನುವನಭ್ರಪಥದ |
ತ್ತಳಂಘಿಸಲ್ಕಿದ್ದುದಂ ಚಮೂಪತಿ ಕಂಡಂ || xvi 45

ಪ್ರಯೋಗವು ಸಂದೇಹಾಸ್ಪದವಾಗಿದೆ.

ವಾಚಕರಿಗೆ ಓದುವಂದು ಶಾಂತಿಪುರಾಣದಲ್ಲಿ ಮಾರ್ದವವೂ, ಆದಿಪುರಾಣದಲ್ಲಿ ಗಾಂಭೀರ್ಯವೂ, ಅಜಿತಪುರಾಣದಲ್ಲಿ ವಾಗ್ಧಾರೆಯೂ ಕಾಣಬರುತ್ತವೆ. ಶಾಂತಿಪುರಾಣದಲ್ಲಿಯೇ ಮಾರ್ದವವು ಅಧಿಕ ವೆನ್ನಬಹುದು.

ಇನ್ನು ತಿರುಳಗನ್ನಡದಲ್ಲಿ ಶಾಂತಪುರಾಣದ ಕನ್ನಡವು ಕನ್ನಡದ ತಿರುಳಲ್ಲದಿದ್ದರೆ ಆದಿಪುರಾಣ ದಲ್ಲಿಯೂ ತಿರುಳಗನ್ನಡವಿಲ್ಲ.

"ನೋಡಿರೆ ಪೇೞ್ವ ಮೂಱುವರ ಭಾಷೆಗಳಂ ಪೆಱರರ್ಥಮು"....

ಎಂದು (xii. 77) ಪೊನ್ನನು ಹೇಳುವುದಕ್ಕೂ ಛಂದೋಂಬುಧಿಯ ನಾಗವರ್ಮನ ಮಾತಿಗೂ ಏನಾದರೂ ಸಂಬಂಧವಿರಬಹುದೇ?

## ೧೨. ಪೊನ್ನನ ವಿಷಯವಾಗಿ ಕವಿಗಳ ಅಭಿಪ್ರಾಯಗಳು.

ಪೊನ್ನನನ್ನು ಕೊಂಡಾಡಿ ಕೊನೆವವರಲ್ಲಿ ಮೊತ್ತಮೊದಲಿಗನಾದ ರನ್ನನು ಏನು ಹೇಳಿರುವನು? ಪಂಪ, ಪೊನ್ನ, ರನ್ನ ಈ ಮೂವರಲ್ಲದೆ ಜಿನಸಮಯದೀಪಕರಾರೂ ಇಲ್ಲ. ಆದಿಪುರಾಣದೊರೆಗೂ ಶಾಂತಿಪುರಾಣದೊರೆಗೂ ಸರಿಯಾಗಿರುವ ಪುರಾಣವನ್ನು ಬರಯಬೇಕೆಂದು ದಾನಚಿಂತಾಮಣಿಯಾದ ಅತ್ತಿಮಬ್ಬೆ ಹೇಳಿದುದರಿಂದ ಅಜಿತಪುರಾಣವೆಂಬ ಪುರಾಣತಿಲಕವನ್ನು ರನ್ನನು ಬರೆದನು. ಆವೆರಡು ಪುರಾಣಗಳೊಡನೆ ಸರಿತೂಗುವುದೆಂದೂ ಹೇಳಿರುವನು. ಇಷ್ಟೇ ಅಲ್ಲ. ಅಲ್ಲಲ್ಲಿ ಪೊನ್ನನಅಭಿಪ್ರಾಯ ಗಳನ್ನು ವಿಶದೀಕರಿಸುವನು ಶಾಂತಿ x 43, 45, x 216 ಅಜಿತ iv 64, 45, iii 123ಕ್ಕೆ ಸರಿಯಾಗಿವೆ. ರನ್ನನ ಜಿನಜನ್ಮಾಭಿಷೇಕ ವರ್ಣನೆಯಂತೆ ಹಿಂದೆ ಆರೂ ವರ್ಣಿಸಿಲ್ಲವೆಂದೂ ಮುಂದೆ ಆರೂ ವರ್ಣಿಸಲಾರರೆಂದೂ ಹೇಳಿಕೊಂಡಿರುವನು.

ರನ್ನನಾದ ಬಳಿಕ ನಾಗಚಂದ್ರನು (1105) ಮಲ್ಲನಾಥಪುರಾಣದಲ್ಲಿ:—

ಮನ್ನಿಸುಗೆ ಕೃತಿಗೆ ಸೌಭಾ |
ಗ್ಯೋನ್ನತಿಯಂ ಸುಕವಿ ಪಂಪನಾದಿಪುರಾಣಂ ||
ಪೊನ್ನನ ಶಾಂತಿಪುರಾಣಂ |
ರನ್ನನ ಕೃತಿರತ್ನಮೆನಿಸಿದಜಿತಪುರಾಣಂ ||

ನಯಸೇನನು (1112) ಪೊನ್ನನ ಮಹೋನ್ನತಿವೆತ್ತ ಬೆಡಂಗು—

ಅಸಗನ ದೇಸೆ ಪೊನ್ನನ ಮಹೋನ್ನತಿವೆತ್ತ ಬೆಡಂಗು ಪಂಪನೊಂ |
ದಸದೃಶಮಪ್ಪಪೂರ್ವರಸಭಾವ ಗಜಾಂಕುಶನೊಳ್ಪುವೆತ್ತು ರಂ ||
ಜಿಸುವ ಸದರ್ಥದೃಷ್ಟಿ ಗುಣವರ್ಮನ ಜಾಣ್ ಕವಿರತ್ನನೋಜೆ ಶೋ |
ಭಿಸೆ ನೆಲಸಿರ್ಕೆ ಧಾರಿಣಿ ಮನಂಗೊಳೆ ಮತ್ಕೃತಿಯೊಳ್ ನಿರಂತರಂ ||
ಧರ್ಮಾಮೃತ i. 29

ಕರ್ಣಪಾರ್ಯ (1140)

ಹೊನ್ನನ ರನ್ನನ ಪಂಪನ |
ಸನ್ನುತಕವಿತಾಗುಣಕ್ಕೆ ಸರಿದೊರೆಸವಿನ ||
ಪ್ಪನ್ನರ್ ಕಾವ್ಯಕಳಾಸಂ |
ಪನ್ನರ್ ಪೆಱರೊಳರೆ ಧರೆಯೊಳಿನ್ನುಂ ಮುನ್ನುಂ ||

ಕಾವ್ಯಾವಲೋಕನಕಾರನಾದ ನಾಗವರ್ಮನು (1145) ಈ ನಮ್ಮ ಮೂವರ ಗ್ರಂಥಗಳಿಂದಲೂ ಲಕ್ಷ್ಯಕ್ಕೆ ಪದ್ಯಗಳನ್ನು ಉದ್ಧರಿಸಿರುವನು. ಶಾಂತಿ iii. 47, v. 85ನ್ನು ಶ್ಲೇಷೋಪಮೆಗೂ ವ್ಯತಿರೇಕಕ್ಕೂ ಉದ್ಧರಿಸಿರುವನು.

ದುರ್ಗಸಿಂಹನ (1145) ಪಂಚತಂತ್ರದಲ್ಲಿ—

.... .... ಪಡೆದಂ ವಿಶ್ವಾ ||
ವನಿಪಾಲಂ ಕೃಷ್ಣನರೇಂ |
ದ್ರನೀಯೆ ಕವಿಚಕ್ರವರ್ತಿ ವೆಸರಂ ಪೊನ್ನಂ || (i 24)
ಮಾರ್ಗದ್ವಯ ಪರಿಣತ ಕವಿ |
ಮಾರ್ಗಮನೋಹಾರಿಯಾದುದೆಂದಖಿಲಬುಧರ್ ||
ನಿರ್ಗರ್ವರಾಗಿ ಪಂಪನ |
ಗೀರ್ಗುಂಫದ ಪೆಂಪನಾಗಳುಂ ಬಣ್ಣಿಸುವರ್ || i. 25

ಎಂಬಲ್ಲಿ ಪೊನ್ನನ ವಿಷಯವಾದ ಪದ್ಯವು ಅಸಮಗ್ರವಾಗಿರುವುದರಿಂದ ಪಂಪನ ಧಾಟಿಯನ್ನು ವರ್ಣಿಸಿರುವಂತೆ ಪೊನ್ನನ ಕವಿತಾಗುಣವನ್ನು ವರ್ಣಿಸಿದ ಭಾಗವು ನಮಗೆ ದೊರೆಯದಿರಬಹುದೋ ಏನೋ ತಿಳಿಯಲಾಗದು. ಪೊನ್ನ ಪಂಪರನ್ನು ಹೊಗಳಿದ ಈ ದುರ್ಗಸಿಂಹನು ರನ್ನನ ಹೆಸರನ್ನೇ ಎತ್ತದಿರುವುದು ಆಶ್ಚರ್ಯವಾಗಿದೆ.

ನೇಮಿಚಂದ್ರನು (1170) ಲೀಲಾವತಿಯಲ್ಲಿ ವ್ಯಕ್ತವಾಗಿ ಹೇಳದಿದ್ದರೂ

ಮತಿಮಂಥಾದ್ರೀಂದ್ರದಿಂದಂ ಜಿನಪತಿಮತ ವಾರಾಸಿಯೊಳ್ ನೂತ್ನರತ್ನ |
ತ್ರಿತಯಂ ಧವರ್ಾಮೃತ .... ....

ಎಂದು (i. 77) ನಮ್ಮ ಕವಿರತ್ನತ್ರಯರ ಕಾವ್ಯರತ್ನಗಳನ್ನು ಸೂಚಿಸಿರುವನು.

ಅಗ್ಗಳನು (1189) ಚಂದ್ರಪ್ರಭಪುರಾಣದಲ್ಲಿ—

ನಯದಿಂ ಪಂಪನೊಳಿಲ್ಲದ ನಿರ್ಮಿಸಿದ ಪೊನ್ನಂ ಪ್ರೀತಿಯಿಂ ಪೇಟ್ದ ಭ |
ಕ್ತಿಯಿನಾ ರತ್ನಕವೀಶ್ವರಂ ಸಮೆದ ತತ್ಕಾವ್ಯತ್ರಯಕ್ಕಂ ಜಗ ||
ತ್ತ್ರಯಮುಂ ಮುಂ ಬೆಲೆಯಾಗಿ ಪೋಯ್ತೆನೆ ಬಟಿಕ್ಕಾಂ ಪೇಟ್ದ ಚಂದ್ರಪ್ರಭೋ |
ದಯವಿಸ್ತಾರಿಯೆನಿಪ್ಪ ಕಾವ್ಯಮಿದಮೂಲ್ಯತ್ವಕ್ಕೆ ಪಕ್ಕಾಗದೇ (i. 66)

ರುದ್ರಭಟ್ಟನು (1180) ಜಗನ್ನಾಥವಿಜಯದಲ್ಲಿ—

ಇನಿತುಮಿವಿರ್ಕೆ ಮತ್ಕೃತಿಯೊಳೀಧರೆ ಬಣ್ಣಿಸೆ ಸಂದ ಶಂಖವ |
ರ್ಮನ ಬಗೆ ಶಾಂತಿವರ್ಮನ ನಯಂ ಗುಣವರ್ಮನ ಬಂಧಗೌರವಂ ||
ಮನಸಿಜನೋಜೆ ಕಣ್ಣಮನ ಜಾಣ್ನುಡಿ ಪಂಪನ ರೀತಿ ಚಂದ್ರಭ |
ಟ್ಟನ ಜತಿ ಪೊನ್ನಮಯ್ಯನ ಬೆಡಂಗು ಗಜಾಂಕುಶನುಳ್ಳ ಬಿನ್ನಣಂ || (i 10)

ಇವನೂ ರನ್ನನ ಹೆಸರನ್ನು ಎತ್ತಲಿಲ್ಲ.

ಆಚಣ್ಣನು (1190) ವರ್ಧಮಾನ ಪುರಾಣದಲ್ಲಿ—

ಶ್ರೀವಿಜಯಂ ಗಜಾಂಕುಶನುದಾತ್ತಯಶಂ ಗುಣವರ್ಮನಾ ಜಗ |
ತ್ಪಾವನನಾಗವರ್ಮನಸಗಂ ರಸಿಕಾಗ್ರಣಿ ಹಂಪದೇವನಾ ||
ಭಾವಕಚಕ್ರಿ ಹೊನ್ನಿಗ ನಿಳಾನುತ ರನ್ನಿಗ ನಗ್ಗದಗ್ಗಳಂ |
ಧೀವಿಭು ಬೊಪ್ಪನೆಂಬ ಕವಿದರ್ಪಕರಿಂದೆಸೆವತ್ತು ಭೂತಳಂ || (i 18)

ದೇವಕವಿ (1200) ಕುಸುಮಾವಳಿಯಲ್ಲಿ

ಜೈನಕವಿಗಳಿಗೆ ರನ್ನ ಅಗ್ಗಳರನ್ನು ಮಾತ್ರವೇ ಹೊಗಳಿ ಪಂಪಪೊನ್ನರನ್ನು ಹೇಳದಿರುವುದು ವಿಚಿತ್ರವೇ ಸರಿ.

ಇಂತಹ ದೇವಕವಿ ಶಾಂತೀಶ್ವರಪುರಾಣವನ್ನು ಬರೆದ ಕಮಲಭವನಿಗೆ ಸಹಾಯಮಾಡಿದುದು ಸತ್ಯವಾಗಿರಬಹುದು?

ಪಾರ್ಶ್ವಪಂಡಿತನು (1205) ಪಾರ್ಶ್ವನಾಥಪುರಾಣದಲ್ಲಿ (I 72)

ಪಂಪನ ನುಣ್ಪುವೆತ್ತನುಡಿ ಪೊನ್ನನ ಬಿನ್ನಣದೋಜೆ ರನ್ನನೊ |
ಳ್ಪಂ ಪುದಿದಿರ್ದ ಲಕ್ಷಣವಿಚಕ್ಷಣತೋನ್ನತಿ ಕಣ್ಣಮೆಯ್ಯನಿಂ ||
ಪಂ ಪುದಿದಿರ್ದ ಗೌರವಗುಣಂ ಗುಣವರ್ಮನ ದೇಸೆವೆತ್ತಮಾ |
ತೇಂ ಪರಿಕಿಪ್ಪೊಡೀ ಕೃತಿಯೊಳುಂಟೆನೆ ಪೇೞ್ವುದು ಪೇೞಲೊಲ್ದವಂ ||

ಜನ್ನನು (1209) ಅನಂತನಾಥಪುರಾಣದಲ್ಲಿ (I. 35)

ಎನಗನುಕೂಲಮಕ್ಕೆ ಗುಣವರ್ಮನ ಜಾಣ್ನುಡಿ ಪಂಪನಿಂಪು ಪೊ |
ನ್ನನ ಬಗೆ ನಾಗವರ್ಮನ ಬಹುಜ್ಞತೆ ರನ್ನನ ಕಾಂತಿ ನಾಗಚಂ ||
ದ್ರನ ರಸಭಾವ ಮಗ್ಗಳನ ವಕ್ರತೆ ನೇಮಿಯ ದೇಸೆ ಪುಷ್ಪಬಾ |
ಣನ ಮೃದುಬಂಧ ಮಿಾ ಕವಿಗಳಲ್ತೆ ಜಿನೇಂದ್ರಪುರಾಣಕರ್ತೃಗಳ್ ||

ಯಶೋಧರಚರಿತ್ರೆಯಲ್ಲಿ

ಕನ್ನರನಾದರದಿಂ ಕುಡೆ |
ಹೊನ್ನಂ ಮನಮೊಸೆದು ತೈಲಪಂ ಕುಡೆ ರನ್ನಂ ||
ಮನ್ನಿಸಿ ಬಲ್ಲಾಳಂ ಕುಡೆ |
ಜನ್ನಂ ಕವಿಚಕ್ರವರ್ತಿವೆಸರಂ ತಳೆದಂ ||
ರನ್ನಂ ವೈಯಾಕರಣಂ |
ಜನ್ನಂ ಮೇಣ್ ಕವಿಗಳೊಳಗೆ ವೈಯಾಕರಣಂ ||
ಪೊನ್ನನಸಹಾಯಕವಿ ಮೇಣ್ |
ಜನ್ನಿಗನಸಹಾಯಸುಕವಿ ಕವಿಚಕ್ರಿಗಳೊಳ್ ||

ಗುಣವರ್ಮನು (1235) ಪುಷ್ಪದಂತಪುರಾಣದಲ್ಲಿ

ಅನುಗುಣಮಾಗಿ ಕೂಡೆ ಗುಣವರ್ಮನ ಮೆಯ್ಸಿರಿ ಪಂಪನೋಜೆ ಪೊ |
ನ್ನನ ಪೊಸದೇಸೆ ರನ್ನನ ಗುಣೋನ್ನತಿಯಗ್ಗಳನೊಳ್ಪು ನಾಗವ ||
ರ್ಮನ ಬಹುರೀತಿ ನೇಮಿಯ ಚಮತ್ಕೃತಿ ಜನ್ನಿಗನಿಂಪು ನಾಗಚಂ |
ದ್ರನ ರಸವೃತ್ತಿ ರಂಜಿಸುಗೆ ನಿರ್ಣಯಮೆನ್ನಯ ನವ್ಯಕಾವ್ಯದೊಳ್ ||

ಕಮಲಭವನು (1235) ಶಾಂತೀಶ್ವರಪುರಾಣದಲ್ಲಿ (I 62)

ಜಿನಸಮಯ ಪ್ರಕಾಶಕೃತಸತ್ಕವಿ ಪಂಪನ ಪೆಂಪುವೆತ್ತ ಪೊ |
ನ್ನನ ಕವಿನಾಗಚಂದ್ರನ ನೆಗೞ್ತೆಯ ರನ್ನನ ಸಂದ ಬಂಧುವ ||
ರ್ಮನ ಬುಧನೇಮಿಚಂದ್ರನ ಜಗನ್ನುತಜನ್ನನ ರಂಜಿಪಗ್ಗಳ |
ಯ್ಯನ ಕೃತಿಸೌಂದರೀ ಸುಭಗಮಾವಗಮಿರ್ಕೆ ಮದೀಯಕಾವ್ಯದೊಳ್ ||

ಅಂಡಯ್ಯನು (1235) ಕಬ್ಬಿಗಕಾವದಲ್ಲಿ

ಪಂಪ ಪೊನ್ನರ ಹೆಸರನ್ನು ಎತ್ತಲಿಲ್ಲ

ಎನ್ನೀ ಕಬ್ಬದೊಳೆಂದುಂ |
ಸನ್ನಿದಮಾಗಿರ್ಕೆ ಕಣ್ಣಮಯ್ಯನ ಕಡುಜಾಣ್ ||
ರನ್ನನ ಮೆಯ್ಸಿರಿ ಗಜಗನ |
ಬಿನ್ನಣ ಮಗ್ಗಳನ ಕಾಣ್ಕೆ ಜನ್ನಿಗನ ಜಸಂ ||

ಮಲ್ಲಿಕಾರ್ಜುನನು (1245) ಸೂಕ್ತಿಸುಧಾರ್ಣವದಲ್ಲಿ

ಜನ್ನನ ದೇಸೆ ಪಂಪನ ಗುಣಂ ಗುಣನಂದಿಯ ತೊಂಡು ಪೊನ್ನನೊಳ್ |
ಸನ್ನಿದವಾದ ನಾಣ್ನುಡಿ ಗಜಾಂಕುಶರಾಜನ ಚಿತ್ತವೃತ್ತಿ ತಾ ||
ನುನ್ನತವಾಗಿ ಸಂದ ಗುಣವರ್ಮನ ಜಾತಿ ಸಮಾನುರಕ್ತಿಯಿಂ |
ದನ್ನೆಲಸಿರ್ಪುವೀ ಸುಕವಿಮಲ್ಲನ ಕಾವ್ಯವಿಳಾಸಗೇಹದೊಳ್ ||

ಎಂಬಲ್ಲಿ ರನ್ನನ ಹೆಸರನ್ನು ಎತ್ತದಿದ್ದರೂ ಅವನ ಕಾವ್ಯಗಳಿಂದ ಪದ್ಯಗಳನ್ನು ಮಾತ್ರ ಉದ್ಧರಿಸಿರುವನು.

ಕೇಶಿರಾಜನು (1260) ಶಬ್ದಮಣಿದರ್ಪಣದಲ್ಲಿ I. 5 ನೆಯ ಪದ್ಯದಲ್ಲಿ
ರನ್ನನ ಹೆಸರನ್ನು ವ್ಯಕ್ತವಾಗಿ ಹೇಳದಿದ್ದರೂ ನಮ್ಮ ಮೂವರು ಕವಿಗಳ ಕೃತಿಗಳಿಂದ ಪದ್ಯಗಳನ್ನು ಪ್ರಯೋಗಕ್ಕೆ ಲಕ್ಷ್ಯವಾಗಿ ಹೇಳಿರುವನು.

ಪಿರಿಯುರಸಿಯ ಪಟುವೇಟದ |
ಪರಿವಿಡಿ ಮಗುಟ್ದುಂ ಕೊನತ್ತುರ್ದಾಸತಿಯೊಡನಿಂ ||
ನರಪತಿ ನಿನ್ನಂಗಾಲೊಳ್ |
ನರೆ ಬಪ್ಪಿನಮುತ್ತರೋತ್ತರಂ ಪುದುವಾಟಾ ||

ಎಂಬ ಶಾಂತಿಪುರಾಣದ (ix 52) ಪದ್ಯವು ಸೂತ್ರ 246 ರ ಕೆಳಗೆ ಪ್ರಯೋಗಕ್ಕೆ ತೆಗೆದಲ್ಲ ಲೇಖಕರ ಪ್ರಮಾದಪರಂಪರೆಯಿಂದ ಕೆಟ್ಟಿರುವುದನ್ನು ನೋಡಬಹುದು.

ಚೌಂಡರಸನು (1300) ಅಭಿನವ ದಶಕುಮಾರಚರಿತ್ರೆಯಲ್ಲಿ

ಪೊಗಟ್ವೆಂ ಲಕ್ಷಣಲಕ್ಷಿತಾದ್ಭುತವಚೋ ನಿಷ್ಕಂಪನಂ ಪಂಪನಂ |
ಜಗತೀ ಪ್ರೀತಿಕರ ಪ್ರಸಿದ್ಧಕವಿತಾಸಂಪನ್ನನಂ ಪೊನ್ನನಂ ||
ಸುಗಮಾರ್ಥಸ್ಫುಟ ಶಬ್ದಸುಂದರ ಕಿರದ್ವಾಕ್ಸಾಂದ್ರನಂ ಚಂದ್ರನಂ |
ಭಗವದ್ವಿಷ್ಣು ಕಥಾವತಾರರಚಿತಶ್ರೀಭದ್ರನಂ ರುದ್ರನಂ ||

ಎಂಬಲ್ಲಿ ರನ್ನನನ್ನು ಮರೆತುದೇಕೋ ತಿಳಿಯದು.
ನಾಗರಾಜನು (1331) ಪುಣ್ಯಾಸ್ರವಚಂಪುವಿನಲ್ಲಿ I. 11

ಪೊನ್ನಿಗನೋಜೆ ಕಂಪರಸನೊಪ್ಪುವ ಕಾವ್ಯದ ಕೀರ್ತಿಯಾವಗಂ |
ಜನ್ನನೊಳೊಪ್ಪುವೆತ್ತ ಪೊಸಮಾತು ಗಜಾಂಕುಶನರ್ಥಗೌರವಂ ||
ಮುನ್ನಿನ ಬಂಧುವರ್ಮ ಗುಣವರ್ಮರ ಜಾಣ್ನುಡಿ ನಾಗಚಂದ್ರನ |
ತ್ಯುನ್ನತಿವೆತ್ತ ದೇಸೆ ನೆಲಸಿರ್ಕೆ ಮದೀಯ ಕಥಾಪ್ರಬಂಧದೊಳ್ ||

ಆದರೆ ಪಂಪನಲ್ಲಿ ಪಕ್ಷಪಾತವಿದ್ದಂತೆ

ಪಸರಿಪ ಕನ್ನಡಕ್ಕೊಡೆಯ ನೊರ್ವನೆ ಸತ್ಕವಿ ಪಂಪನಾವಗಂ |
ವಸುಧೆಗೆ ಚಕ್ರಿಯಂತಮರಭೂಮಿಗೆ ವಾಸವನಂತೆ ಸಂತತಂ ||
ರಸಕುರಗೇಂದ್ರನಂತೆ ಗಗನಕ್ಕೆ .... .... ರವಿಯಂತೆ ಧಾತ್ರಿಯೊಳ್ |
ಜಸವಡೆದಿರ್ದನೀಗಳೆಮಗೀಗೆ ತದೀಯವಚೋವಿಳಾಸಮುಂ (I. 15)

ಎಂದು ಹೇಳಿರುವನು.

ನಿಸ್ಸಂದೇಹವಾಗಿ ಪೊನ್ನನು ಮಹಾಕವಿಯೇ ಸರಿ. ಮೃದುಪದಬಂಧವೂ, ಯುಕ್ತಿಯುಕ್ತವೂ ಗಂಭೀರವೂ ತೊಡಕಿಲ್ಲದೆಯೂ, ಇಂಪಾದ ಲೋಕೋಕ್ತಿಗಳುಳ್ಳುದಾಗಿಯೂ ಇರುವ ನಿಸರ್ಗವಾದ ಒಂದು ದಾಟಿ ಪೊನ್ನನದು.

ಅಭಿನವವಾದಿವಿದ್ಯಾನಂದ ಸಂಕಲಿತವಾದ ಕಾವ್ಯಸಾರದಲ್ಲಿಯಾಗಲಿ, ಸಾಳ್ವನ ರಸರತ್ನಾಕರದಲ್ಲಿಯಾಗಲಿ ಪೊನ್ನನ ಶಾಂತಿಪುರಾಣದ ಪದ್ಯಗಳು ಉದ್ಧೃತವಾಗದಿರುವ ಕಾರಣವೇನು? ಗ್ರಂಥವು ಇವರಿಗೆ ದೊರಕದ ಕಾರಣವಲ್ಲದೆ ಬೇರೇನೂ ಇಲ್ಲ. ಆದರೆ ಕಾವ್ಯಸಾರದಲ್ಲಿ ನಮಗೆ ದೊರಕದಿರುವ ಮೊದಲನೆಯ ಗುಣವರ್ಮನ ಶೂದ್ರಕದಿಂದ ಅಲ್ಲದಿದ್ದರೆ ಹರಿವಂಶದಿಂದ ಉದ್ಧರಿಸಿರುವ ಪದ್ಯಗಳು ಬಹಳವಿರುವುದರಿಂದ ಪೊನ್ನನ ಶಾಂತಿಪುರಾಣವು ದೊರೆತಿದ್ದರೆ ವಿದ್ಯಾನಂದನು ಸುಮ್ಮನಿರುತ್ತಿರಲಿಲ್ಲ.

## ೧೩. ಶಾಂತಿಪುರಾಣದ ಕಾಲ.

ಪಂಪನು ಆದಿಪುರಾಣದಲ್ಲಿ xvi 76, 77

ಶಕವರ್ಷಮೆಂಟುನೂಱು |
ಕ್ಕೆ ಕಡೆಯೊಳಱುವತ್ತುಮೂಱು ಸಂದಂದು ಜಗ ||
ತ್ಪ್ರಕಟಪ್ಲವ ಸಂವತ್ಸರ |
ದ ಕಾರ್ತಿಕಂ ಮುದಮನೀಯೆ ನಂದೀಶ್ವರದೊಳ್ ||
ಸಿತಪಕ್ಷದ ಪಂಚಮಿ ದಿನ |
ಪತಿವಾರಂ ಶುಭದ ಮೂಲ ನಕ್ಷತ್ರದೊಳ ||
ನ್ವಿತಮಾಗೆ ನೆಗೞ್ದುದೀ ಮ |
ತ್ಕೃತಿ ಜಗದೊಳ್ ಪುದಿದು ಸಾಗರಾಂತಕ್ಷಿತಿಯಂ || ಎಂದೂ

ರನ್ನನು ಅಜಿತಪುರಾಣದಲ್ಲಿ (xii. 54)

ಶಕವರ್ಷಂ ಪಂಚದಶಾ |
ಧಿಕ ನವಶತಮಾಗೆ ವಿಜಯಸಂವತ್ಸರ ಕಾ ||
ರ್ತಿಕ ನಂದೀಶ್ವರ ದಿನದೊಳ್ |
ಪ್ರಕಟಿಸಿದುದು ರತ್ನನಿಂದಮಜಿತಪುರಾಣಂ || ಎಂದೂ

ಹೇಳಿರುವಂತೆ ಪೊನ್ನನೂ ಬರೆದಿದ್ದರೆ ಶಾಂತಿಪುರಾಣದ ಕಾಲವನ್ನು ಶ್ರಮವಿಲ್ಲದೆ ತಿಳಿದುಕೊಳ್ಳಬಹುದಾಗಿತ್ತು. ಆದರೆ ಅಂತಹ ಪದ್ಯವನ್ನು ಕಾಣದೆ ಇರುವುದರಿಂದ ಇತರ ಆಧಾರಗಳಿಂದ ಕಾಲವನ್ನು ನಿರ್ಣಯಿಸಬೇಕಾಗಿರುವುದು. ಶಬ್ದಾನುಶಾಸನದ ಪೀಠಿಕೆಯಲ್ಲಿರುವ 950 ಎಂಬ ಕಾಲವನ್ನೇ ಕವಿಚರಿತ್ರೆಯವರೂ ನಿರ್ಣಯಮಾಡಿರುತ್ತಾರೆ.

ಶಾಂತಿಪುರಾಣದಲ್ಲಿ ದೊರಕುವ ಆಧಾರವಿಷ್ಟೇ—

ಭುವನ ಸಕ್ಕದ ಕನ್ನಡ |
ಗವಿಗಳ್ ಸಲೆ ಸಾಲೆ ಸೋಲೆ ಸವಣಂಗಿತ್ತಂ ||
ಸವಿವೇಕಮುಭಯಕವಿಚ |
ಕ್ರವರ್ತಿವೆಸರಂ ನಿಜಾಹಿತೋಷ್ಣಂ ಕೃಷ್ಣಂ || (i. 10)
ಶಾಂತಿಪುರಾಣದ ನಿರ್ವಾ |
ಣಂ ತಕ್ಕುದೆ ಮಲ್ಲಪಯ್ಯನಿಂ ತದನುಜನಿಂ ||
ಶಾಂತಿಧನ ಪುನ್ನಮಯ್ಯನಿ |
ನೇಂ ತಮ್ಮುತ್ತೀರ್ವರುಂ ಕೃತಾರ್ಥರೊ ಜಗದೊಳ್ || (i. 52)
ಕವಿತಾವಿಳಾಸಮುಂ ಚ |
ಕ್ರವರ್ತಿ ತಾನಿರ್ದ್ದು ಮುಚ್ಚಿ ಪೆಸರ್ಗೊಂಡೆರಡುಂ ||
ಕವಿತೆಯೊಳಮುಭಯಕವಿಚ |
ಕ್ರವರ್ತಿಯೆನೆ ನೆಗೞ್ದನೀ ಕುರುಳ್ಗಳ ಸವಣಂ || xii. 72

ಅಯ್ದು ಕಷಾಯೋದಕದೊಳ್ |
ತೊಯ್ದು ಸಗಂಬೋಲ್ ನೃಪೇಂದ್ರಸಭೆಯೆಂಬ ಕೊಳ ||
ಕ್ಕಯ್ದು ಲಸದಲೆದು ಸೆಲೆಯೊಳ್ |
ಪೊಯ್ದಂ ಕವಿಚಕ್ರವರ್ತಿ ಕವಿಚೀವರಮಂ || xii. 73

ಭುವನೈಕರಾಮಭ್ಯುದಯವನ್ನೂ, ಗತಪ್ರತ್ಯಾಗತವನ್ನೂ ಬರೆದು ಪ್ರಸಿದ್ಧಿವಡೆದುದರಿಂದ ಕೃಷ್ಣನರೇಂದ್ರನು ಕವಿತಾವಿಳಾಸಕ್ಕೆ ಮೆಚ್ಚಿ ಉಭಯ ಕವಿಚಕ್ರವರ್ತಿಯೆಂಬ ಬಿರುದನ್ನು ಕೊಟ್ಟಂತೆ ಹೇಳಿರುವನಷ್ಟೆ. ಆದರೆ ತತ್ಕಾಲದಲ್ಲಿ ಕೃಷ್ಣನರೇಂದ್ರನೆಂಬ ರಟ್ಟರಾಜನು ರಾಜ್ಯವನ್ನು ಪರಿಪಾಲಿಸುತ್ತಿದ್ದಂತೆ ವ್ಯಕ್ತವಾಗಿ ಹೇಳಲಿಲ್ಲವಾದರೂ ಕೃಷ್ಣನರೇಂದ್ರನು ರಾಜ್ಯವಾಳುತ್ತಿದ್ದನೆಂದು ಊಹಿಸಲಿಕ್ಕೆ

ಧರಣಿಗೆ ನೆಗಟ್ದರ್ ಸಲೆ ರ |
ಟ್ಟರಾಜ್ಯದೊಳ್ ಮುನ್ನೆ ಪಂಪನುಂ ಪೊನ್ನಿಗನುಂ ||
ನರಪತಿಪೂಜ್ಯಂ ಚಾಳು |
ಕ್ಯರಾಜ್ಯದೊಳ್ ನೆಗಟ್ದನುಭಯಕವಿ ಕವಿರತ್ನಂ || (ಅಜಿತ xii 40)
.... .... ಪಡೆನಂ ವಿಶ್ವಾ ||
ವನಿಪಾಲಂ ಕೃಷ್ಣನರೇಂ |
ದ್ರನೀಯೆ ಕವಿಚಕ್ರವರ್ತಿವೆಸರಂ ಪೊನ್ನಂ || (ಪಂಚತಂತ) i. 24
ಕನ್ನರನಾದರದಿಂ ಕುಡೆ |
ಪೊನ್ನಂ ಮನಮೊಸೆದು ತೈಲಪಂ ಕುಡೆ ರನ್ನಂ ||
ಮನ್ನಿಸಿ ಬಲ್ಲಾಳಂ ಕುಡೆ |
ಜನ್ನಂ ಕವಿಚಕ್ರವರ್ತಿವೆಸರಂ ಪಡೆದಂ || (ಯಶೋಧರಚರಿತ್ರೆ i. 21.)

ಎಂಬಿವೇ ಮೊದಲಾದ ಆಧಾರಗಳು ಸಿಕ್ಕಬಹುದು. ಹಾಗಾದರೆ ಆಳುವ ರಾಜನಾಗಿದ್ದಲ್ಲಿ ಅವನನ್ನು ಪಂಪ ರನ್ನ ಜನ್ನರು ಹೊಗಳಿ ವರ್ಣಿಸಿರುವಂತೆ ವ್ಯಕ್ತವಾಗಿ ಹೇಳದೆ, ರಾಜವಂಶಾವಳಿಯನ್ನು ವಿಸ್ತರಿಸದೆ ಬಿಟ್ಟಿರುವುದು ಪೊನ್ನನಂತಹ ಕವಿಗೆ ಸಹಜವಲ್ಲವೆಂಬ ಸಂಶಯವು ಒದಗುವುದು. ಬಹುಶಃ ಪೊನ್ನನ ಶಾಂತಿಪುರಾಣದ ಕಾಲಕ್ಕೆ ಕನ್ನರನು ರಾಜ್ಯವಾಳುತ್ತಿರಲಿಲ್ಲ. ಇನ್ನೂ ಯುವರಾಜನಾಗಿಯೇ ಇದ್ದಿರಬಹುದು. ಕೃಷ್ಣನರೇಂದ್ರನ ರಾಜ್ಯಭಾರದ ಕಾಲವು 939ರಿಂದ 968ರವರೆಗೆ ಎಂದು ರೈಸ್ ಸಾಹೇಬರ ನಿರ್ಣಯವಾಗಿರುವುದು. [ವಿನ್ಸೆಂಟ್ ಸ್ಮಿತ್ ಸಾಹೇಬರು 940—971 ಎಂದು ಹೇಳಿರುವಲ್ಲಿಯೂ ಫಪ್ ಕ್ರೋನಾಲಜಿಯಲ್ಲಿಯೂ ತಪ್ಪಿದ್ದರೂ ಇರಬಹುದು.] ಮಲ್ಲಪನ ತಮ್ಮನಾದ ಪೊನ್ನಮಯ್ಯನು ಕೃಷ್ಣನರೇಂದ್ರನಿಗಾಗಿ ಗೋವಿಂದರನೊಡನೆ ಕಾದಿ ಕಾವೇರೀ ತೀರದಲ್ಲಿ ಮಡಿದನೆಂದು ಅಜಿತಪುರಾಣದಲ್ಲಿ (i. 36)

ಪರಮದ್ರೋಹರೊಳೊಂದಿ ತನ್ನೊಳಱಿಯಲ್ ಗೋವಿಂದರಂ ಬಪ್ಪುರ್ದುಂ |
ಸೆರಗಂ ಪಾರದೆ ತಾಗಿ ತೈಲಪನೃಪಂ ಬಾಟಿಗ್ಗಿಂದು ಬಾಳ್ಗಿತ್ತು ಮ ||
ಚ್ಚರದಿಂ ಸಾರ್ಚಿದರಂ ಪಡಲ್ವಡಿಸಿ ಕಾವೇರೀಸರಿತ್ತೀರದೊಳ್ |
ಸುರಲೋಕಾತಿಥಿಯಾದ ಪೊನ್ನನೆ ವಲಂ ಗಂಡಂ ಪೆಱರ್ ಗಂಡರೇ ||

ಎಂಬುದರಿಂದ ಕೃಷ್ಣನರೇಂದ್ರನು ಸಿಂಹಾಸನವನ್ನೇರಿದಕೂಡಲೆ ಈ ಕಾವೇರಿಯತೀರದ ಯುದ್ಧವು ನಡೆದಿರಬೇಕು. ಈ ಸಮಯದಲ್ಲಿಯೇ ಕೃಷ್ಣನರೇಂದ್ರನು ತನ್ನ ಮೈದುನನಾದ ಭೂತುಗಗಂಗನಿಗೆ ಗಂಗವಾಡಿಯ ರಾಜ್ಯವನ್ನು ಪಡೆಯಲು ಸಹಾಯಮಾಡಿದುದು. ಭೂತುಗಗಂಗನು ರಾಜ್ಯವಾಳಿದ ಕಾಲ (938—953.) ಇವನನ್ನೂ ಸೂಚಿಸುವ

ಪಿರಿಯಂ ಬೂತುಗನಾತನಿಂ ಮಮಳನಾತಂಗಂ ನೊಳಂಬಾಂತಕಂ.... (xii. 9)

ಎಂಬ ಪದ್ಯವೂ ಇದೆ.

ಪೊನ್ನನು ಶಾಂತಿಪುರಾಣವನ್ನು ಬರೆವ ಕಾಲಕ್ಕೆ ಈ ಪೊನ್ನಮಯ್ಯನು ಬದುಕಿಯೇ ಇದ್ದನು. ಇವನಿಗಾಗಲಿ, ಮಲ್ಲಪನಿಗಾಗಲಿ ಮದುವೆಯಾದುದು, ಮಕ್ಕಳಾದುದು ಆವುದನ್ನೂ ಶಾಂತಿಪುರಾಣದಲ್ಲಿ ಹೇಳದೆ ಇರುವುದರಿಂದ ಪೊನ್ನಮಯ್ಯನಿನ್ನೂ ಎಳೆಯ ಹರೆಯದವನಾಗಿರಬೇಕು. ಕೃಷ್ಣನರೇಂದ್ರನು ರಾಜ್ಯಭಾರವನ್ನು ಇನ್ನೂ ವಹಿಸಿರಲಿಲ್ಲವೆಂದರೆ ಆಗಳೇ ಅವನನ್ನು ನರೇಂದ್ರನೆಂದೂ, ಕನ್ನರನೆಂದೂ ಪ್ರಸಿದ್ಧನಾಮಗಳಿಂದ ಕರೆವುದರಲ್ಲಿ ತಪ್ಪೇನೂ ಕಾಣುವುದಿಲ್ಲ. ಈಗ ನಮ್ಮ ಮೈಸೂರಲ್ಲಿ ಶ್ರೀಮದ್ಯುವರಾಜರಿಗೆ ಮಹಾರಾಜ ಎಂಬ ಹೆಸರನ್ನು ಕೊಟ್ಟೇ ಇರುವರಷ್ಟೆ. ಬಾಹುಬಲವುಳ್ಳವನೂ ಪರಾಕ್ರಮಿಯೂ ಎಂದು ಕೃಷ್ಣನರೇಂದ್ರನು ಪ್ರಸಿದ್ಧನಾಗಿ "ನಿಜಾಹಿತೋಷ್ಣಂ ಕೃಷ್ಣಂ" ಎಂಬುದನ್ನು ರಾಜ್ಯವಾಳಲಿಕ್ಕೆ ಮುಂಚೆಯೇ ಸಾರ್ಥಕಮಾಡಿದ್ದನು. ಇದಕ್ಕೆ ಶಾಸನಗಳಲ್ಲಿಯೂ ತಕ್ಕಷ್ಟು ಆಧಾರವು ದೊರೆಯಬಹುದು:—ಚಿತ್ರದುರ್ಗ: 76ನೆಯ ಶಾಸನ—

ಸ್ವಸ್ತ್ಯಮೋಘವರ್ಷದೇವ ಶ್ರೀಪೃಥಿವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕ ವಿಜಯರಾಜ್ಯಮಾಚಂದ್ರಾರ್ಕತಾರಂಬರಂ ಸಲುತ್ತಿರೆ ಸಕನೃಪ ಕಾಳಾತೀತ ಸಂವತ್ಶತಂ ೮೫೫ಯ ಹೇಮಳಂಬಿ ಸಂವತ್ಸರಂ ಪ್ರವರ್ತಿಸೆ ತದ್ವರ್ಷಾಭ್ಯನ್ತರ ಭಾದ್ರಪದ ಬಹುಳದಮಾವಾಸ್ಯೆ ಬೃಹಸ್ಪತಿವಾರದಂದು

ರಟ್ಟಭೂಪರ ವಂಶಾವಳಿ—

ಅಜಸುತನತ್ರಿ ಯತ್ರಿಯ ಸುತಂ ಶಶಿ ಸೋಮಸುತಂ ಬುಧಂ ಬುಧಾ |
ನ್ವಜನಜಿತಂ ಪುರೂರವನುದಾರಪುರೂರವನಂದನಂ ಜಗ ||
ದ್ವಿಜಿತಮಹಾಬಳನ್ನಹುಷನಾನಹುಷಂಗೆ ಮಗಂ ಯಯಾತಿಭೂ |
ಭುಜನಮಳಂ ಯಯಾತಿಗೆ ಮಗಂ ಯದು ಯಾದವರಾತನನ್ವಜರ್ ||
ಯಾದವ ಕುಲದೊಳ್ ಪಲರುಂ |
ಮೇದಿನಿಯಂ ಸುಖದಿನಾಳ್ದರವರಿಂ ಬೞಿಯಂ ||
ಶ್ರೀದಯಿತಂ ದನ್ತಿಗನುದಿ |
ತೋದಿತ ಮಾತನಿನ್ದ ? ನಖಿಳರಾಜ್ಯಶ್ರೀಯೊಳ್ ? ||
ದನ್ತಿಗನ ಪುತ್ರರಂ ರಾ |
ಜ್ಯಾಂತರ ಮಾದಂದು ಕನ್ನರಂ ಕಿಱಿಯಮ್ಮಂ ||
ಸನ್ತಾನದೊಳಿಟ್ಟಿ ಬೞಿ |
ಕ್ಕನ್ತಾತನ ತನಯನೊಪ್ಪೆ ನಿರುಪಮದೇವಂ ||
ಆ ನಿರುಪಮಂಗೆ ಪುಟ್ಟಿದ |
ನಾನತರಿಪುನೃಪಕದಂಬಕಂ ಜಗತುಂಗಂ ||
ತಾನಾ ಜಗತುಂಗನ ಮಗ |
ನೀನೆಲದೊಳ್ ನೆಗಟ್ದಿ ಮೋಘವರ್ಷಮಹೀಶಂ ||

ನೆಗೞ್ದಿ ಱ್ದಿ ಮೋಘವರ್ಷನ |
ಮಗನೆನ್ತುಂ ದೇವನೆನಿಸಿದಾ ದೇವನ ಪೆ ||
ರ್ಮಗನಿನ್ದರನಾತಂ ಕಲಿ |
ಯುಗದೊಳ್ ಕಲಿ ಚಾಗಿಯೆನಿಸಿದಂ ವಿಕ್ರಮದಿಂ ||
ಇನ್ದರನ ಮಗನ್ದೀವಂ |
ತನ್ದೆಯವೋಲ್ ನೆಗಟ್ದಿ ದೇವರಾಜಸುತಂಗ(ಂ) ||
ಭೀನ್ದರನಾತನಮಗನಭಿ |
ವನ್ದಿತಪದನಿಱುವ ಕನ್ನರಂ ಧರ್ಮಪರಂ ||

ಮನುಮಾರ್ಗಂ ಚರಿತಂ ದ್ವಿಷತ್ಕುಳಹರಂ ಶೌರ್ಯಂ ಜಗದ್ವ್ಯಾಪಿ ಶಾ |
ಸನಬದ್ಧಂ ನುಡಿ ಕಲ್ಪವೃಕ್ಷಮೆನಿಕುಂ ಸನ್ಮಾನದಾನಂ ಶಶಾಂ ||
ಕನಿಭಂ ಕೀರ್ತಿ ಸಮುನ್ನತನನ್ತಗುಣದಿನ್ದಿಂ ಕನ್ನರಂ ಧರ್ಮನಂ |
ವನನಿಂ ರಾಘವನಿಂ ದಿಳೀಪನೃಪನಿಂ ಮಾಂಧಾತನಿಂ ದಗ್ಗಳಂ ||)
ಪಳಯಾಱಿಕೊಳ್ದೀವನಾಟಂದಿಱಿದು ಮಡಿಪಿದೊಂ ಪಾಂಡ್ಯನಂ ದೇವಪುತ್ರಂ |
ಗಳಕೊಂದಂ ವೀರನಂ ಶ್ರೀಪುರದೊಱದೊನಿನಾತ್ಮಜಂ ಪಲ್ಲವೇಶ ||
ರ್ಕಳನಿದ್ರಂ ಗೆಲ್ದನೀಕನ್ನರ ನಧಿಕಬಳಂ ಗಂಗಪೆರ್ಮಾಳಿಯಂಕೊಂ |
ದೆಳೆಯಂ ಭೂವಲ್ಲಭಂಗಿತ್ತಿಱಿದು ನೆಗಟ್ದಿರೀರಾಷ್ಟ್ರಕೂಟಾನ್ವಯರ್ಕ್ಕಳ್ ||

ಈ ಶಾಸನದ ಕಾಲವು 937: ಕಡೆಯ ಪದ್ಯದಲ್ಲಿಯ ಸಂದರ್ಭವು ಸುಮಾರು 940 ಆಗಿರಬಹುದು. ಇವೇ ಮೊದಲಾದ ಆಧಾರಗಳಿಂದ ಕೃಷ್ಣನರೇಂದ್ರನು ಇಂದ್ರಾತ್ಮಜನಾಗಿ ಇಂದ್ರನು ಅಧಿರಾಜನಾಗಿದ್ದಂದು ಯುವರಾಜನಾಗಿ ಅನೇಕ ಸಾಹಸಕೃತ್ಯಗಳನ್ನು ಮಾಡಿದುದೂ ಅಲ್ಲದೆ ನೃಪಸಭೆಯಲ್ಲಿ ಕವಿಗಮಕಿವಾದಿ ವಾಗ್ಮಿಗಳ ಸಭೆಯನ್ನು ಸಮಾವೇಶಗೊಳಿಸಿ ಕವಿತಾವಿಳಾಸನಾದುದರಿಂದ ಪೊನ್ನನಿಗೆ ಉಭಯಕವಿಚಕ್ರವರ್ತಿ ಎಂಬ ಬಿರುದನ್ನು ಕೊಟ್ಟಿರಬೇಕು.

ಪೊನ್ನನು ಪೂರ್ವಕವಿಪ್ರಶಂಸೆಯಲ್ಲಿ ಅಸಗನನ್ನು ಹೆಸರೆತ್ತಿ ಹೇಳಿರುವುದರಿಂದ ಪಂಪನಿಂದೀಚೆಯವನಾಗಿದ್ದ ಪಕ್ಷದಲ್ಲಿ ಪಂಪನ ಹೆಸರನ್ನೂ ಹೇಳುತ್ತಿದ್ದನು. ಅವನ ಕಾಲಕ್ಕೆ ಹಿಂದಿದ್ದವರೊಳಗೆ ಅಥವಾ ಸಮಕಾಲಿಕರೊಳಗೆ ಅಸಗನಿದ್ದಿರಬೇಕು. ಮಿಕ್ಕವರು ಕವಿನಾಮಧಾರಕರಾಗಿದ್ದಿರಬೇಕಾದುದರಿಂದ ಪ್ರಸಿದ್ಧನಾದ ಪಂಪನು ಪೊನ್ನನ ಕಾಲಕ್ಕೆ ಹಿಂದೆ ಇದ್ದುದು ಸಂದೇಹಾಸ್ಪದವಾಗಿದೆ.

ಪಂಪನು ತನ್ನ ಸ್ವಭಾವಕ್ಕನುಗುಣವಾಗಿ ಆವ ಕವಿಯ ಹೆಸರನ್ನೂ ಹೇಳದಿರುವುದು ಸಹಜ. ಪೊನ್ನನ ಶಾಂತಿಪುರಾಣದಂತಹ ಸುಕಾವ್ಯವೂ, ಪುರಾಣಚೂಡಾಮಣಿಯೂ ನಿರ್ಮಿತವಾಗಿದ್ದರೂ ಪಂಪನು ಅದರ ಗುಣವನ್ನಾಗಲಿ ದೋಷವನ್ನಾಗಲಿ ಗಣಿಯಿಸದಿರುವುದೇ ಅವನ ಸ್ವಭಾವ. ಶಾಂತಿಪುರಾಣಕ್ಕೆ ಹಿಂದೆ ಆದಿಪುರಾಣವು ನಿರ್ಮಿತವಾಗಿದ್ದಲ್ಲಿ ಹನ್ನೆರಡನೆಯಾಶ್ವಾಸದ 59, 65, 69, 76 ನೆಯ ಪದ್ಯಗಳನ್ನು ಪೊನ್ನನು ಬರೆದು ಬಡಾಯಿಕೊಚ್ಚಿಕೊಳ್ಳುತ್ತಿರಲಿಲ್ಲ.

ಇದಲ್ಲದೆ ಕೆಲವರು ಕವಿಗಳು ಪೂರ್ವಕವಿಸ್ತವಾಸವರದಲ್ಲಿ ಮೊದಲು ಪೊನ್ನನ ಹೆಸರನ್ನು ಹೇಳಿ ಬಳಿಕ ಪಂಪನ ಹೆಸರನ್ನು ಹೇಳಿರುವರು ಉದಾ—ನಯಸೇನ, ದುರ್ಗಸಿಂಹ, ಎರಡನೆಯಗುಣವರ್ಮ ಕೇಶಿರಾಜ, ಇದು ಅವಿಚಾರಿತವಾಗಿ ಬರೆದುದಾಗಿರಲಿಕ್ಕಿಲ್ಲ.

ಮಲ್ಲಪನೂ ಅವನ ತಮ್ಮನಾದ ಪೊನ್ನಮಯ್ಯನೂ ಪ್ರೋತ್ಸಾಹಿಸಿ ಬರೆದ ಶಾಂತಿಪುರಾಣದಲ್ಲಿ ಮಲ್ಲಪನ ಸಂತತಿಯ ಸಂಗತಿಯೇ ಇಲ್ಲ. ಮಲ್ಲಪನ ಮಗಳಾದ ದಾನಚಿಂತಾಮಣಿಯೆಂದು ಪ್ರಸಿದ್ಧಿವಡೆದ ಅತ್ತಿಮಬ್ಬೆಗಾಗಿ ಬರೆದ ಅಜಿತಪುರಾಣದಕಾಲಕ್ಕೆ ಅವಳಿಗೆ ನನ್ನಿನಾರಾಯಣನೆಂಬ ಮಗನಿದ್ದನು. ಅಜಿತಪುರಾಣವನ್ನು ಬರೆಯಿಸಿದ ಅತ್ತಿಮಬ್ಬೆ "ಅಮ್ಮನಭಕ್ತಿಯಿಂದ" ಶಾಂತಿಪುರಾಣದ ಸಹಸ್ರಪ್ರತಿಗಳನ್ನು ಪ್ರತಿಮಾಡಿಸಿ ಬೀರಿದಂತೆ ಕಂಡುಬರುವ ಪದ್ಯಗಳು ಗ್ರಂಥದಕೊನೆಯಲ್ಲಿವೆ. ಆಗಲೇ ಅತ್ತಿಮಬ್ಬೆಯಕಾಲಕ್ಕೆ ಶಾಂತಿಪುರಾಣವು ಗೆದ್ದಲುಹಿಡಿದುಹೋಗಿರಬಹುದು, ಇಲ್ಲದಿದ್ದರೆ ವಾಚಕವೃಂದಕ್ಕೆ ದೊರಕುವುದು ಅತಿಪ್ರಯಾಸವಾಗಿರಬಹುದು. ಹೇಗಾದರೂ ಸರಿ ಮಲ್ಲಪನಿಗೆ ಶಾಂತಿಪುರಾಣದಕಾಲಕ್ಕೆ ಮದುವೆಯಾಗಿರಲಿಲ್ಲ. ಅಜಿತಪುರಾಣದ ಕಾಲಕ್ಕೆ ಮಲ್ಲಪನ ಮಗಳಾದ ಅತ್ತಿಮಬ್ಬೆಗೆ ರಾಜ್ಯವಾಳುವಷ್ಟು ಸಾಮರ್ಥ್ಯವುಳ್ಳ ನನ್ನಿನಾರಾಯಣನೆಂಬ ಮಗನಿದ್ದನೆಂದರೆ ಇವೆರಡು ಗ್ರಂಥಗಳಿಗೂ ಕೊನೆಗೆ ಅಜಿವತ್ತುವರ್ಷವಾದರೂ ಮಧ್ಯಕಾಲವಿರಬೇಕು. ಅಜಿತಪುರಾಣವು 993 ರಲ್ಲಿ ಬರೆದುದೆಂಬುದು ನಿರ್ಣಯವಾದುದರಿಂದ ಶಾಂತಿಪುರಾಣವು ಸು 933 ರಲ್ಲಿ ಬರೆದಿರತಕ್ಕದ್ದು.

ಶಾತಿಪುರಾಣವು ಸು 935 ನಿರ್ಮಿತವಾಯಿತೆಂದರೆ ಅಷ್ಟೊಂದು ತಪ್ಪಲ್ಲವೆಂದು ತೋರುವುದು.



## EDITORS' NOTE

In publishing this great and ancient work in Kanarese, we have prepared the text after consulting the manuscripts in the Government Oriental Manuscripts Library, Mysore; and another paper manuscript kindly given to us by Mr. Bommarasa Pandit of Mysore.

When the text was nearly printed, we got another palm leaf manuscript from the central Jaina Oriental Library, Arrah, (Behar and Orissa) and the variations in reading found therein have been duly incorporated in the form of an appendix.

We tender our grateful thanks to professor R. Tatacharya, M.A., L.T., for his scholarly introduction to this work. His is a familiar name in kannada Literary Circles and requires no separate introduction by us.

A. VENKATA RAU, B.A.,L.T.,
*Reader in Kanarese, Madras University,*
AND
PANDIT. H. SESHA AYYANGAR,
*Fellow-in-Kanarese, Madras University.*

ಶ್ರೀ

ಕವಿರತ್ನ

# ಪೊನ್ನ ಮಹಾಕವಿ ವಿರಚಿತಂ

## ಪುರಾಣಚೂಡಾಮಣಿ

(ಎನಿಪ)

# ಶಾಂತಿಪುರಾಣಂ

## ಪ್ರಥಮಾಶ್ವಾಸಂ.

ಮ॥ ಸ್ರ॥ ಪರಮಶ್ರೀಸ್ತನಗೇಹಾಯಿತಪದಕಮಲಂ ಚೇತನಾಚೇತನಾಂಗ ।
ಸ್ಫುರಿತಾರ್ಥೌಘಜ್ಞಿದಂ ಭಾಸುರಸುರನರಸದ್ಭವ್ಯಸ್ತೋತ್ರಂ ವಚೋವಿ ॥
ಸ್ತರತೃಪ್ತಿವ್ಯಾಪ್ತಲೋಕತ್ರಿತಯನಪಗತಾಶೇಷದೋಷಾಳಿ ಮುಕ್ತಿ ।
ಸ್ಥಿರಸೌಖ್ಯಾಂಭಸ್ಸ್ವಯಂಭೂರಮಣಜಲಧಿ ರಕ್ಷಿಕ್ಕೆ ಶಾಂತೀಶನೆಮ್ಮಂ ॥ ೧ ॥

ಶಾ॥ ಕೇಶೋತ್ಪಾಟನದಂದು ಭಾವಿಸಿ "ನಮಃ ಸಿದ್ಧೇಭ್ಯ" ಎಂದಾದಿತೀ ।
ರ್ಥೇಶರ್ ವಂದಿಸಿ ದೀಕ್ಷೆಗೆಯ್ದ ರಜರರ್ ಸಿದ್ಧಂ ನಮಾದ್ಯಂ ಜಗ ॥
ತ್ಕಾಶುದ್ಧಾಕ್ಷರಮೆಂಬ ಸುದ್ದಗೆಯುಮಿಂತಾರ್ ಪೂಜ್ಯರೆಂದಾಂ ಭವ ।
ಕ್ಲೇಶೋಚ್ಛಿತ್ತಿನಿಮಿತ್ತದಿಂದೆಱಗುವೆಂ ಸಿದ್ಧಾಂಘ್ರಿಪದ್ಮಂಗಳೊಳ್ ॥ ೨ ॥

ಉ॥ ವೀರಜಿನೇಂದ್ರನಿಂ ಗಣಧರಾಗ್ರಣಿಯಿಂ ಕ್ರಮದಿಂದೆ ಬಂದ ವಿ ।
ಸ್ತಾರದ ಜೈನಧರ್ಮದ ಮೊದಲ್ ಪರಮೇಶ್ವರರೆಂಬಿನಂ ಸದಾ ॥
ಚಾರಸಮೇತರಾದೆಮಗೀಗೆ ಶಿವಾಸ್ಪದ ಮುಖ್ಯಸೌಖ್ಯಮಂ ।
ಸೂರಿಗಳಂಗಜಾರಿಗಳತತ್ತ್ವವಿದಾರಿಗಳುದ್ಧಚಾರಿಗಳ್ ॥ ೩ ॥

ಕ್ಷಾಯಿಕದೃಷ್ಟಿ ತುಷ್ಟಿಯೊಳೊಡಂಬಡೆ ಜೈನವಚೋಮೃತಂ ಮುಖ ।
ಶ್ರೀಯ ಪೊಡರ್ಪಿಯುಂ ಬೆಳಗೆ ಸೌಗತಸಾಂಖ್ಯಶಿವಾಗಮಂಗಳಂ ॥
ನ್ಯಾಯನಯಪ್ರಮಾಣಸುವಚಃಕ್ರಮದಿಂ ಸಲೆ ಸೋಲೆ ಗೆಲ್ದ ಸಾ ।
ಧ್ಯಾಯರಜೋಯೆಗೀಗೆಮಗೆ ಮುಕ್ತಿನಿವೇಶನಪ್ರಕಾಶನಮಂ ॥ ೪ ॥

ಮ|| ಬಗೆ ಶುದ್ಧಂ ತನು ಶುದ್ಧ ಮಾಸ್ತುತಿ ಪದಾರ್ಥಂ ಶುದ್ಧ ಮಿಂತೀ ತ್ರಿಶು |
ದ್ಧಿಗಳಿಂ ಧ್ಯಾನಿಸುವೆಮ್ಮ ನೋತೆಱಗುವೆಮ್ಮಂ ಬಂದಿಪೆಮ್ಮಂ ತ್ರಿಕಾ ||
ಲಗಯೋಗರ್ ಪರಮೇಶ್ವರರ್ ಪರಸುಗಿಂ ವಾತ್ಸಲ್ಯದಿಂ ಸರ್ವಸಾ |
ಧುಗಣಂ ಸಾಧುಗಳಪ್ಪಮಾಪರಕೆಯಿಂದಾಮುಂ ವ್ರತವ್ರಾತದೊಳ್ || ೫ ||

ಚಂ|| ಗುರು ಪರ ಪತ್ತ ದಿವ್ಯ ಮುನಿ ಪುತ್ರ ರುದಾತ್ತಶುಭಂಕರ ಪ್ರಭಂ |
ಕರ ರವಕೀರ್ತಿಪರಂ ನೆಗೞ್ದ ನೇಮಿಜಿನೇಶರ ಶಾಸನಕ್ಕೆ ಭಾ ||
ಸುರ ಪರಿರಕ್ಷಣಸ್ಥಿತಿಯನಿತ್ತಜಿನಪ್ರವರ್ಗಭೂತ ಪೂರ್ವ ಮಾ |
ಗಿರೆ ದೊರೆವೆತ್ತ ಯಕ್ಷ ಬಗೆದೀಕ್ಷಿಸಿ ರಕ್ಷಿಸುಗೆಮ್ಮ ನೇಗಳುಂ || ೬ ||

ಮ|| ಅಣಿಮಾದ್ಯಷ್ಟ ಗುಣಂಗಳಂ ಪಡೆವುದುಂ ಜೈನೋಕ್ತಿ ವಾರಾಶಿ ವಾ |
ಕಣದಿಂದಂ ಪಡೆದಿರ್ದ ಸಿದ್ಧ ಪದಮುಂ ಕೆಯ್ಕೊಳ್ವವರ್ಕಡ್ಡಮೊ ||
ಡ್ಡಣಮೊಡ್ಡಿರ್ದಘಸೈನ್ಯಮುಂ ತುಳಿಯಿಸಲ್ ಸರ್ವಾಹ್ಣಯಕ್ಷಂ ಸ್ವವಾ |
ರಣಕಾಘೋರಣನಾದ ನುಂತಪರಣಂ ಗೇಕಾರಣಂ ವಾರಣಂ || ೭ ||

ಅತಿ ಗಂಭೀರ ವ್ಯಮೂಕ್ತಿ ವಕ್ತ್ರದೊಳೊಡಂಬಟ್ಟೊಪ್ಪೆ ಕೇಳ್ದಂ ಬಹು |
ಶ್ರುತ ನಲ್ಪ ಶ್ರುತ ನೆನ್ನ ದಾರ ಕಿವಿಗಂ ನುಣ್ಪಿಂಪಿನೊಳ್ ಕೂಡೆ ಪಂ ||
ಡಿತರುಂ ಮೂರ್ಖರು ಮೆಕ್ಕೆಯಿಂ ಪೊಗೞ್ ಪೇೞಲ್ ಬಾಜಸಬ್ಬಂ ಸರ
ಸ್ವತಿಯಂ ಸಾಧಿಸೆ ಸಂದ ಸಯ್ಪು ಸವಣಂಗಕ್ಕುಂ ಪೆಱಂಗಕ್ಕುಮೇ || ೮ ||

ಕಂ|| ಭುವನದ ಕನ್ನಡಸಕ್ಕದ |
ಗವಿಗಳ್ ಸಲೆ ನಾಲೆ ಸೋಲೆ ಸವಣಂಗಿತ್ತಂ ||
ಸವಿನೇಕ ಮುಭಯ ಕವಿ ಚ |
ಕ್ರವರ್ತಿ ಪೆಸರಂ ನಿಜಾಹಿತೋಷ್ಣಂ **ಕೃಷ್ಣಂ** || ೯ ||

ದೊರೆಯಿಲ್ಲನೆ ಪೊರೆಯಿಲ್ಲನೆ |
ನೆರೆಮಿಲ್ಲನೆ ಸಮಜಿ ಸಕ್ಕದಂ ಕನ್ನಡಮುಂ ||
ಬೆರಡುಂ ಕವಿತೆಯನಮಳ್ಕೆ |
ತ್ತರಂತಿರೊಡನಡಪಿದಂ **ಕುರುಳ್ಗಳ ಸವಣಂ** || ೧೦ ||

ಕನ್ನಡಗವಿತೆಯೊಳ್**ಸಗಂ** |
**ಗನ್ನೊ**ಮರ್ಡಿರೆ ಪೆಗಗ್ಗಳಂ ಸಕ್ಕದದೊಳ್ ||
ಮುನ್ನುಕ್ಕ **ಕಾಳಿದಾಸಂ** |
ಗನ್ನಾಲ್ಪಡಿ ರಚನೆಯೊಳ್ **ಕುರುಳ್ಗಳ ಸವಣಂ** || ೧೧ ||

**ಶಾಂತಿಜಿನ** ಜನ್ಮ ಜಲಧಿಗೆ |
**ಶಾಂತಿಪುರಾಣ**ಮೆ ಪರಾರ್ಥ್ಯ ರತ್ನ ನಿಚಂ ಪೇ ||
ೞ್ದಿಂತು ಕವಿ ಚಕ್ರವರ್ತಿಯೆ |
ನೊಂತಂ ಪೆಸರಿಂ, ಪುರಾಣ ಚೂಡಾಮಣಿಯುಂ || ೧೨ ||

ಕಂ|| ಜಿನ ಮದನರೊಳಗೆ ಪದಿನಾ |
ಱನೆಯಂ ತತ್ವಕಳ ಚಕ್ರವರ್ತಿಗಳೊಳಗ ||
ಯ್ದನೆಯ ನೆನೆ ಪುಣ್ಯಪುಂಜಾ |
ರ್ಜನಕ್ಕೆ **ಶಾಂತೀಶ**ನಂತು ನೋಂತರುಮೊಳರೇ || ೧೩ ||

ಆ ತೀರ್ಥಕರನ ಪೆಂಪು ಪ
ರ್ಮಾತೀತ ಮದರ್ಕೆ ಬಯಸಿ ಕಣ್ಣುಂ ಕಾಲುಂ ||
ಬಾತೊಡೆ ಬರ್ಕುಮೆ ಪುಣ್ಯಮ
ನಾತನ ನೆರಪಿದುವ ನೆಯ್ದೆ ನೆರಪದೆ ಮೊದಲೊಳ್ || ೧೪ ||

ಆ ಜಿನ ಪುರಾಣಮುಮ ನಮ |
ರೀ ಜನ ಮೃದು ಮಧುರ ನಿನದ ಗೀತ ಮುಮಂ ರಾ ||
ರಾಜಿತಮುಂ ತ್ರಿಜಗ ಜ್ಜನ |
ಪೂಜಿತಮುಂ ಪೇಟರ್ ದುರಿತ ಹರಣಮು ಮಜಾಪೆ || ೧೫ ||

ಮ || ಜಿನ ತತ್ವಂ ಸ್ಮರ ತತ್ವ ಮೆಂಬಿವೆರಡುಂ ದೂರಸ್ಥ ಮೆಂತೆನ್ನಲಾ |
ಜಿನ ತತ್ವಂ ಗತರಾಗ ಮಾಮದನ ತತ್ವಂ ರಾಗ ಸಂಪೂರ್ಣ ಮ ||
ಯ್ದನೆಯಂ ತಜ್ಜಿನ ಚಕ್ರವರ್ತಿ ಜಿನನಾಥಂ ಷೋಡಶಂ ಧರ್ಮ ಚ |
ಕ್ರ ನಿಯುಕ್ತಂ ಭರತೋರ್ವಿಗಿಂತು ಸಲೆ ನೋಂತಂ **ಶಾಂತಿ**ತೀರ್ಥೇಶ್ವರಂ || ೧೬ ||

ಕಂ|| ಕಾನೂರ್ಗಣ ಮುನಿಪತಿ ವಿ |
ದ್ಯಾನಿಧಿ ಗುಣನಿಧಿ ದಯೈಕನಿಧಿ ಶುದ್ಧ ಯಶ ||
ಶ್ರೀ ನಿಧಿ ತಪೋಂಬುನಿಧಿ ಭುವ |
ನಾನತ ಪದ ಕನಕ ಕಮಳ ನಮಳಿನ ಚರಿತಂ || ೧೭ ||

ವಿತತ ನರುಹದ್ಬಲಂ ಯತಿ |
ಪತಿ ಮಹಿಪತಿ ಮಕುಟ ನಿಕಟ ತಾಟಿತ ಚರಣಂ ||
ಕ್ಷಿತಿ ಪೂಜ್ಯಂ ಜಿತ ದುರಿತಂ |
ನುತ ಸಂಪ್ರುತಿ ಭೂತ ಭಾವಿ ಪರಿಣತ ತತ್ವಂ || ೧೮ ||

ನೆಗಟ್ದರ್ಹಣಂದಿ ಯೋಗಿಗ |
ಳಗಾಧ ಬೋಧರ್ ತದೀಯ ಶಿಷ್ಯರ್ ಖ್ಯಾತಾ ||
ಧಿಗತ ಜಿನ ತತ್ವರನುಪಮ |
ರಗಣ್ಯ ಪುಣ್ಯಾಗ್ರ ಗಣ್ಯ ರವಸರ್ಪಿಣಿಯೊಳ್ || ೧೯ ||

ಆ ಯತಿನಾಥರ ಶಿಷ್ಯರ |
ಜೇಯಜಿನಾಗಮ ಪಯೋಧಿ ಪಾರೋತ್ತೀರ್ಣ ||
ಕ್ಷಾಯಿಕ ಸಮ್ಯಗ್ದೃಷ್ಟಿಗ
ಳಾಯತ ಪುರಿಮಂಡಲಾಭಿಧಾನಾನೂನರ್ || ೨೦ ||

ಕಂ|| ನೆಗಳ್ದ **ಹರ್ಷಣಂದಿ** ಸಿದ್ಧಾಂ |
ತಿಗರ್ ಧಿಗತ ಸಕಳ ತತ್ತ್ವರ್ ಆಯತ ಲವಣಾ ||
ಬ್ಧಿ ಗಭೀರ ಭೂರಿ ವಾರಿಧಿ |
ನಿಗೂಢ ಮಹ ರುದ್ಘಸತ್ತ್ವಸಿದ್ಧಿ ಸಮೇತರ್ || ೨೧ ||

ಆ ಪರಮೇಶ್ವರ ರಾಶಾ |
ಶಾಸ್ತ್ರೋ ಪರಮೈಕ ಮತರ ಸಂಸಾರ ಸಮು ||
ದ್ರಾಪರ ಪಾರ್ಥೋ ತ್ಸುಕ ರಥಿ |
ರೂಪರ ಶಿಷ್ಯರ್ ಸು**ವೀರಣಂದಿ** ಮುನೀಂದ್ರರ್ || ೨೨ ||

ಅನಘರ್ ತ್ರಿಕಾಲ ಯೋಗಿಗ |
ಳನುಪಮ ಚಾರಿತ್ರ ರದ್ವಿತೀಯರ ಮೇಯರ್ ||
ಮುನಿಮುಖ್ಯರ್ ಜೆಟ್ಟಿದ **ದಾ** |
**ಮನಂದಿ** ಮುನಿ **ವೀರಣಂದಿ**ಮುನಿಪರ ಶಿಷ್ಯರ್ || ೨೩ ||

ಮುನಿ ಮುಖ್ಯರ್ ಜೆಟ್ಟಿದ **ದಾ** |
**ಮನಂದಿ**ಗಳ ಶಿಷ್ಯರಿಂದು ಕುಂದೋಜ್ಜ್ವಳ ಸೂ |
ತನ ಕೀರ್ತಿ ಮೂರ್ತಿಗಳ್ **ಚಂ** |
**ದಿನಂದಿ**ಗಳ್ ಗಣಧರಾಗ್ರಗಣ್ಯ ಸಮಾನರ್ || ೨೪ ||

ಆ ಚಂದಿನಂದಿ ಮುನಿಪ ಸ |
ದಾಚಾರರ ಶಿಷ್ಯ ರಮಳ **ಜಿನಚಂದ್ರ** ಮುನೀಂ ||
ದ್ರಾಚಾರ್ಯರ್ ತ್ರೈಲೋಕ್ಯ ಚ |
ರಾಚರ ರಕ್ಷಾ ಕ್ಷಮೈಕ ಕಾರಣ ನಿರತರ್ || ೨೫ ||

ಚಂ|| ಮುನಿಪ ಸಹಸ್ರ ಭೋಜನ ಕರಂ ಬುಧ ಭವ್ಯ ಜನೌಘ ಸೇವ್ಯ ನ |
ತ್ಯನುಪಮ ಚಕ್ರವರ್ತಿ ಯತಿರಾಜ ಗಣಾಗ್ರಣಿ ದತ್ತ ವಿತ್ತ ಭಾ ||
ಜನ ಕವಿ ವಾದಿ ವಾಗ್ಮಿ ಗಮಕಂ ವಸುಧೈಕ ಕುಟುಂಬಕಂ ಸಭಾ |
ಜನ ಸುಜನೈಕ ಭಾಜನ ಮುಖಂ **ಜಿನಚಂದ್ರ** ಮುನೀಂದ್ರ ಸೂರಿಯೊಳ್ || ೨೬ ||

ಕಂ|| ಇಹಭವ **ಶಿಬಿ ಕರ್ಣ ರಘೂ** |
**ದ್ವಹ ಶಕರಿಪು ಗುಪ್ತ ಚಾರುಗುಪ್ತ** ಗುಣಂ ವ್ಯ ||
ತ್ರಹ ಯಶ ನಾಶಾಂಬರ ರಾ |
ಜಹಂಸ ನಕಳಂಕ ಚಂದ್ರ ನಾ **ಜಿನಚಂದ್ರಂ** || ೨೭ ||

ದೀನ ಜನ ದಾನ ನಿರತನ |
ನೂನ ಗುಣೋತ್ತಮ ಸುಸತ್ಯ ತಾಪಸ ಲೋಕಾ ||
ದಾನಂ ವಿತ್ತಾರ್ಥಿಗೆ "ಕಃ |
**ಕೇನಾರ್ಥೀ ಕೋ** ದರಿದ್ರ" ಎಂದಾ ಕೀರ್ತಿವಂ || ೨೮ ||

ಉ|| ಆದಿ ಜಿನೇಂದ್ರ ಪಾದ ಕಮಲ ಭ್ರಮರಂ **ಜಿನಚಂದ್ರ** ದೇವ ನು |
ತ್ಪಾದಿತ **ಪೂಜ್ಯಪಾದ** ಚರಿತಂ ಜಯ ವಾದ್ಯ**ಕಳಂಕ** ಸನ್ನಿಭಂ ||
ಭೇ ದುರಿತಾತಿದೂರ ನನವದ್ಯ ಜಿನಾಗಮ ವಿದ್ಯ ನಿಷ್ಠ ಮ |
**ಗ್ಳೋ**ದಧಿ ಧೌತಕೀರ್ತಿ ವಿಶದಂ ಭರತಾವನಿ ರಾಜ ಪೂಜಿತಂ || ೨೯ ||

ಕಂ|| ವಿನಯ ನಿಧಾನಂ ಜಿನ ಸಮ |
ಯ ನಿರತಿಶಯ ಸಾರ ಚಾರು ಸರ್ವಸ್ವ ವಿನೂ ||
ತನ **ಸತ್ಸಮಂತಭದ್ರಂ** |
ಜಿನ ಚಂದ್ರಂ ಬುಧ ಸರೋಜ ವನ ಕಳಹಂಸಂ || ೩೦ ||

ದಿಗಿಭಂ ದಿಗಿಭಕ್ಕೆ ಪೊಗಂ |
ಬುಗುವಂತಿರೆ ಸಂಚಿವಾರದಿಂ ಧನದಿಂದಂ ||
ಮಿಗಿಲುದ್ವಾನಿಯ ದಾನಂ |
ದಿಗಿಭದ ದಾನಕ್ಕೆ ಮಿಗ್ಗಳಂ ಮುನಿಪತಿಯಾ || ೩೧ ||
ಈಡಿತ ಜಿನವರ ಶಾಸನ |
ಚೂಡಾಮಣಿ ಬುಧರ್ಗನಲ್ಪ ಕಲ್ಪಕುಜಂ ಕೆ ||
ಯ್ನೀಡಿದ ಪೇಟ್ಟಿರ ನೆರವಿಗೆ |
ಸೇಡಿಲ್ಲದೆ ಕುಡುವುದಾತ್ತನಾಜಿನಚಂದ್ರಂ || ೩೨ ||

ಚಂ|| ಎನಗೆ ಜಿನೇಂದ್ರ ಧರ್ಮದೊಳೆ ಶರಣ್ ಪೊನೆಗೊಡ್ಡಿದ ಭೂರಿ ವೈರಿ ಸಾ |
ಧನ ಹರಣಂ ದಲೆಂದೆ ಜಿನಚಂದ್ರ ಮುನೀಂದ್ರರ ಪಾದ ಮೂಲದೊ ||
ಳ್ವಿನಮಿತರಾಗಿ ಕೊಂಡುಕೊಳ್ಳವರ್ ಸಲೆ ವಾಣಿಯವಾಡಿಯೊಳ್ ಮಹಾ |
ವನಿಪರ ದೇನಗಣ್ಯ ಕೃತಪುಣ್ಯರೊ ಭಾವಿಸೆ ತನ್ಮುನೀಂದ್ರನಾ || ೩೩ ||

ಕಂ|| ಅಪವರ್ಗಮಾರ್ಗ ದುರ್ಗಾ |
ಘಪಾತಪಟು ಪರಮ ಜನಮತಾಂಬುಧಿ ಚಂದ್ರಂ ||
ಕುಪಥ ಮಲ ವಿಲಯನಂ ಪಂ |
ಚಪರಮ ಗುರು ಭಕ್ತಿನಿರತನಾ ಜಿನಚಂದ್ರಂ || ೩೪ ||

ಜಿನಶಾಸನ ದೀಪಕನುಂ |
ಮುನಿ ವೈರೋಚನನು ಮಷ್ಟ ಜಿನಚಂದ್ರ ಮುನೀಂ ||
ದ್ರನ ಸುರ್ವರಾಸ್ಯ ತಿಲಕನ |
ನನೂನ ಗುಣ ಮಣಿ ಗಣ ಪ್ರಭೂಷಿತ ತನುವಂ || ೩೫ ||
ಆಜಿನ ಚಂದ್ರ ಸನಯ ನಯ |
ಭಾಜನನಂ ಸಲೆ ಪುರಾಣ ಚೂಡಾಮಣಿಗೇ ||
ಭ್ರಾಜಿತ ಶಾಂತೀಶ್ವರ ಕಥೆ |
ಗೀ ಜಗದೊಳ್ ಪತಿ ಯೆನಲ್ಕೆ ಪೇಟ್ದಿಂ ಕೃತಿಯುಂ || ೩೬ ||

ಚಂ|| ಕವಿ ಕವಿಚಕ್ರವರ್ತಿ ಕೃತಿನಾಯಕನಾ ಜಿನಚಂದ್ರ ದೇವನು |
ತ್ತವ ನಿಧಿ ಮಲ್ಲಪಾರ್ಯನು ಮುದಾತ್ತ ಯಶೋನಿಧಿ ಪುನ್ನಮಾರ್ಯನುಂ ||
ಸವಿ ತವವಂತು ಪೇೞಿಸಿದರಿಂಮೊಡೆ ಶಾಂತಿಪುರಾಣಮೆಂ ಕರಂ |
ನವರಸಮೆಂ ಸಮರ್ಥ ಯುತಮೆಂ ಮೃದು ಬಂಧನಮೆಂ ಪ್ರಸನ್ನಮೋ ||೩೭||

ಕಂ|| ಉಪಮಾತೀತಂ ಕೃತಿ ಶಾಂ |
ತಿಪುರಾಣಂ ಸಲೆ "ಪುರಾಣಚೂಡಾಮಣಿ"ಯುಂ ||
ಮುಪಶಮದಿಂ ಬರೆಯಿಸಿ ಮ |
ಲ್ಲಪಯ್ಯನುಂ ಪುನ್ನಮಯ್ಯನುಂ ಪರೆಯಿಸಿದರ್ || ೩೮ ||

**ಶಾಂತಿಪುರಾಣ**ಮನಿದ ನೋ |
ರಂತಿರೆ ಬರೆಯಿಸುವ ಕೂಡೆ ಪರೆಯಿಸುವ ಜಸ ||
ಕ್ಕಿಂತಾರ್ ನೋಂತರಿದೆಂ ಗುಣ |
ವಂತನಿದೆಂ ಪುರುಷರನ್ನನೋ ಗಡ ಪುನ್ನಂ || ೩೯ ||

ಮಲ್ಲಿಕಾಮಾಲೆ|| ಮಲ್ಲಪಯ್ಯನುದಗ್ರ ಬೋಧ ಸಮಗ್ರ ನಗ್ರಜನುಂ ಸಮು |
ತ್ಫುಲ್ಲ ಪಂಕಜ ಲೋಚನಂ ಗುಣಿ ಪುನ್ನಮಯ್ಯ ನಜಯ್ಯನಾ ||
ಮಲ್ಲಪಯ್ಯನ ತಮ್ಮ ನಮ್ಮ ನಭಕ್ತನಾಮ ಮುದಾತ್ತ ನಿ |
ಮಲ್ಲಪಯ್ಯನೊ ಳೊಪ್ಪುಗುಂ ಪಿತೃ ಭಕ್ತಿಯುಂ ವಿನಯೋಕ್ತಿಯುಂ || ೪೦ ||

ಕಂ|| ಆ ತಂದೆಯ ಭಕ್ತನ ವಿ |
ದ್ಯಾತಿಶಯ ಮಹಾ ನಿಧಾನದ ನ್ವಯ ಮುಪಮಾ ||
ತೀತ ಮದಂ ಪೇೞ್ವೆಂ ವಿ |
ಖ್ಯಾತ ಮದೆಂತೆಂದೊಡುಂಟು **ವೆಂಗೀ ವಿಷಯಂ** || ೪೧ ||

ವೆಂಗೀ ವಿಷಯಂ ತ್ರೈಭುವ |
ನಂಗಳೊಳಗ್ಗಳದ ವಿಷಯ ಮುಪಮಾತೀತಂ ||
ಸಂಗತ ಸಮಸ್ತ ಮತ್ತು |
ತ್ತುಂಗ ಫಲ ದ್ರುಮ ಮಮೂಲ್ಯ ವಸ್ತು ನಿಧಾನಂ || ೪೨ ||

ಉ|| ಆ ಧರಣೀ ವಧೂ ತಿಳಕ ಮಾಧರಣೀ ಲಲನಾ ಮುಖಾಬ್ಜ ಮಂ |
ತಾ ಧರಣೀ ರಮ್ಯೈಕ ನವ ಯೌವನ ಮಾಧರಣೀ ಪ್ರಿಯಾ ಕಟಾ ||
ಕ್ಷಾದರ ವಿಭ್ರಮ ಭ್ರಮಣ ಮುಗ್ಗಳ ದಗ್ಗದ **ಕಮ್ಮೆನಾಡು** ವಿ |
ದ್ಯಾಧರ ಲೋಕಮೆನಿಪಜಿ ಪೋಲ್ವೆಗೆ ಬರ್ಕುಮೆ ನೋಲದಿರ್ಕುಮೇ || ೪೩ ||

ಮ|| ಅತಿವಿಖ್ಯಾತಿಯ ಕಮ್ಮೆ ನಾಡ ದನುದಾತ್ತಂ ಕಾವ ನೀವಂ ದ್ವಿಜೋ |
ನ್ನತ ವಿದ್ಯಾನಿಧಿ ಗಳ್ಗನೂನ ನುಪಮಾನಾ ತೀತ ಧೈರ್ಯಂ ಬಹು ||
ಶ್ರುತ ನಾಜ್ಞಾ ನಿಧಿ ಯಾಜ್ಞವಲ್ಕ್ಯ ಸದೃಶಂ **ಕೌಂಡಿನ್ಯ ಗೋತ್ರಂ** ನಿರಾ |
ಕೃತ ದೋಷ ಸ್ಥಿತಿ **ನಾಗಮಯ್ಯ**ನನಘಂ ಶ್ರೀಭೂಮಿ ದೇವೋತ್ತಮಂ ||೪೪||

ವ|| **ಅಲ್ಲಿಯುಂ**

ಕಂ|| ಪುಟ್ಟಿದುದು **ಪುಂಗನೂರೊಡ** |
ಪುಟ್ಟಿದು ದಪರಿಮಿತ ಪುರುಷ ಗುಣ ಗಣ ಮೊರ್ದೆಯೊಳ್ ||
ಪುಟ್ಟಿದುದು ಜಿನ ಮತಂ ಗುಡಿ |
ಗಟ್ಟಿದು ದಿಳೆ ಪುಟ್ಟೆ **ನಾಗಮಯ್ಯ**ನಜಯ್ಯಂ || ೪೫ ||

ಆ ಭೂಮಿ ದೇವ ತನಯರ್ |
ಪ್ರಾಭವ ಪರರಿರ್ವರತ್ಯಪೂರ್ವ ಶ್ರುತರು ||
ವಿದ್ಯಾ ಭಾರ ಭರಣ ಸಹ ರತಿ |
ಶೋಭಾಸ್ಪದ ತನುಗಳವರೊಳಗ್ರ ತನೂಜಂ || ೪೬ ||

ಅಮಿತ ಜ್ಯೋತಿಷ ಶಾಸ್ತ್ರಾ |
ಕ್ತ **ಮಲ್ಲಪಂ** ಜನಮತ ಜ್ಞಾನಾಬ್ಧಿ ಸೇತು ||
ಪ್ರಮಿತ ಯಶಂ ಬಭ್ರು ವರಾ |
ಹಮಿಹಿರ ಶೌನಕ ಸುನಂದ ಗಾರ್ಗ್ಯ ಸಮಾನಂ || ೪೭ ||

ಉ|| ಮಲ್ಲಪ ನಲ್ಲದೊಂ ಪ್ರಭುವೆ ಮಲ್ಲಪ ನಲ್ಲದೊ ನತ್ಯುದಾತ್ತನೆ |
ಮಲ್ಲಪ ನಲ್ಲದೊಂ ಶುಚಿಯೆ ಮಲ್ಲಪ ನಲ್ಲದೊ ಶಿಷ್ಟ ದಾನಿಯೆ |
ಮಲ್ಲಪ ನಲ್ಲದೊಂ ಗುಣಿಯೆ ಮಲ್ಲಪ ನಲ್ಲದೊ ನೇಕ ವಾಕ್ಯನೆ |
ಮಲ್ಲಪ ನಲ್ಲದೊಂ ಸ್ಥಿರನೆ ಮಲ್ಲಪ ನಲ್ಲದೊ ನಾರ್ಯ ಪೂಜ್ಯನೆ || ೪೮ ||

ಕಂ|| ಈ ನೆಲದೊಳ್ **ಮಲ್ಲಪನ** ಸ |
ಮಾನರ್ ನರರ್ಗಳಿಲ್ಲ ಮುನ್ನುಳ್ಳೊಡೆ ಕಾ |
ನೀನಂ ದಧೀಚಿ ಶಿಬಿ ವೃಷ |
ಸೇನಂ ಯಮತನಯ ನಕ್ಕು ಮಲ್ಲದೊ ನಲ್ಲಂ || ೪೯ ||

ನಿಜ ಗುರು ಪರೋಕ್ಷ ವಿನಯಮ |
ನಜಾತ ರಿಪು ತನ್ನ ತಮ್ಮನುಂ ತಾನುಂ ಭೂ ||
ಭುಜರ ಜೀವಿನಂ ಸಮಸ್ತ |
ದ್ವಿಜರ ಜೀವಿನ ಮಖಿಳ ಮುನಿಪ ರಜೀವಿನ ಮಾಗಳ್ || ೫೦ ||

ಉ|| ಭೂಮಿಗೆ ಕಾವ್ಯ ರತ್ನ ಮಿದೆ ಸಾರಮೆನಲ್ ನೆಗಳ್ದೀ **ಪುರಾಣಚೂ** |
**ಡಾಮಣಿ** ಗಟ್ಟಿಯಿಂ ಕಳಸ ಮಿಟ್ಟು ಗುರು ಸ್ಥಿರ ಭಕ್ತಿ ಪೂರ್ವಕಂ ||
ಪ್ರೇಮದೆ ಮಲ್ಲಪಯ್ಯನು ಮುದಾತ್ತ ಯಶೋ ನಿಧಿ ಪುನ್ನಮಯ್ಯನುಂ
ತಾಮುಪಕಾರಮಂ ನೆರಪಿದರ್ ಜಗದೊಳ್ ಜಿನಚಂದ್ರದೇವರಾ || ೫೧ ||

ಕಂ|| **ಶಾಂತಿಪುರಾಣದ** ನಿರ್ವಾ |
ಣಂ ತಕ್ಕುದೆ ಮಲ್ಲಪಯ್ಯನಿಂ ತದನುಜನಿಂ ||
ಶಾಂತಿ ಘನ ಪುನ್ನಮಯ್ಯನಿ |
ನೇಂ ತಮ್ಮುತ್ತಿರ್ವರುಂ ಕೃತಾರ್ಥರೊ ಜಗದೊಳ್ || ೫೨ ||

ಕಂ|| ಅವರಿರ್ವರ ಪುಣ್ಯಂ ತ್ರೈ |
ಭುವನದೊಳ ಮಗಣ್ಯ ಮಂತು ಸಲೆ ನೋಂತವರಾರ್ ||
ಭವ ಜಲನಿಧಿ ಜಲದೊಳ್ ಮೂ |
ಡುವ ಮುಳುಗುವ ನಡೆವ ನುಡಿವ ಸಂಸೃತಿಗತರೊಳ್ || ೫೩ ||

ಚಂ| ಅವರ ಪೊಗಳ್ತೆಗತ್ಯಧಿಕ ಮಪ್ಪ ನೆಗಳ್ತೆಗೆ ನೋಂತ ನಾವೊಸಿ |
ನ್ನವರ ಬುಧೋಕ್ತ ಮಪ್ಪ ಗುರು ಭಕ್ತಿಗೆ ಸೂಕ್ತಿಗೆ ತಕ್ಕ ನಾವೊನಾ |
ರವರ ಜಿನಾಗಮ ಕ್ರಮ ದಣುವ್ರತಮಂ ಸಲಿಸುತ್ತುಮಿರ್ಪರಿಂ |
ದವಿರತ ಮಗ್ರಜಾನು ಜರನಿಂ ಪೊಗಳ್ದಪ್ಪುದೊ ಮೂಜು ಲೋಕಮುಂ || ೫೪ ||
ತವದ ವಿಜೃಂಭಿತಮಪ್ಪ ಯಿಂದಿದ
ನವರಿರ್ವರುಮಜರುಯ ನೆಜರುಯ ಪೇಳಿಸಿ ಜನಜಂ |
ನೃಪವರಮುನೀಂದ್ರರ ಪೆಸರೊಳ್ |
ಸನೆಯಿಸಿದರ್ ನೆಗಳ್ದ ಖಂಡ ಭೂ ಮಂಡಳದೊಳ್ || ೫೫ ||

( ಇಂತು ಪೀಠಿಕೆ. )

---

**ಕಥಾಪ್ರಾರಂಭಂ.**

ಕಂ|| ಆ ಕಥೆ ಮತ್ತೆಂತೆಂದೊಡೆ |
ಭೀಕರ ಕರಿ ಮಕರ ನಿಕರ ಭಿನ್ನ ತರಂಗಾ |
ನೀಕ ಲವಣಾಂಬುರಾಶಿ ಪ್ರ |
ತಾಕ್ಕೃತಿ ಕಮನೀಯ ಮುಂಟು **ಜಂಬೂದ್ವೀಪಂ** || ೫೬ ||

ತನ್ಮಧ್ಯದೊಳಿರ್ಪುದು ರುಚಿ |
ಮನ್ಮೇರು ನಗೇಂದ್ರ ಮದರ ಮೂಡಣ ದೆಸೆಯೊಳ್ |
ಮನ್ಮಥ ನೃಪಾಧಿ ನಿವ ರಾ |
ಜ್ಯೋನ್ಮದ ಮತಿ ದೇಹಮುಂಟು ಪೂರ್ವವಿದೇಹಂ || ೫೭ ||

**ವಚನಂ**—ಎಂಬಿನಂ ನೆಗಳ್ದ ಪೂರ್ವವಿದೇಹದೊಳ್ ಕಾಮರಾಗ ಕಮನೀಯ ಮನೋರಥ ಜನ್ಮ ಭೂಮಿಯಪ್ಪ ವತ್ಸಕಾವತೀ ವಿಷಯದಾವಾವೆಡೆಯೊಳಂ ನಿಮ್ನ ಪ್ರದೇಶಂದಪ್ಪದೆ ಪಥಿಕ ಜನದ ಕಣ್ಗಂ ಮನಕ್ಕಂ ಪಸರಂ ಬಡೆದು ನೆಜರ್ ನೋಗಯಿಸುವ ಸರಸ ಸರಸೀರುಹಾಕರಂಗಳೊಳ್—

ಚಂ| ವಿಕಸಿತ ಹೇಮ ತಾಮರಸ ಸಾಂದ್ರ ಲಸನ್ಮಕರಂದ ಸಕ್ತ ಷ |
ಟ್ಪದ ತತಿ ಪಾಯ್ದು ಪಾಯ್ದು ಸರಸೀರುಹದಿಂ ಸರಸೀರುಹಕ್ಕೆ ಪೊ ||
ಲ್ಪುದು ಮಧುಪ್ರಂ ಮನೋಭವನುಮಟ್ಟಿಯೊಳಾಡುವ ಪೊನ್ನ ಬಟ್ಟನೊ |
ರ್ವೋವಲಿ ಮನೋಜ ಕಾಂತೆ ಮುಳಿಸಿಂ ದೆಸೆಗೊವದೆ ಸೂಸುವಂದಮಂ ||೫೮||

**ವಚನಂ**—ಮತ್ತಮಾನಾಡೂರ್ದಪ್ಪದೆ ವಿಚಿತ್ರ ಕ್ಷೇತ್ರಂಗಳೊಳ್ ಪವಿತ್ರ ಪುಣ್ಯಬೀಜ ಪ್ರರೋಹದ ಬೆಳಸಿನ ಸಿರಿಯ ಕಣ್ಬೊಲಂಗಳೆನಿಸುವ ಕೆಯ್ವೊಲಂಗಳೊಳ್||—

ಕಂ|| ಅವಿರತ ಗುಣ ವರ್ಣನ ಪ್ರ |
ಕ್ರಮಕ್ಕೆ ಸಲೆ ನಾಣ್ಚಿ ತಲೆಯ ನೆಱಗಿದ ಸುಜನರ್ ||
ಕ್ರಮದಂತೆ ಭರದಿ ನೆಱಗಿದು |
ವಮೇಯ ಪರಿಪಕ್ವ ಗಂಧಶಾಲಿ ವನಂಗಳ್ || ೨೯ ||
ರತ್ಕಳಮ ಕಣಿಶ ಕಬಳ ಸ |
ಮುತ್ಕ ಶುಕ ಪ್ರಕರಮೆಸೆಯೆ ಪೊಸ ನೇತ್ರದ ಚಂ ||
ಚತ್ಕಂಚುಕದ ನಿಶಾ ವಿಳ |
ಸತ್ಕಾಮಿನಿ ತೊಟ್ಟ ಪೋಲ್ವೆಯಂ ಪುಟ್ಟಿಸುಗುಂ || ೩೦ ||

ವ|| ಮತ್ತಂ ತದುಪಾಂತದೊಳ್—

ಬಹು ಪೋಷಣ ದಿವ್ಯಾಶಿನ |
ಸಹಕಾರದ ಸೊನೆಯ ಸೋನೆ ಬಳೆಯಿನ ಬಳೆಗುಂ ||
ಮಹಿ ಯೆನೆ ಬಣ್ಣಿಸುವ ಪಿತಾ |
ಮಹಂಗ ಮರಿದೆಗ್ಗ ಮೊಗ್ಗೆ ಸಿನಗ ಮದನಗಂ || ೩೧ ||

ವ|| ಅದಲ್ಲದೆಯುಂ—

ನವ ಶಲಿ ಕಳಗಳ ನಮ್ಮತ |
ಪ್ರವಂಗಳೊಳ್ ತೀವಿ ತೀವಿ ನಿಱಿಸಿದರೆನೆ ತ ||
ದ್ಧವಳೇಕ್ಷು ಲಕ್ಷ್ಮಿ ನಡೆ ನೋ |
ಡುವ ಜನಪದ ಜನದ ಮನಮ ನುಱೆ ಸೆಱೆವಿಡಿಗುಂ || ೩೨ ||

ವ|| ಎನಿಸಿ ದುಗ್ಧಾಬ್ಧಿ ಫೇನ ಪಿಂಡೋಪಮಾನಮುಂ ಸುಧಾ ಸಮುದ್ರ ಲಲಿತ ಲಹರೀಕಾ ಸಮಾನಮುಮಪ್ಪ ಬೆಳೆಯ ಕಬ್ಬಿನ ಕೆಯ್ಗಳೊಳಿರಡುಂ ದೆಸೆಗಳೊಳಂ ಮನೋಜ ರಾಜ ರಾಜದ್ರಾಜ ಧಾನೀ ನೀಕಾಶಮಪ್ಪುದ್ಯಾನಂಗಳೊಳ್—

ಉ|| ಮೆಯ್ಪುಸನೊಂದ ಪೂವಿನೊಳ ಪೋಗೆ ತೆಱಂದಿಱಿವಳ್ಳಿ ಗೊಂಬಿನೊಳ್ |
ಪಾಯ್ವುದು ಮೊಂದೆ ಪಣ್ಣ ರಸಮಂ ಸವಿದಾರಱದೆ ಚಂಚುವಂ ಕೆಲ ||
ಕ್ಕುಯ್ವುದು ಮೊಂದೆ ಕೋರಕದೊಳಟ್ಟಿಮ ಪೆತ್ತಪಚತ್ತು ಲಂಘನಂ |
ಗೆಯ್ವುದು ಮಾದುದಾ ಮಧುಪ ಕೀರ ಪಿಕಾಳಿಗೆ ನಂದನಂಗಳೊಳ್ || ೩೩ ||

ಚಂ|| ನಯಮುಳವಟ್ಟ ಪಕ್ಷಿ ಸಹಕಾರದೊಳಿಂಗುಳಿಕಂ ತಳಿರ್ತಪೋ |
ಕೆಯೊಳರಿದಾಳ ಮುಳ್ಳಲರ್ದ ಸಂಪಗೆಯೊಳ್ ಕಡುಗರ್ಪು ಭೃಂಗ ಕೋ ||
ಟೆಯೊಳಿಸೆದಿರ್ದ ನೀಲ ಗಿರಿಮಲ್ಲಿಕೆಯೊಳ್ ಸಮನಾಗೆ ಚೀರಘ |
ಟ್ಟೆಯ ಬರೆದಿಟ್ಟ ಚಿತ್ರದ ಬನಕ್ಕೆಣೆಯಾಯ್ತು ಬನಂ ವಿದೇಹದೊಳ್ || ೩೪ ||

ಕಂ|| ಇಂತಿ ನಿವಿಱ ವಗ್ಗಳದ ದ |
ಗುಂತಿಯ ನೊಳಕೊಂಡು ವಿಷಯ ವರ ವನಿತೆಯ ಸಿ ||
ಮಂತದ ಮಣಿ ಕಾಂತಿಗೆ ಮು |
ಯ್ವಾಂತುದು ಚೆಲ್ವಿಂ ಪ್ರಭಾಕರೀನಾಮಪುರಂ || ೩೫ ||

ಚಂ|| ಅವನೊಳಕೊಂಡ ಪೊನ್ನ ಪೊಸಗೋಂಟೆ ಪುರಾಂಗನೆಯುಟ್ಟ ಹೇಮವ |
ರ್ಣದ ವಸನಂ ತದೀಯ ರುಚಿ ವಿಚ್ಛುರಿತಂ ಪರಿಖಾಚ್ಛ ವಾರಿ ಕ |
ಟ್ಟಿದ ಕಟಿಸೂತ್ರಮಂಬುವಿಹಗಾವಳಿ ಸೂಸಕವಾಗೆ ಗೆಲ್ದು ನಾ |
ಕದ ನರಲೋಕದೊಪ್ಪನದು ಪೇಳ್ ಸೆಱಗೊಂಡುದೊ ಸೂಱಗೊಂಡುದೊ || ೬೬ ||

ಕಂ|| ಆಪೊೞಲ ನಾಳ್ದ ನಖಿಳಮ |
ಹೀಪತಿ ಮದದಂತಿ ದಂತ ಖಂಡನೆಗೆ ಸಮಾ ||
ರೋಪಿತ ಕೃಪಾಣ ಧಾರಾ |
ವ್ಯಾಪಾರಂ **ಸ್ತಿಮಿತಸಾಗರಂ** ಮಂಡಳಿಕಂ || ೬೭ ||

ಉ|| ಚಾಗದ ತೋರ್ಕೆಗಂ ನೆಗೞ್ದ ಬೀರದಳುರ್ಕೆಗ ಮೊಪ್ಪನಪ್ಪುದು |
ದ್ಯೋಗದಮರ್ಕೆಗಂ ಸಿರಿಯ ಸಾರ್ಕೆಗ ಮಾಯತಿ ಯಿರ್ಕೆಗಂ ಪೆಱರ್ ||
ಮೇಗೆಸಲಿಲ್ಲದಂತು ನೆಗೞ್ದುರ್ವದಱಿಂ ಮನುಜೇಂದ್ರ ಕೋಟಿ ಕೋ |
ಟೀ ಗುಣ ಕೋಟಿಗಾ **ಸ್ತಿಮಿತಸಾಗರ** ಸಾಗರ ಮಾಗದಿರ್ಕುಮೇ || ೬೮ ||

ಕಂ|| ಪರಿಜನಮು ನಳವಿಯಱಿದಾ |
ಳರಸಂಬುದನಱಿಯಲಾಗದಂತಿರೆ ಪೊರೆದಾ ||
ನರಪತಿಯ ಗುಣಾ ಗುಣದಂ |
ತರಮಱಿವುದ ನಾಳ ಸಿರಿಯ ಲೀಲೆಯ ತೋರ್ಕಂ || ೬೯ ||

ಮದ ವಿರಹಿತ ನೆನಿಸಿಯು ಮಮಿ |
ತ ಮಾನಿ ಗುಣ ಗಣದ ಪರಮ ಪದವಿಗೆ ಮೊದಲಿಂ ||
ಮುದನೆನಿಸಿ ನೆಗೞ್ದ ಮಾನ್ಯಪ |
ಸುದಾತ್ತ ಗುಣ ಗಣರ ತುತ್ತತುದಿಯೊಳನೂನಂ || ೭೦ ||

ತನು ವೆಸಿತಸಿತುಂ ಮನವೆಸಿ |
ತಸಿತುಂ ಮೃದು ಮಧುರ ವಚನ ಮೆಸಿತಸಿತುಂ ತ ||
ಕ್ಕನೆ ತೀವಿ ಸುಧರ್ಮರಸಾ |
ಯನ ದೊದವಿದ ನದಮ ನಾ ನೃಪೇಂದ್ರಂ ಪೋಲ್ತಂ || ೭೧ ||

**ವ**|| ಅಂತಖಿಳ ಭುವನ ತಲ ತಿಲಕ(ವಿಲಾಸ)ವಿಲಸಿತ ನಿಲಯನು, ಮುಪಹಸಿತ ಭೂಚರ ಖೇಚರ ರಾಜಲೀಲಾ ವಿಲಾಸ ವಿಭವನು, ಮುಪಹಸಿತ ಸನತ್ಕುಮಾರ ನಳಕೂಬರ ಮಕರಕೇತು ಸೌಂದರ್ಯನುಂ, ವಿನಿರ್ಜಿತ ನಿರವಶೇಷ ನಿಲಿಂಪನಾಥ ವಿಭವನು, ಮುಪಾಕೃತ ಪ್ರಕೃಷ್ಟಾಷ್ಟ ಲೋಕಪಾಲ ಪರಿಪಾಲಿತ ಸಾಹಸನು, ಮುಪಾಸ್ತ ಸಮಸ್ತ ರಾಜನ್ಯಕ ಧವಳಾತಪತ್ರ ಪುಂಡರೀಕ ಷಂಡನು, ಮವನತ ನಾನಾಸೂನ ದೇಶಾಧೀಶ ಮಣಿ ಮಕುಟ ಮಕರಿಕಾ ಚ್ಛುರಿತ ಚರಣ ನಖ ಮಯೂಖ ಚಂದ್ರಿಕಾ ಪ್ರಸರನು, ಮಭಿಭೂತ ನೂತನ ಪುರಾತನ ಪುರುಷ ಚರಿತನುಂ ಅವಲುಪ್ತ ಸಪ್ತಸಪ್ತಿ ದೀಪ್ತಿ ಪ್ರತಾಪ ವಿಧಾನ ನಿರತನು, ಮಾಕೃಷ್ಟ ಸುಂದರ ಸುಂದರೀ ಕಟಾಕ್ಷ ವಿಕ್ಷೇಪನು ಮುಪಜಾಪೋಪಗೃಹೀತ ವಿರೋಧಿ ನರೇಂದ್ರಾಷ್ಟಾದಶ ತೀರ್ಥನು, ಮನುಕೂಲ ಕುಲ ಸೀಮಂತಿನೀಯಮಾನ ಗೋಮಿನೀ ಕಾಮಿನೀ ನಿಬಿಡಾ

ಲಿಂಗಿತಾಕ್ಷೂಣ ವಕ್ಷಸ್ಸ್ಥಳನು, ಮವಿರುದ್ಧ ವಿಜಯಶ್ರೀಕೇಯೂರ ವಿಘಟ್ಟಿತ ವಾಮೇತರ ಭುಜಭುಜಂಗನು, ಮವತೀರ್ಣ ವರ್ಣ ಪದ ವಾಕ್ಯ ನ್ಯಾಯ ನಯ ಪ್ರಮಾಣ ಕಾವ್ಯ ನಾಟಕ ನಿಕಾಮ ಕೋಮಳ ರುಚಿ ಶರೀರ ಸರಸ್ವತೀ ರೂಪ ನೀರಕ್ಷೀರ ಸುಧಾ ಸ್ಯಂದಿ ಪಂಡಿತ ವನ ಸರಸೀರುಹನು, ಮಪಾರ ಪಾರಾಪಾರ ಪರಪಾರ ಸಮುತ್ತಾರಿತ ಕುಂದೇಂದು ಕುಮುದ್ವತೀ ತರಳತರ ತಾರಹಾರ ನೀಹಾರ ರೋಚಿಮಂಜರೀ ನಿಚಯ ವಿಶದ ಯಶೋ ರಾಶಿ ವಳಯನುಂ, ಜಿತಾಖಂಡ ಭೂಮಂಡಲನು, ಮಪ್ಪ **ಸ್ತಿಮಿತ ಸಾಗರ** ಮಹೀವಲ್ಲಭಂಗೆ—

ಕಂ|| ನಿರತಿಶಯ ರೂಪ ಯೌವನ |
ವಿರಾಜಿತಾಂಗಿಯ ರನಂಗ ಜಂಗಮ ಲತಿಕೆಯೊ ||
ತ್ತರ ತನುಗಳ್ ನೆಗಟ್ದಿ **ವಸುಂ** |
**ಧರೆಯುಂ ವಸುಮತಿಯು** ಮೆಂಬರ ರಸಿಯರಾದರ್ || ೭೨ ||

ಅಗ್ರಮಹಿಷೀ ಪದಕ್ಕಮ |
ದಗ್ರ ಪ್ರೇಮಾಸ್ಪದಕ್ಕಮವರಿರೆ ನೃಪನ ||
ವ್ಯಗ್ರತೆಯಿ ನಿತರ ವನಿತೆಯ |
ರಾಗ್ರಹಮಂ ಬಿಟ್ಟನೇನವರ್ ಸೊಬಗಿಯರೋ || ೭೩ ||

**ವ**|| ಆಮಹಾದೇವಿಯರಿರ್ವರುಂ ಬೆರಸು ಅನೇಕಾಂತಃಪುರ ವಿವಿಧ ವಿನೋದಸಮೇತಂ ಸ್ತಿಮಿತ ಸಾಗರ ಧರಾಧೀಶ್ವರ ನವಿನಶ್ವರ ಸುಖಾನುಭವ ನಿರತ ನನವರತಾಭ್ಯುದಯ ಪರಂಪರಾನ್ವಿತ ನಿಜ ಮನೋಜನಿತಾನಂದ ನೊರ್ಮೆ, ಸಕಲ ಮುಕುಟ ಬದ್ಧ ಮಣಿಕಿರೀಟ ಕೋಟಿ ವಿಟಂಕ ಸನಾಥ ಪದ್ಮರಾಗ ಮಣಿ ಕಿರಣಾರುಣಿತ ಮೌಕ್ತಿಕ ಮಂಡನೀ ಭೂತ ದುಕೂಲ ವಿತಾನ ನೊಡ್ಡೋಲಗಂ ಗೊಟ್ಟಿರ್ದಲ್ಲಿ ಸಿಂಹಾಸನೋಭಯ ಪಾರ್ಶ್ವ ಪ್ರದೇಶಂಗಳನಲಂಕರಿಸಿ ವಸುಂಧರೆಯುಂ ವಸುಮತಿಯುಮಿರೆ—

ಕಂ|| ಕ್ಷಿತಿ ನಾಥಾಪಾಂಗ ವಿಲೋ |
ಕಿತೆಯರ್ ಶ್ರೀಯೊರ್ವಳಾಜಯ ಶ್ರೀಯೊರ್ವಳ್ ||
ಪ್ರತಿಪತ್ತಿಯರೂಳರೆನಿಸ |
ಲ್ಕತರ್ಕ್ಯ ನೇಪಥ್ಯ ಮವರ್ಗದೆಂ ಸೊಗಯಿಸಿತೋ || ೭೪ ||

ಎರಡುಂ ಕೆಲದೊಳು ಮಿರ್ದರು |
ಮರಸಿಯರಿರೆ ಸೊಗಯಿಸಿರ್ದ ನವನಿಪ ನೆರಡುಂ ||
ಕರಿಣಿಗಳ ನಡುವಣೆಡೆಯೊಳ್ |
ಕರೀಂದ್ರ ನೊಪ್ಪುವವೋಲೊಪ್ಪಿ ಪೊಡ್ಡೋಲಗದೊಳ್ || ೭೫ ||
ನವಮಾಲತಿಗಂ ನವಮಾ |
ಧವಿಗಂ ನಡು ವಾದ ನವ ಸಮೀರು ಮಹೀಜ ||
ಕ್ಕವನೀಶಂ ದೊರೆಯೆನಿಸಿದ |
ನವರಿರ್ವರು ಮರಸಿಯರ್ಕಳೊಂತಿರೆ ಕೆಲದೊಳ್ || ೭೬ ||

**ವ**|| ಇಂತನಂತ ಸುಖಪರಂಪರೆಯಿಂ ಪಲಕಾಲಂ ಸಲೆ—

ಕಂ|| ಆ ಜಾಯಾದ್ವಯಕಂ ಕ್ಷಿತಿ |
ರಾಜಂಗ ಮಪೂರ್ವ ತುಂಗ ಜಂಗಮ ದಿವಿಜೋ ||
ರ್ವೀಜ ಮಿವೆನೆ ಪುಟ್ಟಿದ ರಪ |
ರಾಜಿತನು ಮನಂತವೀರ್ಯನುಂ ಪ್ರಿಯತನಯರ್ || ೭೭ ||

ವ|| ಅಂತು ವಸುಂಧರೆಗಪರಾಜಿತಂ ವಸುಮತಿಗನಂತವೀರ್ಯಂ ಪುಟ್ಟುವುದುಂ—

ಕಂ|| ಜಯ ಮೊಡ ಪುಟ್ಟಿದುದು ಸಂಯೋ |
ದಯ ಮೊಡ ವಳೆದುದು ವಿಳಾಸ ಮೊಡನಾಡಿದುದ ||
ನ್ವಯದೊದವು ತಾಯುಮುಂ ತಂ |
ದೆಯುಮುಂ ತಣ್ಣಿದು ದಪಾರ ರಾಗಾ ಮೃತದಿಂ || ೭೮ ||

ವ|| ಅಂತು ಬಳೆಯೆ ವಳೆಯೆ—

ಚಂ|| ದೊರೆವಡೆದಿರ್ದ ದಿರ್ವರ ಮನೋರಥ ಮುಗ್ಗಳ ಮುಟ್ಟಿ ಪೋದುದಿ |
ರ್ವರ ಮನ ವಚ್ಚು ಅಚ್ಚುಡಿದು ದಿರ್ವರ ಮುಚ್ಚು ಪೊದಟ್ಟು ನೀಳ್ದು ದಿ ||
ರ್ವರ ಸಮುಶೀಲ ಮಚ್ಚಿಜಿದು ದಿರ್ವರ ನಚ್ಚಿ ನೊಡಂಬಡೆಂ ಭವಾಂ |
ತರ ಗತ ಮೋಹ ಬಂಧ ಬಲಮೋ ಬಲದೇವನ ವಾಸುದೇವನಾ || ೭೯ ||

ಕಂ|| ಬಲದೇವ ವಾಸುದೇವರೊ |
ಳಲಂಪ್ಯ ಬಲ ನೊರ್ವನುಗ್ರಬಲ ನೊರ್ವ ನವರ್ ||
ಕೆಲದೊಳಿರೆ ಚಂದ್ರ ರವಿಮಂ |
ಡಲ ಮಧ್ಯದ ಕನಕಗಿರಿಗೆ ನೃಪನೆಣೆಯಾದಂ || ೮೦ ||

ವ|| ಅಂತು ಬಲದೇವವಾಸುದೇವ ರನಲ್ಪ ಕಲ್ಪಮಹೀಜಾಂ ಕುರ ಯುಗಳಮುಂ, ಶೃಂಗಾರ ಸಾಗರ ಸಂಭೂತ ಸುಧಾಸೂತಿ ಲೇಖಾಂಕುರ ದ್ವಂದ್ವಮುಂ, ಪವಿತ್ರ ಕ್ಷತ್ರ ಧರ್ಮ ಕಂಠೀರವ ದಂಷ್ಟ್ರಾಂಕುರ ಯುಗ್ಮಮುಂ, ಮದನ ಮಾರ್ಗಣ ಸಮುತ್ಥಿತ ನೂತನ ಚೂತಾಂಕುರ ದ್ವಂದ್ವಮು, ಮಾಶಾ ಕರಿ ಕಲಭ ಸುಕುಮಾರ ರದನಾಂಕುರದ್ವಿತಯಮುಮೆನೆ ಸೌಂದರ್ಯಕ್ಕೆ ಕುಲನಿಲಯಮು, ಮೌದಾರ್ಯಕ್ಕೆ ನಿವಾಸಮುಂ, ಸೌಭಾಗ್ಯಕ್ಕೆ ಜನ್ಮಭೂಮಿಯುಂ, ಸೌಶೀಲ್ಯಕ್ಕುತ್ಪತ್ತಿಸ್ಥಾನಮುಮಾಗಿ ಪುಣ್ಯಪುಂಜ ದಂತೆಯುಂ, ಸುಖ ದ್ರುಮ ಪ್ರರೋಹದಂತೆಯುಂ, ಶೌರ್ಯ ಮೂಲಸ್ತಂಭದಂತೆಯುಂ, ಸಾಹಸ ದ್ರವಿಣ ಸಾಧನದಂತೆಯುಂ, ಗುಣ ಗಣ ಮಣಿ ಗಣ ಕೋಶಗೃಹದಂತೆಯುಮಾಗಿ ಮಾತಾಪಿತೃಗಳ ನುರಾಗದೊಡನೊಡನೆ ಪ್ರಮೋದ ಪ್ರವರ್ಧನ ಮಾಗೆ ಸುಖಮಿರ್ಪನ್ನೆಗಂ.

ಮ|| ನಭದೊಳ್ ಪೂಮಳೆ ಭೂಮಿಯೊಳ್ ಮರುತಕಂ ದಿಗ್ಭಿತ್ತಿಯೊಳ್ ದೇವದುಂ |
ದುಭಿನಾದಂ ಭುವನ ತ್ರಯಂಗಳೊಳನೂನಂ ವಂದನಾನಂದಕಂ ||
ಸಭೆಯೊಳ್ ದೇವ ನಿಕಾಯ ಮೊಪ್ಪುತಿರೆ ಬಂದಂ ಲೋಕನಾಥಂ ಸ್ವಯಂ |
ಪ್ರಭ ತೀರ್ಥೇಶ್ವರ ನಾ ನೃಪೇಶ್ವರನ ರಾಜ್ಯಂ ಪೂಜ್ಯ ಮಪ್ಪನ್ನೆಗಂ || ೮೧ ||

ಕಂ|| ಅಂತವತರಿಸಿದ ಘನ ದುರಿ |
ತಾಂತಕ ನೆಟ್ಟಿರವ ನಱಪೆ ವನ ಪಾಲಕನ ||
ತ್ಯಂತ ಪ್ರಿಯಂ ಪ್ರತೀತ |
ಸ್ವಾಂತಂ ನೃಪನೆಟ್ಟು ಸಿಂಹವಿಷ್ಟರದಿಂದಂ || ೬೨ ||

ನಡೆದೇೞಡಿಯಂ ಜನನಿ |
ಪೆಡೆಗೆಱಗಿ ಬೞಕ್ಕೆ ಮುಚ್ಚುಗೊಟ್ಟಂ ಕೊಟ್ಟೊ ||
ಕ್ಕುಡುಗೆಗಳ ಸುಟ್ಟ ದುಗುಲಮ |
ನೆಡೆಯಱದಾ ಮುನಿ ನಿವೇದಕಂಗೆ ನೃಪೇಂದ್ರಂ || ೬೩ ||

ವ|| ಸೇನಾಪತಿಯಂ ಬರಿಸಿ- -

ಕಂ|| ಪಡೆಯಂ ಸಾಱಲ್ವೇೞ್ದಾ |
ಗಡೆ ಪುತ್ರ ಕಳತ್ರ ಮಿತ್ರಸಹಿತಂ ಮಹಿಪಂ ||
ನಡೆದಂ ನದೀ ಪ್ರವಾಹಂ |
ನಡೆವಂತಿರೆ ಸಮವಸರಣ ವಾರಾಶಿವರಂ || ೬೪ ||

ವ|| ಅಂತು ಬಂದು ದೂರಾಂತರದೊಳ್ ಮಾನಸ್ತಂಭ ನಿರೀಕ್ಷಣ ಕ್ಷಣದೊಳ್ ತನ್ನೇಱದ ಯಾನ ಗಜ ರಾಜನ ನಿೞಿದಾ ಜವಂಜವ ವಿಭಾವ ಭಯ ಭೀರು ವಿಶರಾರು ಭವ್ಯ ಜನ ನಿವ್ಯಾಜ ಶರಣಮಂ ಯಥಾಕ್ರಮದಿಂ ಪೊಕ್ಕು ಗಂಧಕುಟಿಯಂ ತ್ರಿಃಪ್ರದಕ್ಷಿಣಂಗೆಯ್ದು ಭಗವದಭಿಮುಖನಾಗಿ ನಿಂದು ನಿಟಿಲ ತಟ ಘಟಿತ ಕರಪುಟ ಕಮಳ ಮುಕುಳಂ—

ಮ|| ತನು ಸೌಂದರ್ಯದಿ ನನ್ನ ನಿನ್ನ ನೆನಲುದ್ಘಾಚಾರದಿಂ ದನ್ನ ನಿ |
ನ್ನ ನೆನಲ್ ಬೋಧದಿ ನನ್ನ ನಿನ್ನ ನೆನಲಾತ್ಮೈಶ್ವರ್ಯದಿಂ ದನ್ನ ನಿ ||
ನ್ನ ನೆನಲ್ ಸೌಖ್ಯದಿ ನನ್ನ ನಿನ್ನ ನೆನಲಕ್ಷೂಣತ್ವದಿಂ ದನ್ನ ನಿ |
ನ್ನ ನೆನಲ್ಬಾರದು ನಿನ್ನನೇಂ ಪಿರಿಯಂಯೋ ತ್ರೈಲೋಕ್ಯರಕ್ಷಾಮಣೀ || ೬೫ ||

ವ|| ಎಂದು ನಿಖಿಲ ದಿವಿಜ ದನುಜ ವಿನಮ್ರ ಕಮ್ರ ಶಿರೋಮಣಿ ದ್ವಿಗುಣ ಪಾಟಳಮಣಿ ಭೂಮಿ ಭಾಗಾಭೋಗ ಸಭಾಮಂಡಳನಂ, ನಿರಸ್ತ ಸಮಸ್ತ ದುಸ್ತಮೋ ವಿಸ್ತಾರನಂ, ಪ್ರಾತಿಹಾರ್ಯಾಷ್ಟಕಾ ವಿರ್ಭೂತ ಪ್ರಭಾತಿವಿಳಸಿತಾಂಗ ಪ್ರಭನಂ, ಸ್ವಯಂಪ್ರಭಜಿನೇಂದ್ರನಂ ಸ್ತುತಿಯಿಸಿ ಬೞಯಂ ತದನು ಮತೋಪ ವಿಶದ ಶೇಷ ವಸ್ತೂತ್ಪಾದ ದ್ರವ್ಯ ವಿಳಯ ವಿಕಲ್ಪ ಪ್ರತಿಪಾದನ ಸಮಯ ಸಮುತ್ಪನ್ನ ಸಹಸ್ರ ರಸನಾನನಾಂಬುರುಹ ನಿರ್ಯದ್ವಚನ ರಚನಾ ಮೃತನಂ ಗಣನಾಥನಂ ಗುರು ಭಕ್ತಿ ಪೂರ್ವಕಂ ಬಂದಿಸಿ ಧರ್ಮಮಂ ಕೇಳ್ದು ಸಮುಪಜಾತ ನಿರ್ವೇಗಪರಂ ಪರಮೇಶ್ವರದೀಕ್ಷೆಯಂ ಸ್ತಿಮಿತಸಾಗರಂ ಕೆಯ್ಕೊಂಡು.

ಉ|| "ಮುಕ್ತಿಯೊಳಾದ ಸಂಬುಗೆ ಮಸಂಬುಗವಲ್ಪಸುಖಾಶಿಗೆಂ"ಬ ಲೋ |
ಕೋಕ್ತಿಯಿ ನಕ್ಕಟಾ! ಸ್ತಿಮಿತಸಾಗರ ನಟ್ಟಿಯೊಳಂದು ವಂದನಾ ||
ಭಕ್ತಿಗೆ ವಂದನಂ ಭುಜಗ ನಾಯಕನಂ ನಡೆ ನೋಡಿ ತತ್ಸುಖಾ |
ಸಕ್ತ ಮನಂ ಪರಾಸು ಫಣಿ ನಾಥತೆಯಂ ಮುನಿ ನಾಥ ನೆಯ್ದಿದಂ || ೬೬ ||

ಕಂ|| ಅಪರಾಜಿತನಿತ್ತ ಪರಂ |
ತಪನ ತಪಶ್ಚರಣಮೊಂದೆ ಪೊಱಗೆನೆ ನಿರ್ವೇ ||
ಗಪರಾಯಣಂ ಮನಂಗೊಂ |
ಡು ಪವಿತ್ರ ಶ್ರಾವಕವ್ರತಂಗಳೊಳೊಣರ್ದಂ || ೮೭ ||

ವ|| ಅವಾವುವೆನೆ—

ಕಂ|| ಕೊಲೆಯೊಳ್ ಪೊರೆಯಿಲ್ಲದ ಪರ |
ಲಲನೆಗೆ ಬಗೆಗುಡದ ಕಳ್ಳಮುಱಿ ಪುಸಿಯದ ಕಾ ||
ತಲಿಸಿ ವಿಷಯಂಗಳೊಳ್ ಪಂ |
ಬಲಿಸದ ಗುಣಮೈದಣುವ್ರತಂ ಜಿನಮತದೊಳ್ || ೮೮ ||

ದೆಸೆಗಳನ ಮೇರೆಯಂ ನಿಯ |
ಮಿಸಿದಲ್ಲದೆ ನಡೆಯದಮಿತಭೋಗಮನುಪಭೋ ||
ಗಿಸ ವಸ್ತ್ರಪಾಶದಂಡಮ |
ನೊಸೆದೀಯದುದಿದು ಗುಣವ್ರತತ್ರಯಮಕ್ಕುಂ || ೮೯ ||

ತೀರ್ಪ್ಪೋಪವಾಸಮುಂ ದಾ |
ನವ್ರತಮುಂ ನಿಖಿಲಸಮತೆಯುಂ ಸನ್ನ್ಯಾ ||
ಸವ್ರಜನಮುಮೆಂಬಿವು ಶಿ |
ಕ್ಷಾವ್ರತಮಿದು ನಾಲ್ಕುತೆಱನನೂನಾಗಮದೊಳ್ || ೯೦ ||

ಬಲದೇವನ ಮನದೊಳ್ ನಲೆ |
ನೆಲಸಿದುವಿವು ನೆಱೆಯೆ ವಾಸುದೇವನ ಮನದೊಳ್ ||
ನೆಲಸವೆ ಹಿಮಕರಕಿರಣಂ |
ನೆಲಸದವೋಲ್ ಜಲಜನಿಬಿಡಕೋಶೋದರದೊಳ್ || ೯೧ ||

ತ್ರಿದಶಮಹೀಶ್ವರಖೇಚರ |
ಸದಸ್ಸರೋಜಾಕರಾಬ್ಜಬಂಧುಗೆ ಮುದದಿಂ ||
ಪದೆದೆಱಗಿ ಹಲಧರಂ ತ್ರಿಃ |
ಪ್ರದಕ್ಷಿಣಂಗೆಯ್ದು ಸೇಸೆಗೊಂಡಘಜಯದಿಂ || ೯೨ ||

ಕ್ಷಿತಿಪತಪೋಗ್ರಹಣದ ಮನ |
ಕತಮುಂ ಜಿನತತ್ತ್ವದೇಶಮುಂ ಪೊರ್ದೆ ವಿಷಾ ||
ಮ್ಮತದವೊಲಿರ್ದೆಯೊಳ್ ನಿಲೆ ತ |
ಮ್ಮಿಂತಿರ್ವರುಂ ಸಮವಸರಣದಿಂ ಪೊಱಮಟ್ಟರ್ || ೯೩ ||

ವ|| ಅಂತು ಪೊಱಮಟ್ಟು ತಂತಮ್ಮ ವಾಹನಂಗಳನೇಱಿ ಪರಿಜನಂಬೆರಸು ಯೂಥಪತಿ ಪೊಱಗಾದ ಕರಿಕಲಭಸ್ಥಿತಿಯಿಂದಂ, ಮೃಗಪತಿ ಪೊಱಗಾದ ಕಿಶೋರಕೇಸರಿವಿಧಿಯಿಂದಂ, ರಾಜಹಂಸಂ ಪೊಱಗಾದ ಯುವರಾಜಹಂಸಪ್ರಕಾರದಿಂದಂ ಬಂದು ಪತಿವಿಯೋಗದಿಂ ನಿಜಜನನಿಯರನೆ ಪೋಲ್ತು

ಪ್ರಸಾಧನವಿರಹಿತೆಯುಂ, ನಿರಾನಂದ ಜನೋಪೇತೆಯುಂ, ಮಮಾನಿತ ಹರ್ಷೋತ್ಕರ್ಷೆಯು ಮಾಗಿರ್ದ ತನ್ನನ್ವಯ ರಾಜಧಾನಿಯ ನನುಜ ಸಮೇತ ನಪರಾಜಿತ ನೆಯ್ದೆ ವಂದು.

ಕಂ|| ಕೃಶರಾಗಂ ವಿಗತ ಮನಃ |
ಪ್ರಸರತೆಯಿಂ ಕಣ್ಣ ನೀರ್ಗಳಂ ತೀವಿ ಸಿರಂ ||
ಕುಶ ಶೋಕ ಪರವಶಂ ಜಿ |
ತ್ರಶೇಷ ನಿಜ ಜನಕ ನಿಳಯಮಂ ವಿಭು ಪೊಕ್ಕಂ || ೯೪ ||

ವ|| ಅಲ್ಲಿ ತನ್ನಂ ಕಾಣಲೊಡನಿಮ್ಮಡಿಸಿದ ಶೋಕದಾವಾನಲ ನಿರ್ದೆಯೊಳ್ ಪೊೞ್ಮರವ ಕಿಚ್ಚಿನಂತುರಿ ತಮಳಗಾಗಿ ಸ್ವರಣೆಗೆಟ್ಟು ಬಾಯಬೀದಳುತುಂ ಪಳಯಿಸುವ ಮಾತ್ಯವರ್ಗಕ್ಕೆಱಗಿ ಪೊಡವಟ್ಟು ಕುಳ್ಳಿರ್ದು ಸಂತೈಸಿ -

ಕಂ|| ಪರಮಾರ್ಥಂ ಪರಿಪಾಲನ |
ಕರದಿಂದ ಪರಾಜಿತಾಬ್ಜಮಿತ್ರಂ ಕಳೆದಂ ||
ನರಪತಿ ವಿಗಮದೊ ಳೊಡನೊಗೆ |
ದರಸಿಯರ ಮುಖಾಬ್ಜ ಶೋಕ ಹಿಮಜಲ ಲವಮಂ || ೯೫ ||

ವ|| ತದನಂತರಂ ನೈಮಿತ್ತಿಕ ನಿರೂಪಿತ ಶುಭ ದಿನ ಮುಹೂರ್ತದೊಳ್.

ಮ|| ಕಮಳಾಳಂಕರನ್ಯೈಕ ಕಾರಣ ಸುದನ್ವದ್ವೇಷ್ಟಿತೋರ್ವೀ ಭರ |
ಕ್ಷಮ ನೆಂದನ್ವಿತ ಮಂತ್ರಿವರ್ಗ ಮೊಡನೆಬ್ಬಾ ಳೋಚದಿಂದೀಯು ರಾ ||
ಜ್ಯಮ ನಿಂದ್ರಾಕೃತಿ ಸೀರಪಾಣಿ ಮಹಿಮಾವಷ್ಟಂಭದಿಂ ನಿಂಹಪೀ |
ಠಮ ನಂದೇಱಿದ ನುತ್ಸವೋದಯಕರಂ ಸೌಜನ್ಯಕಂದಾಂಕುರಂ || ೯೬ ||

— ಗದ್ಯ —

ಇದು

ಜಿನೇಂದ್ರ ಚರಣ ಸರಸೀರುಹ ಶಿಲೀಮುಖಾಯಮಾನ

**ಶ್ರೀಮದುಭಯಕವಿ ಚಕ್ರವರ್ತಿ**

ನಿರ್ವರ್ತಿತಮುಂ

**ಅಮ್ಮನ ಭಕ್ತಾಭಿಧಾನ ಮಲ್ಲಪಾರ್ಯ**

ತದನುಜಾತಾಭಿಜಾತ ಸಾರಸ್ವತ

ಪುನ್ನಮಾರ್ಯ ಕಾರಿತಮುಮಪ್ಪ

**ಪುರಾಣಚೂಡಾಮಣಿಯೊಳ್**

ಪ್ರಥಮಾಶ್ವಾಸಂ.

|| ಶ್ರೀ ||

# ಶಾಂತಿಪುರಾಣಂ.

---

## ದ್ವಿತೀಯಾಶ್ವಾಸಂ.

ಕಂ|| ಶ್ರೀ ರಮಣೀ ರಮಣೀಯಂ |
ಸೀರಾಷ್ಟ್ರಂ ಸಿಂಧ ನಾಧಿರಾಜ್ಯದೊಳಿರಿಸಿ ||
ಪಾರಣ **ನನಂತವೀರ್ಯನ** |
ಪಾರ ಬಲಂ ಯೌವರಾಜ್ಯ ಪದದೊಳ್ ನಿಂದಂ || ೧ ||

ಕುಂದ ದಳ ಚ್ಛವಿ ಕುಮುದಾ |
ನಂದನ ನಪರಾಜಿತಂ ಪ್ರಸನ್ನಂ ಶಿಶುರಾ ||
ಜಂ ದಲಿಸೆ ಸಂದು ಪರಿಪೂ |
ರ್ಣೇಂದು ವಿಲಾಸದಿ ನದೇಂ ಪೊದಳ್ದಿದವಿವನೋ || ೨ ||

ಅನುಜಂ ರಿಪು ದುಸ್ಸಹ ತೇ |
ಜ ನನುವಶಂ ತಾನೆ ನಡೆವುತಿರೆ ಶಾರದ ನೂ ||
ತನ ದಿನಪನಂತೆ ಸೊಗಯಿಸಿ |
ದನಮಲ ಕಮಲಾಭಿವೃದ್ಧಿಯಿಂ ಬಲದೇವಂ || ೩ ||

ವಿಕಸಿತ ಗುಣ ಗಣದಿಂ ನಿ |
ರ್ಮಳ ತನುವಿಂ ಗೆಲ್ದು ಬೀಜದಿಂ ಬೆಳಸೆಂತ ||
ಗ್ಗಳ ಮಕ್ಕುಮಂತೆ ಗುರುಗ |
ಗ್ಗಳವಾದ ನಿದೇಂ ಸುಪುತ್ರನೋ ಬಲದೇವಂ || ೪ ||

ಪ್ರವಿಮಲ ಮತಿಗನಿತುಂ ರಾ |
ಜ ವಿದ್ಯೆಗಳ್ ನೆಱೆಯುವಮಲ ಕೀರ್ತಿಗೆ ವಶ ದಿ ||
ಗ್ವಿವರಂ ನೆಱೆಯವು ಹಲಧರ |
ನಪ್ರೋಲಱಿವಿನ ಜಸದ ಪವಣ ನೆಯ್ದುದಕೊಳಕೇ || ೫ ||

ಸಾರಗುಣಂ ತದ್ರಾಜ ಕು |
ಮಾರನೊಳುಳ್ಳನಿತು ಪೆಱರೊಳಿಲ್ಲೆಂತೆನ ಮು ||
ನ್ನೀರೊಳ್ ನೆಲಸುಗುಮಲ್ಲದೆ |
ನೀರೊಳ್ ನೆಲಸುಗುಮೆ ಸಾರರತ್ನಾವಳಿಗಳ್ || ೬ ||

ಕಂ|| ಆದರದಿ ನರ್ಥಶಾಸ್ತ್ರಮ |
ನೋದೆಯು ಮಪರಾಜಿತಂಗೆ ದಯೆ ಮನದಿ ನದೆಂ |
ಪ್ಪೊದುದೆ ನಿಜ ಸ್ವಭಾವಮ |
ನೋದಿದೆಯೊಳ್ ಮಿಕ್ಕು ಮಱಗು ಮೆಂಬುದು ಮುಂಟೇ || ೭ ||

ಕುಂಭ ದ್ವಿಪುಲಾಲಾನ |
ಸ್ತಂಭಂ ಲಕ್ಷ್ಮೀ ಕರೇಣುಗೆ ನಿಸಿದುದು ಭುಜ ||
ಸ್ತಂಭಂ ಲಕ್ಷ್ಮಿಗೆ ಪ್ರಾಕಾ |
ರಂ ಭುವನಕ್ಕೆಂ ಬಲಸ್ಥನೋ ಬಲದೇವಂ || ೮ ||

ಗಜ ಘಟೆಗೆ ನಾಥನಾಗಿಯು |
ಮಜಾತ ಮದ ನಹಿತಸಿಂಹನಾಗಿಯು ಮಾರ್ಗಂ ||
ನಿಜದಿಂ ಕ್ಷಮಾ ಪರನು ಮಂ |
ಗಜನಾಗಿಯು ಮಮಾನುಷಂ ಹಲಹಸ್ತಂ || ೯ ||

ಬಲದೇವ ನಖಿಳ ರಿಪು ಕುಲ |
ವಿಲಯಾನಲ ನಾತ್ಮ ಕುಲ ಸಮುಜ್ಜ್ವಲ ಗಗನ ||
ಸ್ಥಳ ಖರಕರಂ "ಸುಪುತ್ರಃ |
ಕುಲ ದೀಪಕ" ಎನಿಸಿ ನೆಗಟ್ದ ನಖಿಲಾವನಿಯೊಳ್ || ೧೦ ||

ಅನುಜಂ ನಾಮಾಕ್ಷರದಿಂ |
ದನಂತವೀರ್ಯಂ ಪರಾಕ್ರಮ ಕ್ರಮದಿಂ ತ ||
ನ್ನನೆ ತಾನೆ ಪೋಲ್ಗು ಮೆಂಬಿನ |
ಮನಂತವೀರ್ಯಂ ಗನಂತವೀರ್ಯತೆ ಸಾರ್ಥಂ || ೧೧ ||

ಈ ಭೂಮಿಗೆ ಮಿಗಿಲಾದೆ |
ನ್ನಿಂ ಭೋಗಮೆ ಭೋಗಮೆಳಗೆ ಕಿಟ್ಟಿಟ್ಟ ಫಣೆಂ ||
ದ್ರಾಭೋಗಂ ಭೋಗಮೆ ಪೆಱ |
ದೇ ಭೋಗಂ ಪೋಗಿ ಮೆಂಬ ನಂಬುಜನಾಭಂ || ೧೨ ||

ಧರಣಿಯ ನವಯವದಿಂದಮೆ |
ಪರಿಪಾಲಿಸ ಲೆನ್ನ ಭುಜಮೆ ಸಾಲ್ಕುದು ಹಸ್ತ್ಯ ||
ಶ್ವ ರಥ ಪದಾತಿ ಬಲಂ ನೃಪ |
ಪರಿಕರ ಮೆಂಬ ಬ್ಜಜಠರ ನೇಂ ಮೆಯ್ಗಲಿಯೋ || ೧೩ ||

ಭೃಂಗ ಯಮುನಾ ನಭಃ ಶ್ಯಾ |
ಮಾಂಗಂ ಹರಿ ಸಿರಿ ಗಿರಲ್ಕೆ ಮಾಡಿದ ಭಾಸ್ವ ||
ಜ್ಜಂಗಮ ಮಹೇಂದ್ರ ನೀಲೋ |
ತ್ತುಂಗ ಪ್ರಾಸಾದ ಮೆನಿಸಿ ಸೊಗಯಿಸಿ ತೋರ್ಕುಂ || ೧೪ ||

ಕಂ|| ಪೊಳೆವೆತ್ತ ವಿಜಯ ವಾಮೇ |
ತರ ಭುಜದೊಳ್ ನಿಂದ ವೀರ ಸಿರಿ ಯೆಸೆವ ನಟಿಲ್ |
ಸ್ಫುರಯಿಸೆ ಮೆಯ್ಯೊಳ್ ಪೊಲ್ತಂ |
ಹರಿ ನೀಳೋ ದ್ವೃತ್ತ ಪ್ರಸನ್ನ ಮಣಿ ದರ್ಪಣಮುಂ || ೧೫ ||

ಬಂಧಿಮುಪತ್ತಂಜರ ಶಿಶು |
ಸಿಂಹಂಗಳೊಡಾದ ಬಾಳ ಕೇಳಿಯ ಕೆಳೆಯಂ |
ಬೃಂಹಿತ ರಿಪು ದಂತಿ ಘಟಾ |
ಸಂಹರಣದಿ ನೀ ಸಘೋಕ್ಷಜಂ ನೆರಪಿದನೋ || ೧೬ ||

ವ|| ಮತ್ತಂ —

ಕಂ|| ಪೂಜಗಣರ್ ವರ್ಗಮುಂ ತ್ರ |
ಯ್ಯಾಜಿಯ ಗೆಲ್ವ ಕುರ್ ಪೊಳಗಣರ್ ಷಡ್ವರ್ಗಂ ||
ನಜಿಕಿದಿರ್ ಬಾರದು ಗೆಲಲದ |
ನಜಿುದಿಂ ಬಲದೇವ ನಂತು ಗೆಲ್ದರು ಮೊಳರೆ || ೧೭ ||

ಅಂತವರಿವರ್ದೊಳಂ ಭವ |
ಸಂತತಿಯಿಂ ಮೊಡನೆ ನಡೆವ ಮೋಹಂ ಮೊದಲಿಂ ||
ದಂ ತುದಿಯ ನೆಯ್ದು ಜಲ ರುಹ |
ತಂತುವ್ರಳಿ ಡೆವಜಿುಯುದೊಲ್ಲು ಸಲೆ ಪಲ ಕಾಲಂ || ೧೮ ||

ವ|| ಒಂದುದಿವಸ ಮೋಲಗದೊಳೊರ್ವನಪೂರ್ವಂ ನಿಸ್ಪೃಷ್ಟ, ನವಗತಾರ್ಥಶಾಸ್ತ್ರ ನಾಕೃತಿ ವಂತನುದಾತ್ತೋದಂತ ಸಂಭಾಷಣಸಮುತ್ಪಾದಿತ ತೋಷಣಂ ಸ್ವವಿಚಾರ ವಿಭೂಷಣಂ ಸಪ್ತೋಪಾಯ ಪರಿಗೋಚರಂ, ಖೇಚರಂ ಬಂದು ದೌವಾರಿಕ ನಿವೇದಿತ ವೃತ್ತಾಂತನಾಗಿ ಕಂಡ ಪರಾಜಿತಾ ನಂತ ವೀರ್ಯರ್ಕಳ್ಗೆ ಱಗಿ ಪೊಡವಟ್ಟುಚಿತ ಪ್ರದೇಶ ನ್ಯಸ್ತ ಭದ್ರಾಸನದೊಳ್ ಕುಳ್ಳಿರೆ ಲಾಂಗಲಹಸ್ತಂ ವಿದ್ಯಾಧರ ರಾಜ ದೂತನ ಮೊಗಮಂ ನೋಡಿ—

ಕಂ|| ಬಂದ ಬರವಾವು ದೆಲ್ಲಂ |
ಬಂದಿರ್ ಭವದೀಯ ನಾಮ ಮೇನೆಂಬುದಿದಂ ||
ತೆಂದೆಮಗೆ ಪೇಳ್ವುದ ವಿತಥ |
ಮೆಂದೊಡೆ ಖಚರೇಂದ್ರ ದೂತ ನಿದುರ್ ವಿನೀತಂ || ೧೯ ||

ವ|| ವಿರಚಿತಾಂಜಲಿ ಪುಟ ಘಟಿತ ಕರ ನಿಂತೆಂದು ಬಿನ್ನಪಂಗೆಯ್ದಂ—

ಉ|| ವಿಭು ವಿದ್ಯಾಧರ ಚಕ್ರವರ್ತಿ ವಿಜಯಾರ್ಧಾದ್ರೀಂದ್ರ ಚೂಡಾಮಣಿ |
ಪ್ರಭ ಸುವೃತ್ತ ನರೇಂದ್ರ ಕಂಠ ಕದಳೀ ಚ್ಛೇದೈಕ ದಕ್ಷಾಸಿ ಭಾ ||
ವಿ ಭವ ವ್ಯಾಪ್ತ ನೃಪಾಗ್ರ ಗಣ್ಯ ನಮರ ಪ್ರಸ್ಪರ್ಧಿ ಪುಣ್ಯಂ ವಿಭೋ |
ಧಿ ಭವಾಷ್ಟಾದಶ ತೀರ್ಥ ನಿಶ್ಚಿತ ಚರ ವ್ಯಾಪಾರ ಪಾರಾಯಣಂ || ೨೦ ||

ಮ|| ಪದನಮಿತಾಪರಾಜಿತ ದಮಿತಾರಿ ಮಹೀಶ್ವರ ನಿನ್ನ ನಿಲ್ಲಗ |
ಟ್ಟಿದ ನಿಜ ನೊಪ್ಪುಗೊಳ್ವುದು ಪಸಾಯದ ನಾ ಮಹಿಪಂ ಮರಲ್ದು ಜೀ |
ವಿದುದ ನದಾಗದೆನ್ನ ದಿರವಟ್ಟಿವು ದಿನ್ನ ದನಾನದಾಪ್ರದಂ |
ಬುದ ನಜಾವಂತು ಪೇಳ್ದ್ದನವಧಾರಿಸಿ ನಿರ್ವರು ಮೇಕ ಚಿತ್ತದಿಂ || ೨೧ ||

ವ|| ಸಕಲ ಗಗನಚರ ಮಣಿ ಕಿರೀಟ ಮರೀಚಿ ಮೇಚಕಿತ ಚರಣ ನಖ ಮಯೂಖ, ನನವರತ ನಿಪತಚ್ಚಾರು ಚಾಮರಾಕರ ದಂಡಮಂಡಿತ ಧವಳಚಾಮರಪವಮಾನಾಂದೋಳಿತ ದುಕೂಲಾಂಬು ಕಾಂತ ನನಂತ ಕಾಂತ ಪ್ರೇಮಚರ ಕಾಂತಾ ಕಟಾಕ್ಷೈಕ ಲಕ್ಷ್ಯಂ, ದಮಿತಾರಿ ಮಹಾರಾಜಂ, ಮೃಗರಾಜಾಸನಾಸೀನನೊಡ್ಡೋಲಗಂಗೊಟ್ಟಿರೆ ವೈಣ ಕಾರ ಗೀತ ವಿಶಾರದಂ ನಾರದ ನಭ್ರ ಪಥದಿ ನವನಿ ಗವ ತರಿಸ ಕಂಡು ಪವಮಾನ ಮಾರ್ಗದಿ ನವನಿತಳದೊಳಡಿಯಿಡದಲ್ಲಂ ಮುನ್ನ ಮಿದಿರೆಳ್ದು ಭಕ್ತಿ ಪುರಸ್ಸರಂ ಮನದೆಱಕದಿನೆಱಗಿದ ಗಗನ ಚರಾಧೀಶನಂ ಯತಿ ಪರಸಿ ಯಥೋದ್ದಿಷ್ಟ ವಿಷ್ಟರದೊಳ್ ಕುಳ್ಳಿರ್ದು ಸ್ವಾಗತ ಕುಶಲ ಸಂಭಾಷಣಾ ನಂತರಂ ಪಡೆಮಾತು ಮಾತುಗಳ್ ತಗುಳೆ ಮಾತುಮಾತಾಗೆ ನಾರದ ನಿಂತೆಂದಂ, ಎಮ್ಮ ಕಂಡುಂ ಕೇಳ್ದು ಮಱಿಯದ ವಸ್ತುಗಳಿಲ್ಲ, ಗಾಂಧರ್ವಮೆಂಬುದೆಮ್ಮ ಜಾಣವಿದ್ಯೆ ಯದಱೊಳೆಮ್ಮಂ ರಂಜಿಸುವನ್ನರ್ ಪೌರ್ಥರಿಲ್ಲ, ನೊಂದು ಚೋದ್ಯಮಂ ಕಂಡೆ ದಾವುದೆನೆ ವತ್ಸಕಾವತೀ ವಿಷಯದ ಪ್ರಭಾಕರೀಪುರಮನಾಳ್ವನಪರಾಜಿತನೆಂಬೊಂ, ತನ್ನ ತಮ್ಮನಂ ಯುವರಾಜನನನಂತವೀರ್ಯನಂ ರಾಜ್ಯಭಾರದೊಳ್ ನಿಯೋಜಿಸಿ ಸಮಸ್ತ ವಿಷಯ ಸುಖಮನನುಭವಿಸುತ್ತಿರ್ಪನಾತನೊಂದು ದಿವಸಮಾತನಂ ಪರಸಲ್ ಪೋಗಿ ಗೊಟ್ಟಿಗೆಂಬೊಳ್ ಕುಳ್ಳಿರೆ ಗೊಟ್ಟಿಗೇಯವಾಗೆ

ಚಂ|| ಸ್ವರ ಶರಮುಂ ತದೀಯ ಪ್ಲುದು ಗೇಯಮು ಮುಚಿತದ ಪೃಥ್ವಿ ನೊಕ್ಕನ |
ತ್ತರ ನಱಿಸಲ್ಕೆವೇಡ ನೆಱಗೊಂಡುದ ನುಣ್ಮದ ಕಣ್ಣ ನೀರನಂ |
ಕುರಿಸಿದ ಮೆಯ್ಯ ರೋಮದೂದನಿಂ ದುಪಲಕ್ಷಿಸೆ ಬರ್ಪರದಿಲ್ಲಿ ಬ |
ರ್ಬರಿಯ ಕಿರಾತಿಯೊಟ್ಟಜೆಗೆ ಕಿನ್ನರರೊಟ್ಟಜೆಯುಂ ತೆರಬೀಳ್ಕೆಯುಂ || ೨೨ ||

ವ|| ಅಂತೊಂದ ಕೊರಲೊಳ್ ಕೊಳಪಾಡುವ ಬರ್ಬರಕಿರಾತಿಯ ರಂಗೊರಲೊಳೊದವಿಬಂದ ದರಯನಳ್ಳವಿಳ್ಳಿಯಾಗಿ ಪಿಡಿದಲುಗುವಂತಲುಗೆ ತೊಳ್ತಳಿಯು ಮುಗಿಯುಂಬಗಿಯುಂ ಮಾಡಿ ಮನ ಮಸುಱಿ ಸಱಿಪಿಡಿದ ನಿಯನಪ್ಪ ಗೇಯರಸಾಬ್ಧಿಪೂರದೊಳ್ ಮಾಡಿ ಮುಳುಗಾಡುತ್ತುಂ ನಿಮೀಳಿತ ನೇತ್ರನುಂ ರೋಮಾಂಚ ಕಂಚುಕಿತ ಗಾತ್ರನು ಮಾಗಿದಪರಾಜಿತನೆಮ್ಮ ಬಂದುದ ನಿರ್ದುದುಮ ನಱಿಯದಿರೆಯುಂ, ಕಿಱಿದುಮೊಳಜ್ಞತೆಯೊಂದಿರ್ಪುದಱಿಂ ರಸಭಂಗಂಮಾಡದೆ ಗಜೊನ್ನಿಮೀಲನಂ ಗೆಯ್ದು ವಿಷಯಾಸಕ್ತಪುರುಷೇಂದ್ರಿಯಪಂಚಕಂ ಚಿತ್ರಗತರೂಪೇಂದ್ರಿಯಪಂಚಕಪ್ರಪಂಚ ಸಮಾನ ಮಕ್ಕುಮೆಂದು ಬಗೆದೆಳ್ದು ಬಂದೆವಪಱಿಂದ ಮಾಗಾಯಿಕಾರತ್ನದ್ವಯಂ ಸರ್ವರತ್ನಭಾಜನನುಂ, ಚಕ್ರವರ್ತಿಯುಮಪ್ಪ ನಿನಗಲ್ಲದೆ ಯೋಗ್ಯಮಲ್ಲೆಮ್ಮಱಿವುದು ಮನಿತೆ, ಮತ್ತೀದುದನೆಮಗೇನೆಂದಱಿ ಯಲ್ಬಾರದು, ಎಂದು ನುಡಿದು ಖೇಚರೇಂದ್ರನ ಮನಮನಾವರ್ಜಿಸಿಯುಂ, ತನ್ನ ವಿಸರ್ಜಿಸಿಯುಂ ನಾರದಂ ಪೋದ ನಿತ್ತೆಮ್ಮರಸಂ ಬರ್ಬರಿಯುಂಕಿರಾತಿಯುಮೆಂಬಿರ್ವರ್ಗಾಣತಿಯರುಮಂ ಬೇಡಿಯಟ್ಟಿದ ನೆನ್ನ ಪೆಸರಮಿತನೆಂಬುದೆಂದು ತನ್ನಬಂದ ಬರವನಱಿಯ ಬಿನ್ನಪಂಗೆಯ್ದು ತನ್ನ ತಂದ ಶಾಗುಡ ಮನಾಸನ್ನವರ್ತಿಯು ಮಭಿರಾಮ ಮೂರ್ತಿಯುಮಪ್ಪಮಾತ್ಯೋತ್ತಮನ ಕೆಯ್ಯೊಳ್ ಕುಡುವುದುಮ ಪರಾಜಿತಂ ಯಥೋಕ್ತ ಪ್ರತಿಪತ್ತಿಯಿಂ ದೂತನಂ ಬೀಡಿಂಗೆ ಪೋಗಲ್ವೇಳ್ದು ಮರಸಂಗೆ ಮನೆವೆರ್ಗಡೆ ಮುದ್ರಾಂಕಿತಮಪ್ಪ ಪಾಯನದ ಮುದ್ರೆಯಂ ಕಳೆದು ಸುತ್ತ ನಱಿದು ಬಿತ್ತರಿಸಿ ತೋರುವುದುಂ.

ಮ॥ ನಯನಾನಂದನನಾಗಿಯುಂ ತನು ಮನಸ್ಸಂತೋಷಸಂಪಾದಿಯಾ ।
ಗಿಯುಮಾಶಾರುಚಿಯಾಗಿಯುಂ ವಿಶದರುಕ್ಛ್ರೀ ಚಂದ್ರಿಕಾಸಾಂದ್ರಿಯಾ ॥
ಗಿಯುಮಿಂದುದ್ಯುತಿ ಪದ್ಮಮಂ ಕೊರಗಿಪಂತೊಡ್ಡೋಲಗಕ್ಕೆಯ್ದೆ ವಿ ।
ಸ್ಮಯಮಪ್ಪಂತಿರೆ ಹಾರರೋಚಿ ಹಳಿಯಂ ಮೂರ್ಧಾಸ್ಪದಂ ಮಾಳ್ಪುದುಂ ॥ ೨೩ ॥

ವ॥ ಒರಲ್ದು ಕನಕಾಚಲದೊಳ್ ಪತ್ಯಕದೊಳೊಱಗಿದ ದಿವಿಜೇಂದ್ರಕರೀಂದ್ರದಂತೆ ಚಾರು ಚಾಮೀಕರಮೃಗೇಂದ್ರಾಸನದ ಕೆಲದ ಮತ್ತವಾರಣಮಂ ನೆಮ್ಮಿ ನಿಶ್ಚೇತನನಪರಾಜಿತಮಹಾಮಹೀಶನಿರೆ--

ಕಂ॥ ತುಂಬಿತದಿನನಂತವೀರ್ಯಂ ।
ಬೆರಸು ನೃಪಾಸನ್ನವರ್ತಿಗಳ್ ಕರ್ಪೂರಾ ॥
ಗರು ಮಳಯರುಹ ವಿಮಿಶ್ರಿತ ।
ಕರಕಾಂಭಸ್ತೋಕಪೂರ್ವಕಂ ಬೀಸುವುದುಂ ॥ ೨೪ ॥

ಶಾ॥ ಸತ್ತ್ರಿವರ್ಗತ್ರಮುಂ ರಾಜಯೂಥಪ ಮನಕ್ಕಾನಂದಮಪ್ಪಂತು ಯೋ ।
ಷಿತ್ತ್ವಾಮ್ಯತ್ಕರಿಣೀಗಣಕ್ಕೆ ಪಿರಿದೊಂದೌತ್ಸುಕ್ಯಮಪ್ಪಂತು ಮಾ ॥
ಡುತ್ತುಂ ಚೇತನೆ ಪುಟ್ಟೆ ಮೂರ್ಛೆ ತಿಳಿದೆಚ್ಚತ್ತಂತಾನುಮೆಂತಾನುಮೆ ।
ಚ್ಚತ್ತ್ರಿವರ್ಗಂ ಮದವಂತಿ ಸಜ್ಜರದಿನೆಚ್ಚತ್ತ್ರಿವರ್ಗವೋಲ್ ಭೂಭುಜಂ ॥ ೨೫ ॥

ವ॥ ಅಂತು ಮೂರ್ಛೆಯಿಂದೆಂತಾನುಮೆಚ್ಚತ್ತು ಕದಡಿ ತಿಳಿದ ಮಾನಸಸರೋವರದಂತೆ ಸುಪ್ರಸನ್ನನುಂ, ಮಾದ್ರಾಂತರಂಗನುಂ, ವಿಕಸಿತಾಶಯಕುಶೇಶಯನುಂ, ಪ್ರಮೋದಿತ ರಾಜಹಂಸನಿಷೇವಿತನುಂ, ಮಾಗಿರ್ದ ಹಲಧರನಂ ರಾಜ್ಯಧುರಂಧರನುಮಪ್ಪ ಮಂತ್ರಿವರ್ಗಮುಮಂ ನೋಡಿ ರಾಗಿಸಿ ಕರ್ಣಜಪದೊಳ್ ಮೂರ್ಧಾವ್ಯಾಸಂಗಮಂ ಬೆಸಗೊಳೆ ನಡೆದೋಲಗಿಸುವ ಮಕುಟಬದ್ಧರನುಚಿತಪ್ರತಿಪತ್ತಿಗಳಿಂ ವಿಸರ್ಜಿಸಿ ತತ್ಪ್ರಪಂಚಮಂ ಸಪ್ರಪಂಚಮಪರಾಜಿತನಿಂತೆಂದು ಪೇೞಲ್ತಗುಳ್ದಂ—

ಕಂ॥ ಹಾರಮದನ್ಯಭವಾಲಿಂ ।
ಕಾರಮನನುಕರಿಸಿ ಮದ್ವಿತೀಯನಗತಿ ಸಂ ॥
ಸ್ಕಾರಮನಜಾಪಿದೊಡೆನ್ನ ಶ
ರೀರಕ್ಕಿನಿತಾಯ್ತು ವೈಪರೀತ್ಯಂ ಸಭೆಯೊಳ್ ॥ ೨೬ ॥

ವ॥ ಈ ಖೇಚರನ ಹಾರಮುಪಥ್ಯಾಹಾರದಂತೆಯುಮಪರಿಣಾಮವಿಹಾರದಂತೆಯುಮನಗಿಸಿತು ಜೋಗಂ ಪ್ರಮೋದಸಂಹಾರಮಂ ಮಾಡಿದ ಕಾರಣಂ ಇದುಮೊದಲಾಗೀ ಭವಕ್ಕೆ ಮೂರನೆಯ ಭವದೊಳ್ ಮಿತತೇಜನೆಂಬ ವಿದ್ಯಾಧರರಾಜನಾಗಿ ಪುಟ್ಟಿದೆನನಂತವೀರ್ಯನುಮೆನ್ನ ಮುನ್ನಿನ ತಂದೆಗೆ ಸೋದರಳಿಯಂ ಶ್ರೀವಿಜಯನೆಂಬೊನಾದನೆಂದತೀತಭವವ್ಯಾಪಾರಮಂ ಪೇಳುತ್ತುಮಿರೆಯಿರೆ-

ಶಾ॥ ವಿದ್ಯಾಭೃತ್ಕುಲಜಾತಿಸಾಧಿತ ನಿಸರ್ಗೋದಗ್ರಸಾಮಗ್ರಿಯಿಂ ।
ವಿದ್ಯಾದೇವತೆಗಳ್ ನರರ್ಗೆ ನಯದಿಂ ಶ್ರೀಸಾರ್ವವೋಲ್ ಬಂದವೇಂ ॥
ಚೋದ್ಯಂ ಸಾರ್ದ್ವೊ ತಮ್ಮುತಿರ್ವರುಮನಾಗಳ್ "ಸಪ್ತಭಿರ್ಜಾಯತೇ ।
ವಿದ್ಯಾ"ಯೆಂಬುದು ತಪ್ಪದಾಯ್ತೆನೆ ತಗುಳ್ದಂತೀ ಮಹೀಮಂಡಲಂ ॥ ೨೭ ॥

**ವ**|| ಅಂತು ಮುನ್ನಿನ ತಮ್ಮ ವಿದ್ಯಾಧರರಾದಂದಿನ ಮಹಾವಿಭ್ರಮಂಗಳ್ ಮುಂ ನೆರವಿದಗಣ್ಯ ಪುಣ್ಯಮುಂ ತನ್ನಂ ಪೊರ್ದುವಂತಾಸುಂ, ಮುಂಪೊಟ್ಟಿ ನಿಧಾನಂ ಸುಕೃತಮನಂಗೆ ಕೋಳ್ವಂತಾಸುಂ ಸಮನಿಸೆ ವಜ್ರಮುಂ ಮನದಂತೆ ತಣ್ಪು ಮನದೊಳ್ ಪೊಂಪುಳಿಪೋಗೆ ವಾಸುದೇವಂಬೆರಸು —

ಮ|| ದಿಗಿಭೇಂದ್ರಾಳಿಗೆ ತನ್ನ ನಿರ್ಮಳಯಶೋರಾಜೀವರಾಜಂ ಮೊಗಂ |
ಬುಗೆ ನಾಲ್ಕುಂ ನೃಪವಿದ್ಯೆಯೊಂದು ಬಳಿದಿಂ ಪಂಚಾಂಗಮಂತ್ರಂ ಮನಂ ||
ಬುಗೆ ಜೇಜೀಯಂಪಡೆ ಗಾಣಮುದ್ಧತರಿಪುಶ್ರೀಕಾಂತೆ ತನ್ನಂ ಬರ |
ಣ್ಬಗೆ ಪೊಕ್ಕಂ ಯುತಮಂತ್ರಿ ಮಂತ್ರಗೃಹಮಂ ಸೌಜನ್ಯಕಂದಾಂಕುರಂ || ೨೮ ||

ಕಂ|| ಶ್ರೀಜಾಯಾವಲ್ಲಭನವ |
ರಾಜಿತ ನಯ ವಿನಯ ಗುಣ ನಿಧಾನಂ ಬುಧನಾ ||
ವಾಜಕಮತಮನೆ ಪೇಳ್ದು ವಿ |
ರಾಜಿತ ಮನ ನಡರೆ ತೊಡರೆ ನುಡಿಗುಂ ನಯಮಂ || ೨೯ ||

ಮ|| ಮನಸಂದಾದವಿತರ್ಕ ಗಾಣತಿಯರಂ ಪೆರ್ಚಿಂಪದಿಂ ದಕ್ಕಿ ದೂ |
ತನ ನಿಂತೀತನ ನೊಯ್ಯನೆಮ್ಮಗನೆ ನಾರಯ್ವನೋ ಪಾರಮುಂ ||
ತನಗುಂತಾಪ್ಪುದು ಕಜ್ಜಮುಟ್ಟಲಪಜಾಂಪಂ ನಿಂದು ನಿಮ್ಮೊಂದು ಜಾ |
ತನದೊಳ್ ಪುಟ್ಟಿದ ಕಾರ್ಯಬೀಜಮನವಂ ನೀತಿಜ್ಞರಿರ್ ಪೇಳಿರೇ || ೩೦ ||

**ವ**|| ಎಂದು ಸಚಿವೋತ್ತಮರೊಳ್ ರಾಜನೀತಿಶಾಸ್ತ್ರನಾಟಕ ಪ್ರಾರಂಭಕ್ಕೆ ಸೂತ್ರಧಾರನಾಗಿ ತತ್ಪೂರ್ವರಂಗಪ್ರಸಂಗಕ್ಕೆ ಪ್ರರೋಚನೆಯಪ್ಪ ಪ್ರಥಮಪಾತನಿಕೆಯಂ ಪ್ರಸ್ತುತಂ ಮಾಡಿ ಮತ್ತಂ ಪಾಪಮಿತಾರಿಯ ನುದ್ದೇಶಿಸಿ ಬಲದೇವ ನಿಂತೆಂದಂ —

ಕಂ|| ಅತಿಗುಪ್ತ ಗಭೀರಾಲಿಂ |
ಗಿತನು ಮತಿಪ್ರೌಢ ಗೂಢ ಮಂತ್ರನು ಮಪ್ಪಾ ||
ಕ್ಷಿತಿಪನ ನೆಗಳ್ತೆಯುಂ ವಿಧಿ |
ಯುತ ಕರ್ತವ್ಯತೆಯು ಮಜೇಯ ಲರಿದಾವಂಗಂ || ೩೧ ||

ಉ|| ಬೇಡಿದೊಡೀಯ ನೆಂದಮಗೆ ಪಾಗುಡಮಟ್ಟಿ ಮನಕ್ಕೆ ವಂದನಂ |
ಬೇಡಿದನೋ ಸಮರ್ಥನವನೇವನೊ ದೈನ್ಯದ ಸಂಚವಾರಮುಂ ||
ನೋಡಿರೆ ನಾಲ್ಕುಪಾಯಮಿರೆ ಗರ್ವದಿ ನಕ್ಕನೆ ಸಿದ್ಧಿ ನಾಲ್ಕನೊ |
ಳ್ಕೂಡುಗಳಿಲ್ಲದೆಂ ಮದದೊಳಾಯ್ತು ಬಲಂ ದಿಗಿಭಕ್ಕೆ ನೊಕ್ಕಳಂ || ೩೨ ||

ಕಂ|| ಆನೆಯು ಮಗುವ್ವ ಗಿಡುಗು ಮ |
ದಾನಂ ಸ್ನಾಹಣಕೆ ಪುಲ್ಲ ನಡುಕುಗು ಮದಜಂ |
ದಾನೇತರ ನವಮಾನ |
ಸ್ಥಾನಮುಪಾಯದೊಳ ನೂನ ಮುತ್ತಮ ದಾನಂ || ೩೩ ||

ಕಂ|| ಆಱೊರೆ ಯೇೞೊರೆಯೊಂ ತಾ |
ನೇೞೊರೆ ತದ್ದೇಶಕಾಲ ಮೇೞೊರೆಯೋ ಮೇ ||
ಣೇೞೊರೆ ತಾಂ ಕ್ಷಯವೃದ್ಧಿಗ |
ಳಾೞೊರೆಯ ವಿಸ್ತರಿದು ಮುನ್ನ ಪರಿಕಿಪುದಱಿವೊಂ || ೨೦ ||

ತಾಱವಱಾಗೆ ಜಯಂ ಜೊ |
ಮ್ಮೋಱುವ ಟಂಟಣಿಸುವ ರಸನರಸನೆ ನಿರಸಂ ||
ಜೋಱಿ ನಯಮಿರೆ ನಿರೋಧಿಗೆ |
ಮಾಱಾಂಪ್ಪೊಂ ತನ್ನ ಮೊಲೆ ತಾಂ ಮರಗಡಿಪ್ಪೊಂ || ೨೧ ||

ಉ|| ನಾಥಿತ ಶತ್ರು ಷಡ್ಬಲರ ನುಕ್ರಮದಿಂ ಚರರಂ ದ್ವಿಷನ್ನೃಪಾ |
ಷ್ಟಾದಶ ತೀರ್ಥದೊಳ್ನಡೆಯಿಸಲ್ಕಱಿವರ್ ನಿಜ ವೈರಿ ನಾರಸಂ ||
ಘೀದ ರಸೂನ ಶೌರ್ಯರ ತ್ರಿಷ್ಟೈಯರ್ ಯುತರ್ ಪರ ಪಕ್ಷ ಕೃತ್ಯನಿ |
ಷ್ವೇದನ ರಾತ್ಮ ಕೃತ್ಯ ಪರಿಪಾಲನರಾ ದಮಿತಾರಿ ಯನ್ನರಾರ್ || ೨೨ ||

ಕಂ|| ನವವಯಸನಾಗಿಯುಂ ವ್ಯಸ |
ನವಿಹೀನಂ ಶೂರನಾಗಿಯುಂ ತನುರಕ್ಷೈ ||
ಕವಿಶಾರದಂ ಪ್ರಶಾಸ್ತ್ರ |
ಪ್ರವೀಣ ವಾಗ್ವಿಭವ ನಾಗಿಯುಂ ಕೃತಮಂತ್ರಂ || ೨೩ ||

ಓರಿಯೊೞದ ಮಹೀಶ್ವ |
ನ್ಮೋೞಿಯೊಳಸೆದಾ ನತಾರಿ ಸೊಗಯಿಸುಗುಂ ತಾ ||
ರಾೞಿ ಯೊಳೆಸವ ಹಿಮದ್ಯುತಿ |
ಮಾಳಿಪ್ರೊಲಿಸಿತ್ತಿಲ್ಲದಂ ಜಿಗೀಷುವೆ ನೃಪರೊಳ್ || ೨೪ ||

ಒದವಿದ ರಿಪುವಂ ಸೂಱಿ |
ಲ್ಲದಿಕ್ಕಿ ಗೆಲ್ದು ತುೞಬಲದ ಮುಲ್ಲಿಸು ಮೆಚ್ಚಾ ||
ಡಿದ ಬಿಲ್ಲುಮಿದರ್ತೆಱಸಿ |
ರ್ದದನಱಪುಗು ಮವನನಾರ್ಯನೀಯರ್ಗಂ ಶೌರ್ಯಂ || ೨೫ ||

ಆಱುಂಗುಣ ದೆಱೆವೆಟ್ಟಿಂ |
ರಾಱುಂ ಮಂಡಲದ ನಾಭಿ ಷಡ್ವೇದ ಬಲಂ ||
ಮೂಱುಂ ಸಿದ್ಧಿಯ ನಲೆ ನಿಲೆ |
ಮೂಱುಂಶಕ್ತಿಯು ವಿಪಾಕ ಭೂಮಿ ದಲಾತಂ || ೨೬ ||

ಅವಯುವದಿಂದಱಿಗುಂ ಪಂ |
ಚವಿಧಾಹತವರ್ಗದುರ್ಗ ಪಂಚಕವಂ ಶಾ ||
ತ್ರವ ಮಂತ್ರ ಪಂಚಕನು ಸೊ |
ಪ್ಪುವ ತತ್ಪ್ರಭುಮಂತ್ರಶಕ್ತಿಗಳ್ ತೀವ್ರಂಗಳ್ || ೨೭ ||

ಚಂ|| ಒಸಗೆಗಳಿಂದು ಬಿಟ್ಟ ಶುಕಶಾರಿಕೆಗಳ್ ನಲಿದಾಡುವಾಡು ರಾ |
ಗಿಸಿ ದಮಿತಾರಿ ನಾಮ ಪರಿಪಾಟಿಯ ಸೂೞಿಯಿನೋದೆ ಕೇಳ್ದು ಕೇ ||
ೞ ಸಿತಪಂಕೇಜ ನೇತ್ರೆಯ ರತಿಪ್ರಿಯಕಾಂತೆಯ ರಾಸವಟ್ಟ್ಳಿ ನೀ |
ಕ್ಷಿಸುವರಧೀಶ್ವರಾಗಮನ ಕಾಲಮ ನಿರ್ಮ ದಿಗಂತರಂಗಳೊಳ್ || ೪೮ ||

ಕಂ| ಕ್ಷಯವೃದ್ಧಿಸ್ಥಾನ ವಿಧಿ |
ತ್ರಯಂಗಳೊಳ್ ಕ್ಷಯಮ ಸಮಿತಮೊಳ್ ಶೇಷವಿಧಿ ||
ದ್ವಯಮುಂ ತನ್ನೊಳ್ ನಿಱಿಸುವೃ |
ದು ಯಥಾವಿಧಿಯಿಂದ ಮಾಡುವಯಮುಂ ಜಯಮುಂ || ೪೯ ||

ಅನುಕೂಲಮಿತ್ರ ನಸುರ |
ಕ್ತ ನಾಯಕಾನೀಕ ನನುಗತ ಪ್ರಕೃತಿ ಚಿರಂ ||
ತನಸರೆನಿಪ ಚಕ್ರವರ್ತಿಗ |
ೞ ನೆಗೞ್ದ ನೆಗೞ್ತೆ ತನ್ನ ಭರ್ತ್ತಾರ ಪತಿಯಾ || ೫೦ ||

ಭೂಜಾಂಗವೃತ್ತಿಗೊಂದಿ ಪ |
ರಾಜಿತಮುಂ ಕಾಣಲಾಗ ನೈತಸವೃತ್ತಿ ||
ವ್ಯಾಜಮ ನಿತಲ್ಲದಾಗಂ |
ರಾಜಿತದಮಿತಾರಿಯೊಳ್ ಮಹೀಮಂಡಳದೊಳ್ || ೫೧ ||

**ವ**|| ಅಂತುಂ ಪ್ರಕೃತಿಯೊಳ್ ನಿತ್ಯೋದಯನುಂ, ನಿಸರ್ಗದೊಳ್ ರಿಪುವರ್ಗ ದುರ್ಗ ನಿರ್ಭೇದಿಯುಂ, ಸ್ವಭಾವದೊಳ್ ಭಾಸುರಾಸುರ ವಿಜಯಿಯುಂ, ಸಹಜದೊಳ್ ವೈರಿವೀರವಿದಾರಿಯುಂ, ಅಜೇಯನುಮಪ್ಪ ದಮಿತಾರಿಗೆ ಷಾಡ್ಗುಣ್ಯದೊಳ್ ಯಾನಮುಮುಪಾಯ ಚತುಷ್ಟಯದೊಳ್ ದಂಡಮುಮಲ್ಲದುಳಿದ ಗುಣಪಂಚಕಮುಮುಪಾಯತ್ರಯಮುಂ ದೊರೆಯಲ್ಲವು. ನೀನುಂ ತನ್ನೊಳ್ ಸಮಾನಸ್ಕಂಧನೆಯಪ್ಪುದಱಿಂ ನಿನ್ನೊಳ್ ಸಮಾನ ಗುಣಂಗಳುಮಂ ಸಾಮಾದ್ಯುಪಾಯಂಗಳು ಮನೊಡರ್ಚಿ ತದ್ವ್ಯಾಜದಿ ನಂತರಂಗ ಗವೇಷಣ ನಿಮಿತ್ತಂ ದೂತಚ್ಛದ್ಮ ಪ್ರಣಿಧಿಯುಂ, ನಾಯಿಕಾ ಪ್ರಾರ್ಥನಾದ್ವಾರದಿ ನಟ್ಟಿದ ನದಱಿಂ ನೀನು ಮಾತಂಗೆ ಸಾಮಪುರಸ್ಸರಂ ಪ್ರತ್ಯುಪಾಯನಂಬೆರಸು ಅನು ಮತನುಮಾಪ್ತನು ಮಧಿಗತ ಶಾಸ್ತ್ರನುಂ ಚತುರ ವಚನ ರಚನಾ ಪ್ರಪಂಚ ಕಂಚುಕಿತ ರೋಮಾಂಚ ಚುಂಚುಸಭಾಜನ ಶರೀರನುಮಪ್ಪ ದೂತಮುಖ್ಯನ ನಟ್ಟಿ ಬೞಿಯಂ ನೆಟಿಲೆಂತಾನುಂ ತಾನಾಡುವುದ ನಾಡುವುದೆಂದು ವಚನ ಸಂಕ್ಷೇಪಮು ಮನಱಿಯೆ ನುಡಿದು ಮಾಣ್ದು ಸನ್ಮತಿಯ ನುಡಿಯಂ ಕೇಳ್ದು ಮುನಿದು ಸಂವೃತಾಕಾರನುಂ ನಿಭೃತೇಂಗಿತನುಮಾಗಿ ದಕ್ಷಜನೋಪಲಕ್ಷಿತಾಕೂತನ ಪರಾಜಿತಾನು ಜನ್ಮಂ ನುಡಿವಾಗಳ್—

ಚಂ|| ಸುಕರತರಂ ವಚೋನಿಚಯ ಮಾರಯೆ ದುಷ್ಕರ ಮರ್ಥ ವಾರ್ತೆಮ |
ತ್ಯಕುಟಿಲ ಮಾಸ್ಯದೊಡ್ಡಭಿಮತಂ ಕುಟಿಲಂ ಋಜು ಬಾಹ್ಯವೃತ್ತಿ ವ ||
ಕ್ರ ಕಲುಷ ಮಂತರಂಗ ಮೆನೆ ಮೆಲ್ನುಡಿ ಪೊಣ್ಮಿರೆ ದಂತ ಸಾಂದ್ರ ಚಂ |
ದ್ರಿಕೆ ಪರಿಷತ್ಕುಮುದ್ವತಿಗೆ ಕಾಂತಿಯ ನಾಂತುದ ನಂತವೀರ್ಯನಾ || ೫೨ ||

ಇವ ನಟ್ಟಲೆ ನೆಟ್ಟನೆ ನೇ |
ಟ್ಟುವೆಂದು ಸಾಮ್ಯೈಕ ಗರ್ಭ ದಂಡೋಕ್ತಿಯಿ ನ ||
ಟ್ಟಿದು ದಿಮುಪೆ ಪೇೞಿದೋಂ ಪಡೆ |
ಯಮೊಡಾತನ ಮುನಿಸ ನಿನಿತ ನಱಿಯದ ರೊೞಲೆ || ೬೧ ||

ಗಾಣತ್ರಿಯ ರಿರ್ವರುಂ ಮ |
ತ್ತ್ರಾಣದಿ ನಗ್ಗಳ ಮವಱ್ರಿರಂ ಭಯ ವಶದಿಂ ||
ಕ್ಷೋಣೀಶಂ ಕುಡೆ ಕೊಳ್ಳದೆ |
ಮಾಣೆಂ ಹಲಿಯಾಣೆ ಪರಮ ದೀಕ್ಷೆಯನಾಗಳ್ || ೬೨ ||

ವ|| ಎಂದಿಂತು ಮುಳಿದು ಪಿಳಯ ವಿಳಸನ ವಿಲಗ್ನ ಪೌರುಷ ವೃತ್ತಿ, ವಿಷಣ್ಣನಾಗಿ ಮೊೞಗಿ ಮಾಣ್ದ ಮುಗಿಲಂತನಿತುಂ ನುಡಿದು ಮಾಣ್ದು ತಮ್ಮಣ್ಣನಭಿಪ್ರಾಯಮ ನಾರಯ್ಯಲೆಂದನಂತವೀರ್ಯ ನುಸಿರದಿರೆ—

ಉ|| ಈ ಕುಲ ವೃದ್ಧ ಮಂತ್ರಿಯ ಮತಂ ನೃಪ ನೀತಿಯೊಳೊಂದಿ ನಿಂದು ವ |
ವ್ಯಾಕುಲ ಮೀ ಕುಮಾರನ ಮತಂ ಚಲಮಂ ಪುದಿದಿರ್ದು ದಿಂತಿ ವೇ ||
ಕೈಕ ವಿರುದ್ಧ ಮೆಂದು ಭಯಪಕ್ಷ ವಿಲಂಭನದಿಂ ವಿಲೋಲ ಡೋ |
ಲಾಕುಲ ವೃತ್ತಿ ಯಾದು ದಪರಾಜಿತ ವೀರ ವಿರಾಜ ಮಾನಸಂ || ೬೩ ||

ವ|| ಅಂತು ಸುಪ್ತಮೀನಾಚ್ಛೋದಮಾನಸ ಸರೋಪಮಾನಂ ನಿಮೀಲಿತಲೋಚನಂ ಪ್ರಸನ್ನಾಪ್ರಾಶಯಂ ಕಿಱಿದು ಬೇಗಮ ನಿರ್ದು ತನ್ನ ಮನಮ ಮಧ್ಯಸ್ಥ ಮಂತ್ರಿಯಾಗಾಲೋಚಿಸಿ ನಿಶ್ಚಯಿಸಿ—

ಕಂ|| ಅತಿಶಯ ವರ್ಣಕ್ರಮ ಮೊಂ |
ದುತೆಱಂ ಪದ ರಚನೆ ಯೊಂದುತೆಱ ನರ್ಥ ಮದೊಂ ||
ದುತೆಱಂ ಬೆಡಗುಂ ಬೇಱೊಂ |
ದು ತೆಱಂ ನುಡಿಗೆನೆ ಮನಕ್ಕೆವರೆ ಹಳೆ ನುಡಿದಂ || ೬೪ ||

ಮ|| ಭುವನಸ್ಪೃಶ್ಯದಿ ನರ್ಥ ಶಾಸ್ತ್ರ ಪರಿಪಾಟೀ ವಾದ ವಾಚಾಟ ಪಾ |
ಟವದಿಂ ಗೊಟ್ಟಿಗೆಯಲ್ಲಿ ನಮ್ಮ ಸಭೆಯೆಲ್ಲಂ ಜೀಯ ಜೀಯೆಂಬ ಕೈ ||
ತವ ವಾದಿಚ್ಛೆಯಿ ನಾನಿದಂ ನುಡಿಯೆ ನೆನ್ನೆಂಬುಕ್ತಿಗಳ್ ಮಚ್ಚಲ |
ಪ್ಪುವೊ ಮೇಣಾಗವೊ ಮುನ್ನೆ ಕೇಳ್ದು ಬಿಸುಡಿಂ ಕೈಕೊಳ್ಳಿ ಮೇಂ ಮಂತಣಂ || ೬೫ ||

ವ|| ಅಂತು ವಿಯಚ್ಚರ ರಾಜನಾದಂದಿನ ವಿದ್ಯಾದೇವತೆಗಳ್ ಬಯ್ತಿಟ್ಟಂಗೆ ಪುಟ್ಟಿ ಕೋಳಿಪ ನಿಧಿಗಳಂತೀ ಭವದೊಳ್ ಎನಗೆ ಬೆಸಕ್ಕೆ ನಿಂದೊರ್ಱಿಗಳಾಗಿ ಬಂದು ನಿಂದು ವನಂತವೀರ್ಯಂಗಂ ತಜ್ಜನ್ಮ ವಿದ್ಯಾದೇವತೆಗಳ್ ಮೊೞಗಿನ ಬೞಿಯ ಮಿಂಚಿನಂತೆ ಬೞುವೞಿಯನೆ ಬಂದುವದು ಕಾರಣದಿಂದಾನು ಮೀತನುಂ—

ಮ|| ಉಪಮಾತೀತ ಮೆನಿಪ್ಪ ಗಾಣತಿಯರೊಂದಾಕಾರಮಂ ತಾಳ್ದಿ ರೂ |
ಪ ಪರಾವರ್ತನ ಮೆಂಬವಿದ್ಯೆಯಿ ನಭಿಪ್ರಾಯಂ ವಿಯದ್ಗಾಮಿ ಭೂ ||
ಮಿಪನೊಳ್ ಕೊಟ್ಟುದ ನಿಂತುಟೆಂಬಿನಿತ ನಾರಯ್ದನ್ನ ಬರ್ಪನ್ನ ಮಾ |
ಜ್ಞೆ ಪುರಂ ಮಂಡಲ ಮೆಂಬಿವರ್ಕೆ ನಿಮುತಲ್ತೇ ಶಿಕ್ಷೆಯುಂ ರಕ್ಷೆಯುಂ || ೬೬ ||

ವ|| ಪ್ರೋಡೆಡೆಯೊಳಸ್ಮದೀಯಕುಶಲವಾರ್ತೆಗೆ ತಲ್ಲಣಿಸಲ್ವೇಡೆಂದು ತನ್ನ ಮನೋಹಿತ ಕಾರ್ಯ ನಿಶ್ಚಯಮನಱಿಯೆ ನುಡಿದು ಮಂತ್ರಿಗಣದ ಮಂತ್ರಮುಂ ಮಾಣಿಸಿ ಕುಶಾಗ್ರೀಯ ಮತಿ ಪ್ರಭಾವಂ ಬಲದೇವಂ ನಿಜಾನುಜಸಮೇತಂ ಗಮನೋದ್ಯುಕ್ತನಾಗಿರೆ ತದೀಯ ಪ್ರಾಜ್ಯ ಸಾಮ್ರಾಜ್ಯ ನೌ ಕರ್ಣ ಧಾರಾಯಮಾಣನುಂ ಮಂತ್ರಿ ಸಂದೋಹ ವಿಶ್ರುತನು ಮಪ್ಪ ಬಹುಶ್ರುತನೆಂಬ ಮಂತ್ರಿಯಿಂತೆಂದಂ —

ಮ|| ಇದೆ ಮಂತ್ರೋಕ್ತ ಮವಶ್ಯ ಮಿನ್ನು ಟೀದ ಮಾಲಾ ಮಂತ್ರದೊಳ್ ಬಪ್ಪುದೇ |
ವ್ರದೊ ಪೇಟ್ ದೇವ ನಭಶ್ಚರೇಂದ್ರನೊಳಗಂ ನಿಶ್ಶೇಷಮಾರಯ್ಯು ಮಾ ||
ಣದೆ ತದ್ರಾಜಿತ ರಾಜ್ಯ ಲಕ್ಷ್ಮಿವೆರಸೆಟ್ಟಾ ತಮ್ಮನುಂ ನೀನು ಮು |
ಭ್ಯುದಯಕ್ಕಂ ವಿಜಯಕ್ಕ ಮಿರ್ವರಿ ವಿಶೇಷ ಸ್ಥಾನ ಮುರ್ವೀಶ್ವರಾ || ೬೭ ||

ಕಂ|| ಮೊದಲೊಳೆ ದೈವಜ್ಞರಿ ನಾ |
ಲಿದ ನಱಿದೆ ನಶೇಷ ಖಚರ ನಿಕರಂ ನಿನ್ನ ||
ಭ್ಯುದಯದಿ ನಟೀಗುಂ ಚಂದ್ರಮು |
ಸುದಯದಿ ನಳುರುವವೊಲ ತುಳ ತಿಮಿರ ಪ್ರಸರಂ || ೬೮ ||

ಜನಪತಿ ಬರವೇಟ್ಟಾ ದೊ |
ತನ ಮನಮುಂ ಕೊಂಡು ದಾನ ಸನ್ಮಾನದಿ ನಿಂ ||
ದಿನ ದಿವಸಮೆ ಬೇಡುವು ದಿರ |
ದನಂತವೀರ್ಯಂಗೆ ಗಗನ ಚರ ಪತಿ ಸುತೆಯುಂ || ೬೯ ||

ಇದಱ ತದನಂತರಂ ಮಾ |
ಣದೆ ಬಿಜಯಂಗೆಯ್ವು ದಿರ್ವರುಂ ತರ್ಸ ಮನಂ ||
ಚದುರುಳ್ಳೊ ಡೊರ್ವನಿಂ ದಱ |
ವುದು ಪಾರ್ಬಲ ಮಿರ್ಬರಿಂದ ಮಾಗದು ಮಂಟೆ || ೭೦ ||

ವ|| ಎಂದಪರಾಜಿತಾನಂತವೀರ್ಯರ ಮಾತ ನೊಡಂಬಡಿಸಿಟ್ಟು ರಹಸ್ಯದೊಳ್ ನಿಶ್ಚಯಿಸಿದ ಬಹುಶ್ರುತನ ಮಂತ್ರನಿಶ್ಚಯಮುಮಂ, ದೂರದರ್ಶಿತ್ವಮುಮಂ, ಪ್ರತಿಭಾಗುಣಮುಮಂ, ಪ್ರಜ್ಞರುಂ ನಿರ್ಮತ್ಸರರುಂ ಗುಣ ಗ್ರಾಹಿಗಳು ಮಪ್ಪುದಱಿಂ ಸಚಿವ ಸಮೂಹಂ ಮೆಚ್ಚಿ ಸಮಾಲೋಚನ ಗೋಚರ ಚರಾಚರಂಗೆ ಪರೋಕ್ಷಮೆ ಪ್ರತ್ಯಕ್ಷಮಲ್ತೆ ಯೆಂದು ಪರಮಾನಂದದಿಂ ದಭಿವಂದಿಸಿ ನಿರ್ಣೀತ ಮಂತ್ರರಾದ ಮಂತ್ರಿಗಣಮುಂ ಸನ್ಮಾನಪುರಸ್ಸರಂ ಕ್ರಮಂದಪ್ಪದೆ ವಿಸರ್ಜಿಸಿ ಮಂತ್ರ ಶಾಲೆಯುಂ ಪೊಱಮಟ್ಟು ಬಂದು ಸಭಾ ಭವನಮುಂ ಪೊಕ್ಕು ಸಿಂಹವಿಷ್ಟರಾರೂಢನಾಗಿ ಕೋಶಾಧ್ಯಕ್ಷನಂ ಬರಿಸಿ ಕಿವಿಯೊಳ್ಪೇಳ್ವುದು ಮಾತ ನವಗತಾದೇಶನಾಗಿ ಖೇಚರ ದೂತ ನಿವೇಶಮುಂ ಪುಗೆ ದೂತ ನಾತಂ ಗಿದಿರೆಯ್ದಿ ನಿಜಾಸನಾರ್ಧದೊಳ್ಕುಳ್ಳಿರಿಸಿ ಕರ್ಪೂರ ವಾರಿ ಪರಿಮಿಶ್ರಿತ ತಾಂಬೂಲ ದಾನ ಸಮೇತಂ ಸಭಂಷಿಸುತ್ತಮಿರೆ ತನ್ನ ತಂದ ದುಕೂಲಾಂಬರ ವಿಲೇಪನ ಮಾಲ್ಯಪೂರ್ವಕಂ

ಕಂ|| ತ್ರಿಜಗದ್ಭೂಷಣ ಮೆಂಬುದಿ |
ದಜಾತ ಪೂರ್ವಾಂಶುಮಾಲಿ ಕಂಠಾಭರಣಂ ||
ವಿಜಿತ ಶಶಿ ತಪನ ರೋಚಿ |
ರ್ವ್ರಜಂ ಪ್ರಭಾ ಸ್ಫುರಿತ ಗಗನ ದಿಗವನೀ ವಳಯಂ || ೭೧ ||

ವ|| ಎಂದು ಪಟಳ ನಿಹಿತ ಪರಾರ್ಧ್ಯ ರತ್ನಾಭರಣಮಂ ಮುಂದಿಟ್ಟೆಡಮಪ್ಪೊಡೆ ಮ್ಮರಸ ನನ್ವಯಾಗತಂ ಕುಲ ಧನ ಮಾರ್ಗಮದೀಯಮು ಮದ್ವಿತೀಯಮು ಮಿದು ನಿನ್ನ ಬರವಿಂಗಂ ಚಕ್ರವರ್ತಿಯನುರಾಗಕ್ಕಂ ತಕ್ಕುದೆಂದು ಮದೀಯನಾಥ ನಟ್ಟಿದ ನದಱಿಂದಂ ಪ್ರಭುಗೆ ಪ್ರೀತಿ ಭಂಗಂ ಮಾಡದೆ ಕೊಳ್ಪುದೆಂದು ನಿಜಕರಪಲ್ಲವದಿಂ ದೂತನ ಹಸ್ತ ಕಿಸಲಯಕ್ಕೆ ನೀಡುವುದು ಮಾತನದಂ ಕೆಯ್ಕೊಂಡು ನೀಡುಂ ಭಾವಿಸಿ ನೋಡಿ—

ಮ|| ಮನದೊಳ್ ಸಂತಸ ಮುಣ್ಮೆ ಪೊಣ್ಮೆ ಮೊಗದೊಳ್ ಕೈಗಣ್ಮೆ ರಾಗಂ ವಿಲೋ !
ಚನ ಮಾನಂದ ಜಲಾರ್ದ್ರಮಾಗೆ ವಿಭು ಮು ನ್ನಾವಂಗಿದಂ ಕೊಟ್ಟ ನಾ ||
ವನುದಾರಂ ಪೆಜನೀ ಧರಾಧಿಪತಿಯಿಂ ಮತ್ತೊರ್ವ ನಿಲ್ಲೆಂದ ಱೆ |
ತನ ಭೂತಂ ಬೆರಗಾಗಿ ತೂಗಿ ತಲೆಯಂ ಚೋದ್ಯಂಬಡುತ್ತಿರ್ಪನಂ || ೭೨ ||

ಕಂ|| ಕೊರಳೊಳ್ ಸಮರ್ದಿರ್ಕ್ಕೆ ಕಂಠಾ |
ಭರಣಂ ಮದಧೀರ ಗುಣ ವಿಭೂಷಣ ಪೆರ್ದೆಯೊಳ್ ||
ಸ್ಥಿರ ಮಿರ್ಕೆಂ ದಧ್ಯಕ್ಷದ |
ಕರಣಂ ಬರೆ ದೂತನೊಡನೆ ಬಂದೋ ಲಗದೊಳ್ || ೭೩ ||

ವಿನಯ ಭರದಿಂದ ಮೆಱಗಿದ |
ನೆನೆ ನರಪತಿಗೆಱಗೆ ವಿಭು ನಿಸೃಷ್ಟಾರ್ಥನ ನಾ ||
ಸನದೊಳ್ ಕುಳ್ಳಿರಿ ಮೆನೆ ದಾ |
ತನು ಪೊಸೆದು ಮಹಾಪ್ರಸಾದ ಮೆಂದಭಿಜಾತಂ || ೭೪ ||

ವ|| ಕುಳ್ಳಿರ್ದು ಕಿಱಿದು ಬೇಗದಿಂ ಭಕ್ತಿ ಭರಾ ನತೋತ್ತಮಾಂಗ ನಿಂತೆಂದು ಬಿನ್ನವಿಸಿದ ನಿನಿವಿಱಿದು ಸತ್ಕಾರಮುಂ ಪೆರ್ಗಡೆತನಂ ಬಂದ ನಾವನುಂ ದೇವರ ದೊರೆಯ ರಾಜಾಧಿರಾಜನೊಳ್ ಪಡೆಯ ನೌದಾರ್ಯ ಮಸಾಧಾರಣ ಮಿದೆಲ್ಲಂ ಚಕ್ರವರ್ತಿಯೊಳಪ್ಪ ನಿಮ್ಮ ನಿರತಿಶಯ ನಿರ್ಭರಾನುರಾಗ ಮೆಂತೆನೆ ತಂದೆಗೆ ಪುತ್ರಮೋಹಂ ಕಳತ್ರಸ್ನೇಹಮುಂ ಪ್ರಕಟಿಸುವಪೊಲಿಮ್ಮೊಳಪ್ಪ ಪರಮಾದರಮೆ ಪೇೞ್ಗುಂ. ನಿಮಗೆ ದಮಿತಾರಿಯೊಳವ್ಯವಚ್ಛಿನ್ನ ಪ್ರೀತಿಯಿಂ ದಮಿತಾರಿಗಂ ನಿಮಗ ಮಿನ್ನುಱ ಮಾಂಸ ಪ್ರೀತಿಯುಮಂ ನೀರ ಕ್ಷೀರ ನ್ಯಾಯಮುಮಂ ಮಾಡಿ ತಡೆಯದೆನ್ನ ಬರ್ಪುದ ನುಕ್ತಸಿದ್ಧ ಮೆಂದು ಬೀೞ್ಕೊಳ್ವುದುಂ ಬಹುಶ್ರುತನಿಂತೆಂದಂ—

ಕಂ|| ಅರಸ ನಱಿದೆಂ ಮಹಾಪುರು |
ಷ ರತ್ನದೊಳ್ ರತ್ನಮುಂ ತಗುಳ್ಚಿದನೊಕರಂ ||
ದೊರೆವೆತ್ತಿವೆರಡು ಮಿದೆ ಜೀ |
ವರತ್ನ ಮಿದ ಜೀವರತ್ನ ಮೆಂಬಿನಿತೆ ವಲಂ || ೭೫ ||

ಕಂ|| ನೆಱೆದಿರೆ ಗೌರವಮುಂ ಕಂ |
ಡಱಿಯದ ಪುರುಷಂಗೆ ಮಾಱ್ಪನೊಳ್ ಸುಜನತೆ ಕ ||
ಣ್ಡಱಿದುದು ಕಂಡಱಿದುಂ ಕೇ |
ಳ್ದಱಿದುಂ ಮಾತ್ಸರನೆ ಖಲನು ಮೋಂ ಮನ್ನಿಸನೆ || ೭೬ ||

ಖರಕಿರಣಂ ತೀವ್ರಂ ಶೀ |
ತರೋಚಿ ಜಡಮೂರ್ತಿ ಕಲ್ಪವೃಕ್ಷಂ ಸ್ತಬ್ಧಂ ||
ನಿರತಿಶಯ ಗುಣಂಗೀ ನೃಪ |
ವರಂಗೆ ದೊರೆಯಲ್ಲದಿರ್ಪುದೊಂದಚ್ಚರಿಯೋ || ೭೭ ||

**ವ**|| ಅದಱಿನಪರಾಜಿತಂಗೆ ಕಂಡಱಿವರೊಳಂ ಅಱಿಯದರೊಳಂ ಗುಣಸ್ವೀಕಾರ ಪರಿತ್ಯಾಗ ದೊಳೈಕರೂಪ್ಯಮಲ್ಲದ ನೈಕರೂಪ್ಯಮಿಲ್ಲ ಮಾತ್ಮಸ್ವಾಮಿ ಗುಣವರ್ಣನ ಮೆಮ್ಮಂದಿಗರ್ಗೆ ಪ್ರತ್ಯಕ್ಷ ದೊಳ್ ತಕ್ಕುದಲ್ತದಱಿಂದೆಲ್ಲಮೆಮ್ಮಸ್ಮನ್ಮಹೀಪಾಲಾನ್ವಯಕ್ಕಂ ದಮಿತಾರಿ ಮಹಾರಾಜಾಧಿರಾಜ ವಂಶಕ್ಕ ಮನಂತವೀರ್ಯ ಸಂಬಂಧ ಮುಂಟದ ನಱಿದು ತದೀಯ ಕುಲವೃದ್ಧರ್ ನಿಮಿರ್ಚಲುಂ ನಿರ್ವಹಿ ಸಲುಂ ಪೇೞ್ವುದುಭಯಕುಲಸಹಾಯತ್ವಮಿತರೇತರೋಪಕಾರದಿಂ ಸಂಗತದೊಳಾದುದುಮದ ನಲ್ಲಿಯ ವಯೋಧಿಕರೀಗಳು ಮಾಗಳು ಮಱಿವರಾದೊಡ ಮಿನಿಸೆಡೆಯಾಗಿರ್ದ ಸಂಬಂಧಮುಂ ನೀನಿರ್ದು ಪೊಸ ಯಿಸುವುದು. ಅನಂತವೀರ್ಯಕುಮಾರಂಗೆ ಚಕ್ರವರ್ತಿ ಸುತಾ ಪರಂಪರೆಯೊಳೊರ್ವಳ್ ನಪೂರ್ವ ಸರ್ವಾಂಗೀಣ ವಸ್ತುತ್ವಭಾಜನೆಯುಂ ಕುಡಿಸುವುದುಂ ಚಕ್ರಯುದ್ಧಕ್ಕೆ ದುಸ್ಸಾಧ್ಯ ಮಪ್ಪುದೊಂದು ಮಂಡಳ ಮುಳ್ಳೊಡ ಮೀಯಿರ್ವರಿಂದಮೆ ಸಾಧ್ಯಮಕ್ಕು ಮದಱಿಂ ಖೇಚರರಾಜಂಗೆ ಕೃತ್ಯಾಸಾಧ್ಯಕ್ಕ ಮಿವರಿರ್ವರೆ ಅಪಾರಭುಜಾಯಮಾನರೆಂಬುದನೆ ನಂಬುವುದಿಲ್ಲಿಂದಿತ್ತಿವರ ಯೋಗಕ್ಷೇಮ ಚಿಂತಾಂ ತರಮಂ ನೀ ನಱಿವೆ ಯೆಂದು ಬಹುಶ್ರುತ ನುಸಿರದಿರ್ಪುದು ಮದೆಲ್ಲಮ ನವಧಾರಿಸಿ ದೂತ ನಿಂತೆಂದಂ—

ಮ|| ಇದು ಮಚ್ಚಿತ್ತದೊಳಿತ್ತ ಮಚ್ಚಿಱಿದಪ್ಪೊಲುತ್ತಸ್ನಮಾಯ್ತಿನ್ನು ತ |
ನ್ನುದಯಪ್ರಾಪ್ತಿಗೆ ಚಕ್ರಿ ತಕ್ಕೆಡೆಗಳೊಳ್ ವೈವಾಹಿಕಂ ಕೂಡಿ ಬ ||
ರ್ಪುದ ನಾಪೇಕ್ಷಿಸುತುಂ ಸಹಾಯ ರುಚಿ ವಿಶ್ವಾಧಾರ ನುತ್ತುಂಗ ಭೂ |
ಭೃದಪಾರಾಂಬುಧಿವಸ್ತುಗಳ್ ಬಗೆವೊಡೀಲೋಕ ಕ್ಕಸಾಧಾರಣಂ || ೭೮ ||

ಕಂ|| ಆವಂ ಕುಡುವೊಂ ಕುಡಿಸುವ |
ನಾವೊಂ ಕುಡೆ ಪಡೆವ ನಾವೊ ನಿರ್ವರು ಮೆಕೀ ||
ಭಾವದಿ ನಿರೆ ನಿಮ್ಮೊಳಗಿನಿ |
ತಾವುದು ಭೇದಕ್ಕೆ ಪಕ್ಕು ಪೆಱತೇಂ ನೃಪತೀ || ೭೯ ||

ಮ|| ಸ್ರ|| ಮೊದಲೊಳ್ ಪೂಣ್ದೊಂದು ಕಜ್ಜಕ್ಕಧಿಪನ ಬೆಸದಿಂ ಬಂದು ಬೇಱೊಂದು ಕಜ್ಜ ||
ಕ್ಕಿದನೀಗಳ್ಗೊಟ್ಟಗೆಯ್ವಂ ದನುಚಿತ ಮೆನಗಿನ್ನೀ ಕುಮಾರಂಗೆ ಲಕ್ಷ್ಮೀ ||
ಸದನಂ ಗಾಕನ್ನೆಯುಂ ಮುಂ ಕೊಡಿಸುವೆ ನದ ನಿಲ್ಲಿರ್ದು ಪೂಣ್ದೆಂ ನೃಪಂ ತ |
ಕ್ಕುದನೇ ನಾಂ ಪೇೞೆ ಮಾರ್ಕೊಂಡಪನೆ ಶಿಶುಗಳುಂ ಪೇೞ್ ಮಾರ್ಕೊಳ್ವ ದಾತಂ ||೮೦||

**ವ**|| ಎಂದು ಮಾರ್ಕೊಂಡನಂ ವಿಸರ್ಜಿಸಿ ಕಿಱಿದಾನುಂ ಬೇಗದಿಂ,

ಕಂ|| ಬಳದೇವ ವಾಸುದೇವರ |
ವಿಳಾಸಿನೀ ಯುಗದ ರೂಪಮಂ ನಿಜ ವಿದ್ಯಾ ||
ಬಳದಿಂ ಕೆಯ್ಕೊಳೆ ಪರಿಜಿ |
ಕುಱಿಗೊಂಡುದು ನೋಟ್ಪ ನೋಟಕರ್ಕಳ ಮನಮಂ || ೮೧ ||

**ವ||** ತದನಂತರಮೆ ಬಹುಶ್ರುತ ಮಂತ್ರಿ ಮಂತ್ರರೂಪ ನಿಷ್ಪಾದಿತ ಮಾಯಾ ಗಾಣೆತಿಯರ ನಮಿತಂಗೆ ತಱಿಸಿಕೊಟ್ಟು "ಇವರಪ್ಪೊಡೆ ವಿದ್ಯಾದೇವತಾತ್ಮಿಕೆಯರ್, ಶ್ರವಣೀಯೆಯರಲ್ಲ ದನುಭವನೀಯೆಯರಲ್ಲರ್, ಅತ್ಯಂತ ಶುಚಿಗ ಳೇಕಾಂತ ನಿವಾಸ ನಿರತೆಯರ್ ನಿರತಿಶಯ ಚರ್ಯಾ ಮಪೂರ್ವಕ ಮನುಗಾಮ್ಯೆಯರಾಗ ಮೆಱಗುವವ ರಲ್ಲ ರೀಸ್ಥಿತಿಯೊಳ್ ಮದೀಯ ಧರಣೀವಲ್ಲಭನುಂ ಪ್ರತಿಪಾಲಿಸುವ ನದಱಿಂ ಯಥೋಚಿತವಿಧಿಯಿಂದಮೆ ಕೈಕೊಳ್ವುದೆಂದಪ್ಪೈಸಿ ಕಳಿಪಿ ಮಗುಳ್ದು ಬಂದು ನಿಜನೃಪರಾಜ್ಯರಕ್ಷಣದೊಳಿರ್ದಂ, ದಮಿತಾರಿದೂತನುಂ ನಿಜವಿಮಾನಾರೂಢನಾಗಿ ಗಾಯಿಕಾದ್ವಯಮುಮಂ ಬಂದೆಱು ಮನೆ--

ಉ|| ಏಱಿ ವಿಮಾನಮಂ ಕೃತಕ ಗಾಯಿಕೆಯರ್ ಧವಳಾಭ್ರ ಕೂಟದೊಳ್ |
ತೋಱುವ ಮಿಂಚಿನಂತೆ ಮುಗಿಲೊಡ್ಡೊಡೆ ದಿಬ್ಬಗಿಯಾಗಿ ನಿರ್ಝರಂ ||
ಪಾಱಿ ಪತಾಕೆಗಳ್ ಮಗುಳ್ದು ಮಿಳ್ಳಿಸಿ ದಳ್ಳಿಱಿದಾಡೆ ಯಾನಮಂ |
ಕೀಱುವುದೋ ನಭಃಪ್ರಸೃತಿ ಗಿಟ್ಟಿಡೆ ಯಿಟ್ಟಿಡೆ ಯಾದು ದೆಂಬಿನಂ || ೮೨ ||

ಕಂ|| ಮನಮ ನವಡಿಸಿ ಗರುಡನ |
ಮನಿಲನುಮಂ ಜವದ ನುಳಿಯೆ ಮೆಂಬಂತೆ ನಭೋ ||
ವನ ನಿಧಿಯೊಳ್ ಪರಿದುದು ಪಂ |
ವ ನಾವೆಯಂತಿರೆ ವಿಭಾಸಮಾನ ವಿಮಾನಂ || ೮೩ ||

**ವ||** ಅಂತು ಪರಾರ್ಥ್ಯಮಪ್ಪ ಸ್ತ್ರೀರತ್ನಮಂ ಪೇಱಿದ ಪಾಱನೆ ಪೋಲ್ತು ಕೀಱಿ ಪಾಱುವ.

ಕಂ|| ಅಮಿತ ರಯ ಗಮನ ಖೇಚರ |
ವಿಮಾನ ಕೇತನದ ಕೋಳೊಳಂಬುದ ಮುಕ್ತಾ ||
ಸಮುದಯ ಮುದಿರ್ದೊಪ್ಪಿದು ವ |
ಭ್ರ ಮಾರ್ಗದಿಂ ಸುರಿವ ಕರಕ ವೃಷ್ಟಿವೊಲನಿಸಂ || ೮೪ ||

ಆ ವಿತತ ವಿಮಾನ ವಿಟಂ |
ಕಾವಳಿ ಕೊಳೆ ಪಱಿದ ಮುಗಿಲ ಜಲ ಕಣ ಗಣ ಶೈ ||
ತ್ಯಾ ವಿಷ್ಕೃತ ಪವನಂ ನಾ |
ನಾ ವಿಧದಿಂ ಕಳೆದು ದವರ ಗಮನ ಶ್ರಮಮಂ || ೮೫ ||

**ವ||** ಅಂತಾಗಾಯಿಕಾಚ್ಛದ್ಮರ್ ಬಲದೇವ ವಾಸುದೇವರ್ ಬರೆ ವರೆ.

ಕಂ|| ಅಮರ ಮೃದಂಗಂ ತನ್ನಿಂ |
ದಮೆ ತಾನುಲಿದತ್ತು ಸುರರ ಸುರಿಯದೆ ಸುರಿಯೆ ||
ತ್ತಮೃತದ ಸಱಿ ಸಂತಾನಕ |
ನಮೇರು ಮಂದಾರ ಪಾರಿಜಾತ ಸಮೇತಂ || ೮೬ ||

ಎಸೆದಂಪು ದಶದಿಸೆ ಪವನಂ |
ಕಸವಂ ಕಸಗಳೆದು ಮೆಲ್ಲಮೆಲ್ಲನೆ ತೀಡಿ ||
ತ್ತೊಸಗೆಯು ಮುತ್ತವಮುಂ ಸಂ |
ತಸವುಂ ಸಚರಾಚರಕ್ಕೆ ವಿಜಯಾದ್ರಿಯೊಳ್ || ೮೭ ||

ವ|| ಅಂತ ಪೂರ್ವಮಂಗಳಾಶ್ಚರ್ಯಂಗಳ ಪರಾಜಿತಾನಂತವೀರ್ಯರ ಬರವನುಪಲಕ್ಷಿಸಿ ತಾಮನುಪಲಕ್ಷಿತಂ ಮಾಡೆ ಗಗನಗಮನದಿಂ ಮನಃಪವನಜವದಿನೆಯ್ದಿ ರಜತಾಚಲದ ನಿತ್ಯಾಭಿನವ ನವಕೂಟಕೋಟಿ ವಿಟಂಕಕಮನೀಯ ಶೋಭಾ ಲಕ್ಷ್ಮಿಯ ನಸತಿದೂರಾಂತರದೊಳ್ ಕಂಡಮಿತಂ ಕೃತ್ರಿಮ ನಾಯಿಕಾ ಮುಖಕಮಲ ವಿಲೋಕನಾನಂತರ ಮಿಂತೆಂದರ್—

ಮ|| ಗಗನಾಭಾಗಮನೆಯ್ದೆ ಮೂಡಿ ಪದು ಮಿಕ್ಕಿನ್ನಂತೆ ಪೂರ್ವಾಪರಾ |
ಬ್ಧಿಗಳಂ ಮುಟ್ಟಿದು ದಿಲ್ಲ ಶಕ್ರಭವನಾಧಿಷ್ಠಾನಮಾಗಿರ್ದ ದಾ ||
ನಗರಾಜಂ ಜಿನಚೈತ್ಯಕೋಟಿ ಗಡಿಗಲ್ ತಾನೆಂದು ರೂಪ್ಯಾಶ್ಮ ರ |
ಶ್ಮಿಗಳಿಂದಂ ನಗುವಂತುಟಾಯ್ತು ವಿಜಯಾರ್ಧಾದ್ರೀಂದ್ರ ನದ್ರೀಂದ್ರನಂ || ೮೮ ||

ವ|| ಅದಲ್ಲದೆಯುಂ—

ಕಂ|| ಈಗಿರಿಯ ದಕ್ಷಿಣೋತ್ತರ |
ಭಾಗಂಗಳೊಳಮರ ಪುರಮ ಬೀಱಲ್ವೆಟ್ಟಿಂ ||
ತಾಗಿರ್ದಂ ಬರಚರಪುರ |
ಭಾಗಮ ಪರಭಾಗ ಮೆನಿಪ್ಪುದ್ಯಾನಂಗಳ್ || ೮೯ ||

ಅಳಿ ಮತ್ತಾಳಿಯ ಗಿಳಿ ಯರ |
ಗಿಳಿಯ ನವಿಲ್ ಸೋಗೆ ನವಿಲೆ ಸುಱಿ ದೆಸೆವ ಸಿಲಂ ||
ಮಳಯಾನಿಳನ ಕೊಳಂ ತಿಳಿ |
ಗೊಳನೆ ಕುಜಂ ಕಲ್ಪಕುಜಮ ಸುತ್ತಲು ಮಗದಾ || ೯೦ ||

ಎಳನೀರುಂ ಶಶಿಕಾಂತಕಾಂತಜಲಮುಂ ತಳ್ತೊಯ್ಯೆ ಕೇಳೀವನಾ |
ವಳಿಗಂ ಶಾಳಿವನಾಳಿಗಂ ಪರಿಯೆ ಶೈಲೇಂದ್ರಾನಿಳಂ ತೀಡೆ ಬ |
ಳ್ಳಿಗಳ ನಿತ್ತರಿಯೆ ಪೂದಳ್ದು ತಳ್ತೆಳಸಿ ಮೂಜುಂಕಾಲಮುಂ ಕುಂಪದೀಂ |
ಬೆಳೆಯುತ್ತುಂ ಬಳೆಯುತ್ತುಮಿರ್ಪುವು ಗಿರೀಂದ್ರೋಪತ್ಯಕೋತ್ಸಂಗದೊಳ್ || ೯೧ ||

ವ|| ಮತ್ತಮಲ್ಲಿಯ ಪಿರಾಜಿತಾ ಮಹೇಶ್ವರಾಂತರ್ವರ್ಣಂಗಳಪ್ಪ ನಂದನವನಂಗಳೊಳ್—

ತ್ರಿಪದಿ|| ಸಹಕಾರಾಸಾರಾಸೋಕಹದ ಮದಪಿಕನಿ |
ವಹ ಭಾಷಣಂಗಳು ಮೆಸೆದುವು ಕಿನ್ನರ |
ಕುಹರಣ ದೊಡನೆ ಸಣಸುತ್ತುಂ || ೯೨ ||

ಮದನ ದಾವಾಗ್ನಿಯಂ ನದಿಪೆ ವ್ಯಾಡಿದ ಕಾಮ |
ನದಿ ಯೆನಿಸುವುವು ದಿವಿಜ ದಂಪತಿ ರತ |
ದೊದವಿದ ರತದ ಪದ ನಲ್ಲ || ೯೩ ||

ಕಂ|| ಆ ಪೊೞ್ತುಂ ಮಧುಪ ಕಳಾ |
ಳಾಪಮೆ ಮೃದು ಗೀತಿ ಮರ್ಮರ ಧ್ವನಿ ಪಱಿ ಯಾ ||
ಗೀಪವನಂ ಲತಿಕಾ ಲಾ |
ಸ್ಯೋಪಾಧ್ಯಾಯತೆಯ ನಱಿಪಿ ತೀಡುಗು ಮಗದೊಳ್ || ೧೦೧ ||

ಅಂಬರ ಚರ ಮಿಥುನ ರತಾ |
ಡಂಬರ ದೊಡ ನೊಗೆದ ನಗದ ಮೂರ್ದನಿ ಕಿವಿಗಂ ||
ತಿಂಬಿ ಮನೋಜಾ ಗಮ ಗುರು |
ವೆಂಬುದ ನೊಡನೆಂಬ ಶಿಷ್ಯನಂ ಪೋಲ್ತಿರ್ಕುಂ || ೧೦೨ ||

ಪೊಸವಱಿಕಿನ ಸೆಲೆಯೊಳ್ ನೆಟ |
ಲಿಸೆಯೆ ಮೊಗಂ ಬೊಕ್ಕು ಸಾಯ್ದು ಕರಿಯುಂ ಹರಿಯುಂ ||
ಪೊಸವೋರ್ತ ಮನಱಿಯುಮೆ ಪು |
ಟ್ಟಿಸೆ ನೆಟಿಲೊಳ್ ಪೋರ್ದು ಸೇದೆಗಿಡುವುವು ನಗದೊಳ್ || ೧೦೩ ||

ವ್ಯಾಳ ವನ ಗಜದ ಪೋರ್ತದ |
ಕೇಳಿಗೆ ವಿಜಯಾರ್ಧ ಶೈಲಪತಿ ಸವೆಯಿಸಿ ತಂ ||
ದೋಳಿಯೆ ನಿಱಿಸಿದ ಜೆಳ್ಳಿಯ |
ಲಾಳಾವಿಂಡಿಗೆವೊಲಿರ್ಪು ವಿದಱಿ ಮಡಲ್ಗಳ್ || ೧೦೪ ||

ಚಂ|| ವನಗಜಯೂಥಮಳ್ಕಿ ಪೆಱಗಿದಿರ್ದರದೊಡ್ಡಱಿದೋಡುವಲ್ಲಿ ದಂ |
ತಿನಿ ವೊಲೆಯೂಡೆ ನಿಂದು ನಿಜಪೋತಮ ನಾಗಳೆ ಸಿಂಹ ಮೊಯ್ದು ಹ ||
ಸ್ತಿನಿಯ ನವಜ್ಞೆಗೆಯ್ದು ಕರಿಯೂಥಮ ನಟ್ಟುವು ದಿಲ್ಲಿ ತದ್ವಶಾ |
ತನಯವಿಮೋಹಮುಂ ಹರಿಯ ವಿಕ್ರಮ ದಾಯಮು ಮೋನುದಾತ್ತಮೋ || ೧೦೫ ||

ವ|| ಮತ್ತಮಲ್ಲಿ—

ಕಂ|| ಸುಱಿಪುಳಿದೆಳಸೆ ಭಯಂ ಬಱಿ |
ವಱಿಯ ನಣಂ ಬಿಡದೆ ಯೂಥಮಂ ಸಲೆ ಕಾದುಂ ||
ಕಱಿಪಿಯು ಮಿಭರಿಪುವಂ ತ |
ಕ್ಕಱಿವಿನೆಗಂ ನೊಂದು ನಿಂದು ಕೊಂದು ದಿಭೇಂದ್ರಂ || ೧೦೬ ||

ನಡೆ ನಖಮುಂ ಕೋಡುಂ ಕೊಳೆ |
ಕುಡುದಾಡೆಯು ಮುಗುರು ಮಱಿಯೆ ಮುಳಿಸಿಂ ದೆರಡುಂ ||
ಕಡುಗಡುಪಿನಂಕದಾಂತೊಡ |
ಮಡಿದುವು ಗಿರಿವರದೊಳುಗ್ರ ಕರಿಯುಂ ಹರಿಯುಂ || ೧೦೭ ||

ಕುದಿದಿರದೆಡೆಯಿಂ ಕೊಲಲೊ |
ಡ್ಡಿದ ಪರಿಭವ ದಂಕದಂತೆ ಪೊಕ್ಕಡಿಗಿಡೆ ಸಾ ||
ರ್ಚಿದ ಮದ ರದನಿಗೆ ಶರಿ ನಿ |
ಲ್ಲದೆ ನಿಚ್ಚಟಗಲಿಗೆ ಪೆಸರ ಕಲಿ ನಿಂದಪನೇ || ೧೦೮ ||

**ವ||** ಮತ್ತಂ ಕೆಲವೆಡೆಯೊಳ್ ನಾಗರಕ ಗಗನಚರಕ್ರೀಡನ ಶೀಲಕುಮಾರಕರ್ ಸುಕುಮಾ ವಚನ ರಚನೆಗಳಿ ನುಪಲಾಲನೆ ಗೆಯ್ದು—

ಕಂ|| ಅಪ್ಪಳಿಸಣ್ಣನ ನಪ್ಪಳಿ |
ಸಪ್ಪಳಿಸೆಂದಿರದೆ ತಮ್ಮ ತೊಡೆಯಂ ತಳದಿಂ ||
ದಪ್ಪಳಿಸೆ ಪೋರ್ದು ಪಱಿವಱಿ |
ಯಪ್ಪುವು ವನಕರಿಗಳಟ್ಟಿ ಗಂಬರಚರರಾ || ೧೦೯ ||

**ವ||** ಅಂತುಮಲ್ಲದೆಯುಂ—

ಮ|| ಕರಮಂ ಪೇಱಿ ರಣಂಗಳೊಳ್ ತೆಱಿದು ಕರ್ಣಾಪ್ತಂದ್ಯಮುಂ ತಾವು ಘೀ |
ಕರಮಂ ಬಿಚ್ಚನೆ ಬಿಟ್ಟು ಕಣ್ಣ ನೆರಡುಂ ನೀಳಂಬಿಸುತ್ತೊಳ್ದಡಂ ||
ಬರದೊಳ್ ನಿಂದು ಗಜಪ್ರಿಯಾಂಬರ ಚರರ್ ಜೀಯಯ್ಯ ಭಾಪ್ಪೆಂದು ಜೀಂ |
ಕರಿಪನ್ನಂ ವನದಂತಿ ಪೋರ್ವುದು ನಿಷಾದ್ಯಾರೂಢದಿಂ ಪೋರ್ವನ್ತೊಲ್ || ೧೧೦ ||

ಕಂ|| ಚಪಳಕಪಿ ವನ ಮದಾನೇ |
ಕಪಕ್ಕೆ ಪಕ್ಕಾಗೆ ಪೊಕ್ಕು ತಾಂ ಭಸ್ತ್ರಿಕವೆಂ ||
ದಪಹಸ್ತ ಮಿಱಿಯೆ ಕೈಪಿಡಿ |
ಗೆ ಪೊಕ್ಕ ಗುಬ್ಬಿವೊ ಲುರುಳ್ದು ನಗಿಪುದು ನಗದೊಳ್ || ೧೧೧ ||

ವನಕರಿ ಫೇಯೆನೆಯುಂ ಹೋ |
ಯೆನೆಯುಂ ಖೇಚರರಿ ನಱಿದು ಕೈಕೊಂಡು ಕುಚಂ ||
ದನದೊಳ್ ಶೀತದ ವಾರಿತ |
ವನಿತುವ ದಾವದದ ತೆಜನ ನಱಿಪುವು ದಗದೊಳ್ || ೧೧೨ ||

**ವ||** ಮತ್ತಮತ್ಯಂತ ಕಾಂತ ಮೇಖಲಾ ಘಾತ ಮಳಿನ ಪುಳಿನ ನಳಿನ ವಿರಾಜಮಾನಾ ನೂನ ಪ್ರದೇಶಂಗಳೊಳ್—

ಕಂ|| ಕೆಲವೆಡೆಯ ತಮಾಳದ ಕ |
ಟ್ಟಲೆ ಗರ್ಕಮರೀಚಿ ಮಾಲೆ ತಲೆದೋಱವು ಕ ||
ಣ್ಬೊಲದೊಳ ಮಿರುಳೊಳ್ ಮೊಲಗ |
ಟ್ಟಲೆ ಚಂದ್ರದ್ಯುತಿಗೆ ಕಾಳ ತಾಳೆ ವನದೊಳ್ || ೧೧೩ ||
ಕೆಲಕೆಲವೆಡೆಯೊಳ್ ಕಾಂಚನ |
ಶಿಲೆ ಸುರಗಿರಿ ಬೆಸಸೆ ಪರಿಮಿತಾರ್ಥಂ ಬಂದೆಂ ||
ನೆಲಸಿದುವೊ ಪೇೞಿ ಮಿಾತ |
ಟ್ಟಿಲೊಳೆನಿಪುವು ಮಹಿಮೆಗಿಂತು ನೋಂತ ಗಮೊಳವೇ || ೧೧೪ ||
ಅಂತಲ್ಲದೆಯುಂ ಧನವ ನ |
ಗಂ ತನಗಟ್ಟಿದೊಡೆ ರಾಯಭಾರಿತನಂ ಬಂ ||
ದಂತಿರ್ಪು ವಿದರ ಕುಂಜೋ |
ಪಾಂತಂ ಥಳಥಳಿಸಿ ಬೆಳಗೆ ಕುಳಿಶಾಶ್ಮಂಗಳ್ || ೧೧೫ ||

**ವ**|| ಅಂತಾಶ್ಚರ್ಯಭೂತೋಚ್ಚಾನಚೋಪಚಿತ ಸಚೇತನೇತರ ವಸ್ತು ವಿಸ್ತಾರ ಪರಂಪರೋದಾರಮಪ್ಪ—

ಕಂ|| ಇವರುಭಯ ಶ್ರೇಣಿಗಳೊಳ |
ಮವಭ್ರ ರಜತಾಶ್ಮ ಕೂಟ ಕೋಟಿಗಳ ಬೆಡಂ ||
ಗೊದವಿ ಸಿಲೆ ನೆಱಿಯೆ ಕಣ್ಗೊ |
ಪ್ಪಿದುವು ಸುಧಾಚ್ಛುರಿತ ರಮ್ಯ ಹರ್ಮ್ಯಾವಳಿಗಳ್ || ೧೧೬ ||

**ವ**|| ಈ ವಿಜಯಾರ್ಧ ಪರ್ವತ ದೆಱಂಕೆಗಳೆನಿಸಿದ—

ಮ|| ಸ್ರ|| ಎರಡುಂ ವಿದ್ಯಾಧರ ಶ್ರೇಣಿಯೊ ಳೆಡೆಯೆಡೆಯೊಳ್ ಜೈನಚೈತ್ಯಾಳಿ ತಳ್ತಂ |
ಬರಮಂ ತಳ್ಕೈಸಿ ನಾನಾಮಣಿ ಕಿರಣ ಗಣ ಜ್ಯೋತಿಗಳ್ ಜ್ಯೋತಿರಂಗ ||
ಸ್ಫುರಣ ಕ್ಕಾಸ್ಫೋಟಿಸುತ್ತುಂ ಬೆಳಗೆ ರಜತ ಶೈಲೇಂದ್ರ ಮುನ್ನೀತ ಭಂಗಂ |
ಗಿರಿರಾಜಂ ಗೊಟ್ಟ ಜಂ ಗೊಟ್ಟಪ್ಪೊ ಲೆಸೆದು ಪದೆಂ ದಿವ್ಯಮೋ ಜೈನಗೇಹಂ || ೧೧೭ ||

ಕಂ|| ಅಮರಾಭ್ಯರ್ಚ್ಯಂಗಳ್ ಸುರ |
ವಿಮಾನ ಪರಿವೇಷ್ಟನಾ ಭಿರಾಮಂಗಳ ನು ||
ಕ್ರಮದಿಂ ದೆಸೆದಿರ್ದ ವಕ್ಕೈ |
ತ್ರಿಮಂಗ ಳೀಗಿರಿಯ ಜೈನ ಚೈತ್ಯಾವಳಿಗಳ್ || ೧೧೮ ||

ಮ|| ಎನೆ ರೂಪ್ಯಾಚಲ ರಮ್ಯ ಸೌಮ್ಯ ನವ ಕೂಟಾಗ್ರಂಗಳೊಳ್ ತೋರ್ಪ ಕಾಂ |
ಚನ ವರ್ಣಾಂಚಿತ ಪಂಚರತ್ನಮಯ ಶೋಭಾಭಾಸಿ ಗಂಭೋದ ಕ್ಕಂ ||
ದನಿಕೀರ್ಣಧ್ವಜರಾಜಿ ಗತ್ಯಮಲ ಚೇತಶ್ಶಕ್ತಿ ಭಕ್ತಿ ಪ್ರಬೋ |
ಧ ನೆಯಿಂ ಜೈನಗೃಹಾಳಿ ಗಂದೆಱಗಿದಂ ಸೌಜನ್ಯ ಕಂದಾಂಕುರಂ || ೧೧೯ ||

— **ಗದ್ಯ** —

ಇದು
ಜಿನೇಂದ್ರ ಚರಣ ಸರಸೀರುಹ ಶಿಲೀಮುಖಾಯಮಾನ
**ಶ್ರೀಮದುಭಯಕವಿ ಚಕ್ರವರ್ತಿ**
ನಿರ್ವರ್ತಿತಮುಂ
**ಅಮ್ಮನಭಕ್ತಾಭಿಧಾನಮಲ್ಲಪಾರ್ಯ**
ತದನುಜಾತಾಭಿಜಾತ ಸಾರಸ್ವತ
ಪುನ್ನಮಾರ್ಯ ಕಾರಿತಮುಮಪ್ಪ
**ಪುರಾಣಚೂಡಾಮಣಿಯೊಳ್**
ದ್ವಿತೀಯಾಶ್ವಾಸಂ.

|| ಶ್ರೀ ||

# ಶಾಂತಿಪುರಾಣಂ.



## ತೃತೀಯಾಶ್ವಾಸಂ.

ಕಂ|| ಶ್ರೀ ರಮಣಂ ಜಿನ ಚಂದ್ರ ನು |
ದಾರಂ ಜಿನಭವನ ಸಮಿತಿ ಗತ್ಯುತ್ಸವದಿಂ ||
ಸೀರಧರ ನೆಱಿಗೆ ಶೇಷ ವ |
ಚೋ ರಚನೆಗೆ ಖಚರ ಪೋತ ನುದ್ಯತ ನಾದಂ || ೧ ||

ಮತ್ತಿ ದಱಿಕ್ಕೆಲದೊಳ್ ಸೆಱ |
ಸುತ್ತುಂ ದಿವಮಂ ನಗುತ್ತು ಮುಪಹಾಸ್ಯಂಗೆ ||
ಯ್ಯುತ್ತುಂ ಸೊಗಯಿಪು ವಯ್ದು |
ತ್ತಿತ್ತಱುವತ್ತತ್ತ ಖೇಚರೇಂದ್ರ ಪುರಂಗಳ್ || ೨ ||

**ವ**|| ಅಂತುಭಯ ಶ್ರೇಣಿಗಳೊಳಂ ನೂಱುಪತ್ತುಂ ಪೊೞಲ್ಗಳ ನೊಳಕೊಂಡೆರಡುಂ ತಳ್ಪಳ ವಿದ್ಯಾಧರಾಸ್ಪದಂಗಳೊಳ್ ಮೊಗಕ್ಕೆ ಮೂಗುಂ, ಆಭರಣಕ್ಕೆ ನಾಯಕ ಮಣಿಯು ಮೆಂಬಂತೆ ಖಚರ ಲೋಕಕ್ಕೆ ನಾಭಿ ಯಾಗಿರ್ದುದು ಚಕ್ರವರ್ತಿಯ ರಾಜಧಾನಿ ಶಿವಮಂದಿರಪುರ ಮಾತೋಪ್ಪಿದೆ ನೋಡಿ ಮಿದಱುಪವನದೊಳ್—

ಮ|| ಪಿಕ ಕೋಲಾಹಳ ಮಲ್ಲದಿಲ್ಲ ಪೆಱದುಂ ಕೋಲಾಹಳಂ ನಾಗಚಂ |
ಪಕ ಗಂಧೋದ್ಗಮ ಮಲ್ಲದಿಲ್ಲ ಪೆಱದುಂ ಗಂಧೋದ್ಗಮಂ ಭೃಂಗ ಗಾ ||
ಯಕ ಗೀತಸ್ವನ ಮಲ್ಲದಿಲ್ಲ ಪೆಱದುಂ ಗೀತಸ್ವನಂ ರಾಜ ಕೀ |
ರಕ ವಾಕ್ಪಾಟವ ಮಲ್ಲದಿಲ್ಲ ಪೆಱದುಂ ವಾಕ್ಪಾಟವಂ ಸುತ್ತಲುಂ || ೩ ||

ಕಂ|| ಎನೆ ಎನೆ ತಳರ್ದಿ ದಿರ್ವಂದು ಪ |
ವನ ಪವನಂ ತದ್ವಿಮಾನ ಗತ ವದನ ಸ್ವೇ |
ದ ನವ ಜಲ ಕಣಗಣಾಂಭಮು |
ನಿನಿಸಾ ರಿಸಿದುದು ಪಯೋದ ಮಾರ್ಗಾಗಮದೊಳ್ || ೪ ||

**ವ**|| ಅಂತು ಬಂದು ಶಿವ ಮಂದಿರ ಪುರಮ ನೆಯ್ದಿ—

ಕಂ|| ಅಗಳಾಭಾಗಂ ಲವಣಾ |
ಬ್ಧಿಗೆ ಸಣ್ಪಿನ ತಿಣ್ಪು ನೆಗೞ್ದ ಕಾಳೋದಕ ವಾ ||
ರ್ಧಿಗೆ ನೀರ ತೆಳ್ಪು ದುಗ್ಧಾ |
ಬ್ಧಿಗೆ ದೊರೆ ರಿ ಪೊಲ್ಪೆ ಯೆಂಬೆ ನಱಿಯೆಂ ಪೊಗೞಲ್ ೫ || ||

ಕಂ|| ಪ್ರಾಕಾರಂ ರಾಜಿತವ |
ಜ್ರಾಕೀರ್ಣಂ ಲವಣಜಲಧಿ ವೇದಿಕೆಯ ದಱಿಂ||
ದಾಕಾರಂ ಗೋಪುರಮುಚ |
ಳಾಕಾರಂ ದ್ವಾರಮುದು ಪವರ್ಣ್ಗಂ ಕರ್ಣ್ಗಂ || ೬ ||

## ತ್ವರಿತರಗಳೆ

ಅದಱೊಳಗಣ ಗಣನಾತೀತರಮ್ಯ |
ಮಣಿಕನಕರಜತಪರಿಖಚಿತಹರ್ಮ್ಯ || ೧ ||
ಪ್ರಾಕಾರ (ಂಕರ) ಮೊಪ್ಪುಗುಮಪ್ಪುಕೆಯ್ಯು |
ಚೆಲ್ವಂ ಸುರಪುರಮು ನವಜ್ಞಗೆಯ್ಯು || ೨ ||
ಗಣಿಕಾವಾಟಂಗಳ್ ಸರಿಪ ಲೀಲೆ |
ಮದನಾಧಿರಾಜ ವಾಸಮನೆ ಪೋಲೆ || ೩ ||
ದೇವೋತ್ತರಕುರು ದಂಪತಿ ಶತಕ್ಕೆ |
ದೂರೆ ಚದುರ ಮಿಥುನಮೆನ್ನಭಿಮತಕ್ಕೆ || ೪ ||
ವಿಪಣಿ ಪ್ರಕರಂ ಧನದಾಲಯಕ್ಕೆ |
ಮಿಗಿಲೆನಿಪುದು ಬಹುಧನಸಂಚಯಕ್ಕೆ || ೫ ||
ದೇವಾಲಯ ತತಿಯ ಜಿಡಂಗಳುಂಬ |
ಮಾಱದದಂ ಲಂಘಿಸಲರ್ಕಬಿಂಬ || ೬ ||
ಮಱಗೆಱೆ ಕೆಱೆ ಮಾವಿ ವ್ಯಾಪೆ ನೋಡ |
ತರುಸುರತರು ಕೊಡುಪುವು ಬಂದು ಬೇಡೆ || ೭ ||
ತಾಮರೆ ಪೊಂದಾಮರೆ ಕಲ್ಪಲತೆಯ |
ಲತೆಯೆಲ್ಲಂ ನೋಟಿಪ್ಪಡದೊಂದು ಕತೆಯ || ೮ ||
ಮದಕರಿಗಳ್ ವಿಜಿತೈರಾವತಂಗ ||
ಳಶ್ವಂಗಳಧಿಕಸತ್ವಾನ್ವಿತಂಗ || ೯ ||
ಳಧ್ವಬಾಷ್ಪಮ್ಮಗ್ಯುಲೂಕಭವಂಗ |
ಳತಿಗರುಡವಿಮಾನಮುರುಜ್ಜವಂಗ || ೧೦ ||
ಳಿದಱಳವಿಗೆ ಬಾರದು ರಿತುವಿಮಾನ ||
ಮೆನಿಪುದು ಕರುಮಾಡದ ಭೆಸನನೂನ || ೧೧ ||
ಮದು ಕೃತಮಣಿಕುಟ್ಟಿಮ ಮಧ್ಯಭೂಮಿ |
ವಿದ್ಯಾಧರ ಭವನದ ಜನ್ಮಭೂಮಿ || ೧೨ ||
ಪೆಱಗಣ ಬನ ಮುಪಚಿತ ಮಾತುಳುಂಗ |
ಮಪರಿಮಿತಾಗುರು ಮಲಯಜ ಲವಂಗ || ೧೩ ||

ಮಾಮ್ರಾಮ್ರಾತಕ ಕೇತನ ನಿಕೇತ ||
ಮಱಿ ಶುಕ ಪಿಕ ವಿರಚಿತ ಪಕ್ಷಪಾತ || ೧೪ ||
ಖಂಬರಚರ ರಾಜನ ಸಿರಿಯ ಸೆಂಪ |
ನಾಂ ನೆಱೆಯೆ ಪೊಗೞ್ದೆ ನೆಂಬವನೆ ಗಾಂಪ || ೧೫ ||
ನದಱಿಂ ಶಿವಮಂದಿರದೊಳ್ಪು ಪಿಱಿದು |
ಪೊಗೞಲ್ಕದ ನಹಿರಾಜಂಗ ಮಱಿದು || ೧೬ ||೭ ||

ಕಂ|| ವಾಸವ ಪುರ ಮಿವ ಱಿವಿ |
ನ್ಯಾಸಮ ನಿದಱಿ ಗೃಹಾಧಿವಾಸಮ ನಿದಱಿ ||
ದೇಸೆಯ ನಿದಱಿನೆಱೆದ ವಿ |
ಲಾಸಮ ನಿದಱಿಬೆಡಂಗ ನವಗಯಿಸುಗುಮೇ || ೮ ||

ಆಡುವ ನಡೆ ನೋಡುವ ನಡೆ |
ಪಾಡುವ ಕೊಳೆ ಪಾಡು ಪೃಡುವ ತುಡುವಜನಂ ಕೊಂ ||
ಡಾಡುವ ಜನದಿಂ ಪುಣ್ಯದ |
ಬೀಡೆನಿಪುದು ಪುರ ಮದಂಬರೇಚರ ಪತಿಯಾ || ೯ ||

ಮುೞಿಯಿಸುವ ಮುೞಿವ ತಿಳಿವುವ |
ತಿಳಿವೊಲಿಸುವ ದೊರೆವ ನೆರೆವ ರಮಣೀ ರಮಣಾ ||
ಕುಳ ಕಳ ಕಳದಿಂ ದಂಗಜ |
ವಿಳಾಸ ದೆಱೆವೆಟ್ಟು ನೆಟ್ಟ ನಿದೆ ಸೆಱತುಂಟೇ || ೧೦ ||

ಮನದಿಂ ನೆಱೆಗೆಯ್ಗುಂ ಲೋ |
ಚನದಿಂ ಬಂದಿವಿಡಿಗು ಮೆಂದುಂ ವನಿತಾ ||
ಜನ ಮದಱಿಂದಂ ಸ್ತ್ರೀರಾ |
ಜ್ಯ ನಗರ ಮೀನಗರ ಮೆನೆ ಕರಂ ರಮಣೀಯಂ || ೧೧ ||

ವ|| ಎನೆ ಪುರಶ್ರೀಯನಾತನ ಮಾನುಷಮು ಮವಾಗ್ವಿಷಯಮು ಮವರ್ಣನಾಗೋಚರಮು ಮಾಗೆ ಬಣ್ಣಿಸುತ್ತುಂ ಪ್ರಮೋದೋದಂಚಿತ ರೋಮಾಂಚ ಕಂಚುಕಿತ ಶರೀರನಾದಂ. ಜನನಿಯುಮಂ ಜನ್ಮ ಭೂಮಿಯುಮಂ ಕಂಡಾಗಿನಿವಿಱಿದು ರಾಗೋದಯ ಮದೇವಿಱಿದೆನಿತುಂ ಬಂದು ರಾಜಾಲಯಮಂ ತೋಱಿ—

ಚಂ|| ಅನಿಮಿಷಲೋಕಮಂ ವಿಬುಧರಿಂ ಫಣಿಲೋಕಮ ನುಗ್ರನಾಗ ಸಾ |
ಧನದಿ ನನಂಗಲೋಕಮನನೂನರತಿ ಪ್ರಮದಾಂಗದಿಂ ದದೇ ||
ನನುಕರಿಸಿತ್ತೊ ರಾಜಭವನಂ ಭುವನಾನನ ಮಾಶ್ರವತ್ಸರಾ |
ವನಿಪ ನಿಸ್ಸೃಷ್ಟ ದಂತಿ ಮದ ಕರ್ದಮ ಮರ್ದನ ದುರ್ದಿನಾಂಗಣಂ || ೧೨ ||

ವ|| ಎಂದು ತೋಱಿ ಗಗನತಲ ಗಮನದಿಂ ಭುವನ ತಲಕ್ಕವತರಿಸಿ ಖಚರೇಂದ್ರ ರಾಜಮಂದಿರ ಸುಂದರ ಪ್ರಥಮ ದ್ವಾರ ಪುರೋಗತನಾಗಿ—

ಉ|| ಕೇಣಮನೊಕ್ಕು ತಕ್ಕನಱಿದುಕ್ಕೆವಮಂ ಪೆಱಗಿಕ್ಕಿ ದಕ್ಷಿಣ |
ಶ್ರೇಣಿಯ ರಾಜ್ಯಲಕ್ಷ್ಮಿ ದಮಿತಾರಿಯ ಪೋಕುೞ್ಗಿರ್ದೊಡುತ್ತರ ||
ಶ್ರೇಣಿಯ ರಾಜ್ಯಲಕ್ಷ್ಮಿ ಪುರುಡಾಕೆಯೊಳಾವಗಮಾಗೆ ಲಂಚಮಂ |
ಮಾಣದೆ ಕೊಟ್ಟವೋಲ್ ಸೊಗಯಿಸಿರ್ಪುವು ಕಪ್ಪದ ಪೊನ್ನ ರಾಶಿಗಳ್ || ೧೩ ||

ಕಂ|| ಸಮವಾಯ ಮುಗಲ್ದುಂ ಪ್ರಿಯ |
ತನೆಯ ಮನಂ ಧನಮಿನಂಗೆ ಪಕ್ಕಸ್ತಂತಾ ||
ದಮಿತಾರಿಗೆ ಗೇಟರೋೞ್ |
ರ್ದು ಮುತ್ತರಶ್ರೇಣಿ ಸಾರೆ ಧನದಿಂ ಮನದಿಂ || ೧೪ ||

ಬಾಗಿಲ್ವಾಡದ ಮುಂದಣ |
ಭಾಗಂಗಳ ಬಚ್ಚವಸರ ಮರ್ಥಿಗೆ ಕುಡುವು ||
ದ್ಯೋಗದ ಪಸರಮೆ ವಿತ್ತ ಸ |
ಮಾಗಮದಿಂ ಗೆಯ್ವೊನಿಲ್ಲ ಪರಗಂ ಪರದಂ || ೧೫ ||

ವ|| ಎಂದನಿಂದ್ಯರಾಜಭವನ ಪುರೋಭಾಗದೊೞಿರ್ದ ನಡೆದೆರೆದರ(ದ) ನರೆಸಿಸಿ ಲೋಭಕ್ಕಸರಪಸರಮಿಲ್ಲದಿರ್ದ ಬಚ್ಚರಪಸರಂಗಳುಮಂ,ವರುಣಾಸಿಯ ತೊಡವುಮಂ ತನ್ನ ಕೈಪಿಡಿಯುಮಂ ರತ್ನರಾಶಿಯೆಂಬ ಕೋಶಗೃಹದ ಬಯ್ಕೆಯುಂ ಬೆರಸು ವರುಣನೆ ಕೊಟ್ಟಜಂಗೊಟ್ಟಂತೆ ಪುಂಜಿಸಿರ್ದ ಪಂಚರತ್ನರಾಶಿಗಳುಮಂ ತೋಱುತ್ತುಂ ಬಂದು ದೌವಾರಿಕ ನಿವೇದಿತಸಂಬರ ಚರೇಂದ್ರ ವಿದಿತಾತ್ಮೀಯ ವೃತ್ತಕನಾಗಿ ಮೊದಲ ಬಾಗಿಲಂಪೊಕ್ಕದಱೊಳಗಣ ಭಾಗದೆರಡುಂ ದೆಸೆಯೊಳಂ ಸುಧಾಧವಳಿತ ದೀರ್ಘಮಂದಿರ ಸಾಹಣಂಗಳಂ ತೋಱಿ—

ಚಂ|| ಪೊಳೆವಳೆಯುಂ ಸಿತಚ್ಛವಿಯು ಮೊಪ್ಪುವ ದಂಡಿಗೆಯುಂ ನಿಕಾಮ ನಿ |
ರ್ಮಳ ದಶನಂಗಳುಂ ಸೆಣಸೆ ಕೇಸರದೊಳ್ ಸಿತವರ್ಣದೊಳ್ ಸಮು ||
ಜ್ಜ್ವಳತರ ಲೋಲ ವಾಲಧಿಯೊಳಾ ಕುಡುದಾಡೆಯೊಳಾವನುಂ ನಿರಾ |
ಕುಳ ಮಱಿವನ್ನನಿಲ್ಲ ವಱಿನಿ ಹರಿಗಂ ಹರಿಗಂ ವಿಭೇದಮಂ || ೧೬ ||

ವ|| ಅಲ್ಲಿಂದತ್ತ ಗಂಗಾಯಮುನಾದೇವತೆಗಳ್ ಖಚರರಾಜನನೋಲಗಿಸಲ್ ಬಂದಂತಿರ್ದ ಗಂಗೆಜಗುನೆಗಳಿಂದೊಪ್ಪುವ ದ್ವಾರಜಗತೀತಳಂಗಳಂ ತೋಱುತ್ತುಂ ಎರಡನೆಯ ಬಾಗಿಲ್ಮಾಡಮುಂ ಪೊಕ್ಕಂತರಾಂತರಾಭಿಶೋಭಮಾನಾ ಕ್ಷೂಣ ಕಕ್ಷ್ಯಾವಕಾಶಮಂ ತೋಱುತ್ತುಂ ಘಟಿಗೆಯ ಮನೆಯ ನೆಯ್ದುವರೆ ತೊಟ್ಟನೆ ಕಟ್ಟೆದಿರೊಳ್—

ಕಂ|| ಪಸರಿಸಿದಪುದೊಸಗೆಯ ಮೇ |
ಗೊಸಗೆಯೆ ಬಲದೇವ ವಾಸುದೇವರ್ಕಳ್ಗೀ ||
ದೆಸೆಯಿಂ ದೆಂಬಂತೆವೊಲೀ |
ನೆಸೆದತ್ತೊ ಗಭೀರ ಭೂರಿ ಭೇರೀನಾದಂ || ೧೭ ||

ವ|| ತದ್ಭೇರೀರವಶ್ರವಣ ಸಮಯ ಸಮುಗ್ರಸಮುಪಜನಿತ ಮಂಗಳಗೀತ ಮನೋರಥ ಸಿದ್ಧಿ ಪ್ರತೋಷಿತ ಮಾನಸರಾಗಿ ಬರ್ಪ ಮಾಯಾಗಾಣಿಕೆಯರಂ ಮುಂದಿಟ್ಟು ದೂತನರಮನೆಯಂ ಪುಗೆ—

ಕಂ|| ಪುಗುವ ಪೊಱಮಡುವ ಜನದಿಂ |
ಪುಗಲುಂ ಪೊಱಮಡಲು ಮಲಸಿ ಬಾಗಿಲ ಕೆಲದೊಳ್ ||
ಸೊಗಯಿಸ ಗುಣನೆಗಳೊಳ್ ನಿಂ |
ದ ಗಾಡಿಕಾರ್ತಿಯರದೇಂ ಮನಂಗೊಳಿಸಿದರೋ || ೧೮ ||
ಆವನಿತೆಯರ್ ಮನೋಜನ |
ದೇವದ ಪುಲ್ಲಿಗ ಮನಂಗರಾಜ ನವ ರಾ ||
ಜ್ಜೀವಾಸಕ್ಕಂ ದೊರೆ ಪೆಱ |
ನಾವೊಂ ಪೆಱತಾವುದಂ ಜಡಂ ಪೋಲಿಸುವೊಂ || ೧೯ ||

ವ|| ಅನಂತರಂ ನೋಡುತ್ತುಂ ದಿಙ್ನಾಗಯುದ್ಧಕ್ಕೆ ಕೃತ್ರಿಮಾರ್ಗಳಾಬಂಧಮೆಂಬಳವನೊಳಕೊಂಡ ಹಿಮವದ್ವಿಜಯಾರ್ಧ ನೀಲ ನಿಷಧ ಮಹೀಧರಂಗಳಂ ಪೋಲ್ತು ಮದಸ್ತಂಬೇರಮಯುದ್ಧನಿಮಿತ್ತಂ ನಿಱಿಸಿದ ಲಾಕವಿಂಡಿಗೆಯುಮಂ, ಪೂರ್ವಾಪರಪಾರಾವಾರಪತಿಗಳಿರ್ವರು ಮೋರೊರ್ವರೊಳ್ ಗರ್ವದಿಂ ಹಸ್ತಿ ನಿಯುದ್ಧಕ್ಕೆಂದಣೆದು ಬಿಟ್ಟಕ್ಕೆ ಮೊಗಂ ಜೊಕ್ಕು ಮೆಯ್ಯಿಕ್ಕಿದ ಮದಕರಿಯುಗಳಮನೆ ಪೋಲ್ತು ವರುಣರೂಪಾರೂಢಮುಂ ಚಾಮೀಕರಮಯಮುಮಪ್ಪ ಮಕರ ತೋರಣಮಂ ನೋಡುತ್ತು ಮದಱ ಪೊಱಗಣೊಳಗಣೆರಡುಂ ಭಾಗದೊಳಿರ್ದ ಮಹಾಕಾಳರೂಪಮುಂನಿಂದುನೋಡುತ್ತುಂ ಮಕರತೋರಣದ ಬಹಿರ್ಭಾಗ ದುಭಯ ಪಾರ್ಶ್ವದೊಳಮೋಳಿವಡೆಯೆ ಸುರಕರೀಂದ್ರಮನೆ ಕಟ್ಟಲ್ನಟ್ಟ ಪಾರಿಜಾತದ ಮುಂಡಗಂಭಂಗಳಂ ಪೋಲ್ತೊಪ್ಪಿಸಾಹಸ್ರೌಘದೊಳ್ ನಿಚ್ಚಮೋಲಗಿಸುವ ಪಂಚಕಲ್ಯಾಣಂಗಳುಮಂ, ಕಟ್ಟು ವಾನೆಗಂಭಂಗಳುಮಂ ಅವಱ ಪಶ್ಚಿಮ ಭಾಗದೊಳ್ ದಿಕ್ಪಾಲಶಾಸನದಿ ನಾಶಾ ಕರೀಂದ್ರಂ ಗಳ್ಗೆಂದು ಸುಪ್ರತೀಕಪತಿ ಸಮೆಯಿಸಿದ ವಿಶಾಲಕ್ರೋಡಶಾಲೆಗಳೆನಿಸಿದ ಚೆಂಬೊನ್ನ ಕಲಶದ ಮಾಡ ಶಾಲೆಗಳುಮಂ ನೋಡಿ ಪೊಗಟ್ಟು ಮಕರತೋಣಮಂ ಸುಗುಳ್ದು ಪೋಗಿ ರಾಜಗೇಹಕ್ಕೆ ಲಲಾಮ ಲಕ್ಷ್ಮಿಯುಂ, ಮುಖಶ್ರೀಯು ಮಿರ್ಪಂತಿರ್ದ ಕರುಮಾಡದ ಬಾಗಿಲ ಸಯ್ಪುವಂದು ಅವಱ ಕೆಲದ ಬಲದ ಚಿತ್ರಶಾಲೆಯ ಶೋಭಾ ಲೀಲೆಯ ನಚ್ಚರಿವಟ್ಟು ನೋಡಿ —

ಕಂ|| ಕುಲ ಶೈಲ ಪೌಟು ಮೋಃದಡ |
ಕಿಲಾದು ವೆನಲೀಟುನೆಲೆಯು ಮಭ್ರಕ್ಕಿದಿರಂ ||
ಮಲೆವಂತಿರೆ ದಿನಪಾವಳಿ |
ಕಲಶಾವಳಿಯೆನಿಸೆ ಕನಕಕಲಶಾವಳಿಗಳ್ || ೨೦ ||
ಸೊಗಯಿಪ ಕರುಮಾಡಮ ನೊಸೆ |
ದು ಗಾಯಕಾಸಹಿತ ನಾಗಳಮಿತಂ ಪುಗೆ ಕೆ |
ಮ್ಮುಗಿಲ ತೆಗಳಿಗೆಯ ಪೊಗೆಗಳ್ |
ನೆಗದಪುವೆನೆ ನೆಗೆದು ಪೊಗೆದು ಚಿತ್ರಪ್ರಭೆಗಳ್ || ೨೧ ||

ವ|| ಅಲ್ಲಿಂ ಬಱಿಯಂ—

ಕಂ|| ಅಂಭೋದ ನಿನದ ನಿಭ ಜನ |
ಗಂಭೀರ ಪ್ರತಿನಿನಾದ ಮೆಸೆದುವು ವಿಜಯಾ ||
ರಂಭಮನೆ ಸಾಲಭಂಜಿಕೆ |
ಸಂಭಾಷಿಸುವಂತೆ ದೂತ ನೊಡ ವಂದವಱೊಳ್ || ೨೨ ||

ಹರಿಣೀವೃತ್ತಂ|| ಅಮಿತ ನಮಿತಾ ರ್ಥಾಲ್ಪ ವ್ಯಾಹಾರಿ ಗಾಣಿಯ ಗೆಂಗು ವು |
ತ್ತಮ ಸಿತ ಮಣಿ ಕ್ಷ್ಮಾ ಪರ್ಯಸ್ತಂ ಹರಿ ನ್ಮಣಿ ಬಿಂಬ ವು ||
ಪ್ರಮಿತ ಮಿರೆ ಹಂಸಂಗಳ್ ಸೇವಾಳಮಂಜರಿಗೆತ್ತು ಚಂ |
ಚುಮು...................................................|| ೨೩ ||

ವ|| ....ವುದಕ್ಕಗ್ಗಳವಾಗಿ ಕಾಲ್ಗಿಡಿಸಲುಂ ಮುರಿದು ಕಿಟ್ಟಿಡಂ ತಡವೆಂಬಿವಱಿಂದಂ ಬಾಹು ಕೈಕೊಳ್ಳೆಂಬಿವು ಮೊದಲಾಗಿ ಗೋಮೂತ್ರ ಮಂಡಲಮು ಮಾಕಾಶಂ ಸೇಜವಿತಿಯೆಂಬ ವಿಧಿಗಳೊಳ್ ಬಂದು ಸಲೆ ಗಿಡಿಸಲುಂ ಪೊಲಗಿಡಿಸಲುಂ ಬಲ್ಲೆ ನಿನ್ನ ಕೆಯ್ಯೊಳ್—

ಕಂದ|| ಕಲ್ತಾನೆವಾಂಗು ಗೆಲೆ ಸಲೆ |
ಸೋಲ್ತಾನೆಗೆ ಲೆಕ್ಕಮಿಲ್ಲ ಬಿನ್ನಣ ಮೆನ್ನೊಳ್ ||
ನಿಲ್ತಳವಳವಿಗಱಿಯಲೆ ಕ |
ವಲ್ತುದು ಬಿಡಿಸುವು ದಿಭೇಂದ್ರಮಂ ಖಚರೇಂದ್ರಾ || ೨೪||
ಪು ತಲುತಮ ನಗ್ರವಂಚನ |
ಪತನ ವಿಮೋಕ್ಷ ಭ್ರಮಂಗಳೆಂಬಿವು ಮೊದಲಾ ||
ದತಿ ವಿತತ ಕರಣ ಚಾರಣ |
ತತಿ ನಿಪುಣತೆ ಗಾನೆ ಲೋಕಗುರುವೆ ದಲರಸಾ || ೨೫ ||
ಪೊಸೆವಗ್ನಿಯ ನುಗಿದಿ ರ್ದಂ |
ಕುಸದಿಂ ದಂಜನದಿ ನಾಪ್ರುಲೇಪದಿ ನಿದನಂ ||
ಜಿಸಲಿಕ್ಕಿದ ಧೂಪದಿ ಮ್ನ |
ಳ್ಳಿಸುವಾತಂ ಬೆನ್ನ ತಕ್ಕಿ ನಾತನೆ ನೃಪತೀ || ೨೬ ||
ಒಕ್ಕೋಲ್ ಪೊರಜೆಗೆ ಬಗೆವೊಡೆ |
ದಿರ್ಕುಂ ನಟ್ಟುಗಿಯೆ ಗಣಪನಂ ತಿಭ ಪತಿ ಕು ||
ಳ್ಳಿರ್ಕುಂ ಸರಕ್ಕೆ ನಡುಗು |
ತ್ತಿರ್ಕುಂ ಸುಗಿದಿರ್ಕು ಮುಂಗುಟಕ್ಕಂ ಮಡಕಂ || ೨೭ ||

ವ|| ಎಂದು ತಮ್ಮ ತಕ್ಕಿನ ಮೂಱುಂ ತಕ್ಕುಗಳುಮ ನಡರಿಯುಂ ತೊಡರಿಯುಂ ನುಡಿದಂತೆ ಕಂತವ್ಮಾನೆಯೊಳ್ತನಮುಮಂ, ಬಿನ್ನಣಮುಮಂ ಮೆಱೆದಾನೆವಾರುಗಳೊಳ ಮುಂಡಿಗೆವಾದರೊಳಂ ಪುಗವೆ ಸಲೆ ಬರ್ದ ಗಜವಿಜಯಿಗಳಿಂ.

ಮ|| ಮನಮುಂ ಕೆಯ್ವಸಗೊಂಡು ಚೆಲ್ವನೊಳಕೊಂಡೀಟಕ್ಕೊಂಡು ಮೂಱುಂ ಜಗ |
ಜ್ಜನದೊಳ್ಪಂ ಗೆಡೆಗೊಂಡ ಲಕ್ಷ್ಮಿಯಳವಂ ಮುಂದಿರ್ದುದಂ ಬಂದ ಮಾ ||
ತನು ಮಾಕೃತ್ರಿಮ ಗಾಯಿಕಾ ದ್ವಯಮು ಮೆತ್ತಂ ನೋಡೆ ಯಕ್ಷೇಂದ್ರ ನಿಂ |
ದ್ರನ ನಾಗೇಂದ್ರನ ನಚ್ಚಿನೋಲಗದವೋಲೊಪ್ಪಿರ್ದು ದೊಡ್ಡೋಲಗಂ || ೨೮ ||

ಕಂ|| ಸಕಲ ಖಗ ತಿಳಕ ನಾಸ್ಥಾ |
ಯಿಕೆಯೊಳ್ ಚೆಂಬೊನ್ನ ಸಿಂಹಪೀಠದೊ ಳಿರ್ದೆಂ ||
ಪ್ರಕಟಿಸಿದನೊ ನೀಳದ ಚೂ |
ಳಿಕೆ ವೆರಸಿದ ಮೇರುಗಿರಿಯ ಸಿರಿಯಂ ಸಿರಿಯಿಂ || ೨೯ ||

ವ|| ಆಗಳ್—

ಕಂ|| ಗಾಯಿಕೆಯರ ನಿರಿಸಿ ನೃಪಾ |
ಸ್ಥಾಯಿಕೆಯಿಂ ಪೂಜಗೆ ದೂತ ನೊಳಪುಗೆ ವರ ವೇ ||
ತ್ರಾಯತ ಕರರ್ ಸ ಸಂಭ್ರಮ |
ಮಾಯೆಡೆಯೊಳ್ ತಂದು ನಿಲಿಸಿ ಯೆಡೆ ವಿಡಿಸುವುದುಂ || ೩೦ ||

ಬಳಿವಾ ನೃಪ ತೇಜೋ ಮಂ |
ಡಳಕ್ಕೆ ಕಣ್ಣಳ್ಕೆ ವಿನಯ ವಿನಮಿತ ನವನೀ ||
ತಳದೊಳ್ ಮೆಯ್ಯಿಕ್ಕಿ ನೊಸಲ್ |
ನೆಲನಂ ಮುಟ್ಟುವಿನ ಮೆಱಗಿ ಪೊಡಮಟ್ಟಮಿತಂ || ೩೧ ||

ವ|| ಮುಕುಳಿತ ಕರಕಮಳಂ ದೌವಾರಿಕ ನಿರ್ದಿಷ್ಟ ಪ್ರದೇಶ ದಾಸನದೊಳ್ ಕುಳ್ಳಿರ್ದು ಗಗನೇ ಚರಾಧಿನಾಥ ನಾತನಮೊಗಮಂ ನೋಡಿ ಬೆಸಗೊಳೆ ನಿಜಾನೀತ ಗಾಯಿಕಾ ಯುಗಾ ಗಮನಮ ನಱಯೆ ಬಿನ್ನಪಂ ಗೆಯ್ವುದುಂ ತಡೆಯದೆ ತಂದು ತೋಱನೆ ಬೇಗಂ ಪೋಗಿ ಮುಂದಿಟ್ಟು ತಂದು ತೋಱು ವುದುಂ, ಅಪರಾಜಿತಾನಂತವೀರ್ಯ ರಂಬರಚರ ಚಕ್ರವರ್ತಿಯಂ ನೋಡಿ—

ಕಂ|| ಪದೆ ದೆಱಗದ ತಲೆಗಂ ಮುಗಿ |
ಯದ ಕೆಯ್ಗಂ ಜೀಯ ದೇವ ಬೆಸನೇ ನೆನಗೆ ||
ನ್ನದ ನಾಲಗೆಗಂ ಸ್ವೈರಿಸ |
ಮುದಗ್ರ ರಿದ ನಾತನೊಳ್ ಪ್ರಯೋಗಿಸಿದಪರೇ || ೩೨ ||

ತೇಜೋನಿಧಿ ಕರಹತ ಪರ |
ರಾಜಕ ನವದೋಷ ದಿಗ್ಜಯಂ ಪದ್ಮರಜೋ ||
ರಾಜಪ್ರತಾಪ ನುಪಮಿತ |
ತೇಜಸ್ಪತಿ ಖಚರರಾಜ ನವನೀತಲದೊಳ್ || ೩೩ ||

ತೊಳತೊಳ ತೊಳಗುವ ತೊಡವಿನ |
ಬೆಳಗುವ ಬೆಳಗುಗಳ ಬಳೆದ ಬಳಗಂ ವಿದ್ಯು ||
ದ್ವಿಳಸನಮ ನಿಳಿಸೆ ನವಘನ |
ವಿಳಾಸಮಂ ಖೇಚರೇಂದ್ರ ನೊಳಕೊಂಡಿರ್ದಂ || ೩೪ ||

ವೈರಿ ಜಯ ಶ್ರೀ ಸೆಱೆ ಯಿರೆ |
ಭೂರಿ ಭುಜಾಂತರದೊಳಾಕೆ ಕಟ್ಟಿದ ಮುಕ್ತಾ ||
ಹಾರಮನೆ ಪೋಲ್ತು ನವ ಕೇ |
ಯೂರಂ ಸೊಗಸಿತು ನಭಶ್ಚರೇಂದ್ರನ ತೋಳೊಳ್ || ೩೫ ||

ಉ|| ಮೌಳಿಯೊಳುದ್ಭ್ರಮದ್ಭ್ರಮರ ಭಾರ ವಿಭಗ್ನ ಮಧೂಳಿ ಮಾಲತೀ |
ಮಾಳೆ ಮನಕ್ಕೆ ವಂದೆಸೆದುದಾ ದಮಿತಾರಿಯ ಕೀರ್ತಿ ಲೋಕಮಂ ||
ವ್ಯಾಳೆ ತೊಟಿಲ್ದು ತನ್ನ ಗಮನ ಶ್ರಮಮಂ ಕಳೆಯಲ್ಕೆ ತನ್ಮಹೀ |
ಪಾಳ ಶಿರೋಜ ರಾಜಿ ಪರಭಾಗಮ ನಾಶ್ರಯಿಸಿರ್ದ ಳೆಂಬಿನಂ || ೩೬ ||

ಕಂ|| ಕರಿಯು ತನು ಚ್ಛವಿ ಮುತ್ತಿನ |
ಬರಗಲೆಯು ಸಿತಾಂಶು ಪುದಿಯೆ ಸೊಗಯಿಸಿದುದು ಭಾ ||
ಸುರ ರಾಹು ಶಶಿಯೊಳೊಡಸಿರೆ |
ಬೆರಸಿದ ದೇಹ ರುಚಿಯಂತಿ ರಂಬರ ಚರನಾ || ೩೭ ||

ಪೊಸಮುತ್ತಂ ಪಾಲೊಳ್ ತೊಳೆ |
ದೆಸೆದಿರೆ ದೆಸೆದೆಸೆಗೆ ಕೆದಱುದಂತಾಗೆ ನಿರೀ ||
ಕ್ಷಿಸುವ ನಿರೀಕ್ಷಣಮೆ ಮನಃ |
ಪ್ರಸಾದಮಂ ಪೇೞ ದಱಪುಗುಂ ಖೇಚರನಾ || ೩೮ ||

ಸ್ಫುರಯಿಸುವ ಪದ್ಮರಾಗಾ |
ಭರಣಂಗಳ ಬೆಳಗುಗಳ್ ಪ್ರತಾಪಾಗ್ನಿಯ ಕೇ ||
ಸುರಿಗ ಳೆನಿಸುವುವು ವಿಜಯಾ |
ರ್ಧರುಚಿ ಮಣಿಮುಕುಟ ಶಿಖರ ಚೂಡಾ ಮಣಿಯಾ || ೩೯ ||

ಚಂ|| ಇದು ಕೊರಲಿಂತಿದಾರಮಿದು ಭೂಷ್ಯ ಮಿದರ್ಕಿದು ಭೂಷಣಂ ದಲೆಂ |
ಬುದ ನೆನವೇಡ ಳಂಕರಣ ಕಾರಣ ಮಾರಮಣಂ ಕೃತಾರ್ಥಮೆಂ ||
ಬುದು ದೊರೆವೆತ್ತು ಮಾವಿತತ ಹಾರ ಮಧಃಕೃತ ತಾರಕಾಂತಿ ಪೂ |
ಲ್ತುದು ಖಚರಾನನಕ್ಕೆ ಹಿಮದೀಧಿತಿಯೆಂಬುದ ನುಂಟುಮಾಡುಗುಂ || ೪೦ ||

ಬಗೆ ಮೃಗರಾಜ ಶಬ್ದ ದನಿತರ್ಕೆ ವಿರೂಕ್ಷಿಸಿದಂವಮೋ ಮಹಾ |
ಜಿಗೆ ನೆಱಮಾದ ಸಾಮಜಕೃತಂ ಮನದೊಳ್ ನಿಲೆ ತಂದು ತದ್ವಿರೋ ||
ಧಿಗಳ ನವುಂಕಿ ಮೆಟ್ಟೆ ಸೆಱೆ ಯಿಟ್ಟವಲೇಪಮೊ ಪೇೞ ಮೆಂಬ ಶಂ |
ಕೆಗೆ ನೆಲೆಯಾದುದಂಬರ ಚರೇಶ್ವರ ನಿರ್ದ ಮೃಗೇಂದ್ರವಿಷ್ಟರಂ || ೪೧ ||

ಕಂ|| ಕ್ಷಿತಿಪ ಶ್ರೀ ವಿಭವ ವಿಲಾ |
ಸತೆಯಂ ಪೇೞುರಮೆ ಪೇೞ್ಗು ಮಭ್ಯಸ್ತ ಮಹಾ ||
ಸ್ತ್ರತೆಯಂ ಶ್ರಮ ವಶ ತನು ವು |
ಧೃತೆ ಪೇೞ್ಗುಂ ಬೇಱೆ ಪೇೞ್ವು ದದು ಪುನರುಕ್ತಂ || ೪೨ ||

ಕಟಿತಟದ ಸುರಿಗೆ ಪಟ್ಟಿಕೆ |
ಕಟಿಸೂತ್ರದೊ ಳೆಸೆದು ದೆಸೆವ ಸಾನಂದಕದಿಂ ||
ದಿಟ ಮಮರ್ದ ಪಾರಿಜಾತದ |
ವಿಟಪಿಗೆ ಕೌಸ್ತುಭದ ಸುತ್ತು ಸೊಗಯಿಪ ತರದಿಂ || ೪೩ ||

ಅತಿದೀರ್ಘ ಮಾಂಸಳಂ ವೃ |
ತ್ತತರಂ ಧೃತ ವಿಜಯ ಲಕ್ಷ್ಮಿ ಮಾಡಿದು ದೈರಾ ||
ವತ ಪುಂಡರೀಕ ಕರಯುಗ |
ವಿತರ್ಕಮಂ ಭುಜ ಯುಗಂ ನಭಶ್ಚರ ಪತಿಯಾ || ೪೪ ||

ನಿಜದಿಂ ಗೂಢಂಗಳ್ ಗು |
ಳ್ಫಜಾನುಗಳ್ ಮಂತ್ರದಂತೆ ರಕ್ತತರಂಗಳ್ ||
ನಿಜ ಕರ ಪಾದ ತಲಂ ಪ್ರ |
ಪ್ರಜೆಯಂತೆ ನಖ ಶ್ಚರಾ ನ್ವಯಾಂಬರ ರವಿಯಾ || ೪೫ ||

ಸಮುವೃತ್ತ ಸಂಧಿ ಲಕ್ಷಣ |
ಸಮನ್ವಿತಂ ಜಾತ್ಯಲಂಕೃತಿ ಭ್ರಾಜಿತ ಮು ||
ತ್ತಮ ಕಾವ್ಯ ಬಂಧದಂತಾ |
ವನಿತಾರಿಗೆ ಸಾಜ ಮೊಪ್ಪುಗುಂ ಕಿಱುದೊಡೆಗಳ್ || ೪೬ ||

ಕನಕ ಮಣಿ ಖಚಿತ ಸಿಂಹಾ |
ಸನದೊಳ್ ನೀಡಿರ್ದ ವಾಮಪದ ನಖರುಚಿ ಕಾಂ ||
ಚನ ಹರಿಪೀಠಮುಮುಂ ಮು |
ತ್ತಿನ ಪೀಠ ಮಿದೆನಿಸಿ ತವನಿಪತಿ ಯಡಿ ಮೊದಲೊಳ್ || ೪೭ ||

ಮೀನಾಬ್ಜ ಶಂಖ ಚಕ್ರ ವಿ |
ತಾನಾಂಕಿತ ದಕ್ಷಿಣಾಂಘ್ರಿ ತಲ ಪಲ್ಲವ ಮು ||
ತ್ತಾನಂ ರತ್ನಾಕರದವೊ ||
ಲೀನಮುರ್ದುದೊ ಸಾರ್ವಭೌಮ ಗಗನೇಚರನಾ || ೪೮ ||

ಏಣರಿಪು ಪೀಠ ಪಾರ್ಶ್ವ |
ಕ್ಷೋಣಿಯೊ ಳಿಂದೀವರಕ್ಕೆ ಮುಸುಱುವ ಹಂಸ ||
ಶ್ರೇಣಿಗಳೆನಿಸಿದು ವುಭಯ |
ಶ್ರೇಣೀ ಪತಿ ಗಿಕ್ಕೆ ಪೊಳೆವ ಚಮರರುಹಂಗಳ್ || ೪೯ ||

**ವ||** ಅಂತು ಪುಣ್ಯೋಪಾರ್ಜಿತ ಲಕ್ಷ್ಮೀಲಕ್ಷಿತ ವಕ್ಷಃಸ್ಥಳಲೀಲೆಗಂ, ವಿಶ್ವವಿಶ್ವಂಭರಾ ಧುರಂಧರತೆಗಂ, ವೀರಶ್ರೀನಿವಾಸವಿಲಾಸಕ್ಕಂ, ಸನ್ನಿಹಿತ ಮನ್ಮಥರೂಪ ನಿರೂಪಣಕ್ಕಂ, ಸಮರ್ಪಿತ ನಳಕೂಬರ ಲಾವಣ್ಯಕ್ಕಂ, ಆತ್ಮೀಕೃತ ದಿವಿಜೇಂದ್ರವಿಭವಕ್ಕಂ, ಆಕೃಷ್ಟಲೋಕಪಾಲಪ್ರಭುತೆಗಂ, ಆಯತ್ತಸರಿತ್ಪತಿ ಮಹಿಮೆಗಂ ಏಕೀಕೃತ ಧರಾಧಿಪಾಭಿರಾಮತೆಗಂ, ಸಂಪೂರ್ಣ ಶರನ್ನಿಶಾಕರ ಕಾಂತಿಗಂ, ಸಮುದಿತ ನಿದಾಘ ಪತಂಗ ಪ್ರತಾಪಕ್ಕಂ, ಪಿಂಡೀಭೂತ ದಂಡಧರಾಜ್ಞಾಪರಿಸ್ಫುರಣೆಗಂ, ಸಹಜಾತ ಬಂಹಿಮವದ್ಬಲಾವಲೇಪಕ್ಕಂ, ಸಮುಚಿತ ಶಾಸ್ತ್ರವೃತ್ತ ವರ್ತನಕ್ಕಂ, ವಶೀಕೃತವಿಶದಯಶಸ್ಸುಧಾ ಪ್ರಸರಕ್ಕಂ, ಪುಂಜಿತ ರಾಜ ಗುಣ ಮಣಿಗಣಕ್ಕಂ, ತಾನೊರ್ವನೆ ನಿರುಪಮ ಜನ್ಮಭೂಮಿಯಾಗಿ:—

ಕಂ|| ಭಾವಿಸಿ ವಂದಿಜನಂ ಪ್ರ |
ಸ್ತಾವದೊಳುಪಹಾಸ ಲವಮ ನೊಡರಿಸ ಕಿವಿಯಿ ||
ತ್ತಾವಚನಕ್ಕೆ ಮುಗುಳ್ನಗೆ |
ದೀವಿದ ನಗೆ ಮೊಗದಿ ನವರ ನವಲೋಕಿಸುತುಂ || ೫೦ ||

ಪಲತೆಱದಿ ನೀಯುತುಂ ಕ್ರು |
ದ್ಧ ಲುಬ್ಧ ಭೀತಾಪಮಿತ ಜನಕ್ಕಮ ಭೇದ್ಯಾ ||
ವಲಿಗಂ ಪರಮಾರ್ಥವಚೋ |
ವಿಲಸನದಿಂ ಪರಮ ಸುಖಮ ನೊಸೆದೀಯುತ್ತುಂ || ೫೧ ||

**ವ**|| ಸಿಂಹಾಸನ ದೆರಡೋಳಿಯೊಳಂ ಸಾರ್ಚಿದ ಲೋಹಾಸನದೊಳ್ ಕಟ್ಟಿದ ದೇವಾಂಗದ ಜೊಂದರಿಗೆಯೊಳ, ಮಿಟ್ಟ ನೇರಾಣಿಯ ಪಡಿಗಂಗಳೊಳ, ಮಿಕ್ಕುವ ಚೆಂಬೊನ್ನ ಕಾವ ಚಮರೀ ರುಹಂಗಳೊಳಂ, ಪೊಂಪುೞಪೋದ ಮಹಿಮೆಯ ವಗುಂತಿ ಯುದ್ದಾನಿಯ ಮಕುಟ ಬದ್ಧರನತಿಶುದ್ಧ ಕಟಾಕ್ಷ ವಿಕ್ಷೇಪದಿ ನನುಗ್ರಹಿಸುತ್ತುಂ, ಮತ್ತಮನೇಕ ರಾಜಲೀಲಾ ವಿಳಾಸ ನಿಳಯನಾ ಗೊಡ್ಡೋಲಗಂ ಗೊಟ್ಟಿರ್ದ ದಮಿತಾರಿಯ ಮುಂದೆ ಕೃತಕ ಗಾಯಿಕೆಯರ್ ನಿಲೆ--

ಮ|| ಅವನೀಸ್ವಾಮಿಗೆ ಚಕ್ರವರ್ತಿಗೆ ಬಟೀಕ್ಷಾದೂತ ನಿಂತೆಂದು ಬಿ |
ನ್ನವಿಕುಂ ದೇವ ಭವತ್ಪ್ರಸಾದ ಸುಮನೋಮಾಲಾ ಪರೀತೋತ್ತಮಾಂ ||
ಗವಲಂ ತಾನಪರಾಜಿತಂ ಜಿತಮದಂ ಕೊಟ್ಟಿಟ್ಟಿದಂ ಗಾಯಿಕಾ |
ನವರತ್ನಂಗಳ ನಿತ್ತ ನೋೞ್ಪುದೆನೆ ಲೀಲಾಲೋಕನಂ ಖೇಚರಂ || ೫೨ ||

ಕಂ|| ಅವಲೋಕಿಪುದುಂ ನವ ವನ |
ಜ ವಲ್ಲಿಗೆ ಜಗುವ ಝುಷದ್ವಯಂಗಳಿವೆನೆ ಪಾ |
ರ್ಥಿವನ ನಯನಂಗಳೆಱಗಿದು |
ವವಯವದಿಂ ನಿಂದ ಗಾಯಿಕಾ ಯುವತಿಯರೊಳ್ || ೫೩ ||

**ವ**|| ಅಂತು ನೋಡಿ ವಿಸ್ಮಯಾಕ್ರಾಂತಚಿತ್ತ ನತ್ಯಂತ ಹೃಷ್ಟೋತ್ಕೃಷ್ಟ ಸಂತುಷ್ಟಾಂತರಂಗ ನವರ ನವಯೌವನಕ್ಕೆ ನೆಱವಾದ ರೂಪಾತಿಶಯಕ್ಕಂ, ಅವಯವ ಶೋಭೆಗೆ ಬೆಂಬಲವಾದ ಸಮು ದಾಯ ಶೋಭೆಗಂ, ಲಕ್ಷಣಕ್ಕಮ ಸುರೂಪವಾದ ವ್ಯಂಜನಕ್ಕಂ, ಹಾವಕ್ಕೆ ಸುರೂಪವಾದ ಭಾವಕ್ಕಂ ವಿಭ್ರಮಕ್ಕಾಯತ್ತವಾದ ವಿಲಾಸಕ್ಕಂ, ಲೀಲೆಗಾಲಯವಾದ ಮುದ್ದುಗೆಯ್ತಕ್ಕಂ, ಗಾಡಿಗೆ ಪಾಡಾದ ಪಸದನಕ್ಕಂ, ತೇಜಕ್ಕೋಜಾದ ಕಾಂತಿಗಂ, ಬೆಡಂಗಿಂಗೆ ಪಾಂಗಾದ ದೇಸಿಗಂ, ಮಾಸರಿಗೆಕ್ಕಲಾವ ಣವಾದ ಸೌಷ್ಠವಕ್ಕಂ, ಕಣ್ಬೇಟಕ್ಕಿದಿರಾದ ದೊಡ್ಡಿಂಗಂ, ಸೌಂದರ್ಯಕ್ಕೆ ನೆಲೆಯಾದಂದಕ್ಕಂ, ಪೆಕ್ಕಸಂಬಟ್ಟಾಸ್ಥಾಯಿಕಾ ಜನಕ್ಕೆ ಲಕ್ಕೆತೆಱದಿಂ ಪೂಗಟ್ಟು ಸಾರೆ ಕರೆ ದೇಱಲಿಕ್ಕಲ್ವೇಟ್ಟು ಕುಳ್ಳಿರಿಸಿ ದೇವತಾತ್ಮೀಯರಲ್ಲದೆ ಮಾನವಕನ್ಯೆಯರಲ್ಲವೆಂದು ಪರಿಚ್ಛೇದಿಸಿ ತದೀಯಾ ಮಾನುಷ ವೃತ್ತಿಗೆ ಸಭೆಯುಂ ತಾನುಂ ಚೋದ್ಯಂಬಟ್ಟು ಮತ್ತ ಮುತ್ತರೋತ್ತರ ಪ್ರತಿಪತ್ತಿ ವಿಧಾನಾ ನಂತರ ಮದ್ಭುತಮುಂ ಕುತೂಹಲಮು ಮಮುಳ್ಬಳವಂ ತೊಡನೊಡನೆ ಮನದೊಳ್ ಬಳೆಯೆ ಪರಿತೋಷದ ಪರಮಕೋಟಿಯ ನೆಯ್ದಿ ತನ್ನ ದೂತಂಗೆ ಪ್ರಮೋದ ಪುಳಕಿತಾಂಗ ನಂಗಚಿತ್ತಂ ಗೊಟ್ಟು—

ಮ|| ವಿಭು ಸಂಭಾಷಿಸಿ ಗಾಯಿಕಾ ಯುಗಳದೊಳ್ ದೂತಂಗೆ ಜಂಭಾರಿ ಸ |
ನ್ನಿಭನೆಂಗುಂ ಸಖಿಯರ್ಕಳಕ್ಕೆ **ಕನಕಶ್ರೀ** ಗಿಂತಿವರ್ ಗೋಮಿನೀ ||
ನಿಭೆಯರ್ ಮಾಣದೆ ದೂತ ಬೇಗ ಮೊಡಗೊಂಡುಯ್ ಕನ್ನೆಮಾಡಕ್ಕೆ ಕೇ |
ಳ್ದಭಿಯೋಗಂ ನಮಗಾದೊಡಲ್ಲಿ ಕಳಗೀತಾಳಾಪಮಂ ಕೇಳ್ವಮೋ || ೫೪ ||

ವ|| ಎಂದು ತನ್ನ ಕೊಂಡಾಟದ ಮಗಳಲ್ಲಿ ಗಟ್ಟುವುದುಂ ಅಮಿತಂ ಪ್ರಮಿತಾಂತಃಪುರೋಚಿತ ಜನಂ ಗಾಣತಿಯರಂ ಮುಂದಿಟ್ಟು ರಾಣಿವಾಸದ ಮೊದಲ ಚೆಂಬೊನ್ನ ಕನ್ನೆವಾಡಕ್ಕೆ ವಂದು ಕನಕ ಶ್ರೀಗವನತೋತ್ತಮಾಂಗನಾಗಿ ಕಂಡಕ್ಕ ನಿಮ್ಮಮ್ಮಂ—

ಕಂ|| ಸ್ತ್ರೀರತ್ನಂ ಸ್ತ್ರೀರತ್ನದೊ |
ಳೋರಂತೊಡಗೂಡಿ ಕೂರ್ತು ಸುಖಮಿರ್ಕೆಂದಂ ||
ಭೋರುಹ ನಯನೇ ನಿನಗನು |
ಸಾರಿಯ ನಟ್ಟಿದ ನಪೂರ್ವ ಕನ್ಯಾದ್ವಯಮಂ || ೫೫ ||

ಸರ್ಬ ಕಳಾ ಕುಶಳೆಯರೀ |
ಬರ್ಬರೆಯ ಕಿರಾತೆಯನ್ನರಾರಿವರೆ ಸಮ ||
ಸ್ತೋರ್ಬಿಯ ಗೀತ ರಸಾಮೃತ |
ಸರ್ಬಸ್ವ ನಿಸರ್ಗ ಸದನ ರಂಬುಜ ವದನೇ || ೫೬ ||

ಎನೆ ಎನೆ ಮನೋನುರಾಗಮೆ |
ತನುವಿಂ ಪೊಱಪೊಣ್ಮುವಂತೆ ಪುಳಕಕುಳಂ ಭೋಂ ||
ಕೆನೆ ನೆಗೆಯೆ ಖಚರ ನೃಪ ನಂ |
ದನೆ ವಿನಯದಿ ನಾಸನಾದಿ ಪೂಜಾಸಹಿತಂ || ೫೭ ||

ವ|| ಸ್ವಾಗತಸಂಭಾಷಣ ಪೂರ್ವಕ ಮಪೂರ್ವ ಪ್ರವಾಳ ಕರ್ಣ ಪೂರಪರಿಭ್ರಂಶಂ ಸುಂದರಮಾಗೆ ತಲೆಯಂ ತೂಗಿ "ಯತ್ರಾಕೃತಿ ಸ್ತತ್ರ ಗುಣಾ ವಸಂತಿ" ಎಂಬೊಂದು ಸುಭಾಷಿತಾರ್ಥಮವ್ಯಭಿಚಾರ ಮೆಂದಮಿತಂ ಗಿಂತೆಂದಳ್—

ಕಂ|| ಈಶಾನರಸುರರಾಜಾ |
ದೀಶಂ ನವಿಕಲ್ಪ" ಯೆಂದೆನುತ್ತಿರ್ಪುಚಿತ ||
ಕ್ಲೇಶ ಮಿದವಱಂ ದಿಸಂ |
ಕ್ಲೇಶಂ ಕರಮೊಳ್ಳಿತಿವರ ನಾಂ ಕೆಯ್ಕೊಂಡೆಂ || ೫೮ ||

ಅಱಿಯದ ಕಳಾಕಳಾಪಮು |
ನಱಿಪುವ ರಿವ ರೆನ್ನ ನೆನ್ನ ಪುಣ್ಯೋದಯದಿಂ ||
ದಱಿವೆಸನಾಗಿಯು ಮಿಂತಿದು |
ಕಿಱುವೆಸ ನೆನಗೆಂದು ನಿಶ್ಚಯಂ ಬಿನ್ನವಿಸಿಂ || ೫೯ ||

ವ|| ಎಂದು ಕನ್ನೆ ವಿನಯ ಪುರಸ್ಸರ ಮಮಿತನಂ ವಿಸರ್ಜಿಸಿ ತದ್ಗಾಯಿಕಾ ನಾಯಿಕೆಯರ ಹೇಳಾಸ್ಥಾಯಿಕಾ ಸಮುಚಿತ ಕಥಾ ಕಥನ ವಿನೋದದಿ ನಿರ್ದವರ ಮನಮು ನಱಿದು ನುಡಿವ ನುಡಿಗಂ ಕಣ್ಣಱಿದು ಗೊಟ್ಟಗೆಯ್ವ ಗೊಟ್ಟಗಂ, ಬಗೆಯಱಿದು ನಗುವ ನಗೆಗಂ, ಮೆಚ್ಚಱಿ ದೂದು ಪೋದಿಂಗಂ, ಇಚ್ಛೆಯಱಿದು ತೆಗೆಱ್ವ ತೆಗಟಿಕ್ಕಗಂ, ಪದನಱಿದು ಪತ್ತುವ ಪತ್ತುಗೆಗಂ, ಇಂಬಱಿದು ಸೇವಿಸುವ ಸೇವೆಗಂ,ನೆರನಱಿದು ಪಾಡುವ ಪಾಟಕ್ಕಂ, ಪೊಟ್ಟಿಱಿದು ಸಾರ್ವ ಸಾರ್ಕೆಗಂ ಮನಂಬೆಚ್ಚು ಪತ್ತೆ ಪೊಯ್ದುಂತಾಗಿರೆ ಮತ್ತೊಂದು ದಿವಸಂ—

ಕಂ|| ವರ್ಗತ್ರಯ ನಿಧಿ ಯರಿನೃಪ |
ಮಾರ್ಗಪರಂ ಸಭೆಯೊಳಿರೆ ಭಯೋತ್ಕಂಪಿತ ಸಂ ||
ಸರ್ಗಂ ರಾಣೀವಾಸದ |
ಪೆರ್ಗಡೆ ತನ್ನಿಜ ನಿಯೋಗಮಂ ಬಿನ್ನವಿಕುಂ || ೬೦ ||

ವ|| ದೇವ! ಸಕಲ ಭುವನ ಕಳಾವಷ್ಟಂಭ ಸ್ತಂಭಾಯಮಾನ ಭುಜಸ್ತಂಭ ಪರಿಪಾಲಿತ ತ್ರಿಖಂಡಾವನೀಮಂಡಲದೊಳ್ ನೆಲದೊಂದು ಸೆರಗಿನೊಳಪ್ಪೊಡಂ ಕೇಳಲಾಗದಪವಾದ ಮಿಂದು ನಮ್ಮ ಕನ್ಯಾಂತಃಪುರದೊಳ್ ಕಾಣಲಾದುದದಂ ಬಿನ್ನಪಂ ಗೆಯ್ವೆನ್ನ ಮೆಯ್ ಮತ್ತ ಹಸ್ತಿಗೆ ಪಕ್ಕಾದ ಗುಬ್ಬಿಯ ಮೆಯ್ಯಂತಗುರ್ಬಿಸಿದಪ್ಪುದು. ಅಂತು ಮೆನ್ನ ಕರ್ಮಗತಿಯಿಂ ಬಿನ್ನಪಂ ಗೆಯ್ಯಲ್ವೇಳ್ಕುಂ ಅಪರಾಜಿತಂ ತಾ ನೀಸೂಳ್ನ ಬಂದ ಗಾಯಿಕಾ ರೂಪಮಂ ಕಯ್ಕೊಂಡು ತನ್ನ ತಮ್ಮ ನನಂತ ವೀರ್ಯಂಗೆಂದೊಡಂಬಡಿಸಿ ಕನಕಶ್ರೀಯಂ ಗಗನಗಾಮಿನೀವಿದ್ಯೆಯಿ ನೊಯ್ದು ಗಗನತಲದೊಳ್—

ಚಂ|| ವಿನುತ ವಿಮಾನಮಂ ಸುರ ವಿಮಾನವು ನಾಗಳು ಮೇಱವೇೞ್ದು ತ |
ನ್ನನುಜನುಮಂ ಭವತ್ಸುತೆಯುಮಂ ಪೆಱಗಿಕ್ಕಿ ತಗುಳ್ದು ತಾಗಿದೆ ||
ಮ್ಮನಿಬರುಮಂ ವಯೋಧಿಕರಿರಾ ಯುಧಹೀನರಿ ರೆಂದು ನಕ್ಕು ಕೊ |
ಲ್ಲನೆ ಕರುಣಾರಸಾರ್ದ್ರಮನ ನಂತಪರಾಜಿತ ನಾರ್ಯಪೂಜಿತಂ || ೬೧ ||

ಕಂ|| ಏೞು ಮಿದಂ ದಮಿತಾರಿಗೆ |
ಪೇೞಿಂ ಹರಿ ಕರಿಗೆ ಮುಳಿಗು ಮಲ್ಲದೆ ನರಿಗಂ ||
ಕೋೞಿಗಮೇಂ ಮುಳಿಗುಮೆ ಬರ |
ವೇೞಿಂ ನಿಜಸೈನ್ಯ ಸಹಿತ ಮಹಿತನ ನೀಗಳ್ || ೬೨ ||
ಆಜಿಗ ರಕ್ತರ ನಧಿಕ ವ |
ಯೋಜಿತ ರಿವರಂ ಪುರಾಣ ಪುರುಷರ ನಯ್ಯೋ! ||
ಪೂಜಿಸ ದಪಕೃಪೆಯಿಂ ವಪ |
ರಾಜಿತ ನುಱದಿಱುಗು ಮೆಂಬಿದಂ ನಂಬಿದಿರೆ || ೬೩ ||
ಗಗನೇಚರನೊಳ್ ಕಾದುವ |
ಬಗೆ ಕೈಮಿಗೆ ತಂದ ನೆಮ್ಮ ತಮ್ಮಂ ಪೆಱತೇಂ ||
ಮೃಗನಯನೆಯ ನನಿಮಿತ್ತಂ |
ಮೃಗಾಳಿ ಪೋರದು ನೃಪಾಳಿ ಪೋರ್ಗುಮೆ ತಮ್ಮೊಳ್ || ೬೪ ||

ಮ|| ಅದಱಿಂದಂ ವಿಜಯಾರ್ಧಪರ್ವತ ತಟೈಕೋದ್ದೇಶದಿಂ ದಿತ್ತಲೊ |
ರ್ಪದಮಂ ದಾಂಟಿದೆ ನಪ್ಪೊಡಂ ಭವದಧೀಶಂ ಗಂಜಿದೆಂ ಪೋಗಿ ತ ||
ರ್ಪುದು ನೀನಾತನ ನೆಂದನೆಂಬ ನುಡಿಯಂ ಕಂಪೋತ್ಕರಂ ಘೂರ್ಣಿತ ಗ |
ದ್ಗದಕಂಠಂ ತುದಿಗೆಯ್ದೆ ಬಿನ್ನವಿಸಿದಂ ವಾಕ್ಕೋವಿದಂ ಸೌವಿದಂ || ೬೫ ||

ಕಂ|| ಆತನ ನುಡಿ ಯೆಂಬ ಲಯೋ |
ದ್ಧೂತಾನಿಲ ನೆಸಗೆ ಮಸಗಿ ದಮಿತಾರಿ ಮನೋ ||
ಭೂತ ಪ್ರಭೂತ ಕೋಪೋ |
ದ್ಭೂತಾಗ್ನಿ ಶಿಖಾಳಿ ಸಭೆಗೆ ತಲೆ ದೋಱುವುದುಂ || ೬೬ ||

ವ|| ಅವಳಂಬಿತ ಕುಲೀನ ಧೀರತಾಜಲಧಿನೊಯ್ಯನೊಯ್ಯನೆ ತದುದ್ರೇಕಮುಂ ಪದವಡಿಸಿ, ಮುಳಿವೆಡೆಯೊಳಂ ಮುಳಿಸಂ ಮೊಗಕ್ಕೆ ತಾರದೆ, ಗಂಭೀರ ಸಾರತರಕಟಾಕ್ಷನಿಕ್ಷೇಪಣಂಗಳಿಂದಂ ಪ್ರಸಿದ್ಧರುಂ ವೀರಾಗ್ರಗಣ್ಯರುಮಪ್ಪ ಸಭಾಸದರ ಮೊಗಮುಂ ನೋಡುತ್ತು ಮಿನಿವಿಱಿದು ಪರಾಭವಂ ಪ್ರಾಕೃತಪುರುಷಂಗಂಕಾಪುರುಷಂಗಂಪೊತ್ತುನಿಲ್ವುದರಿದು, ಇನ್ನಿದಕ್ಕೆ ತಕ್ಕುದಂ ತಕ್ಕಂದದೊಳ್ ಪೇೞ್ಮವಯುವದಿಂದಮೆನಿತಾನುಂ ಸ್ಥಾನಂಗಳೊಳನೇಕ ಮದಾನೇಕಪಾವಲೇಪ ನಿರ್ಯಾಣವಿದಾರಣನಖನಿಕರ ವಿಜಯಜನಿತಾನುದಾಹರಣಮಪ್ಪ ಹರಿಣರಿಪುಗೆ ಬಿಕ್ಕ ಪೋತ ಕಳಭ ಕುಳ ಮಾರಣ ಕೋಳಾಹಳ "ಮಾನೆ ದಿಂಬಂಗಾ(ಪೆ)ಡೆವಳಿಗೆ" ಯೆಂಬಂತಕ್ಕು ಮೆನಗಪರಾಜಿತಾನಂತವೀರ್ಯ ಹನನ ಮಾದೊರಿಕೇವಲ ಮಂತು ಮಲ್ಲಮುದ್ಧತಮುಂ ಸ್ತಬ್ಧಮುಮಪ್ಪ ಖದಿರಯುಗಳಮುಂ ತಱಿವಂ ತೊಂದಿನಿಲ್ಲದಿಂದೆ (ದಲ್)ತತ್ತರಂದಱಿವೆನೆಂದು ಮೊೞಗುವ ನಿತುಮುಂ ಮೊೞಗಿ ಖಚರಾಧಿನಾಥವಿಳಯಜಳಧರಂ ಮಾಣ್ಬುದುಂ ಯುಗಾವಸಾನಮಹಾಂಭೋಧಿವೇಲಾಕಲ್ಲೋಲವಿಲಾಸಸಮುಲ್ಲಾಸ ಪ್ರತಿಭಾಸಮುಮಂ ಕಿೞ್ಪಡಿಸಿದ ವಿದ್ಯಾಧರರಾಜನ ಸಭಾಮಂಡಳಂ ಕ್ಷೋಭಕ್ಕೊಡರ್ಚಿದಾ ಪ್ರಸ್ತಾವದೊಳ್ ಒರ್ವ ವಿದ್ಯಾಧರ ವೀರಭಟಂ—

ಕಂ|| ಅವತಂಸಾಶೋಕ ನವ |
ಪ್ರವಾಳ ರುಚಿ ಮುಳಿಸೆ ರೂಪು ಗೊಂಡವೊಲೆರಡುಂ ||
ಕಿವಿಗಳೊಳ ಮಾಯಮುಂ ಪ |
ರ್ಚುವಕಳ್ಪಿಪ ತೆಱದಿ ನೆಸೆದು ದಾಸ್ಥಾಯಿಕೆಯೊಳ್ || ೬೭ ||

ವ|| ಮತ್ತೊರ್ವಂ—

ಉ|| ಕೆತ್ತುವ ಮಿಾಸೆ ಕೆಂಪಡರ್ದ ಕಣ್ ಮುಲರ್ದೊಪ್ಪುವ ಮೂಗು ಕೋಪದ |
ತ್ತೆತ್ತಿದ ಭೀಷಣಭ್ರುಕುಟಿ ಘರ್ಘರ ಘೋರ ರವಂ ಮೊಗಕ್ಕೆ ಮೆ||
ಯ್ವೆತ್ತ ಬೆಮರ್ ಮನಂಗೊಳಿಸೆ ಭೂಪತಿಯಂ ಬೆಸವೇೞ್ಪುಗುವರ್ ಲೋ|
ಕೋತ್ತರ ಮಾಗೆ ವೀರಭಟನೇಂ ಕದನಕ್ಕೆ ಮನಕ್ಕೆ ಪೂಣ್ದನೋ || ೬೮ ||

ವ|| ಮತ್ತಮಲ್ಲಿ—

ಉ|| ಅಕ್ಕದೆ ಚಕ್ರವರ್ತಿಯ ತನೂಜೆಯ ನೊಯ್ದನ ಬೆನ್ನ ನೆನ್ನ ಕೂ |
ರ್ವಾಳ್ಕೊಳೆ ಮದ್ವರೂಥಿನಿ ಮನಂಗೊಳೆ ನಾರದ ನೆಯ್ದೆ ನೋಡಿ ಬಾ ||
ನೊಳ್ಕನಿದಾಡೆ ದೇವತತಿ ನೋಡೆ ಕಱುತ್ತಿಱಿದಾಗಳಲ್ಲದೆ |
ನ್ನೊಳ್ಕಱಿಗಣ್ಮಿ ಪೊಣ್ಮುಗುಮೆ ವೀರರಸಂ ಖಚರೇಂದ್ರ ಲೋಕದೊಳ್ || ೬೯ ||

ವ|| ಎಂದೆನಿತಾನುಂ ಗರ್ಜಿಸಿ ಸುಭಟವೃತ್ತಿಯನಾವರ್ಜಿಸಿ ಮಾಣೆ ಮತ್ತೊರ್ವನಾತಸ ನುಡಿಯೆ ಪಡಿಚಂದಮುಂ ಭಿತ್ತಿಯುಮಾಗೆ ದಿಗ್ಭಿತ್ತಿವಿವರಮ ದೆಯ್ದೆ ಯೊಡೆವಿನ ಮಿಂತೆಂದಾಸ್ಫೋಟಿಸುಗುಂ—

ಕಂ|| ಅಪರಾಜಿತನಂ ಮದ್ಬಾ |
ಣಪಾತದಿಂ ಗೆಲ್ದು ರಾಜಸುತೆಯುಂ ತಂದೀ ||
ನೃಪತಿಯ ಮುಂದಿಡದನ್ನೆಗ |
ಮಪಾರ ಭುಜವಿಜಯ ಮೆನಗೆ ಮೆಯ್ವೆತ್ತಪುದೇ || ೭೦ ||

ವ|| ಎಂಬುದುಂ ಪೆಱನೊರ್ವಂ—

ಚಂ|| ಜಿತ ಗಗನೇಚರಾಧಿಪತಿಯೈ ನೃಪ ನೀಂ ನಿನಗಂ ಮನೋವಿರ |
ಕ್ತತೆಯುಮ ನಕ್ಷಿರಕ್ತತೆಯುಮಂ ಪಡೆದಾರಿಪು ಮತ್ತೆ ಬಟ್ಟಿಪೋಂ ||
ಕ್ಷಿತಿಯೊಳಗಿರ್ದಪೋಂ ಮುದದಿ ನೆಂದೊಡೆ ಜೋಳವೊಳಾದ ಪಾಟಾಗಂ |
ಪತಿ ಹಿತವೃತ್ತಿಗಂ ಜಸಕ ಮಿಸ್ನೆ ನಗಾಸೆ ವಡಲ್ಕೆ ಬರ್ಕುಮೇ || ೭೧ ||

ಕಂ|| ಜಯಮುಮಂ ಬಯಸುವ ಡರಿ ಮಾ |
ರಿಯ ನಾವರ್ತಿಸಿಪರೆಂಬ ನಾಣ್ಣುಡಿಗ ಮಳು ||
ರ್ಚಿಯೆ ನಿನ್ನೊಳೆಡಜು ತನಗಜು |
ಕೆಯ ಮಿಟ್ಟುವ ನಿಂತು ತಂದುಕೊಂಡರು ಮೊಳರೇ || ೭೨ ||

ವ|| ಅದಲ್ಲದೆಯು ಮಿಜು ಮುಜು ದೊಜಿ ಗಿದಿರಿಸಿದ ರಿಂಬಂತೆ ನಿನ್ನುಮಂ ಮುಳಿಯಿಸಿ ಬರ್ದುಂಕಲ್ಬಾರದಾದೊಡಂ ಪುಟ್ಟಿರೆ ಕಯ್ಬೇಗುಮೆ ದೇವರಷ್ಟತರಮುಟಿಯದೆಯುಂ ಕರುಮಾಡಮ ನಿಟಿಯುದೆಯುಂ ಸುಖಮಿರ್ಪುದಾಮ ಸಾಲ್ವೆ ಪೆಮಗೆ ಬೆಸಸುವುದೆಂದು ಕೆಯ್ಯೊಳೆ ಬೆಸನಂ ಬೇಡಿದ ನಿಬರುಮಂ ನಿಮಗಮವೆ ತಕ್ಕು ದಾದೊಡ ಮಮಗ ದೆಸಿವಿಜು ದಿನಿಸಂ ಮಾಣಿ ಮೆಂದು ಪದವಡಿಸುವ ದಮಿತಾರಿಯುಮ ನೋರೂರ್ವರಂ ಕಜುಯ ಪಲಿಯಲ್ಮಸಗುವ ವೀರ ಭಟೋತ್ತಮರುಮಂ ಸರ್ವ ದೋಷ ಪ್ರದುಷ್ಟ ಗಜಂಗಳ ಸುಪಲಾಲನೆಯೊಳ ಮಿಚ್ಛಾನುವರ್ತನದೊಳ ಮಳವಳಿಡುವ ಕುಶಲ ಗಜೋಪಜೀವಿಯಂತೆ ಪ್ರಸಂಗಾಭಿಪ್ರಾಯ ವಚನಂಗಳಿ ನಳವಡಿಸಿ ಸುಮತಿ ಯೆಂಬ ಮಂತ್ರಿ ಮಹತ್ತರ ನಿಂತೆಂದ ನಖಿಳ ಖಚರಪತಿಕಿರೀಟಕೋಟಿ ಪಟಂಕಚೂಡಾಮಣಿ ಮರೀಚಿ ಮಂಜರೀರಂಜಿತ ಚರಣ ನಳಿನನ್ಪೆ ನೀಂ ನಿನಗೆ ಭೂಚರಕೀ(ಟ)ಟಿಯುಗಳಕ್ಕೆ ಮುಳಿವುದುಂ ನೊಟವಿಂಗೆ ಕುಪ್ಪೆವರ ಮೆಂಬಂತಕ್ಕು ಮಾದೊಡಂ ಮತ್ಸರ ಮಹೋರಗಕ್ಕ ಮಾಗ್ರಹ ಮಹಾಗ್ರಹಕ್ಕಂ ಕೋಪ ಮದಾನೇಕ ಪಕ್ಕಂ ಪಕ್ಕಾಗೆ ತನ್ನನೊಪ್ಪಿಸುವುದು ಮತಿವಂತಂಗೆ ಪುರುಷಾರ್ಥಮಲ್ತು ಸಕಳ ಕ್ಷಮಾ ಪತಿತ್ವಮ ಸಕಳ ಕ್ಷಮಾ ಪತಿತ್ವಮಂ ಮಾಡುಗುಂ—

ಮ|| ಅದಜಿಂ ಸಂಪ್ರಣಿಧಾನಸಂ ಪ್ರಣಿಧಿಯುಂ ನೀಂ ದೇವ ಮುನ್ನಟ್ಟಿ ನೋ |
ಟ್ಪುದು ತಚ್ಚೇತನೆಯೊಳ್ ಪೊದಬಿ ನಯಮುಂ ಮತ್ತಿತ್ತದೋಜಾಗೆ ಮಾ ||
ಟ್ಪುದು ಕಾಲೋಚಿತ ಸಂಧಿವಿಗ್ರಹದೊಳೊಂದಂ ಕಾರ್ಯಮುಂ ಪ್ರಾಪ್ತ ಮ |
ಪ್ಪುದ ನಾಪ್ತೋಕ್ತಮ ನುಂತೆ ರಾಘಸಿಕ ಪಾಕ್ಷಾತಕ್ಕೆ ಮೆಯ್ದು ಪ್ಪುದೇ || ೭೩ ||

ವ|| ಎಂದರ್ಥಶಾಸ್ತ್ರಾಭಿಪ್ರಾಯಪುರಸ್ಸರಂ ನುಡಿದು ಪದವಡಿಸಿದಸುಮತಿಯವಚಕ್ಕೆ ಪದವಟ್ಟು ದಮಿತಾರಿ ನೀತಿವರ್ಧನನಿಮಿತ್ತಂ ಪ್ರೀತಿವರ್ಧನನೆಂಬ ದೂತಮುಖ್ಯನ ನಟ್ಟಿದೊಡಾತಂ ತನ್ನಾಳ್ದನ,

ಕಂ|| ನೆಜಿಿದಾಯುಷ್ಯಮೆ ಮಿಟ್ಟುವ |
ನಜಿಸುವ ತೆಜದಿಂದ ಮವರ ಪ್ರೋಬಟಿಯನೆ ಬಂ ||
ದಜಿಸಿ ಸಭಸ್ಥಳ ದೊದವಿದ |
ತಜಿಂಬು ಕಳನಾಗಿ ಕಾದಲೆಂದಿರ್ದವರಂ || ೭೪ ||
ಪ್ರಿಯೆಯ ಬರಪಾರ್ವಪೊಲ |
ಪ್ರಿಯ ಗಗನ ಚರೇಂದ್ರ ರುಂದ್ರ ಸೇನೆಯ ಬರಪಾ ||
ರ್ವ ಯಮೂರ್ತಿಯುಮಂ ನಯಮೂ |
ರ್ತಿಯುಮಂ ಪೋಲ್ಪರ ನಪಾರ ಪೌರುಷ ಪರರಂ || ೭೫ ||

ವ|| ಪ್ರೈಹಾಯಸ ಯುದ್ಧಸನ್ನದ್ಧರ ನಪರಾಜಿತಾನಂತವೀರ್ಯರಂ ಕಂಡು ಪೊಡವಟ್ಟು ಅಪ ರಾಜಿತನ ನಿತ್ತ ಮನಮಿತ್ತು ಕೇಳ್ವುದೆಂದಿಂತೆಂದಂ, ಪ್ರತ್ಯಕ್ಷಪ್ರಮಾಣಮೆನಿಸಿದಾಸ್ಥಾಯಿಯಾಗಿಯುಂ ಲೋಕತ್ರಯ ಸಂಚಾರಿಯೆನಿಸಿದ, ಕುವಳಯ ವಿಭ್ರಾಜಿಯಾಗಿಯುಂ ಕುಮುದ ದಳ ಧವಳನೆನಿಸಿದ, ನಿನ್ನ ಜನೋತ್ಸಾಹಕರಣಂ ಜಗಕ್ಕುದಾಹರಣಮಾದುದು ಮತ್ತಂ ವಿದ್ಯೋಪಶಮ ಗಂಭೀರ ಸ್ಥಿರ ವದಾನ್ಯತ್ವ ಸಾಧುಜನಸಹಾಯತಾದಿ ಗುಣನಿಧಾನನಂ ನಿನ್ನನ್ನನಂ ಮತ್ತೊರ್ವನ ನೆಲ್ಲಿಯುಂ ಕಂಡುಂ ಕೇಳ್ದು ಮಱಿಯೆ ವದನ್ನಗ ಮಿಕೆ—

ಮಾಳಿನಿ|| ಉಭಯಕುಲವಿಶುದ್ಧರ್ ನ್ಯಾಯವಂತರ್ ಜಿತಾತ್ಮರ್ |
ಪ್ರಭುಗಳಧಿಕ ಪುಣ್ಯರ್ ಮುನ್ನೆ ನಿಮ್ಮಜ್ಜಪಜ್ಜರ್ ||
ಶುಭಚರಿತ ತದೀಯಾ ನೂನ ವಂಶಾಧಿಪತ್ಯ |
ಪ್ರಭವನೆ ಯದಱಿಂದೀ ಮರ್ಯಶಕ್ಕೆಂತು ಸೋಂತೈ || ೭೬ ||

ಕಂ|| ಮಾನೋನ್ನತ ನಿರವದ್ಯಕು |
ಲೀನ ಮಹಾಪುರುಷ ಪರಧನಂಗಳ ಪತ್ತಾ ||
ದಾನಂಗಳ್ ನಿನಗಾಗ ವ |
ಮಾನುಷ ಮಾರೂಪಿ ದಕ್ಕ ಮರಿಯರ ಪೆಂಡಿರ್ || ೭೭||

ಏನಾನುಮೊಂದು ಹೇತುವಿ |
ಧಾನದಿ ನವಿದಿತಮೆ ವಿದಿತ ವಲ್ಲದೆ ಭವದು ||
ಧ್ಯಾನಮು ಮಪ್ಪುದ ನಯವಿ |
ಜ್ಞಾನಿಗೆ ನಿನಗಾ ಗಲಾಗ ದೀವೃತ್ತಾಂತಂ || ೭೮ ||

ನಿನಗಂ ದೊರೆಕೊಂಡುದು ತ |
ಮ್ಮನಿಂದ ಮಾ ಕಷ್ಟ ಚೇಷ್ಟಿತಂ ಸಂಸರ್ಗಂ ||
ಜನಯಿಸುಗುಂ ಗುಣದೋಷೋ |
ಪನತತ್ವಮ ನೆಲ್ಲಿಯುಂ ಮಹೀ ಮಂಡಳದೊಳ್ || ೭೯ ||

ಆಗದ ನುಡಿಯ ನಿದಂ ಕೇ |
ಳ್ದಾಗಡೆ ದಮಿತಾರಿ ನಾಣ್ಚಿ ಸಭೆಯೊಳ್ ತಲೆಯಂ ||
ಬಾಗಿ ಮದೀಯ ಕುಲ ಕ್ಕಿನಿ |
ತಾಗ ಳವರ್ ಕೆಟ್ಟ ಳಿನಗೆ ಪುಟ್ಟಿದ ಳಲ್ಲಳ್ || ೮೦ ||

ವ|| ಎಂದು ಸ್ಮರಿಸ ದಳವಲ್ಲದ ಉರ್ದು ಕುಳಾಪವಾದನದ ನುಡಿ ಯೆಯ್ದರೆ ಕರಗಿ ಕೊರಗಿ ದಳ್ಳಿರ್ದೆಯ ನೆಂತಾನು ಮೆಂತಾನು ಮಾಱಿಸಿ —

ಕಂ|| ದಂಡಿತ ವಿರೋಧಿ ಕುಳನೇ |
ಗೊಂಡೇಂ ಗಳ ಗೆಯ್ವು ದರಿದು ಕುಡೆ ಕುಡುಗೂಸಂ ||
ಕೊಂಡೊಯ್ವು ದುಚಿತ ಮಾಯದೆ |
ಕೊಂಡೊಯ್ವು ದನುಚಿತ ಮೆಂಬ ನುಡಿಯಂ ನುಡಿದಂ || ೮೧ ||

ಉಡುಗದ ಜಡತ್ವ ಮುಡುಗದ |
ಜಡತ್ವ ಮಮರ್ದ ಗುಣ ಮಮರ್ದಗುಣ ಮೆಂಬಿವಱಿಂ ||
ಬಿಡದೆ ಕುಳಂ ಮಸುಳ್ವೊಡ ಮೆಸ |
ಪ್ಪೊಡಂ ಮಗಳ್ ಪುಟ್ಟೆ ಮಸುಳ್ಗು ಮೆಸಗುಂ ಜಗದೊಳ್ || ೮೨ ||
ಏಕೆನೆ ಮಗ ಳಿತರ ಕುಳಂ |
ನೀಕ ಸ್ತ್ರೀಸಂಗಮೊಳ್ಗುಣಂ ಕಿಡುಗುಮ ಪ್ಪು ||
ತ್ರೀಕುಳ ಮಾಗದ ಪರಪುರು |
ಷಾಕುಳತೆಯ ನನ್ವಯಕ್ಕೆ ದೂರಂ ತಂದಳ್ || ೮೩ ||

**ವ||** ಎಂಬನ್ನೆಗಂ

ಕಂ|| ಕೂಸಂ ತಂದುದ ನಱಿದ ಮ |
ರಾಸುರ ನಿಭ ಬಲ ಖಗೇಂದ್ರ ಬಲ ಚತುರಂಗಂ ||
ಭಾಸುರ ವೀರ ಭಟ ಪ್ರವಿ |
ಭಾಸಂ ವಾರಾಶಿ ಮೊರೆ ವಪ್ಪಿದ ತೆಱದಿಂ || ೮೪ ||
ಬರೆ ಖಗ ವಂಶ ಶಿಖಾಮಣಿ |
ಬರಲೀಯದೆ ವಿಭುವ ನಾತನಂ ನೋಯಿಪುದೇಂ ||
ಪುರುಷಾರ್ಥಮೆ ಮಂತದೊಳೇಂ |
ಕರಿ ಹರಿಯೊಳ್ ಸೆಣಸಿ ಪೋರ್ದು ನಿರ್ವಹಿಸುಗುಮೇ || ೮೫ ||
ಸಿರಿಯೊಡೆಯನಾಗಿಯುಂ ದ |
ರ್ಪರಹಿತ ನೊಡೊಡೆಯ ನಾಗಿಯುಂ ವಿಗಳಿತ ಮ ||
ತ್ಸರ ನಧಿಕ ನಾಗಿಯುಂ ನ್ಯಾ |
ಯ ರಕ್ಷನೇಂ ಪಿಱಿಯನೊ ಖಗೇಂದ್ರಾಧೀಶಂ || ೮೬ ||
ಆತನ ನಾರಾಧಿಸಿ ನೃಪ |
ನೀತಿವಿದರ್ ಖೇಚರಾವನೀಚರ ರಾತ್ಮ ||
ಖ್ಯಾತಿ ಶ್ರೀಯಂ ಕಾದಳಿ |
ಜಾತ ನೃಪಾನ್ವಯರ ನಿನಿಬರಂ ಪೆಸರ್ಗೊಳ್ವೆಂ || ೮೭ ||
ಗುರುವಲ್ಲನೆ ಪತಿ ಪರಮೇ |
ಶ್ವರ ನಾತಂ ತ್ವತ್ಪ್ರಮಾದಮಂ ಸೈರಿಸಿದೊಂ ||
ನಿರುಪಮ ಮಿದೆಂದು ಶಂಕಿಸ |
ದಿರು ಮುಟ್ಟದು ಗುಣಿಗೆ ದೋಷಿಗಕ್ಕುಂ ದೋಷಂ || ೮೮ ||
ಬಿಡು ಕನ್ಯಾರತ್ನಮ ನೀ |
ಗಡೆ ಚಕ್ರಿ ಪದದ್ವಯಕ್ಕೆ ತಡೆದಿರದೆಱಗೀ ||
ಪಡೆವಾತೊ ಬಂದು ಕಾಣ್ ಕಂ |
ಡೊಡೆ ಪಥ್ಯಮ ಪಥ್ಯಮಿಾ ಕನಿಷ್ಠಾ ಚರಣಂ || ೮೯ ||

ವ|| ಎಂದು ಸಾಮ ಪೂರ್ವಕ ಮಕ್ರಮಣಾವಸಾನಾನಂದಿತ ಗಂಭೀರೋದಾರಸಾರ ಭಿನ್ನನಯ ಸಂತತಿ ಸಮನ್ವಿತಮ ನಱುಯೆ ತೆಱಿಯೆ ನೆಱಿಯೆ ನುಡಿದು ಪ್ರೀತಿವರ್ಧನಂ ಮಾಣ್ಬುದುಂ—

ಮುನಿಸೊಡನೆ ಕೇಳ್ದು ನುಡಿದನು |
ಜನಂ ಕಷಾಯಾಕ್ಷನಂ ಸ್ಫುರತ್ಸ್ಫುಕ್ಕನ ನೊ ||
ಯ್ಯ ನಿರೆಂದು ತಿತಿಕ್ಷಾನ್ವಿತ |
ನನಾಕುಳಂ ನುಡಿಗು ಪೊಸೆಯೆ ದಶನ ದ್ಯುತಿಗಳ್ || ೯೦ ||

ನಾಲ್ಕುಮುಪಾಯದ ನುಡಿಗಳ |
ಸಿಲ್ಕಾಸಿಲ್ಕಿಗಳ ನೆಯ್ದೆ ನುಡಿದೈ ಕ್ರಮದಿಂ ||
ಬಲ್ಕಣಿಯೆ ನಯದೊಳ್ನುಡಿ |
ಯಲ್ಕೊಂಕಂ ಕಲ್ಪುವಲ್ತೆ ನಿನ್ನೊಂದಿಗರೊಳ್ || ೯೧ ||

ಮಂದಾಕ್ರಾಂತಂ|| ಎನ್ನುದ್ಯೋಗಂ ಪ್ರಕಟಮಱುಯಲ್ಬರ್ಕು ಮಾವಂಗ ಮಂತುಂ |
ಮುನ್ನಂ ಪೇೞ್ದಟ್ಟಿನೆ ನೆಱಿಯೆ ಪೇೞಿತ್ತೀಱಿ ನೀಂ ಸೌವಿದಂ ಕೇಳ್ ||
ನಿನ್ನೀ ವಾಚಾಳತೆಯ ಬಲದಿಂ ದಂತರಾಳಂಗಳಂ ಸಂ |
ಭಿನ್ನಾಳಾಪಂಗಳ ನಱಿಸದೇ ಕಾರಣ ಕೈತ್ತಿಕೊಂಡಯ್ || ೯೨ ||

ಕಂ|| ಅರಸರ ಮಗ ನಥಟಂ ಪಗೆ |
ವರ ಚಿತ್ತಮ ನಱೀದು ಮನುವರ ಕಹಿತಂ ಬಂ ||
ದಿರೆ ಪೆರ್ಗಡೆ ತನ ಮಟ್ಟುವ |
ನರಾತಿ ಜೆನ್ನಟ್ಟಿ ನೆಟ್ಟ ನೋಡುವನಕ್ಕುಂ || ೯೩ ||

ವ|| ನಿನ್ನ ಬಂದ ಬರವಿಂಗೆಮ್ಮ ಮನಂ ಮೊದಲಾಗಿ ನಾಣ್ಚಿದಪುದು. ಈ ವಿದ್ಯಾಧರಶ್ರೇಣಿಯ ಪರಿಭಾಷೆಗಳ್ ನಿನ್ನವಾಗದೆ. ಸಾಮಂ ಪ್ರಿಯ ಜನ ಪ್ರಯೋಜ್ಯಂ, ಅಲ್ಲದೆಡೆಯೊಳುನ್ಮತ್ತವಿಳಸಿತಂ. ದಾನಂ ದುರ್ಬಲ ಲುಬ್ಧಪ್ರಸ್ತುತಂ. ಭೇದಂ ಕೃತ್ಯಪ್ರೇಕ್ಷೋಪೇತ ಭೂಪಾಲ ಪ್ರಾಪ್ತಂ. ದಂಡಂ ಪೌರುಷಾತ್ಯಯೋಚಿತಂ. ಈ ಪೇೞ್ದನಿಬರೊಳಮೊರ್ವರು ಮಲ್ಲವೀನುಡಿಯುಪಾಯಂಗಳನೆನಗೆಪೇಳ್ವುದಂ ನಿನ್ನಯ್ದುದ ನವಕಪಿತ್ಥಮುಂ ನೀನಭಿನಯಿಸಿದಂತಾಗಿರ್ದಪುದು. ಮೊಲಕ್ಕೊಡ್ಡಿದ ಬಲೆಯೊಳ್ ಮೃಗರಾಜಂ ತೊಡರ್ಗುಮೆ? ನಿಮ್ಮರಸಂ ಸುಕುಮಾರಚಕ್ರವರ್ತಿ, ನಡೆದೊ ನಿಲ್ಲಿವರಂ ಬರಲಾಱ ನವಱಂದ ಮಾತ ನೆಲ್ಲಿರ್ದ ನಲ್ಲವರ ಮಾನೆ ಪೋಗಿ ಕಾದುವೆನೆಂದು ತಱಿಸಂದು ಕಟ್ಟಾಳಾಗಿ ನಿನ್ನ ಬರ್ಪಾಗಳೆ ಬರಲೆಂದಿರ್ದ ನೆನ್ನ ತಮ್ಮನ ನತ್ಯಾಗ್ರಹದಿಂದಂ ಮಾಣಿಸಿದೆ ನೆಂದೆನಿತಾನುಂ ತೆಱದಿಂ ಸೌಜನ್ಯ ಕಂದಾಂಕುರಂ ಗರ್ಜಿಸಿ ದೂತನಂ ವಿಸರ್ಜಿಸಿದೊಡಾತನುಂ ಬಂದ ನಿತುಮಂ ದಮಿತಾರಿಗೆ ಸಭಾ ಮಧ್ಯದೊಳ ಱಪುವುದುಂ—

ಕಂ|| ತದನಂತರ ಮಱ ಯುದ್ಯೋ |
ಗದ ಮಾತಂ ಕೇಳ್ದು ನಕ್ಕು ದಮಿತಾರಿ ಸಭಾ ||
ಸದರಂ ಪೋಗಲ್ಪೇೞ್ದು ರ |
ಮುದಾತ್ತ ಮತಿ ಕರೆದು ಬೆಸಸೆ ಸೇನಾಧಿಪನಂ || ೯೪ ||

ಆತನ ಪೊಯ್ಸಿದ ಭೇರೀ |
ಜಾತ ರವಂ ಖಚರ ಪತಿಯ ನಪರಾಜಿತ ನೇ ||
ಮಾತೊ ತಡೆದಿರದೆ ಗೆಲ್ದವ |
ನೀತಳಮುಂ ತಳೆಗು ಮೆಂದು ಸಾಱುವ ತೆಱದಿಂ || ೯೫ ||
ದೆಸೆದೆಸೆ ಗೆಸವುದು ಮುದ ನಾ |
ಲಿಸಿ ಚಕ್ರಿಗೆ ಸುರನೊ ದನುಜನೋ ಮೇಣ್ ಪೇಟ್ ಮಾ ||
ನಸನೊ ರಥಾಂಗಾಯುಧ ದೇ |
ರ್ವಸಕ್ಕೆ ಪಕ್ಕಾದ ನೆನುತು ಮಾಱುಂ ಬಲಮುಂ || ೯೬ ||

ವ|| ಅಂಬುಧಿವೇಳಾ ವಿಳಾಸೋಪಹಾಸಿಯಾಗಿ ನೆರೆ ಪರಮನೆಯ ಬಾಗಿಲ್ಗೆ ಬಂದು ಗಜ ತುರಗ ರಥ ಪದಾತಿ ಪ್ರಕಾರದಿ ನತಿ ಕುಪಿತಾಂತಕಾಟೋಪಮುಂ ಕೆಯ್ಕೊಂಡು ನಿಲೆ—

ಕಂ|| ಪೂರಿತ ರಣ ಶಂಖ ಗಭೀ |
ರಾರಾವಂ ದೆಸೆಯ ಕೋಣ ಕುಸುಕುಱ ಗಜಘಂ ||
ಟಾರವಮು ನುಱಿದ ಪೆಱಗಿಡೆ |
ಭೈರವ ಮೆಸೆದತ್ತು ಚರದ ಬಲ ಜಲನಿಧಿಯೊಳ್ || ೯೭ ||

ವ|| ಮತ್ತಮಲ್ಲಿ—

ಮ|| ನರಕೀಟದ್ವಯ ಸಂಗರಕ್ಕೆ ಖಚರೇಂದ್ರಾ ಧೀಶ ನಿಂತೀಕೆ ಕಾ |
ತರನಪ್ಪಂ ಗಡಮೆಂದು ನಕ್ಕು ಮುದಟಿಂ ದಾನೊರ್ವ ನೊರ್ವಂ ವಿಯ ||
ಚ್ಚರ ನೀ ಸೈನ್ಯ ಮನಂತ ಮಿರ್ವರ ಹಿತರ್ ಚೀ ನಾಣ ಪುತ್ತೆಂದು ದು |
ರ್ಧರ ಗಾತ್ರತ್ರಮ ನೊಲ್ದು ನಿಲ್ಲಱವರೇ ಬಲ್ಲಾಳ್ಗ ಳೇಕಾಕಿಯಂ || ೯೮ ||

ಕಂ|| ಅರಿಯಾಪ್ತ ನವನ ಪೆಸರೇ |
ನರಾತಿ ಬಳ ಜಳಧಿವಳಯ ಮೆನಿವಿಱದು ಬಲಂ ||
ಪಿರಿದಪ್ಪ ಚಕ್ರವರ್ತಿಗ |
ಮಿರದಿನಿತಂ ಮಾಡಿದಾತ ನಧಟೇಂ ಪಿಱದೋ || ೯೯ ||

ವ|| ಎಂದೋರೊರ್ವರೊಂದೊಂದಂ ನುಡಿವುದುಂ ಮತ್ತೊಂದೆಡೆಯೊಳ್—

ಕಂ|| ಗರಟಿಗೆ ಯುಕ್ಕಡದ ವಿಯ |
ಚ್ಚರರಂ ಪೇಸೇಱಿ ಕೊಂದರೋ ಭೋಂಕನೆ ನೋ ||
ಡಿರೆ ಬೀದಿ ವೀದಿಯುಂ ದೆಸೆ |
ವರಿ ವರಿದ ಪರಿದರ ತೆಱನ ನಱಿವಿರೆ ಪೇಱಿಂ || ೧೦೦ ||

ವ|| ಎಂದತಿ ವಿಹಸ್ತ ನಗರ ನಾರೀ ಜನಂಗಳ ನಂಜದಿರಿ ಮಂಜದಿರಿ ಮೆನುತುಂ ರಾಜ ಮಂದಿರಾಂತಬಹಿರ್ಭಾಗ ಭೂಮಿತಳ ಪ್ರದೇಶದೊಳ್ ಮೇಳೈಸಿ ಬಂದು ನಿಂದ ಸೈನಿಕಪ್ರಧಾನರೊಳ್-

ಕಂ|| ಕವಚ ನವರತ್ನ ದೀಧಿತಿ |
ನಿವಹಾರುಣ ಧವಳ ಕಿರಣ ಮಪರಾಜಿತ ನು ||
ತ್ತವಳ ನಿಸೆ ದೂರ ಪಾತೀ |
ಷು ವೇಧದೊಳ್ ಪುಣ್ಣ ಸರಲ ಪುದಿವಂ ಪೋಲ್ಗುಂ || ೧೦೧ ||

ವ|| ಅಂತು ನೆಱೆದ ಚಾತುರ್ದಂತ ಬಲಜಲಧರ ರಭಸಂ ಪ್ರಭಿನ್ನ ಬ್ರಹ್ಮಾಂಡಾಖಂಡ ಶಂಕೆಯಂ ಪುಟ್ಟಿಸೆ ತೊಟ್ಟನೆ ಕೊಳೆ ತದ್ವಿಯಚ್ಚರ ಸೇನಾ ವ್ಯಾಜೃಂಭಣ ಮಾಪ್ರಸ್ತಾವದೊಳ್ ||

ಕಂ|| ಸ್ಯಂದನ ಮದಗಜ ಕೇತನ |
ಸಂದೋಹದೊಳೆಯ್ದೆ ಸೆಣಸಿದಂತಿರೆ ನಭದೊಳ್ ||
ಸಂಧಿಸಿ ಸಿಂದುವು ಕೇತುಗ |
ಳಂದಪಜಯ ಹೇತುಗಳ್ ಖಗೇಂದ್ರಾಧಿಪನಾ || ೧೦೩ ||

ಪೊತ್ತಿ ಪೊಗೆದುವು ದಶಾಶಾ |
ಭಿತ್ತಿಗಳುರಿದುವು ನಭಂ ನೆಲಂ ಮೊಱಗಿದುದೊಂ ||
ಛತ್ತ್ರಂ ಗ್ರಹಂಗಳೞ್ಕ್ಕಾ |
ಡುತ್ತಿರ್ದುವು ಬಿದ್ದುವಳ್ಕೆ ಪಗಲುಳ್ಕ್ಕಂಗಳ್ || ೧೦೪ ||

ಉ|| ನಾಗತರಂಗಳೊಂದೆ ಕಳಭಕ್ಕೆ ಮೊಗಂದಿಱಿವತ್ತು ಪೋಕದು |
ದ್ವೇಗದೆ ಸಾಲಭಂಜಿಕೆಗಳೞ್ತುವು ಪಟ್ಟದ ದಂತಿ ಪಟ್ಟದಿಂ ||
ಪೋಗದೆ ಬಿೞ್ದು ದೞ್ದು ನಿಳೆಯೊಳ್ ನಿಧಿಗಳ್ ಕರುವಾಡ ಮೋಱೆ ಪೋ |
ಯ್ತೋಗಡಿಸಿತ್ತು ಚಿತ್ತದ ಮುದಂ ಗಗನೇಚರ ಚಕ್ರವರ್ತಿಯಾ || ೧೦೫ ||

ಕಂ|| ಕುದುರೆಗಳ ಬಾಲದಿಂ ಕೆಂ |
ಡದ ತಂಡಂ ಭೋಂಕನುದಿರ್ದ ವದಿರ್ದತ್ತು ದಳೇ ||
ಱಿದ ಸಿಂಹಪೀಠ ಮಿರ ದೊರ |
ಲಿದುದು ಪುರಶ್ರೀ ತ್ರಿಖಂಡ ಭೂವಲ್ಲಭನಾ || ೧೦೬ ||

ಗಱಗಱ ನುರಿದುವು ಕಣ್ಬಸಿ |
ಪಱಿಲೆಪ್ಪದ ರೂಪುಗಳ್ಗೆ ರಾಜ್ಯಾಂಗಂಗಳ್ |
ಕಱಕಱ ಮಾಗಿರ್ದುವು ತ |
ತ್ತಱಗುದಿದುವು ಭವನ ದೀರ್ಘಿಕಾಚ್ಛ ಜಲಂಗಳ್ || ೧೦೭ ||

ವ|| ಅಂತು ವೈಹಾಯಸ ಭೌಮ ದಿಗ್ಭವ ಸ್ವೈನ್ಯಜ ಗ್ರಹೋದ್ಭೂತಂಗಳಯ್ದು ತೆಱದುತ್ಪಾತಂಗ ಳೊಡನೊಡನೆ ನೆಗೆದು ವಾಗಳ್--

ಉ|| ಪಡೆವಳ್ಳಂಗೆ ರಥಾಂಗಹೇತಿ ನಡೆಯಲ್ವೇೞ್ ಬೇಗ ಮಿಾ ನಿನ್ನ ಪ |
ರ್ವಡೆಯಂ ನೀ ನೆನೆ ನಮ್ರಮೂರ್ತಿ ಬೆಸವೆತ್ತಾಬೀರವಟ್ಟಕ್ಕೆ ಮೆ ||
ಟ್ಟಿಡೆ ಬೀರಾಂಗನೆ ನೇಸಗೊಂಡ ಪಡೆಯಂ ಕೈಸನ್ನೆಗೆಯ್ದುದ್ಧತಂ |
ನಡೆಯಲ್ವೇೞ್ದೊಡೆ ಮೇರೆದಪ್ಪಿದ ಲಯಾಂತ್ಯಾರ್ಣವಾಕಾರದಿಂ || ೧೦೮ ||

ವ|| ಪೆರ್ವಡೆ ನಡೆವುದುಂ, ಇತ್ತ ಚಕ್ರವರ್ತಿ ಕುಲಧನಂಗಳುಂ ರಾಜ್ಯ ಚಿಹ್ನಂಗಳು ಮುಱಿ ದುಱಿದ ಮಣಿಕನಕಾದಿ ಸಾರ ದ್ರವ್ಯಂಗಳುಂ ವ್ಯಯಸಾಧ್ಯಸಾಧುವಾದ ಪುಣ್ಯನಿಮಿತ್ತ ಮನೇಕಮಾಗಧ ವಂದಿ ಬೃಂದಾರಕ ಬೃಂದಕ್ಕಿತ್ತು ನಾನಾವಿಧದ ಪದಿರ ಪಱೆಗಳೆಸೆಯೆ ಪಲವುಂ ತೆರದ ನಿಜಾನ್ವಾಯ ವಿಜಯಧ್ವಜಂಗಳ ನೆತ್ತಿಸಿ ಶೂರಾಂಗರಕ್ಷ ಪರಿವೃತನಾಗಿ ಪೆಸರ ಕರಿತುರಗ ವರೂಥಂಗಳಂ ಪದವಿಯ

ಮಕುಟಬದ್ಧ ಮಹಾ ಸಾಮಂತ ವೀರಭಟಕೋಟಿ ಗಟ್ಟಿ ದೇವಗುರು ಪೂಜಾವಿಧಾನಾನಂತರಂ ಜ್ಞಾನ ಕುಲ ವಯೋವೃದ್ಧರ ನನುಕ್ರಮದಿಂ ಯಥಾಕಾರಮುಂ ತಣಿಪಿ ಪ್ರಬಲ ಲಕ್ಷಾಕ್ಷೌಹಿಣೀಲಕ್ಷ್ಯಬಲಂ ಮುಂದಂ ನಡೆಯೆ ಕರುವಾಡದಿಂ ಪೊಱಮಟ್ಟು—

ಕಂ|| ಧೃತಖಟ್ಗ ರಷ್ಟವರ್ಗಿಗ |
ಳತಿ ಚಟುಳರು ನೊಳಗಣೆರಡು ಕೆಲದೊಳ್ ಬರೆ ಭೂ ||
ಪತಿ ಪೋಲ್ತು ಸುರಗ ಶಾಖಾ |
ವೃತ ಜಂಗಮ ಸಾಂದ್ರ ರುಂದ್ರ ಚಂದನ ತರುವಂ || ೧೦೮ ||

ಹರಿಣೀ ವೃತ್ತಂ|| ಕನಕರಥಮುಂ ದ್ವಾತ್ರಿಂಶದ್ವಿಸ್ಫುರತಾಯುಧ ಪೂರ್ಣಮುಂ |
ಮನದ ಜವಮುಂ ಗೆಲ್ದಿರ್ದಶ್ವಂಗಳಿಂ ವಿಭು ಮಾಡಿ ಕೇ ||
ತನದ ಹರಿಗಳ್ ವಾತ ವ್ರಾತಂಗಳಿಂ ಮಿಳಿರ್ದಾಡೆ ತ |
ಕ್ಕನೆ ನಡೆವುತುಂ ಶೌರ್ಯ ಪ್ರಖ್ಯಾತನೊಳ್ ರಥಸೂತನೊಳ್ || ೧೦೯ ||

ಕಂ|| ಅರದದ ಪೊಂಗಾಲಿಯ ಜೀ |
ರ್ಗರೆವಂದ ಮನಂತವೀರ್ಯ ನೇಱುವ ನಿನಗಂ ||
ಪರಿವೆನಗ ಮೊಡನೆ ಕೇಡಂ |
ತರೆ ನಿನ್ನುಮ ನೆನ್ನುಮಂ ಪೆಱಂ ಕಾದಪನೇ || ೧೧೦ ||

ಎಂದು ಭಯವಶದಿ ನಿರದಾ |
ಕ್ರಂದಿಸುವಂ ತೆಸೆಯೆ ಬೇಱೆ ಶಂಖರವಂ ನಿ ||
ನ್ನಂದಂತೆ ನಿರುತ ಮೆಂಬೊಂ |
ದಂದದಿ ನೊಡನೊಡನೆ ನೆಗೞ್ದೆ ಪೊಗೞ್ದೆ ಜಗಂಗಳ್ || ೧೧೧ ||

ಚಕ್ರಂ ಪ್ರಸನ್ನ ದಶ ದಿ |
ಕ್ಚಕ್ರಂ ಮುಂದಾಗಿ ನಡೆಯೆ ನಭದೊಳ್ ರಥ ಚ ||
ಕ್ರಾಕ್ರಮಣ ಕಖಿಳ ವಸುಧಾ |
ಚಕ್ರಂ ಪಡೆ ಗಳ್ಕೆಯಾಗಿ ನಡುಗೆ ಸುರರ್ಕಳ್ || ೧೧೨ ||

ವ|| ಅಂತು ಬಂದೆರಡನೆಯ ಬಾಗಿಲ್ವಾಡಮುಂ ಪೊಱಮಟ್ಟು ಪುರಂಧ್ರೀ ಜನ ದಿಕ್ಕುವ ಸೇಸೆಯುಮಂ ಲಾಜಾವರ್ಷಮುಮ ನಾಂತು ಬರೆವರೆ—

ಕಂ|| ಅರಸರ ಬರ ಪಾರುತ್ತಿ ||
ರ್ದ ರಾಜಕಂ ಬೇಗ ಮೆಱಗೆ ತನ್ಮಣಿ ಮಕುಟ ||
ಸ್ಫುರಣೆಗಳಿಂ ವರ ರಾಗಂ |
ಬೊರೆದಂತೆಸೆದತ್ತು ರಾಜ ಭವನಾಂಗಳದೊಳ್ || ೧೧೩ ||

ವ|| ಅವರಂ ನೇತ್ರತ್ರಿಭಾಗಾಪಾಂಗ ಸಮುಗ್ರೇಕ್ಷಣ ಸ್ಮಿತ ದರಹಸಿತ ಹಸಿತ ಭ್ರೂವಿಕ್ಷೇಪಾಳಾಪ ಪರಿಹಾಸ ವಚನಂಗಳಿಂದ ಮುವರವರ ಳವಿಗಳಿಂದೆ ಸಂತಸಂಬಡಿಸಿ ತದನುಗಮ್ಯಮಾನಂ ದಮಿತಾರಿ ರಾಜಮಂದಿರದಿಂ ಪೊಱಮಟ್ಟು ರಾಜಮಾರ್ಗದೊಳಗನೆ ಪೋಗಿ ಪೊಱವೊೞಲೊ ಳೊಡ್ಡಣಮ ನೊಡ್ಡ ವೇೞ್ಪುದುಂ ಸೇನಾನಾಯಕಂ —

ಉ|| ಶೂರಪದಾತಿ ಮುಂದೆ ಘಟೆ ಪಿಂದೆ ರಥಂ ನಡು ಪಕ್ಕಲಂಗಳೊಳ್ |
ಸಾರ ಹಯೋತ್ಕರಂ ನೆರೆದು ನಿಲ್ವಿನ ಮೊಡ್ಡಿ ನಿಜೇಶ ನಾಜ್ಞೆಯುಂ ||
ಪಾರುತು ಮಿರ್ದ ನಿತ್ತಲಪರಾಜಿತ ನೂರ್ಜಿತ ಕೋಪ ರಾಜಿತಂ |
ದೂರದೆ ನಿಂದು ನೋಡಿ ರಿಪುಸೇನೆಯ ನಪ್ರಮಿತಾರಿ ಸೇನೆಯುಂ || ೧೧೪ ||

ಮ|| ಅಗ ರಾಜಾಕೃತಿ ವಿಭ್ರಮಾನು ಕರಣೋದಗ್ರಂಗಳಿಂ ನೋಡಿ ಮು |
ಯ್ಯುಗಳಂ ಕಲ್ತ ಶರಾಸನಂ ಸಫಲ ಮಿಂದಾಯ್ತೆಂಬ ನಚ್ಚಿಂ ಮುಗು ||
ಳ್ನಗೆ ನಕ್ಕಂಕದ ವೀರಲಕ್ಷ್ಮಿ ಪೆಱಗಿರ್ಲ್ಲೆಂಬನ್ನೆಗಂ ತನ್ನ ನಾ |
ವಗ ಪೊಲ್ಲಿರ್ಪಿನ ಮೇರ್ವಿನ ಕ್ಕೆಳಸಿದಂ ಸೌಜನ್ಯ ಕಂದಾಂಕುರಂ || ೧೧೫ ||

— **ಗದ್ಯ** —

ಇದು

ಜಿನೇಂದ್ರ ಚರಣ ಸರಸೀರುಹ ಶಿಲೀಮುಖಾಯಮಾನ

**ಶ್ರೀಮದುಭಯಕವಿ ಚಕ್ರವರ್ತಿ**

ನಿರ್ವರ್ತಿತಮುಂ

**ಅಮ್ಮನಭಕ್ತಾಭಿಧಾನಮಲ್ಲಪಾರ್ಯ**

ತದನುಜಾತಾಭಿಜಾತ ಸಾರಸ್ವತ

ಪುನ್ನಮಾರ್ಯ ಕಾರಿತಮುಮಪ್ಪ

**ಪುರಾಣಚೂಡಾಮಣಿಯೊಳ್**

ತೃತೀಯಾಶ್ವಾಸಂ.

॥ ಶ್ರೀ ॥

# ಶಾಂತಿಪುರಾಣಂ.

## ಚತುರ್ಥಾಶ್ವಾಸಂ.

ಕಂ॥ ಶ್ರೀರಮಣಂ ಜಿನ ಚಂದ್ರ ನು |
ದಾರಂ ಖೇಚರ ಬಲಾಬ್ಧಿಯುಂ ತನ ಕಣ್ಗೊಳ್ ||
ಪೀರಲ್ ಬಗೆವಪ್ಪೊ ಲೌರ್ವಾ |
ಕಾರ್ತೀಕ್ಷ್ಣ ನಿರೀಕ್ಷಿಸುತ್ತು ಮಿರ್ದ ವಯುವದಿಂ || ೧ ||

ಉ॥ ತಮ್ಮನ ನಾಗ ಕಂಬರ ಚಕ್ರೇಶ್ವರ ಕನ್ಯಗೆ ಕಾಪು ಮೇಲೆ ತ |
ಮ್ಮ ಮ್ಮನದೊಳ್ ಬಗುತರ್ಜ ನಗೆ ಕೆಯ್ಮಗ ಲೀಬಿಸ ಕಣ್ಣೆ ನೀಸ ಯಾಂ |
ತಮ್ಮನೆ ನಾಳಿನಾಳ್ಕೆ ಯೆನಗಪ್ಪುಡೆ ನೀನೆನಗತ್ತಲಗ್ಗ ಮುಂ |
ದಾ ಮ್ಮಗುಟ್ಟಿಂದು ನಿಮ್ಮಡಿಗೆ ನೂಬಿ ದಜಾಂ ಬೆಸನನ್ನ ನನ್ನಗಂ || ೨ ||

ಕಂ॥ ಎನೆ ಜಿನಚಂದ್ರಂ ಮತ್ತಂ |
ತೆನಪೊಡೆ ನ್ಮಾಣೆ ಮಾಣೆ ಯಪ್ಪುದೆ ನೀನಂ ||
ದಿನಿತಾನುಂ ಸೂಟಿಳ್ ಸೂರುಳ್ |
ನಿ ನಿರ್ಭಯಂ ಕೊಂಡು ಬಿಲ್ಲ ನಪ್ರತಿಮಲ್ಲಂ || ೩ ||

ಉ॥ ಏಜಾಸಿ ನೀಪಿ ಜೋಪ್ರೊಡೆಯ ವೈರಿ ಗಜಂಗಳಜಂಗಳಂತೆ ಕಾ |
ಯ್ದಾಜಿಯದು ವಾಜಿಗೇಶ್ವರನ ಕಟ್ಟು ಕಟಿಲ್ದುದು ಖೇಚರರ್ ಮನಂ ||
ಬೀಜದ ಮೂರ್ ನಂದಗಿದ ಖೇಚರ ಕನ್ಯೆಯ ಮೋನ ಸನ್ನೆಯುಂ |
ಪಾಜಾದು ದೇವದೊಳ್ ಪುದಿದ ತಮ್ಮನ ಚಿತ್ತದೊಳಾಯ್ತು ಸಂತಸಂ || ೪ ||

ವ॥ ಬಿಗಿದ ತವದೊಣೆಗೆ ಕೆಯ್ಯಂ ನೀಡಿ ನಿಶಿತಾಸ್ತ್ರಮ ನೊಂದ ನುರ್ಚಿ ಕೊಂಡು -

ಕಂ॥ ಕರದಿಂ ಸರಳಿಂ ಕಣ್ಣಿಂ |
ದರಾತಿಯುಂ ತೂಗಿ ದೂಗಿ ರಿಪು ಬಲಮುಂ ಸಂ ||
ಹರಿಸುವ ಬಗೆ ಬಗೆಯೊಳ್ ತ |
ಬ್ಬಿರೆ ನಿಂದಂ ನಮ್ರಬುಧ ಜನಂ ಜಿನಚಂದ್ರಂ || ೫ ||

ಖೇಚರ ಸೈನ್ಯಂ ವಿಜಯಾ |
ರ್ಧಾಚಲ ತಟ ಧಾತು ರೇಣು ರಕ್ತಂ ಸ್ಫುರಭ್ಯ ||
ದ್ಭೂಚರ ಕೋಪಾಗ್ನಿಶಿಖಾ |
ಮೊಚಿತ ಪಟಳೋ ಪಲಿಪ್ತ ಮೆನಿಸಿದು ದಾಗಳ್ || ೬ ||

ಅಂತು ನಿಯಮವನಿ ನಿಖಿಳ ದಿ |
ಗಂತಂಗಳೊಳೆಯ್ದು ಲಱಿಯ ದೆನಿಸಿದ ಚಾತು ||
ರ್ದಂತಮ ನಪರಾಜಿತ ನೆಱೆ |
ಪಂ ತನ್ನ ಮನಃ ಪ್ರಸ್ತಾರಿ ಪೌರುಷ ಮತಿಯಿಂ || ೭ ||

**ವ||** ಅನ್ನೆಗಂ ವಿಪಕ್ಷೇಭ ಕಂಠೀರವ ನೆನಿಸಿದ ಪಾಪೇಭ ಕಂಠೀರವ ನೊರ್ವನೆ ಸಿಂದುದಂ ಕಂಡ ಸಹಾಯನಂ ಗೆಲ್ದೊಡಂ ತೇಜ ನಿಲ್ಲಾ ದೊಡಂ ಸೋಲಂ ಮಾಡಿದನೊಳ್ ಕಾವಲೆ ವೇೞ್ಕುಮೆಂದು ದಮಿತಾರಿ ಕೈವೀಸೆ ಪಿಳಯಾನಿಳಂ ಬೀಸೆ ಮಸಗಿದ ಜಳನಿಧಿಯ ಕಲ್ಲೋಲದಂತೆ ಪಿರಿದು ಮುಲ್ಲೋಳಂ ಬೆರಸು ಬಂದು ತಾಗುವಾಗಳ್—

ಕಂ|| ಅನಿತಿನಿ ತೆನಿಸದೆ ರಿಪುಬಲ |
ಮನ ಗಿಸಿಸುಂ ನೆಱೆಯದೆಂಬ ಬಗೆ ಬಳೆದಿರೆ ನಿ ||
ರ್ಗನಿಸಿದ ಸಾಜನಚಂದ್ರಂ |
ಮನಸ್ಸಿಗೀ ಮೂಱು ಲೋಕಮುಂ ಕಿಱಿದ ವಲಂ || ೮ ||

**ವ||** ಆಗಳಂಬರ ಚರಬಲದ ಧನುರ್ವಲಂ ತೆಗೆನೆಱೆದು ಪೊಕ್ಕು ಕಿಱಿದಾರ್ದು ಪರಿಕಲಿಸಿಬಂದೊಂದೆಪ್ಪಲ್ಲಿಗಂಬು ದೊಟ್ಟಂ ತಲ್ಲ ಪೊರ್ವನನೆ ಲಕ್ಷ್ಯಂಮಾಡಿ ಶರಾಸಾರದಿಂ ದೂರಪಾತನಿಸುವುದು(ಮಸ್ತ್ರಚಯಮನಂಬುಗಳ್ ಕೂಡೆರೆವಂ) ಮುಂಬುಪಿಡಿ ನಳವಿ ಗಗ್ಗಳ ಮಪ್ಪುದಱಿ ನೆಡೆಯೊಳ್ ಧನುರ್ಧರನ ಶರವರ್ಷಂ ನವಪಯೋದ ಪ್ರಮೋದ ಬಿಂದುವರ್ಷದಂತೆ ಕಳೆಯೆ ನಿಸರ್ಗಶೂರನುಂ ಕಟ್ಟಾಯಕಾರನುಂ ಅಪ್ಪುದಱಿಂ ಪಾಪೇಭಕಂಠೀರವನಂತೆ ಮಾಣ್ದು ಮುನ್ನಿರದ ನವಗಿಱೆತ್ತು ಬಟಿಯುಂ—

ಮ|| ಇನ ಪೊಕ್ಕೆಚ್ಚ ಧನುರ್ಧರಾಸ್ತ್ರ ಚಯಮಂ ತನ್ನಂಬುಗಳ್ ಕೂಡೆ ಖಂ |
ಡಿಸ ಬಿಲ್ಲಿಂ ಬಿಸುಟಿಕ್ಕೆಯಿಂ ಸುರಿಗೆ ಗಿಱಿತ್ತಿಯ್ತುಪರ್ಪರಂ ಶಾತ ಭ ||
ಲ್ಲಿ ಸಹಸ್ರಂಗಳಿ ನಂಬರಕ್ಕೆ ತಲೆ ಭೂಭಾಗ ಕ್ಕೊಡಲ್ ಬಿೞ್ದು ಪೊಂ |
ಗೆ ಸುರರ್ ಬಣ್ಣಿಸೆ ಬಿರ್ದ ಮೆಚ್ಚು ಮೆಱೆದಂ ಕೋದಂಡ ನೈಪುಣ್ಯಮಂ || ೯ ||

ಕಂ|| ಕೂರಿದ ರಪ್ಪ ಧನುರ್ಧರ |
ಬೀರರ ನಿದಿರೊಳ್ ನಿಶಾತ ಶರ ಹತಿಯಿಂ ನಿ ||
ರ್ವಾರಿಸೆ ಸಮರ ಪ್ರಥಮ |
ಪ್ರಾರಂಭಂ ಪೋಲ್ತು ದಂತಕಾ ಪೋಶನಮಂ || ೧೦ ||

**ವ||** ಅಂತು ಧನುರ್ವಲದ ಮೊಸೆ ಮುಱಿವಂತೆ ಪಲವು ಮಱಿಕೆಯ ಬಿಲ್ಲ ನಾಯಕರ್ಕಳುಗ್ರನಾಯಕದಿಂ ನಾಯೆ ಬಿಲ್ಲಕೊಪ್ಪ ನೂಱು ದೀನಜನತಾಕಲ್ಪದ್ರುಮಂ ರಥಿಗಳಂ ಗಱಿಸನ್ನೆಗೆಯ್ವುದುಂ ಅವರ್ ತಂತಮ್ಮ ಸೂತರಂ ರಥಮಂ ಚೋದಿಸ ಲ್ವೇೞ್ವುದು ಮವರ ನಿಬರು ಮೇಕಾಗ್ರಹ ಗ್ರಹಣ ನಿಯುಕ್ತ ರೆಂಬನ್ನೆಗಂ ಸ್ಯಂದನಾಶ್ವಂಗಳ ನೊಂದೆ ದೊರೆಯೊಳ್ ಪರಿಯೆ ಪರಿಚೋದಿಸಿ ಬಾಣಪಾತ ಪ್ರಮಾಣದೊಳ್ ನಿಱಿಸುವುದುಂ—

ಕಂ|| ಅಪರಾಜಿತ ತೇಜೋ ರೂ |
ಪ ಪಾವಕಂ ಕಣ್ಣೊಳುಳ್ಕೆ ಕಾದದೆ ಸೋಲ್ತಂ ||
ದುಪಸಂಹರಿಸುತೆ ನಿಜ ಶೌ |
ರ್ಯ ಪರಮ ಕೋಟಿಯ ಸುದಾತ್ತ ಕುಲ ರಥಿಕ ಬಲರ್ || ೧೧ ||

ವ|| ಬಿಲ್ಲುಂ ಜೆಱಗುವಮಾಗಿ ಚಿತ್ರನ್ಯಸ್ತರೂಪುಗಳಂತೆ ನಿಶ್ಚಳೀಭೂತರು ಮುಪಕ್ಷ್ಮಪಾತರುಮಾಗಿ ನೀಡುಂ ನೋಡಿ ಬೞಿಯ ಮೆಂತಾನುಂ ಕೃತಾವದಾನರಾಗಿ ಪೆಱಗಿರ್ದ ತನ್ನಾಳ್ಗನುಮ ನುೞಿದೆ ಮುಂದಿರ್ದ ಪಾಪೇಭಕಂಠೀರವನುಮಂ ಬಗೆದು ತೆಗೆದಿಸುವುದುಂ ಮಾರ್ಕೊಂಡು ಬಿಲ್ವೊಯ್ದು—

ಕಂ|| ರಥಿಗಳ ನಗ್ರಸ್ಥಿತ ಸಾ |
ರಥಿಗಳ ನಿಸಿ ಸೀರಪಾಣಿ ಪಲೆ ರಥದ ಮನೋ ||
ರಥಮೊಡನೆ ಮುಡಿದ ರಂವತಿ |
ರಥ ಸಮ ರಥ ರಾಮಹಾರಥಾ ರ್ಧರಥಕರ್ಕ್ || ೧೨ ||

ಬಳಭದ್ರನನಿಸೆ ರಥಿ ಸಂ |
ಕುಳ ಮಾತನ ಮೇಲೆ ನರಲ ಸಱು ಸುರಿದು ವಸುಂ |
ಗೊಳೆ[ಸೀಳದ] ಜೆಟ್ಟಿದ ಮೇ |
ಗಳವಲ್ಲದೆ ಸುರಿವ ಕಾರ ಸಱಗಳ ತೆಱದಿಂ || ೧೩ ||

ವ|| ಮತ್ತ ಮತ್ತ ಮಾವಂಸೆ—

ಕಂ|| ಮುಂದ್ವೈಸಿ ಪಾಯ್ದು ನಾಯಕ |
ಸಂದೋಹದಿ ನಭ್ರಮಾರ್ಗ ಮಾರ್ಗಂ ಕಾಣಲ್ ||
ಬಂದು ದಣ ಮಿಲ್ಲ ಪರ ಭಯ |
ದಿಂ ದೋಡಿದು ದಕ್ಕು ಮೆಂಬ ನುಡಿ ಪರಿವಿನೆಗಂ || ೧೪ ||

ವ|| ಅಂತಿಸುವ ಚಾಪಧರ ಸೀರವ ನಿಕರದ ಶರಾಸಾರಮುಂ ಮುಂಜಿನ ಮುೞಿಯ ನಹಿಮಕಿರಣ ನಾತ್ಮಕಿರಣಂಗಳಿಂ ಕಿಡಿಸುವಂತೆ ತನ್ನಂಬುಗಳಿಂ ಕಡಿಕಡಿದು ಕಿಡಿಸಿ ಶೀಘ್ರಮೆಚ್ಚೆಚ್ಚೇಕ ಸಮಯ ಮೊಳನೇಕ ಧನ್ವಿಗಳ ನನೇಕ ಸಮಯದೊಡ ನಾಚಾಪಧರರಂ ಬಿದಿಯ ಸಮುಕಟ್ಟಂಗೆ ಕೊಳ್ವಂತೆ ಪೇಸೇಱಿ ತವೆ ಕೊಲೆ—

ಕಂ|| ತುರಗಾಧಿರೂಢ ರಾರ್ದ ನಿ |
ಬರು ಮೇಳಯೊ ಳೊಂದೆ ಪೆಳೆಯೊಳುತ್ಪ್ಲಾತಾಸಿ ||
ಚ್ಛುರಿತ ಭುಜ ಪರಿಘ ರೊಂದೊ |
ರ್ವರ ಪೆಣಸಿಂ ಲಗ್ಗೆಗೆಯ್ದು ಪಾಯಿಸೆ ಜವದಿಂ || ೧೫ ||

ಪರಿವುವು ತೊಡರ್ದಡೆಯೊಳ್ ಪಂ |
ಜರದೊಳ್ ಸೆಱೆಯಿರ್ದ ಹರಿಗಳಂತಿರೆ ತಾಂ ಪಂ ||
ಜರದೊಳ್ ನಟ್ಟನೆ ಮಿಡುಕುವೆ |
ಹರಿಗಳ್ ಬಹುವೈಧ್ಯ ಮಿಸುವುದುಂ ಬಲದೇವಂ || ೧೬ ||

ವ|| ಅಂತು ಕೃತಾಂತ ಪಾಶಬಂಧಂಗಳಾದಂ ತೆತ್ತಲುಂ ತಳರದೆ ತೀವ್ರ ಪತತ್ರಿ ಭರಮುಂ ಪೇಱಿ ಮೊಗಮ ನೂಱು ಸುರಳ್ದಿಯ್ಯಪಿಂಡಿನಂತೆ ಕೂಡೆ ಕುಮುಕಿಯ ದಱಂ ಕೆಡೆವುದುಂ ಘೋೞಾಯ್ಲರ್ ಕಿಟ್ಟಿ ಬಾಳ್ವಿರಸಿ ದಿರ ನದಿರ ದೆಯ್ತರೆ—

ಮ॥ ತೊಡೆ ತೋಳ್ ಮುಯ್ಯು ಕಪಂಪುರಂ ಪರಡು ಕಯ್ ಮುಂಗಯ್ ಮೊಗಂ ಪೊರ್ಕುೞ್ ಕಿ |
ಬ್ಬಿಪ್ಪಡೆ ಮೇಗಾಲ್ ಪೆರಲುಂಗುಟಂ ಬರಿ ನೊಸಲ್ ನಿಟ್ಟೆಲ್ಲು ಗೋಸಾೞ್ ಬೆ ||
ಮಡ ಕಾಲ್ ಕಣ್ ಕಿವಿ ಮೂಗು ಬಾಯ್ ಬಸಿರುಗುರ್ ಪುರ್ವಾಳ್ಕೆ ಪಲ್ ಕೆಕ್ಕೆ ಕಾ |
ಲಡಿ ಯೆಂದಿಂತಿವ ನುೞಿ ಪೋದು ಪಿಸೆ ತತ್ಸೌಜನ್ಯ ಕಂದಾಂಕುರಂ || ೧೭ ||

ವ॥ ಅಂತು ತುರಗಬಲಮೆಲ್ಲಮುಂ ತನಿಸಿ ಪಿಂತಪ್ಪರನಲ್ಲದೆ ಮುಂತಪ್ಪರಂ ಕಾಣದೆ ಮಂದಮಾರುತಾಂದೋಳಿತ ಲುಳಿತಾಳಕ ವಲ್ಲರೀ ಸಮುಲ್ಲಾಸನುಂ, ಪರಿಸನ್ನಾದ್ವಯನುಂ ಪಾಪೇಭ ಕಂಠೀರವನಾ ವಿಜಯ ಪ್ರಮದ ನಾಱುಸುತ್ತು ಮಿರೆ ವನಿತಾರಿಯ ನೋಡುವುದುಮುಂ ತಮ್ಮ ಬಲ ಮುಳ್ಳಾಡುವುದುಮಂ ಕಂಡು ತಾಂ ಸಿಂಹವರ್ಣನುಂ, ಸಿಂಹಾಸೀಕನುಂ, ಪಾಪೌಘಕಂಠೀರವನು ಮುಪ್ಪುವಱಿಂದ ಮೆಯ್ದು ಮುೞಿದು,

ಕಂ॥ ಗಜ ವೈರಿ ಮುಖದ ಬಾಣ |
ವ್ರಜಂಗಳಿಂ ತೆಗೆದು ಸೀರಧರ ನಿಸೆ ಮದವ ||
ದ್ಗಜ ಮಸ್ತಕದೊಳ್ ಪಾಯ್ದುವು |
ಗಜಾರಿ ಪಾಯ್ವಂತೆ ನಿಶಿತ ಬಾಣಾವಳಿಗಳ್ || ೧೮ ||

ಅಯಸಮಣಿ ಮುಲ್ತು ಪರ ರದ |
ನಿಯ ಸಿಕ್ಕುವು ದಂತು ಮಾನೆಯೊಳ್ ಕಾದೆ ನಿಷಾ ||
ದಿಯ ನುರುಳೆಚ್ಚು ಗಜಪ್ರಿಯ |
ತೆಯ ನಹಿತರ್ ಪೊಗೞೆ ಸೀರಹಸ್ತಂ ಮೆಱೆದಂ || ೧೯ ||

ಅಪರಾಜಿತ ನಿಸೆ ಗಂಧ |
ದ್ವಿಪಂ ಮೊಗಂ ದಿಱಿದು ತನ್ನ ಬಲಮನೆ ತುೞಿದ ||
ತ್ತುಪಕಾರಿಗೆ ಮದ ದೂಷಿತ |
ನಪಕಾರಂ ಗೆಯ್ವ ನೆಂಬು ದೊಂದಚ್ಚರಿಯೇ || ೨೦ ||

ವ॥ ಅಂತತಿ ಕುಪಿತ ಕಿಶೋರ ಕೇಸರಿಯಂತೆ ಪರಾಕ್ರಮೈಕ ಸಹಾಯನಾಗಿ ಮದಾಂಧ ಗಂಧ ಸಿಂಧುರ ಘಟೆಯುಂ, ಮೇಗಣ ನಿಷಾದಿ ಯೋಧಾಗ್ರಗಣ್ಯರುಮಂ ಮೊಗಂದಿಱದೆ ಮೊಗಂದಿಱುಸುವ ಬೆಸದೊಳ್ ತೊಡರ್ದು---

ಉ॥ ಖಗರಾಜೇಂದ್ರ ಗಜೇಂದ್ರ ರುಂದ್ರ ಘಟೆಗಂ ದೆಚ್ಚಂಬುಗಳ್ ಪೋದು ರಾ |
ಜಿಗಳಂ ತಪ್ಪಿದೊಡಲ್ತೆ ತಪ್ಪುಗೆ ಮೃಗೇಂದ್ರಾಭಂಗಳಂ ವೈರಿ ದಂ ||
ತಿಗಳುಂ ನಟ್ಟನೆ ತೊಯ್ದು ನೆಚ್ಚೊಡೆ ಕೃತಾಸ್ತ್ರಂ ತಪ್ಪದಾಧನ್ವಿ ತ |
ಪ್ಪುಗುಮೇಂ ಸಯ್ದು ನೊ ಸತ್ಯದೊಳ್ ಶರದೊಳಾ ಪಾಪೇಭಕಂಠೀರವಂ || ೨೧ ||

ಕಂ॥ ಆನಾರಾಚಕೆ ಸಮದ ಘ |
ಟಾನೀಕಂ ಸಾಲೆ ಸೋಲೆ ನೆರೆಯೆ ನೆಱಂ ಚಿ ||
**ತ್ರಾನೀಕ** ನೆಂಬ ಗುರ್ಬಿನ |
ಸೇನಾಪತಿ ಯೊಸೆದು ತಾಗೆ ಹಲಿ ನಿಂದಾಂತಂ || ೨೨ ||

ಅವರೊಂದೊರ್ವರ ನಿಸುವತಿ |
ಜವದಿಂ ಪೋರೊರ್ವರ ರಥಮೊಂದೊರ್ವರ ನ ||
ಚ್ಚುವ ಕೇತನ ಮೊಂದೊರ್ವರ |
ಕವಚಂ ಪೂಣ್ದುವು ನಿಶಾತ ಶರಕೋಟಿಗಳಿಂ || ೨೩ ||

ವ|| ಅಂತು ತೋಡುಂ ಬೀಡುಂ ಕಾಣಲಾಗದಂ ತಂದೊರ್ವರ ನಿಸುವಂಬ ನಂಬಿಂ ಕಡಿದು ನೀಡುಂಬೇಗಂ ಕಾದುತ್ತು ನಿರ್ನಿಸಂ ತೆಱಪುವೆತ್ತು ಪಾಪೇಭಕಂಠೀರವ ನೆಚ್ಚೊಂದಸ್ತ್ರೋರ್ವ ಸಾಯಕಂ ಚಿತ್ರಾನೀಕನಂ ನೆರೆಗೊಳ್ವುದುಂ ತದ್ದಮಿತಾರಿಯ ಬಲದ ತೋಳ್ವಱಾದು ಬೀಳ್ವಂತಾತಂ ಬೀಳ್ವುದು ಮಂಬರಚರ ಶ್ರೀಕಾಂತೆಗೆ ಬಳಮುದಿರ್ಕ್ಕುವಂತಾತನಿಕ್ಕುವುದಂ ಕಂಡು ಸಂಪಾಹಿತ ಸಮಸ್ತಬಲಂ **ಮಹಾಬಲ**ನೆಂಬೊಂ—

ಹರಿಣೀವೃತ್ತಂ || ಇಳಿಸ ಲಿಸಲ್ ಮಾರ್ಕೊಳ್ ಮಾರ್ಕೊಳ್ಪುಗಲ್ ಪುಗಲೆಂದು ಸಂ|
ಗಳಿಸಿ ಶರದಿಂ ಕೋಳ್ ಕೊಳ್ಳಂದೆಚ್ಚೊಡೆಚ್ಚ ಶರಂಗಳಂ ||
ಮುಳಿದು ಕಡಿಮಂ ಸೀಳ್ದುಂ ನೆರ್ದುಂ ನಿಜಾಸ್ತ್ರದಿ ನೇಂ ಮನಂ |
ಗೋಳಿಸಿದನೊ ಸಿರಾಸ್ತ್ರಂ ನೊಟ್ಟಿಂದ್ರ ರುಂದ್ರ ಸಭಾಳಿಯಂ || ೨೪ ||

ವ|| ಅಂತು ಮೋಲ್ವಾಯ್ದು ಕಾದುತ್ತಿರ್ದ ಪಾಪೇಭಕಂಠೀರವನ ಮುನ್ನಿನ ಭವದ ವಿದ್ಯೆಗಳ್ ಬೆಸನಂ ಬೇಡಿ ಬಂದು ಮುಂದೆ ನಿಲೆ—

ಕಂ|| ಆ ಗಗನೇ ಚರನುಂ ಧನು |
ರಾಗಮ ವಿದ್ಯಾಗಮೈಕ ನಿಧಿ ವಿದ್ಯೆಗಳಿಂ ||
ಪೋಗದೆ ಕಾದುತ್ತಿರೆ ತೆಱ |
ಪಾಗಲೊಡಂ ಹಲಧರಾಸ್ತ್ರ ಮುರಿದು ದವನಂ || ೨೫ ||

ವ|| ಅಂತಂಬು ಕೊಳೆಯುಂ ದಿವ್ಯಶರವ್ಯದಂತೆ ಬಟಲದೆ ಮಹಾಬಳಂ ತನ್ನ ವಿದ್ಯೆಗಳಂ ಬೆಸಸುವುದುಂ ಸೌಜನ್ಯ ಕಂದಾಂಕುರಂ ತನ್ನ ವಿದ್ಯೆಗಳಂ ಬೆಸಸದಿರೆಯುಂ ಆಳ್ದನ ಮನಮ ನಱಿವನು ಜೀವಿಗಳಂತೆ ವಿದ್ಯಾದೇವತೆಗಳ್ ಮಹಾಬಳನ ವಿದ್ಯೆಗಳೊಳ್ಪೊಣರ್ದು ಮುಮರೊಳೆ ಸಣಸಿದಂತೆ ವೈರಿ ಭೂರುಹ ಕುಠಾರನ ಶರಂಗ ಳವಱಂ ಮುನ್ನ ಮುಯ್ದು—

ಕಂ|| ಅವನುಮ ನಿರದಂತಕ ಮುಖ |
ವಿವರಮ ನೆಯ್ದಿಪುದು ಮಿತ್ತ ರತ್ನಗ್ರೀವಾ ||
ದ್ಯವಶಿಷ್ಟ ಖಚರ ರೊಡನ |
ರ್ಣವ ನಿನದದಿ ನಾರ್ದು ನೆರೆದು ಸೂಕಿದ ರಾಗಳ್ || ೨೬ ||

ವ|| ಅಂತು ಕಿಟ್ಟಿ ಬಾಳ್ಗಳ ಗೊಂದಣ ಬೆಳಗುಗಳ ಬಳಗಂಗಳೊ ಳಾಗಸ ವಳಯ ಮೆಲ್ಲಂ ಕುವಳಯಿತಮಾಗೆ ಬಂದು ತಾಗುವುದುಂ—

ಕಂ|| ತುಡೆ ಸೂಱಸೆ ಸಾಸಿರ ಮಾ |
ಪಡೆಯಂ ಕೊಳೆ ಲಕ್ಕೆ ಲೆಕ್ಕ ಮಾಗುರ್ಚಿದು ವ ||
ಟ್ಟಡಿದುವು ಕುಱಿದಱ ವಱಿದುವು |
ಕಡುಪಿಂ ದಿಸೆ ವಿಬುಧ ವನಜ ವನ ಕಳಹಂಸಂ || ೨೭ ||

ಏಕಾಕಿಯಿ ನಱಿಮುದು ಕೋ |
ಓಕೋಟಿ ವಿಯ ಚ್ಚರೇಂದ್ರ ನಾಪಿಸಿ ಪ್ರಣ್ಯಾ ||
ಸೀಕಂ ಪಡೆಗುಂ ಪಾಪಾ |
ಸೀಕಂ ಪಡೆಗುಮೆ ಜಯಾಂಗನಾ ಸಂಗಮುಮಂ || ೨೮ ||

**ವ||** ಎಂದಮರ ರಂಬರ ತಲದೊಳ್ ಜೋದ್ಯಂಬಟ್ಟು ಬಾಯುಂ ಬಿಟ್ಟು ಬಣ್ಣಿಸೆಯು ಮಕಲಂಕಾಚಾರ ಸಾರಂ ಖಚರ ಬಲಮ ನಱಿದು ಸಣ್ಣಿಸೆಯುಂ, ಅಂಬಿನ ಮೊಸೆಯೊಳಿ ತಪೆಯುಂ ರತ್ನಗ್ರೀವಾದಿಗಳ್ ವಿದ್ಯಾ ಸಾಮಗ್ರೀ ಸಮಗ್ರ ರುದಗ್ರ ವಿದ್ಯೆಗಳಂ ಬೆಸಸುವುದು ಮವು ಬೆಸನೆತ್ತ ಕಟ್ಟಾಳಂತೆ ನಾನಾವಿಧೋಗ್ರ ರೂಪ ಗ್ರಹಣದಿ ನಗುವ್ರ್ ಮದ್ಭುತಮು ಮಾಗಿ—

ಉ|| ಜಲದಾಡಂಬರ ರೂಪದಿಂ ಕೆಲವು ಪೇತಾಳಾವಳೀ ರೂಪದಿಂ |
ಕೆಲವ ದ್ವಿಪ್ರತಿರೂಪದಿಂ ಕೆಲವು ವಿದ್ಯುದ್ಧಾಮ ವಿಸ್ಫೂರ್ಜದಿಂ ||
ಕೆಲವ ರ್ಕಪ್ರತಿಭಾಸದಿಂ ಕೆಲವು ಸಿಂಹ ವ್ಯಾಘ್ರ ಸರ್ಪಾಂಗಳಿಂ |
ಕೆಲವು ಗ್ರಾವನ ದೀಪ್ತಿಯಿಂ ಕೆಲವು ಸಂತ್ಯುಯ್ತಾರ್ವದುಂ ವಿದ್ಯೆಗಳ್ || ೨೯ ||

ಹರಿಣೀವೃತ್ತಂ|| ಪವನನಿ ನವಂ ಮಂತ್ರ ಪ್ರಧ್ಯಾನದಿಂ ದವ ನಾಸುಹೃ |
ತ್ತ್ವವಿಗಳ್ ನವಂ ಸ್ತ್ರೀಸಂಘಾತಂಗಳಿಂ ದವ ಸುಗ್ರರಾ ||
ಮುಪಿ ನವ ಸುದಗ್ರಾವಿಷ್ಟ್ರಾಷ್ಟಾಪದ ದ್ವಿಜರಾಜಱಿಂ |
ದವ ಸುಪಕದಿಂ ಮಾಕೋಂಡಾಂತಾಂತವಂ ಹಳಿ ಗೆಲ್ವುದುಂ || ೩೦ ||

**ವ||** ಕಿಡಿಗುಟ್ಟಿದಂತೆ ವಿದ್ಯಾದೇವತಾಧಿಷ್ಠಿತ ಮಪ್ಪಂಬಂಬಿನೊಳ್ ಪಳಂಚಿ ಪುಟ್ಟಿದ ಕಿಚ್ಚಿನ ನಟ್ಟನಡುವೆ ನಿಂದುರಿವ ಸುವರಮುಂ ಬಾರಿಸ ಲೆಂದೆಡೆ ಪೊಕ್ಕಗ್ನಿ ಕುಮಾರನಂತಿ ರಾತನ ಶರಪಾತನ ಭಯದಿಂ ಕೆಲರ್ ನೆಲದೊಳ್ ನಿಲ್ಲದಾಕಾಶಕ್ಕೋಗೆದೊಳ್ಪೊಡಗೆ ನೆಗೆದಂಬರಿಗುಮಾಯು ತಪ್ಪರನೆಂಬ ನುಡಿಯಂ ನನ್ನಿ ಮಾಡಿ ಸುರುಕ್ಕು ರುಳ್ವನಂ ಕೊಳೆ ಕೆಡೆದರ್, ಕೆಲರ್ "ಮಿಟ್ಟಿಗಾಡಿಯುಂ ಬರ್ದುಂಕಲಾಗದೆಂ" ಬ ಮಾತಂ ತಿಬ್ಬಂ ಮಾಡಿ ಸೌಜನ್ಯ ಕಂದಾಂಕುರನ ಶರಕ್ಕಳ್ಕಿ ಬೆಟ್ಕಿತೋಡೆಯುಂ ಬೆನ್ನನಟ್ಟಿ ನಟ್ಟ ಜಟ್ಟಿಗೆಯಿಂ ಮಿಟ್ಟಿಗೊಂಬಿಟ್ಟಿಯಂತೆಯುಂ, ಬಡಿಗೊಂಡ ನೊಲದಂತೆಯುಂ ತಲೆ ಕೆಳಗಾಗಿ ಬಿದ್ದರ್,ಕೆಲರುರದೊಳ್ ನಟ್ಟಂಬ ನಾಳ್ದೊಂ ಮುನ್ನಂ ಮೂದಲಿಸಿದೊಡಾ ಹೃಚ್ಛಲ್ಯಮುಂ ಕಳೆವಂತೆ ಕಿಟ್ಟಿ ಕಳೆದು ಸತ್ತರ್, ಕೆಲರ್ ನೆತ್ತರೊಳ್ ಮಿಂದು ತಮಗೆ ದೋಷಮಿಲ್ಲೆಂದವರ್ಕೆ ದಿವ್ಯಂ ಬಿಡಿವಂತೆ ನಂಬಿಸಲ್ ಚಲಂ ಬಿಡಿದು ನಿಂದಾಂತರ್, ಕೆಲರ ನೋಡೆ ನೋಡೆ ತಮ್ಮೋಟಕ್ಕೆ ತಾಮೆ ನಾಣ್ಚಿದರ್, ಕೆಲರೋಡುವಾಗಳಾಳ್ದಂ ಮೂದಲಿಸೆ ಮಗುಟ್ಟು ನಡೆದು ಸತ್ತರ್, ಕೆಲರ್ ತಮ್ಮ ಮನೋನಯನ ವಲ್ಲಭೆಯರ ನಗಲ್ದು ಮನೋಭವ ನಂಬೇಱುಂ ಗಳ್ಕಿದರ್, ಅರಬರ್ ಜೈನಶಾಸನ ಚೂಡಾಮಣಿಯಂ ಬೇಱಿ ಮಗಮುಂಟೆಂದು ಸತ್ತರ್, ಕೆಲರ್ ಪುಣ್ಣ ಕೆಂಪೆ ಕಣ್ಗೆವಂದಂತೆ ಪಾಪೇಭ ಕಂಠೀರವನ ದೆಸೆಯನೆ ನೋಡಿ ನೋಡಿ ಗತಜೀವಿತರಾದರ್. ಅಂತಣ್ಮೆದರು ಮಂಜಿದರುಂ ಪುಣ್ಣಿಂ ಪೆಣನು ಮಾಗಿ ದಮಿತಾರಿಯ ಬಲಂ ಚಂದ್ರಬಲ ಮಿಲ್ಲ ದಂಕಕಾರನಂತೆ ಸೋಲ್ತು, ಮೂರ್ತಿಬಲಮಿಲ್ಲದ ಮಲ್ಲನಂತಿಕ್ಕುಪಟ್ಟು, ಬಾಹುಬಲಮಿಲ್ಲದ ರಾಜಪುತ್ರನಂತೆ ತಕ್ಕುಗೆಟ್ಟು, ನೆಲಬಲಮಿಲ್ಲದ ನೆಲವತ್ತಿಗನಂತೆ ಕಟ್ಟು ಕಟಿಲ್ದು, ದೈಬಲಮಿಲ್ಲದ ಸೇವಕನಂತೆ ಮುಟ್ಟುಗೆಟ್ಟು, ಗ್ರಹಬಲಮಿಲ್ಲದ ಜನ್ಮಿಗ

ನಂತೆ ಪೆರ್ಚಿಲ್ಲದೆ, ಅಸುಬಲಮಿಲ್ಲದ ಪೊಕ್ಕಿೞುವನಂತೆ ಪುಸಂಗುಂದಿ, ಮೂಲಬಲಮಿಲ್ಲದ ತುೞಿಲಸಂದ ನಂತೆ ಬಿಲ್ಲೊಳ್ಮೊಟ್ಟನಾಗಿ, ಚಾತುರ್ಬಲಮಿಲ್ಲದರಸನಂತೆ ಕಣ್ಗೆಱುಚಿವನಾಗಿ, ಪೆಂಬಲ ಮಿಲ್ಲದ ಕನ್ನ ಗಳ್ಳನಂತೆ ಜೀವಂ ಬೊತ್ತಿರ್ಪನಂ ಪರಪರಿವಾರ ಸ್ತಿಮಿತಂ ಸ್ತಿಮಿತನಾಗರ ತನೂಜ ನಿಸೆ—

ಕಂ|| ದೀವಟೊಡವ್ರಾಗಟಿತ ರತ್ನ |
ಗ್ರೀವನ ನೆಚ್ಚಂಬು ನೆಲಕೆ ಪಾಱದೆ ತಲೆ ರ ||
ತ್ನಾವಳಿ ಖಚಿತ ಕಿರೀಟ ವಿ |
ಡೋವಣಂ ನೆಲಕೆ ವಂದು ತಂದು ದಗುವಂ || ೨೧ ||

ಉಗ್ರಾಹವದೊಳ್ ಹರಿ ರ |
ತ್ನಗ್ರೀವನ ಸಿಕ್ಕಿ ಸ್ಪನ್ಯದೊಳ್ ನಿಜ ಪಕ್ಷಂ ||
ದಗ್ರಜನಂ ಕೃತ ಚಾಪ ಶ |
ರ ಗ್ರಹಣದ ನಂತವೀರ್ಯ ನಜಸುವ ಬಗೆಯುಂ || ೨೨ ||

ವ|| ಗುಹಾಮುಖದಿಂ ಪೊಱಮಡುವ ಶಿಶು ಮೃಗರಾಜನಂತೆ ವಿಮಾನದಿಂ ಪೊಱಮಟ್ಟು ಕನಕಶ್ರೀಗಂ ವಿದ್ಯಾದೇವತೆಗಳ್ಗಂ ಕಾಪುವೇೞ್ದು ಅರ್ಜುನಂ ವಿಕ್ರಮೈಕರಸನ ಸಪರಾಜಿತಂ ಸದೋಹ ವಾದ ತನ್ನ ಪರಾಕ್ರಮಮುಮನೆ ಕಾಣ್ಬಂತೆ ಕಂಡು ವಿಸ್ಮಯಾಕ್ರಾಂತ ಚಿತ್ತನಪ್ಪುದುಂ ಅನಂತವೀರ್ಯಂ ವಿನಯಾವನಮಿತೋತ್ತಮಾಂಗ ನಗ್ರಜಾತನಾದಪಯೋಜಾತಂಗೆಱಗಿ ಕರಿಪಯಾವಣೀಷವಾದ ತಪ್ಪುಕಲ ಕಲಹಮು ನೆನಗೆ ದಯೆ ಗೆಯ್ಯುದೆಂದು ಬೇಡಿಕೊಳ್ವುದು ಪುಣ್ಣಿ ಸಿತ್ತಸಿತ್ತ ದಮಿತಾರಿಯುಂ ಪರಾಜಯ ವಿಜಯ ವಿರಾಜಿತ ನಪ್ಪ ಪರಾಜಿತಸಿಂಹಂ ತನ್ನ ಚಾತುರಂತ ಬಲಮಱಿದೊಡಂ ಮನೋಬಲಮಱಿಯದೆ, ಕಾಳೆಗಮುಂ ಸೋಲ್ತೊಡಂ ಚಲಮುಂ ಸೋಲದೆ, ತನ್ನ ಪಕ್ಷಂ ಸೆತ್ತೊಡಂ ಮಾತು ಸಾಯದೆ, ತೋಳ್ಪುರ್ಗೆಟ್ಟೊಡಂ ಕೊಪ್ಪುರ್ಗಿಡದೆ, ತೇಜಂ ತೊಲಗೆಯು ಮಾಯು ತೊಲಗದೆ, ಶ್ರೀಗೆ ಗೆಂಟಾಗಿಯುಂ ಯಶಶ್ರೀಗೆ ಗೆಂಟಾಗದೆ, ಸಾಮ್ರಾಜ್ಯಪಟ್ಟಂ ಪಮುಳ ಮಾಗದೆಯುಂ ಬೀರ ಪಟ್ಟಂ ಪಮುಳಮಾಗೆ ಯುದ್ಧದ ಮೊದಲ ಬಲಂ ಬೆರಸು –

ಚಂ|| ತನಗಿದಿರಾದ ದಂತಿ ಹಯ ಮಾನವ ಸೇನೆಯ ನೆಚ್ಚನಂತ ವೀ |
ರ್ಯನ ಶರವೃಷ್ಟಿಯೊಳ್ ಗಗನದಿಂ ನವಲೋಹಿತ ವೃಷ್ಟಿಗಳ್ ಪಲು ||
ವ್ಮನ ಕೊಳೆ ನಾಂದು ಕೆಂಪೆಸೆದು ತೊಟ್ಟನೆ ಬೆಳ್ಳಿಯ ಬೆಟ್ಟ ಮಲ್ತು ಬಾ |
ದಿನ ನಗಮೆಂಬ ಶಂಕೆಯನೆ ಮಾಡಿದುದಾ ವಿಜಯಾರ್ಧ ಪರ್ವತಂ || ೨೩ ||

ವ|| ಅಂತು ಬಲ್ಲಾಳಿಗ ಮೆಸಿಸ ಬಿಲ್ಲಾಳಿಗಮುಂ ನಿಂದುಂ ಕಾದುವನ್ನೆಗಂ ಅಳಲಿಗರುಂ ಪೇಗಾ ಯ್ಲರು ಮಪ್ಪನ್ನಯಾಗತ ನಭೋಗತಿಗಳ್ ಬಿಲ್ಗಂ ಸರಲ್ಗೆ ಮುಣ್ಬು ಗೆಟ್ಟುಮಿಟ್ಟೆಯು ವ್ರಾಗಿ ತೊಟ್ಟನೆ ನೆರೆದುರುಳೆ ನೂಂಕುವುದುಂ ಬಿಲ್ಲನಂಬುವ ನೊಕ್ಕೆನಿಸಿ—

ಕಂ|| ಮುನಿದಾಸೆಯು ನಾಸೆಯ ನ |
ಶ್ವಸಿಕಾಯುದಿ ನಶ್ವಸಿಕರಮಂ ಮಾನವರಿಂ |
ಮನುಜರ ನಿಟ್ಟಂ ಮೋದಿಯು |
ಮನಂತವೀರ್ಯಮ ನನಂತವೀರ್ಯಂ ಮೆಚ್ಚಿದಂ || ೨೪ ||

**ವ||** ಅನ್ನೆಗಂ ಪ್ರಾರ್ಥನಾಭಂಗಮಂ ಮಾಡದನುಜ ನನುಪರಮ ನನುನಯದೆ ನೋಡುತ್ತು ಮಿರ್ದು ಬೞಿಕ ಮಪರಾಜಿತಂ ಕೋದಂಡಕಾಂಡಮಂ ಕೊಳೆ ತಮ್ಮನುಂ ನಿಜಾಗ್ರಜನೊಳ್ ಕೂಡಿ ದಮಿತಾರಿಗಿದಿರ್ಚಿ ತಳವರ್ಗಮುಂ ನಿವಳಿವಟ್ಟಂ ಮಾೞ್ಪಾಗಳ್—

ಮ|| ಇಡಿವಾೞ್ವುರ್ಚುವ ನಿರ್ವಸೀೞ್ವಱವ ನಿರ್ಗೋಲ್ವೋಪ ಪೋೞ್ವಿಲ್ವಿನೊಳ್ |
ನಡುವುಷ್ಟಂ ಬಿಱಿವಂಬಿನೊಳ್ ಕಿಡೆ ಮರುಳ್ವೆೞ್ವಾಡು ವಕ್ಕಾಡುವ ||
ಲ್ವಿಡಗಪ್ಪೊಡ್ಡೞಿವಟ್ಟಿ ತಟ್ಟಿ ವೞಿ ಪ್ರಕಾರ್ಜಿರ್ಪ ಕೋದಿರ್ಪ ಮಾ |
ರ್ಪಡೆ ಗೆಲ್ಲಂಗುಡೆ ತಮ್ಮುತಿರ್ವರುಮುಗುರ್ವು ರ್ವೇೞ್ವಿನಂ ಕಾದಿದರ್ || ೩೫ ||

ಧ್ವಜನೀ ಮಧ್ಯದೊ ಳೊರ್ವರೋ ಎನಲು ಮಿಲ್ಲಿಂಬಂತು ವಿದ್ಯಾಧರ |
ವ್ರಜ ಮಕ್ಕಾಡಿದು ದುಗ್ರಶಸ್ತ್ರತತಿಯಿಂ ಸೀರಾಯುಧಂ ಕಾದೆ ನೋ ||
ಟ್ಪಿ ಜನಕ್ಕೊಪ್ಪಿದು ದಬ್ಜಷಂಡ ಮಲರ್ದೊಂದುತ್ಪ್ರೇಕ್ಷೆಯಿಂ ಯುದ್ಧದೊಳ್ |
ವಿಜಯಾರ್ಧಾಚಲ ಮುಂಬರೇ ಚರ ಶಿರಃ ಪದ್ಮಾವಳೀ ಲೀಲೆಯಿಂ || ೩೬ ||

**ವ||** ಅಂತು ಕಾದಿ ನಾರಾಚದಂತಸಿಯನುಂ ಕೂರಿದನುಮಾಗಿ ದಮಿತಾರಿ ತನ್ನ ಪರಾಕ್ರಮ ಮೊಂದೞಿಂದಮೆ ಮೆಯ್ವೊಣರ್ಚಿ ಗೆಲ್ವ ತನ್ನ ಚಾಗದ ಭೋಗದ ಯಶೋರಾಶಿಯುಮಂ, ಪಸುಗೆ ವೋಗದ ಶೌರ್ಯಮುಮಂ, ಸೂೞ್ವೋಗದೇೞುಮಂ, ಪೂಱವೋಗದ ಕಟ್ಟಾಯಮುಮಂ, ಓಱವೋಗದ ಚಲಮುಮಂ, ಮುಕ್ಕುವೋಗದುತ್ಕರ್ಷಮುಮಂ ನೋಟಕರಪ್ಪಿನ ಮಪ್ಪುವಱಿಂ ಪೊಗೞಿಸುವೆ ನೆಂದು ತಱಿಸಂದು ತಮ್ಮುತಿರ್ವರುಮ ನಿಕ್ಕುವ ತಕ್ಕು ಕೈಮುಕ್ಕು ನಿಲೆ—

ಕಂ|| ನೊಂದೞಿದು ಕೆಟ್ಟ ಪಡೆಯಂ |
ಪಿಂದಿಕ್ಕಿ ಜಸಂಬೊಱೆಪ ಪಿತಕೌತನಮಂ ||
ಮುಂದಿಟ್ಟು ದೂರ ಸಾರಥಿ |
ಯಿಂದಂ ಕ್ಷೀತಾಸ್ತ್ರತತಿಯ ನೆಸೆಯೆ ವರೂಥಂ || ೩೭ ||

ಸರಿದಾಡು ಪಟ್ಟಿ ಬೆಱೆಸೆ |
ಹರಿವ್ರಜಂ ತೊಲಗಿ ತೊಲಗಿ ಬಱೆ ಗೋಮೂತ್ರಂ ||
ಬಱಿಯೆ ರಥಂ ಮೆಯ್ಯೞಿವಂ |
ತಿರೆ ರಥಮಂ ಪುದಿದು ಕುದಿದು ಬಱೆ ಕೆಲಱೆ ಭಟರ್ || ೩೮ ||

ಕರ ಮೞಿಯೆ ನೊಂದ ಭಟರೊಡ |
ವರೆ ದಯೆಯಿಂ ದವರ ನಾಗಳಿಱಿ ಮಿಱಿ ಮೆಂದಾ ||
ತುರ ಘರ್ಮ ವ್ಯಾಜದಿ ನೋ |
ಸಱಿಸಿದ ಪೆಱೆ ಸುಲಿಧ ಪಾವಿನಂತಾಕೃತಿಯಂ || ೩೯ ||
ಅೞಿಕೆಯತೇರ್ ಪೆಟಿಯಿಗೆ ಪೆ |
ರ್ಗೞಿ ಚಕ್ರಂ ರಾಜ್ಯಚಿಹ್ನಮೆಂಬಿವಱಿಂ ಗಂ ||
ಟೞ್ಗೊಳೆ ಬರವಂ ವಿರೋಧಿಗ |
ಳೞಿಯೆ ಜಯೋದ್ಯೋಗ ಖೇಚರೇಂದ್ರಂ ಬಂದಂ || ೪೦ ||

ಬಂಧಿರ ದವ ಗಿರ್ದಿರಂ ನಡೆ |
ತಂದೀತಂ ತಮ್ಮ ನಾತ ನಣ್ಣಂ ತಾಂ ನೋ ||
ಡೆಂದು ನಿಜಸೂತ ನಱಿಪೆ ಮು |
ಕುಂದನ ಪರ್ವರಿಕೆ ಮುನಿಸ ನೊದವಿಸೆ ಮನದೊಳ್ || ೪೧ ||

ಮ|| ಸ್ರ|| ಪೊಱಿಮುಯ್ವಂ ತಾಗೆ ತಿಣ್ಣಂ ತೆಗೆನೆಱೆ ದಿಸೆ ಬಿಲ್ಗಳ್ಗೆ ತನ್ನಿಂ ಜಾನೊಳ್ ಕ |
ಣ್ಣೆ ಱಿದತ್ತೆಂಬಂತು ಮುಂಬಿಂ ಸಮದುದಿ ನಭ ಮೆಂಬಂತು ಮಾ ಮಿಟ್ಟ ಪೂ ಬಾ ||
ಯ್ದು ಱಿದತ್ತೆಂಬಂತು ಮೊಂದೊಂದೆಸೆವ ನಿಯತ ಮೆಂಬಂತು ಮಿಲೋಕ ಮುಂಬಿಂ |
ಪೊಱಿ ಗಲ್ತೆಂಬಂತು ಮಾಗಲ್ ಖಚರಪತಿ ಭರಂ ಗೆಯ್ದು ಕೆಯ್ಪೋಗ ದೆಚ್ಚಂ || ೪೨ ||

ಕಂ|| ದಿಂಕಿಂ ತೆಗೆನೆಱೆದಿಸೆ ಚಾ |
ಪಂ ಕುಟಿಲತೆ ಗೆಟ್ಟು ಚಕ್ರ ವಳಯದ ಬಳಸಂ ||
ಮಾಂಕರಿಸಿ ಬಿಲ್ಲ ಕೊಪ್ಪು ಕೊ |
ಡಂಕೆಯ ಕೊಪ್ಪಿನ ವೊಲಮರೆ ಖೇಚರಪತಿಯಾ || ೪೩ ||

**ವ||** ಅಂತು ಮುಂಚಿದ ಕಾರ ಕಾರ್ಮುಗಿಲಂತೆ ಶರವರ್ಷಮಯ ಮಾಗೆ ದೆಸೆ ಯೆಲ್ಲಮಂ ಪರ್ಬಿ ಪ- ದಮಿತಾರಿ ಯುಬ್ಬರಮಂ ಕಂಡು ಜಿನಚಂದ್ರಂ ತಮ್ಮನಂ ಪೇಟ್ದಿಲ್ಲಣಿಗೆ ಗಾಳಿಗಂ ಗಾಮುತ್ತಿಪೃಷ್ಟಮು ಮನಂತವೀರ್ಯಂ ಜನ್ಮಾಂತರ ವೈರಂ ಕಾರಣಮಾಗೆ ವಿರೋಧಿಯ ನಾಂತು—

ಮ|| ನವದಾವಾಗ್ನಿಶಿಖಾಳಿಗಳ್ ಭುವನಮಂ ತಟ್ಟಿಕ್ಕಿಕೊಳ್ವಂತೆ ಕೊ |
ಳ್ವವನಾ ಖೇಚರ ರಾಜ ನಸ್ತ್ರತತಿಯಂ ತನ್ನಸ್ತ್ರ ಜಾಳಂಗಳಿಂ ||
ತವೆ ನೇರ್ದಾರ್ದ ನನಂತವೀರ್ಯ ನಧಿಕಪ್ರಾಯಕ್ಕೆ ಸೀರಾಸ್ತ್ರ ನ |
ಸ್ತ್ರ ವಿಶೇಷಕ್ಕೆ ಸಮಾನ ಮಿರ್ವರು ಮೆನುತ್ತಿರ್ದನ್ನ ಮಿಂದ್ರಾದಿಗಳ್ || ೪೪ ||

**ವ||** ಅಂತಿರ್ವರುಂ ದ್ವಂದ್ವಯುದ್ಧ[ದೊಳ್ ತಟ್ಟು ಕಾದೆ ದಮಿತಾರಿಯ ರಥಚಕ್ರ ರಕ್ಷಕ ರಪ್ಪ ಖಟ್ಗಿವೃಂದಮಂ ಬಳಿಯೊಳ್ ತೊಡರ್ದ ಖಟ್ಗಿವೃಂದಮಂ ಕೂಡುವಿನಂ ನಿಡುಗಡಿದಂತಿರುರ್ವರಾಸ್ಯ ತಿಲಕಂ ತನ್ನಂಬುಗಳಿಂ ಕಡಿದ ನಂತವೀರ್ಯನ ದಮಿತಾರಿಯ ಯುದ್ಧ]ಮಂ ನೋಡುವಂತೆ ನೋಡು ತ್ರಿಪೃಷ್ಟಮಂ—

ಕಂ|| ತಪೀಸಂದು ಚಕ್ರವರ್ತಿಗೆ |
ನಱೆದಾಂತಂ ವಾಸುದೇವ ನುಱಿದಿರು "ಬಲ್ಲ ||
ತ್ತಱಿ ಕೋಡು ಕೂರಿ" ತಾರಿದ |
ನಱಿಯದ ರಾರಳ ವನಂತವೀರ್ಯನ ಶೌರ್ಯಂ || ೪೫ ||

**ವ||** ಎಂದು ದೇವರ ಗುಂಡು ಗುಜಿಗುಜಿಗೊಂಡು ಪೊಗೞೆ ನ್ಯಾಯಪುರುಷಸಂತಾನ ಮಾಸನ ಸ್ಥಾನಂ ಬಿಲ್ಮುಟ್ಟಿ ಲಕ್ಷಣೋಪೇತಂ ಬಗೆ ಬಾಗವಸ ಮೆಂಬಿವ ನಱಿದು ಧನುರ್ವಿದ್ಯೆಯೇ ರೂಪುಗೊಂಡಂ ತಿರ್ವರುಂ ಕಾದೆ—

ಕಂ|| ಸುರರ ಪಡೆ ನೆರವಿ ನೆರೆದಂ |
ಬರದೊಳ್ ನಡೆ ನೋಡೆ ವರರ ನಱಿಸಲ್ಕೆ ಸೂಯಂ ||
ಬರವ ಕುಡುಗೂಸಿನಂತಿ |
ರ್ವರುಮಂ ಜಯಲಕ್ಷ್ಮಿ ಬಯಸಿ ನೋಡಿದ ಳಾಗಳ್ || ೪೬ ||

ಬಯಸಿಯು ಮೆಱೆ ಖಚರನ ನತಿ |
ವಯಸಂ ಸುಕುಮಾರಕಂ ಕುಮಾರಕ ನೆಂದಾ ||
ಜಯವಧು ಗನಂತವೀರ್ಯಂ |
ಪ್ರಿಯ ನಾದೊಂ ಖೇಚರೇಂದ್ರ ನಪ್ರಿಯ ನಾದೊಂ || ೪೭ ||

ಮ|| ಸಮುತ್ಕೃಷ್ಟಂ ಸಮವೇಧನಂ ಸಮಭವತ್ಸಂಧಾನ ಮೆಂದಿರ್ವರೇ |
ನಮ ನಾಗಳ್ ನಡೆ ನೋಡಿ ನೋಡಿ ಜಿನಚಂದ್ರಂ ದಿವ್ಯಚಿತ್ತಂ ಮಹೋ ||
ತ್ಸಮಸತ್ವಂ ವಿಭು ಕೆಮ್ಮಗಿರ್ಪುದು ಮಱುತ್ತೂರ್ಣದಂಬಿನಿಂ ದೆಚ್ಚ ನಾ |
ದಮಿತಾರಿ ದ್ರುಮ ರಾಜಚಾಪ ಜಯವ ಜ್ಜ್ಯಾಪಾಶವಂ ಕೇಶವಂ || ೪೮ ||

ವ|| ಅಂತು ಶುದ್ಧವಂಶ ಧರ್ಮಗುಣಚ್ಛೇದಂ ತಕ್ಕು ದಲ್ತೆನ್ನ ದನಂತವೀರ್ಯ ನಿಸೆ ದಮಿತಾರಿ ನಿರ್ಗುಣ ನಪ್ಪ ಸಹಾಯನಂ ಬಿಸುಟ್ಟಂತೆ ಬಿಲ್ಲಂ ಬಿಸುಟು ಬಲದ ಕೆಲದೊಳ್ ಮಿಱುಮಿಱುಮಿಱುಗಿ ತನ್ನ ಪಡೆಮೊಂಗಂ ತನ್ನ ಪೆಸರಿಂದಮೆ ಮೊಡ್ಡಿ ವೆಸರಾಗಿ ನೆಗಟ್ಟ ಚಕ್ರಮಂ ನೋಡೆ ನಿರಾಯುಧನ ನಿಸೆ ನೆಂದನಂತವೀರ್ಯನಂ ದಮಿತಾರಿ ಯಿಂತೆಂದಂ—

ಚಂ|| ಪುಗದಿರು ಪೋಗು ಪೋಗು ನಡೆಗೊಳ್ ನಡೆಗೊಳ್ ಭಯ ವಿಹ್ವಲಮಾನಸಂ |
ಪುಗು ಪುಗು ನಿಂದು ಸಾಯದಿರು ಸಾಯದಿ ರುಗ್ರ ರಣಾಗ್ರ ಕೇಳಿಲೇ ||
ಳಗೆ ದೊರೆ ಯಲ್ಲಯಲ್ಲಿ ಗಪರಾಜಿತ ನಣ್ಣನ ಯೆಂದು ಕೀರ್ತಿ ಲ |
ಕ್ಷ್ಮಿಗೆ ಪದೆದಿರ್ಪಯ್ಯ ನಿನಗೆ ನಾಣ್ಚುರೊ ನೆಟ್ಟನೆ ನಾಡ ಮಾನಸರ್ || ೪೯ ||

ಕಂ|| ಅಸ್ಮತ್ಕೋಪಾಗ್ನಿಗೆ ನವ |
ಭಸ್ಮತೆಗಂ ಶಲಭವೃತ್ತಿಗಂ ಪಡೆದೆ ಯಿದೇಂ ||
ವಿಸ್ಮಯಮೊ ನಿನಗೆ ಮುನಿಯ ನ |
ಪಸ್ಮಾರ ಗ್ರಹಕ್ಕೆ ಮಂತ್ರಿ ಮುನಿಗುಮೆ ಮುನಿಯಂ || ೫೦ ||

ವ|| ಎಂದು ತಿರಸ್ಕರಿಸಿ ನುಡಿದ ಚಕ್ರವರ್ತಿಯ ನುಡಿಗೆ ಮುನಿ ದತಿವರ್ತಿಯಪ್ಪ ಪಾಪೇಭ ಕಂಠೀರವಾನುಜ ನವ್ಯಭಿಚಾರಿ ಮಿತ್ರಾನುಕಾರಿ ಯಪ್ಪ ಬಿಲ್ಲನದಂ ಬಿಸುಟ್ಟೆನ್ನಗಮಾಂ ಬಿಲ್ಗಾಳೆಗ ಮೆಂದೇ ಬಗೆದೆಂ ಬಾಯ್ಗಾಳಗಮ ನೀಗಳಱಿದೆಂ—

ಕಂ|| ಎನಿತು ಮದವಾರಣಂ ಕ್ರೋ |
ಧಿಸಿ ಪೊಕ್ಕುಂ ಸಿಂಹಪೋತಮಂ ಗೆಲ್ಗುಮೆ ಮಾ ||
ತಿನೊ ಳೇನೊ ಕಯ್ದುಗೆಯ್ ಬಱ |
ವನ ನಾಜಿ ಶ್ರಾಂತನಂ ಯಶೋಧನ ನಿಜಾಯಂ || ೫೧ ||

ಬಲಮಿಲ್ಲ ನಿನಗೆ ಚಕ್ರದ |
ಬಲಮೆ ದಲ ದ ನೀಗಳೆನ್ನ ಬಾಣಂ ರವಿ ಮಂ ||
ಡಲಮಂ ವಿಧುಂತುದಂ ಕೊ |
ಳ್ವ ಲೀಲೆಯಿಂ ಕೊಂಡು ಖಂಡಂ ಮಾಳ್ಕುಂ || ೫೨ ||

ವ॥ ಎಂದು ನುಡಿದ ನಂತವೀರ್ಯನ ದೃಪ್ತೋದಾತ್ತ ಕರ್ಣ ಕಟುಕ ವಚೋ ನಿಚಯ ನಿಶಿತಾಸ್ತ್ರಂಗಳ್ ನೆಱಿಸ ನುರ್ಚೆ ಪರ್ವಿದ ಕೋಪಾಗ್ನಿ ಪ್ರೋಲ್ಲಸದ ಕ್ಷಿಚ್ಚಿನಂತಳುರ್ದು ಕೊಳೆ ಕನಲ್ದು ದಮಿತಾರಿ ಚಕ್ರಕ್ಕೆ ಕೆಯ್ಯಂ ನೀಡೆ—

ಮ॥ ಅದು ವಿಶ್ವಾಯುಧ ದಕ್ಷ ದಕ್ಷಿಣ ಭುಜಕ್ಕಾಸನ್ನ ಧಾರಾಗ್ರಮು ।
ಪ್ಪುದು ಮಾಗಳ್ ದಮಿತಾರಿ ಕೊಂಡಿಡಲೊಡಂ ಕಂಜಾಕ್ಷನಂ ಪೂರ್ವ ಪು ॥
ಣ್ಯದ ಪುಂಜಂ ನೆರೆ ಪೆಯ್ದು ದಂತೆ ಬಲಗೊಂಡಾನಂದದಿಂ ದಕ್ಷಿಣಾಂ ।
ಸದ ಮೇಗಿರ್ದುದು ನೀಳಶೈಲ ತಟದೊಳ್ ತಿಗ್ಮಾಂಶು ಪಿರ್ದಂದದಿಂ ॥ ೫೩ ॥

ವ॥ ಅಂತು ತನ್ನಿಟ್ಟ ಚಕ್ರಂ ಬಯ್ತಿಟ್ಟ ಚಕ್ರದಂತೆ ನಿಷ್ಫಲಮನಂತವೀರ್ಯನ ಬಲದ ಮುಯ್ವಿನ ಕೆಲದೊಳಿರ್ದುದಂ ಕಂಡು ಸೆರಗಂ ಬಗೆಯದೆ ಚಕ್ರಂ ಬೆರಸು ಪಗೆವನಂ ತಱಿದೊಟ್ಟುವೆ ನೆಂದು ಬಾಳು ಮತ್ತಪರಂ ಬೆರಸು ಮಿಂಚಂ ತಳ್ಕೈಸಿದ ಕಾರಕಾರ್ಮುಗಿಲಂತೆ ತಿಱ್ಱಿಸ ಯ್ಪುರ್ದ ದಮಿತಾರಿಯಂ ನೋಡಿ ತದನಂತರಂ—

ಮ॥ ತಿರಿಪುತ್ತುಂ ಜವದಿಂ ಮುಕುಂದ ನಿಡೆ ವಿದ್ಯುದ್ಭೀಕರಂ ವೈರಿ ಕಂ ।
ಧರಮಂ ಕೊಂಡು ತದುತ್ತಮಾಂಗ ಮೊಡ ನುಪ್ಪಂ ಪಾಱಿ ಮೃತ್ಯಾಸ್ಯಘಟಂ ॥
ಬೆರಸು ದ್ಯುಪ್ಪುಜ ದಂಡ ವರ್ತನದಿ ನುಗ್ರಾಡಂಬರಂ ಪೊಂಗೆ ಕೋ ।
ಪರ ಚಕ್ರಂ ತಿರಿವಂದದಿಂ ತಿರಿದುದಾ ಚಕ್ರಂ ಪಿಯಚ್ಚಕ್ರದೊಳ್ ॥ ೫೪ ॥

ವ॥ ತದನಂತರಂ—

ಕಂ॥ ಉತ್ತಮ ವನಿತಾ ವದನೋ ।
ಪಾತ್ತ ರಸಾಯನದೊಳಧರದೊಳ್ ಶಂಖಮು ನಿ ॥
ಟ್ಟೋತ್ತುವ ಕುಮಾರ ನಹಿತೋ ।
ದಾತ್ತ ಯಶೋ ರಸಮ ನಱುತು ಪಿರ್ದಂತಾದಂ ॥ ೫೫ ॥

ಅದೆ ಸುಷಿರ ವಾದ್ಯಮೆನೆ ಮೊಳ ।
ಗಿದು ದಮರರ ವಿತತ ತತ ಘನಾನಕ ಮದನ ॥
ದ್ಧದೊಳಮರ್ದು ಪಾರಿಜಾತದ ।
ಪೊದಟ್ಟಿ ಸಱಿ ಸುರಿದು ದಮಲ ಜಲಧರ ಪಥದಿಂ ॥ ೫೬ ॥
ತ್ರಿದಶಾನಕ ಲಯದಿಂ ನಿ ।
ರದ ಪಥದೊಳ್ ನಾರದಂಗೆ ತಾಂಡವದ ತಗು ॥
ಳ್ಪೊದವಿದುದು ತನ್ನ ಮಾಡಿದ ।
ಕದನದ ಸತ್ಫಲಮ ನಾಗಳ ನುಭವಿಸುವ ಪೋಲ್ ॥ ೫೭ ॥

ವ॥ ಅಂತುರ್ವರಾಸ್ಯ ತಿಲಕ ನಪಾರ ಸಂಗ್ರಾಮ ಪಾರಾವಾರ ಪಾರಮ ನೆಯ್ದಿ ಚಾಮೀಕರ ರಕ್ಷಾಭಿರಾಮ ಮದಾಂಧ ಗಂಧಸಿಂಧುರಂ ಬರ್ಪಂತೆ ರಥಾಂಗಪೀಠೀಭೂತ ಸಂಸ್ಪೃಷ್ಟನಾಗಿ ಬಂದೆಱಗಿದ ತಮ್ಮನ ನಟ್ಟಿಱಿಂದೆತ್ತಿ ತಳ್ಕಯ್ಸಿ ಕೊಂಡು ಪರಸಿ ವಿಸ್ಮಯದಿಂ ನೋಡುತ್ತು ಮಿರ್ದು ಸಂಗ್ರಾಮದೊಳಂಜಿದ ವಿದ್ಯಾಧರರ್ಗಭಯಂ ಗೊಟ್ಟಣ್ಣ ಕಂಡರ ತಲೆಯೊಳ್ ಕೆಯ್ಯಿಟ್ಟು ಅಂಜದಿರಿ ಮಂಜದಿರಿ ಮೆಂದು

ದಮಿತಾರಿಗೆ ಶರೀರಪೂಜೆಯಂ ಮಾಡಲ್ವೇೞ್ದು ಕೊಳ್ಗುಳಮಂ ಬಳಸಿ ಚಕ್ರಮಂ ಚಕ್ರವರ್ತಿಶ್ರೀಯುಮಂ ತಮ್ಮನೊಳ್ ನಿಯೋಜಿಸಿದಂ. ಅತ್ತ ಕನಕಶ್ರೀ ಜನಕನ ಮರಣಮುಂ ನಿಜಾನುಚಿತಾಚರಣಮು ಮೋರೊಂದಂ ಮಿಕ್ಕು ಮನಮ ನೊನಲಿಸೆ ಕಲ್ಲಸೆ ಕನಲುತ್ತು ಮಿರಲ್ ತತ್ಪ್ರಾಯವಚನಂಗಳಿ ನಟಿಲ ನಳವಡಿಸಿ ಜೈನಶಾಸನ ಚೂಡಾಮಣಿ —

ಕಂ|| ದಮಿತಾರಿಯ ಭುಜಬಲ ವಿ |
ಕ್ರಮ ದಳವಿಗೆ ಮುಚ್ಚಿ ಮುಚ್ಚು ಗುಡಿಸುವವೊಲಸು ||
ಕ್ರಮದಿಂ ನೀರ್ಗುಡಿಸಿ ಯಥಾ |
ಕ್ರಮದಿಂ ಪದವಡಿಸಿ ಪಾರಲೌಕಿಕ ವಿಧಿಯಂ || ೫೮ ||

ಕಂ|| ಓಜೆಗೊಳೆ ರಜತ ಶಾಸನ |
ರಾಜತ್ಪತ್ರಕದೊಳೆಸೆಯೆ ಬರೆಯಿಸುವಂತಾ ||
ರಾಜತಶೈಲೇಂದ್ರದೊಳೆ ಮ |
ಹಾಜಿನ ಚಂದ್ರಂ ಪ್ರಶಸ್ತಿಯಂ ಬರೆಯಿಸಿದಂ || ೫೯ ||

**ವ||** ಬೞಿಯಂ ತನ್ನ ನಿಸ್ತ್ರಿಂಶ ಕರ್ಮಕ್ಕೆ ತಾನೇ ಕೊಕ್ಕರಿಸಿ ಕೃತಾನುಶಯಂ ತತ್ಕಾಲೋಚಿತ ಪ್ರಾಯಶ್ಚಿತ್ತ ನಿರತ ಸುಪವಾಸ ಪುರಸ್ಸರಂ ಭಗವದರ್ಹದರ್ಚನಾದಿ ಸತ್ಕಾರ ಕರಣಾನಂತರಂ ಕನ್ಯಾಚಕ್ರಾದ್ಯಭಿಧಾನ ಜೀವಾಜೀವರತ್ನಂಗಳಂ ಕೊಂಡು ತಮ್ಮನಂ ಮುಂದಿಟ್ಟು ವಿಮಾನಾರೂಢಂ ಪ್ರಭಾಕರೀ ಪುರಾಭಿಮುಖನಾಗಿ ಸೌದಾಮಿನೀ ಪತಿ ಮಾರ್ಗ ಪ್ರಸ್ಥಾನದಿಂ ಪೋಗೆ—

ಚಂ|| ಅವಿರಳ ನೀರದ ಪ್ರಕರದೊಡ್ಡು ತೆರಳ್ವಿನಮಭ್ರದೊಳ್ ಮನಃ |
ಪವನ ಜವಂ ವಿಮಾನ ಜವಮುನ್ನತಿಯೆಂಬಿನಮಿಂಬುವೆತ್ತು ಪಾ ||
ಱುವ ಪಥದೊಳ್ ತದೀಯ ಸಿತಕೇತು ಪಟಂ ಬೞಿದಿಟ್ಟ ತಿಟ್ಟದೊ |
ಪ್ಪುವ ಪಟವಂತೆ ನಿಶ್ಚಳಿತ ಮಾದುದು ವೇಗಮರುತ್ಪ್ರಯೋಗದಿಂ || ೬೦ ||

**ವ||** ಅಂತು: —

ಕಂ|| ಪಾಱುವ ವಿಮಾನ ದಣಿವಿಣಿ |
ಗಾಱಿದೆ ಮೇಘಾಳಿ ದೇವರದನಂಬರದೊಳ್ ||
ಕೀೞ್ ನಿಱಿಸಿದ ಪೋಲತಿ ಜವ |
ಮಾಱಿದೆ ನಿಂದವೊಲದೂರ್ಜ ಘನಘನಕ ತಳಂ || ೬೧ ||

**ವ||** ಅಂತಾಕಸ್ಮಿಕ ವಿಸ್ಮಯ ಮುಣ್ಮೆ ಪೊಣ್ಮುವಿನಂ, ಏಱುವರ ಮೆಯ್ಯುಳ್ಳಾಡೆ ತೂಗಿ ತೊನೆವಿನಂ ನಿಂದ ವಿಮಾನ ಗತಿಸ್ತಂಭಮಂ ಕಂಡದ್ಭುತಾರ್ಪಿತ ಚಿತ್ತಂ, ಉದಾತ್ತ ಜೀಮೂತ ವಾಹನ ನಾರಯ್ವೆನೆಂದು ತದುರ್ವೀತಳಕ್ಕೆ ತಾ ನೊರ್ವನೆ ಸಮವತರಿಸಿ:—

ಕಂ|| ಝುಂಕಾರ ಮುಖರ ಮಧುರರ |
ವಂ ಕುಸುಮಾಸವದಿ ನೆಸೆಯೆ ಸುಂದರತರಮಂ ||
ಭೋಂಕೆನೆ ನೋಟ್ಪನಭೂತ ಭ |
ಯಂ ಕಂಡಂ **ಭೂತರಮಣ** ನಾವಾಟವಿಯಂ || ೬೨ ||

**ವ||** ಅಂತು ಕಂಡವರ್ಕ್ಕೆ ಕಕುದ ಮಿರ್ಪಂತಿರ್ದ **ಕಾಂಚನಾ**ಭಿಧಾನ ಗಿರಿವರದ ಮೇಲೆ—

ಚಂ|| ಚಮರರುಹ ದ್ವಯಂ ಬೆಳಪ ಬೆಳ್ಗೊಡೆ ಪೂಮಳೆ ಭಾಪ್ರತಾನ ಮು |
ತ್ತಮ ಮಣಿಪೀಠ ಮಿಂದ್ರಸಭೆ ಯೆಂಬಿವು ಘಾತಿ ಚತುಷ್ಕ ಘಾತದಿಂ ||
ಸಮನಿಸೆ ಕೇವಳಾಗಮ ಸುಲೋಚನ ನಾದೊನ ನೆಯ್ದೆ ಕಂಡ ನ |
ಶ್ರಮಗತಿ ವರ್ತಿ **ಕೀರ್ತಿಧರ** ಕೇವಳಿಯಂ ಹರ್ದ ದೇವ ದೇವನಂ || ೬೩ ||

**ವ||** ಕಂಡಾ ತ್ರಿಭುವನ ಗುರುಗೆಱಗಿ ಪೊಡವಟ್ಟು ಪೋಗಿ ಸನ್ಯಾಸಮೇತಂ ತಮ್ಮನ ನೊಡಗೊಂಡು ಬಂದು ತ್ರಿಕರಣ ಶುದ್ಧಿಯಿಂ ಬಂದಿಸಿ ಭವ್ಯವ್ಯೂಹಸೇವ್ಯಮಾನನಂ, ನಾನಾವಿಧ ದೇವನಾಯಕಾನೀಕ ನಿವೇದಿತ ದುರಿತಾರಿ ವಿಜಯನಂ ಪೂಜುಂಭಕ್ತಿಪೂರ್ವಕಂ ಧರಾನತ ಮಸ್ತಕಂ ಸ್ತುತಿಯಿಸಿ ಧರ್ಮಾಮೃತಾಸ್ವಾದನಾಸಕ್ತನಾಗಿರೆ ತದವಸಾನದೊಳ್:—

ಕಂ|| ಕನಕಶ್ರೀ ಕನ್ನಿಕೆ ನೂ |
ತನ ಜನಕ ವಿಯೋಗ ಶೋಕ ಹೃತ ಚೇತಸೆ ತ ||
ಜ್ಜನನಂ ಬೆಸಗೊಂಡಳ್ ಮು |
ನ್ನಿನ ತನ್ನನು ಬಂಧ ಭವ ಲತಾಮಂಜರಿಯಂ || ೬೪ ||

ಬೆಸಗೊಳೆ ದಶನ ದ್ಯುತಿ ದೆಸೆ |
ದೆಸೆಯ ತಮಃಪಟಮನುಗಿಪಟಂ ಗೊಳೆ ದೇವಂ ||
ಬೆಸಸಿದ ನಾಕನ್ನೆಗ ಪಸ |
ರಿಸೆ ಚಿತ್ತವಿಶೋಧಿ ಬೋಧಿ ಪರಿಣಾಮಂಗಳ್ || ೬೫ ||

ನೊದಲಿದುವೆ ಧಾತಕೀ ಷಂ |
ಡ ದೊಳುರ್ವಿಗೆ ತೊಡವು ಮೂಡಣೈರಾವತಮುಂ ||
ಟದ ಅಱೊಳ ಮಾ **ಶಂಖ**ಗ್ರಾ |
ಮದೊ ಳೊಕ್ಕಲ ಕೂಸು ಸಾಧು **ದೇವಕ** ನಂಜೊಂ || ೬೬ ||

**ವ||** ಆತನ ಪೆಂಡತಿ **ಪೃಥುಶ್ರೀ** ಯೆಂಬಳ್, ನಿರ್ಧನೆ, ತನ್ಮಿಥುನಕ್ಕೆ ಪುಟ್ಟಿದ ದೊರ್ಕಣ್ಗುರುಡಿಯುಂ, ಪೊರಂಡಿಯುಂ, ಕೂಂಟಿಯುಂ, ಪಟಿವೆಯುಂ, ಕುಷ್ಠಿನಿಯುಂ, ಕುಬ್ಜೆಯು ಮಪ್ಪ ಮಗಳ್ದಿರಱುವ ರನಿಬರಿಂ ಪಿಱಿಯ್ಯಳಿಂ, ಪರಿಪೂರ್ಣಾಂಗಿಯ್ಯೆ, **ಶ್ರೀದತ್ತೆ**ಯೆಂಬ ಮಗಳಾಗಿ ಪುಟ್ಟಿದ್ದೈ ದರಿದ್ರತಾದ್ರುಮದ ಪಣ್ಣಲಮುಂ ಪಲಕಾಲಂ ಪಲರೊಳಂ ನವಿದು ಮಕ್ಕಳ ಕಾಟಕ್ಕೆ ತದ್ದೇವಕಂ ದಿವ್ಯಂ ಬಿಡಿದು ಕಳೆವಂತೆ ಕಟುವ್ರಮುಂ, ತಂಗೆವಿರ ಭರಭಾರಕ್ಕ, ಮಡಸಿದ ಬಡತನಕ್ಕ, ಪೆಡರ್ಗ ಮಳ್ಕದೆ ನೀಂ ಪೊತ್ತು ನಿತ್ತರಿಸುತ್ತು ಮಿರೆ ಬಡನಂಟರ್ ಮದುವೆ ಮಾಡೆಯು ಮೊಲ್ಲದೆ ಕನ್ಯಾಬ್ರತದೊಳ್ ಪತ್ತಿವೆಸಂ ಗೆಯ್ದು ಕಾಲಮುಂ ಕಳೆವುತ್ತು ಮರಿಷಡ್ವರ್ಗಂ ಕಾಡುವಂತುಗಿಬಗಿ ಮಾಡಿ ಕಾಡುವ ಜುವರ ಕಾಟಕ್ಕ ಮಲಸದೆಯುಂ, ಧೈರ್ಯಮಂ ಪತ್ತುವಿಡದೆಯುಂ, ಇರ್ದೊಂದು ದಿವಸಂ ಕಣ್ಬೇಟಕ್ಕೆ ಪಕ್ಕಾದ ಕರೇಣುಗಳಂತೆ ಪಣ್ಬೇಟಮಾ ದಾಟಮೆ ನಿನ್ನಂ ವನಿವಂ ಗೆಯ್ವುದುಂ ತಂಗೆವಿರ ವಸಿವಮುಂ ತೀರ್ಚಲುಂ ಶಂಖಾಚಲಮ ನೆಯ್ದಿ ಪಣ್ಣಂ ಕೊಯ್ದು ಮಗುಟ್ಟಿ ಬರ್ಪನ್ನೆಗ ಮಾ ಬಟ್ಟೆಯೊಳ್—

ಕಂ|| ತಡೆಯದೆ ಭವ್ಯರ ನಜಿದೊಳ್ |
ತೊಡರ್ಚಿ ಕಯ್ಗೊಳಿಪ **ಸರ್ವಯಶರಂ** ನಿಂ ಕಂ |
ಡಡಿ ಗೆಜಗಿ ನೋಂಪೆ ನೆಂದೆಡೆ |
ಯುಡುಗದೆ ಸಲೆ ಧರ್ಮ ಚಕ್ರವಾಳಮ ನಾಗಳ್ || ೬೭ ||

**ವ||** ಭೇದಿಸಿ ಸಕಳ ಶ್ರಾವಕ ವ್ರತಾರೋಹಣ ಸಮೇತ ಮಾ ಮುನೀಶ್ವರಂ ಕುಡೆ ಕೊಂಡು ಮನೆಗೆ ವಂದಿರ್ಪತ್ತೊಂದುದಿವಸ ಮೇಕೋತ್ತರವೃದ್ಧಿಯಿಂ ಮನಂ ತವದೆ ತನು ತವೆ ನೋನುತ್ತಿರ್ಪ ನಂ ಒಂದು ದಿವಸಂ ಮಾಸೋಪವಾಸಂ ಗೆಯ್ದು ನಗಾರ ಕೇವಲಿಯೊಳ್ ಚರಿಗೆವುಗುವ **ಸುವ್ರತೆ**ಯರಂ ಬಾರ್ಯಿಕೆಯರಂ ನಿಱಿಸಿ ನಿರತಿಶಯ ಭಕ್ತಿಪೂರ್ವಕ ಮಾಹಾರ ದಾನಮ ನೀಯೆ ಮೈಮರುಕದಿಂ ಮಚ್ಚಿಸಿದ ಪರಿಕ್ಲಿನ್ನಾಂಗಕ್ಕೆ ಪೇಸಿ ಮನೆಯಿಂ ಪೊಱಮಟ್ಟು ಪೋದೆ ಯಾಗಣಿನೀ ಪ್ರಧಾನೆಯರಂ ನೆರೆಮನೆಯುವ ರವ (ರ) ಪೇಹಾರಕ್ಕೆ ಕಳಿಪಿದರ್ ಮತ್ತೊಂದು ದಿವಸ ಮಾ ಶಂಖಾದ್ರಿಯೊಳ್ –

ಚಂ|| ಉಲಿವ ವಿಮಾನ ಕಿಂಕಿಣಿಯ ಮೆಲ್ಲುಲಿಗಳ್ ಕಿವಿಗೆಯ್ದು ಮಟ್ಟದ |
ಗ್ಗಲಿಸ ತಗುಳ್ದ ಗೇಯರಸ ವಚ್ಚಿಱಿದಂತಿರೆ ಬೆಚ್ಚು ಚಿತ್ತದೊಳ್ ||
ನಿಲೆ ಮೃದು ನೃತ್ಯದೊಳ್ ಪುದಿದು ನಾಟ್ಯರಸಂ ದ್ರುತ ತಾರದೊಳ್ ಪಳಂ |
ಚಲೆಯೆ ವಿಯಚ್ಚರ ದ್ವಯದ ಪೋಪುದ ನಟ್ಟೆಯೆ ನಿಂದು ನೋಡಿದ್ದೆ || ೬೮ ||

**ವ||** ಅಂತಂಬರಮಲ್ಲದ ಮಿಂಚ ನವಗಯ್ವ ವಿಮಾನಾಕಾರದಿಂ ಶುಭ್ರಾಕಾರದ ಭ್ರಮೆ ಪರಿವಂತೆ ಪರಿವ ವಿಮಾನಮುಮ ನಲ್ಲಿಯ ವಿಳಾಸಕ್ಕೆ ನಿವಾಸ ಮಾದಂಬರ (ಚರ) ಲೀಲೆಯುಮ ನಟ್ಟೆತ್ತ ನೋಡಿ ಬಯಸಿ—

ಕಂ|| ಇರುಳುಂ ಪಗಲುಂ ಜಾನಿಸಿ |
ಸುರತ್ವಮಂ ಕೊಟ್ಟು ಮಗುಟಿ ಕೊಂಡ ಟಿಭವಮಂ ||
ಪಿರಿದಂ ಕಿಱಿದಕ್ಕೀವಂ |
ತಿರೆ ಖಚರ ಸುಖಕ್ಕೆ ನೀಂ ನಿಧಾನಂ ಗೆಯ್ದಯ್ || ೬೯ ||

**ವ||** ಅಂತು ವಿಧಾನ ಪೂರ್ವಕಂ ಗತಜೀವೆಯಾಗಿ ಬಂದಿಲ್ಲಿ **ದಮಿತಾರಿ**ಗೆ ತತ್ಸುಂದರಿ **ಮಂಗಳೆ**ಗಂ **ಕನಕಶ್ರೀ**ಯಾಗಿ ಪುಟ್ಟಿದ್ದೆ. ಶಿವಮಂದಿರಪುರಮ ನಾಳ್ವ **ಕನಕಪುಂಗವ**ಂಗಂ **ಜಯ**ದೇವಿಗಂ **ಕೀರ್ತಿಧರ** ನಾಮದಿಂ ನಾ ಮಗ್ರತನೂಜರ ಮೆಮಗಂ **ಪವನವೇಗ**ಿಗಂ ನಿಮ್ಮಮ್ಮಂ ದಮಿತಾರಿ ಮಗ ನಾದ ನಾಮು ಮಾತನ ಮಸ್ಮದೀಯ ರಾಜ್ಯಭಾರದೊಳ್ ನಿಱಿಸಿ—

ಕಂ|| **ಶಾಂತಿಕ**ಗುರು ಪಾದಾಂಬುರು |
ಹಾಂತಿಕದೊಳ್ ಜಾತರೂಪ ಧರರಾಗಿ ಶಮ ||
ಸ್ವಾಂತಕ್ಕೆ ಘಾತಿಗಳ್ ಬಲ |
ವಂತಂಗಳ್ ಕಿಡೆ ಜಿನತ್ವ ಮೆಮಗಾಯ್ತಾಗಳ್ || ೭೦ ||

**ವ||** ನಿನಗತೀತ ಭವದಾಹಾರ ದಾನದೊಳಾದ ಜುಗುಪ್ಸೆಯು ಮದ ನುಡುಗದೆ ಪಿರಿದು ಬೇಗ ನಿರೆ ಪರಪಿದ ಕೊಟಿಗ್ಗ ಮುಸುಱಿ ಮಡಿದ ಮಕ್ಷಿಕಾದಿ ಜೀವಸಾವದ್ಯಮು ಮನಿವಿರಿದು ಪರಮ ಕರುಣಾಕಾರ ದಾರುಣ ತೀವ್ರ ದುಃಖಮಂ ಮಾಡಿದು ದೆಂದು ಬೆಸಸಿದ ಜಿನೇಂದ್ರನ ಚರಣ ಸರಸೀ

ರುಹಂಗಳ್ಗೆಱಗಿ ಗಗನ ತಳಕ್ಕೆ ನೆಗೆದು ವಿಮಾನಮ ನೇಱಿ ಮೂವರುಂ ಮನೋವೇಗದಿ ನೆಯ್ದಿ ಪ್ರಭಾಕರೀಪುರಮ ನದಂ ಕಾವ ಚಿತ್ರಸೇನಾದಿ ಸೇನಾನಾಯಕರುಮ ನೊಳಗು ಮಾಡಿ ಮೂವಳಸಾಗಿ ಸುತ್ತಿ ಮುತ್ತಿ ಕಾದುತ್ತಿರ್ದ **ವಿದ್ಯುದ್ದಂಷ್ಟ್ರ**ನುಮಂ, **ಸುದಂಷ್ಟ್ರ**ನುಮಂ ಕಂಡು ಕಡು ಮುಳಿದು ಮಾಣದೆ ಕನಕಶ್ರೀ ಬಾರಿಸೆ ವಾರಿಸೆ—

ಕಂ|| ಇರದೆರಡೆ ಸರಳ್ ನುಱಿದರ |
ಡೆರಲೆಗಳನೆ ಕೊಲ್ವ ತೆಱದಿ ನಿರ್ವರುಮಂ ಕೊಂ ||
ದೆರಡನೆಯ ದುಃಖಮುಮಂ ಮಾ |
ಣ್ದರದಾ ಕನ್ನಿಕೆ ಗನಂತವೀರ್ಯಂ ಪಡೆದಂ || ೨೧ ||

ಆಗಳ್ ಸೈನ್ಯ ಮುಮಪೊಡ |
ವಾಗಲೊಡಂ ತತ್ಪ್ರಭಾಕರೀ ಪುರಮೇನಿಂ ||
ಬಾಗಿರ್ದುದೊ ಘನವಿಗಮ ಸ |
ಮಾಗಮ ಶರದ ಮಲ ಗಗನ ಸನ್ನಿಭ ವಿಭವಂ || ೨೨ ||

**ವ||** ಅಂತು ದಮಿತಾರಿಯ ತನಯ ರಿರ್ವರುಂ ಸಾಯೆ ಮಂಜು ಕರಗುವಂತೆ ವಿದ್ಯಾಧರ ಬಲಮೆಲ್ಲಂ ಕರಗೆ ನಿಜಾನ್ವಯ ರಾಜಧಾನಿಯುಮಂ ಪುಗುವಾಗ ಳಿರ್ವರುಂ ಸೈನ್ಯಂ ಬೆರಸು ಪೌರನಾರೀ ಜನಂಗಳ್ ಗೀರ್ವಾಣಶಂಕೆಯಿಂ ನುತ್ತಂಭಿತ ಪಕ್ಷ್ಮಪಾಳಿ ವದನ ರತ್ಯಂತ ವಿಸ್ಮಯಮಾನ ಮಾನಸ ರುರ್ವೀತಳ ಸ್ಥಿತರಂಬರ ತಳಾಗಮನ ನಿರತರಂ ರಾಮಕೇಶವರಂ ನೋಡೆ—

ಕಂ|| ಎಸೆವ ಸಮರಾನಕಂ ಸೊಗ |
ಯಿಸು ವುತ್ಸವ ತೂರ್ಯ ಮೊಗೆಯೆ ಸಮರ ಪತಾಕಾ ||
ಪ್ರಸರಂಗಳಷ್ಟ ಶೋಭೆಯ |
ಮಿಸುಗುವ ಪಟಯಿಗೆಗಳೊಳಗೆ ಪುಗೆ ಪುರವರಮಂ || ೨೩ ||

ಮ|| ಅರಿಶಸ್ತ್ರ [ಹತಿಯಿಂ] ದ ಮಾದ ಪೊಸ ಪುಣ್ಣೋತಂಗೆ ಮೆಯ್ಯೊಳ್ ನವಾ |
ಭರಣಂ ಶೋಭಿಸುವಂತೆ ಶೋಭಿಸುವು ದೀತಂ ತುಳ್ಕದೊಂ ಖೇಚರೀ ||
ಶ್ವರ ಸೈನ್ಯಾಬ್ಧಿಯ ನೀತನಿಂ ಧರೆಗೆ ಕೃಷ್ಣಂ ಚಕ್ರಿಯುಂದಂದ ಭಾ |
ಸುರ ಬೋಧಂ ಗಣೆ ಭೂತ ಭಾವಿ ಭವಮುರ್ವೀನಾಥ ರಿಲ್ಲೆಲ್ಲಿಯುಂ || ೨೪ ||

ಕಂ|| ಅಪರಾಜಿತ ಪ್ರಸಾದ |
ಪ್ರಪನ್ನೆ ಯಾಕನ್ನೆ ಮುನ್ನೆ ಸಮರಕ್ಕಿದೆ ಹೇ ||
ತು ಪದಂ ಸುಕೃತ ಮಹೀರುಹ |
ವಿಪಕ್ವ ಫಲ ಭುಕ್ತಿ ಗಿಂತು ನೋಂತರು ಮೊಳರೇ || ೨೫ ||

**ವ||** ಎಂದ ಭೂತ ಪೂರ್ವಪ್ರಭಾವಮ ನಭಿವಂದಿಸುತ್ತುಂ, ಅಶ್ರುತ ಪೂರ್ವ ಪ್ರತಿಜ್ಞಾ ಪಾರ ಗಮನಮಂ ಮೆಚ್ಚಿ ಬಿಚ್ಚಳಿಸುತ್ತುಂ, ಮದೃಷ್ಟಪೂರ್ವ ಕೃತಕಮಂ ಬಣ್ಣಿಸುತ್ತುಂ, ನೋಡುವ ಪುರವರಜನ ನಿನವಕ್ಕೆ ಮನದೊಳ್ ನಾಣ್ಚುತ್ತುಂ ನಿಜಾನುಜ ಕನ್ಯಾನ್ವಿತ ಮಹೋತ್ಸವ ಧ್ವಜದ ಕೋಟಿ ಪರಿಬರ್ಹ ವಿರಾಜಮಾನ ರಾಜಮಂದಿರಮಂ ಮೆಚ್ಚಿ ಬಿಚ್ಚಳಿಸುತ್ತುಂ, ಮೌಳಿಕುಳ ಮಂತ್ರಿ ಪರಿವೇಷ್ಟಿತಂ

ಸೌಜನ್ಯಕಂದಾಂಕುರಂ ಪೊಕ್ಕ ನಂತರ ಮಷ್ಟಾಹ್ನಿಕ ಮಹಾ ಮಹಿಮೆಯಂ ಜಿನೇಶ್ವರಂಗೆ ನಿರ್ವರ್ತಿಸಿ ಬೞಿಯಂ ಚಕ್ರಪೂಜೆಯಂ ಮಾಡಿ ತಮ್ಮಂಗೆ ರಾಜ್ಯಾಭಿಷೇಕಮಂ ಮಾಡಿ ತಮ್ಮಿರ್ವರುಂ ದಿಗ್ವಿಜಯಾಭಿಲಾಷಿಗಳಾಗಿರೆ—

ಕಂ|| ಅಮರ ನರ ಖಚರ ರುಳ್ಳ
ರ್ಘಮೆಲ್ಲಮಂ ಕೊಂಡು ಬಂದು ಕಂಡಜಿತ ಪರಾ ||
ಕ್ರಮಮ ನುೞಿದೆಱಗಿ ದಿಗ್ವಿಜ |
ಯಮ ನುೞಿಪಿದ ರೆಱಕ ಮಾಯ ದಿರ್ಕ್ಮೆ ನಯಮಂ || ೭೬ ||

ವ|| ಅಂತು ಪೊೞಲಿಂ ಪೊಱಮಡದೆ ಸಿದ್ಧ ದಿಗ್ವಿಜಯ ರಾಗಿರ್ದ ರಿರೆ ಕನಕಶ್ರೀ ಕನ್ನಿಕೆ—

ಕಂ|| ಒಂದು ದಿವಸಂ ಪುರಂಧ್ರೀ |
ವೃಂದದ ಕೌತುಕದಿ ನಱಿದು ಪಾಣಿಗ್ರಹಣಾ ||
ನಂದಮ ನೞಿಲ್ದು ಚಿತ್ತದೊ |
ಳೆಂದಳ್ ಪಿತೃಮರಣ ಕುಲ ವಿನಾಶ ವ್ಯಥೆಯಿಂ || ೭೭ ||
ಆ ದೊರೆಯ ತಂದೆ ಸಾಯೆಯು |
ಮಾದೊರೆಯ ಕುಲಾಪವಾದ ಮಾಗೆಯು ಮೆನಗಿ ||
ನ್ನೇಂ ದೊರೆ ವಿವಾಹ ಮಯಸದೊ |
ಳಾದೀ ಕಱಿತ ಕರ್ಜ ಪೋಗದೀ ಕೆಯ್ಯಾರೊಳ್ || ೭೮ ||
ತೊಳೆಪ್ಪೊಡದಂ ಜಿನಪತಿ ಮತ |
ಸಲಿಳಂ ತೊಳೆಗುಂ ವಿಶೋಧಿ ತೊಳೆಗುಂ ನಿಯಮಂ ||
ತೊಳೆಗುಂ ದಯೆ ತೊಳೆಗು ಮಱಿಂ |
ತೊಳೆಗು ಮಯಂ ತೊಳೆಗು ಮುಚಿತ ಚರಿತಂ ತೊಳೆಗುಂ || ೭೯ ||

ವ|| ಅದಱಿ ನಾನೀ ನಿಕೃಷ್ಟದಾಸೆಯಂ ಕೆಯ್ಕೊಂಡು ನಿರ್ವೇದಮಂ ಪಱಗಿಕ್ಕಿ ಸಂಸಾರ ನಿಸ್ಸಾರ ಭೋಗಕಾಂಕ್ಷೆಯಿಂ ಮದುವೆಗೆ ಮನಂದಂದಂಬಲಾಬಾಲ ಗೋಪಾಲಜನಂ ಮೊದಲಾ ಗೆನ್ನಂ ಪುಲ್ಲಿಂದಂ ನೊೞ್ಚಿವಳಂ, ಕಲ್ಲಿಂದಂ ಬಿಟ್ಟಿದಳುಪಾಗಿ ಬಗೆವ ರುಂತುಂ ಯೌವನಶ್ರೀಯಂ ನಿರಪವಾದ ಮನಾರ್ ಕಳೆದಪ ರವರೆ ಮಹಾತ್ಮರ್, ಅಲ್ಲದೆಯುಂ ವಾಂಛೆಯಿಲ್ಲದ ಜೀವಿತಮುಂ, ಮುನ್ನಂಬು ದಿಲ್ಲದ ವಿಕ್ರಮಮುಂ, ಓಗಡಿಸದನುಭವಮುಂ, ಪಗೆಯಂ ಪೊಗೞಿಸುವ ಧೈರ್ಯಮುಂ, ಪುರಾಕೃತ ಸುಕೃತ ಫಲಂಗಳವಂ ನೆನೆದ ನವರತ ಮುಟ್ಟಿ ಬಾತ ಕಣ್ಗಳುಂ, ಚಿಂತಾನಿದ್ರೆಯಿಂ ವರ್ದುರಮಾದ ಮೊಗಮುಂ, ಬಿಸುಸುಯ್ಯ ಬೆಂಕೆಯಿಂ ಬೆರಸನಗೆ ಪಸದನ ಮಿನ್ನೇನಪ್ಪುದುಂ ಶೋಕ ವಿಕಳದಿಂ ಶೂನ್ಯಮಾದ ಮನದಿಂ ಧೈರ್ಯಮುಂ ಪಱಿಪಟ್ಟುದು, ತಂದೆಯ ಬೆನ್ನನೆ ಪೋಪಂತವಧಾನಂ ಗೆಂಟು ಪೋದು ಗಿನಿವಿರಿ ದನ್ವಯ ಕ್ಷಯದ ಪವಾದದ ಪರ್ಪೊಱೆಯಂ ಆ ನೊರ್ವ ಳೆನಗಂ ಪೊತ್ತು ನಿತ್ತರಿಸ ಲಾರ್ಪುದೆ?—

ಉ|| ಎಂದುಪಶಾಂತಚಿತ್ತೆ ನವಶೋಕರಸಾಕುಳೆ ದೀಕ್ಷೆಗಟ್ಟಿಯಂ |
ತಂದು ಖಗೇಂದ್ರ ಕನ್ನಿಕೆ ನೃಪೇಶ್ವರ ನಿರ್ದ ಸಭಾಗೃಹಂ ಬರಂ ||
ಬಂದಿರ ದಾಲತಾಂಗಿ ಹಳಗಂ ಹರಿಗಂ ನುಡಿಗುಂ ಕವಲ್ತು ತ |
ಪ್ಪಿಂದು ಪೊದೞ್ದು ನೀಳ್ದು ಸಭೆಯಂ ಬೆಳಗುತ್ತಿರೆ ದಂತಕಾಂತಿಗಳ್ || ೮೦ ||

ಕಂ|| ತನವಾಸ ಮೆನ್ನೊಳಿರ್ಪರ |
ಪಸಾಯ ಮಿರ್ಪರ ಮಹತ್ವ ಮಿರ್ಪರ ಕರುಣಾ ||
ಪ್ರಸರಣ ಮಿರ್ಪರ ರಾಗದ |
ರಸ ಮಿರ್ಪರ ಮೋಹ ಮಿರ್ಪರಾದರ ಮುಂತುಂ || ೨೧ ||

ಜನಕ ಪಥ ಜಾತ ಲೋಕಂ |
ಮನದೊಳ್ ಸಂಸ್ಕೃತಿ ಲತಾ ಪ್ರಸಾರದು ಸುರ್ವಂ ||
ಜನಯಿಪ್ಪು ದಾ ನಾವಳೊಳಂ |
ಗನೆ ಗಡ ಷೋಡಶ ಸಹಸ್ರ ಮಂತಃಪುರದೊಳ್ || ೨೨ ||

**ವ||** ಅದಲ್ಲದೆಯುಂ ಸದಾಚಾರ ಭೂಷಣರಪ್ಪ ನಿಮಗೆ ನಾಣ್ಚುವುದುಂ ಲೋಕಕ್ಕೆ ನಾಣ್ಚುವೆ ನಲ್ಲೆ ನಾನು ಮಿಾ ಜನಾಪವಾದಮುಮಂ ಪೆಱಗಿಕ್ಕಿ ಕುಲೋದ್ಧತರುಂ, ತತ್ವವೇದಿಗಳುಂ ಮನೆವಾೞ ನಾಸೆವಡಲಾಗ ದದಲ್ಲದೆಯುಂ, ದಯಿತಾರಿಗೆ ಉಟ್ಟುಸುಟ್ಟುಂಬೆಯ ನೆಱಲೊಳ್ವಂದು ಮುಗುಳ್ನೊಳ್ ಪ್ರೂಬ್ಬುಂ ಭ್ರೂಲತಾಪ್ರತಾನದೊಳ್ ಕಟ್ಟುಂ ಕಿಟ್ಟಿಟ್ಟು ಮಿಕ್ಕುದು ಚಿತ ಮಲ್ತು. ಅಸ್ಮದ್ಗುರುಗಳುಂ ತ್ರೈಲೋಕ್ಯಗುರುಗಳು ಮಪ್ಪ **ಕೀರ್ತಿಧರ** ಗುರುಗಳ ಸಭಾಮಂಡಳಮಂ ಪ್ರಾಜ ಮಟ್ಟೊಂದಡಿವರ್ಪೊಡಂ ತಕ್ಕುದಲ್ತು, ಬಂದಬರವುಂ ನಿಮ್ಮಂ ಬಿಡಿಸಲುಮೊಡಂಬಡಿನಲು ಮೆಂದಬಂದೆ ನೆನ್ನಂ ಬಿಡುವುದೆಂದು ದಾತ್ತ್ಯಾಲಾಪ ಪ್ರಯೋಗಂಗಳಿಂ ತಜ್ಞತೆಯ ನಾ ಮಾನಧರರ ಮುಂದಿಡೆಯುಂ ಮನಮುಂ ತಪೋಧನರ ಪಾದಾಂತಿಕದೊಳ್ ನಿಱಿಸಿ ವ್ಯಾಮೋಹ ದುಸುರ್ವಂ ಪತ್ತುವಿಡೆ ನುಡಿದು—

ಕಂ|| ಅತಿ ಮೋಹದಿಂದೆ ಬಾಂಸು |
ವ ತಮ್ಮುತಿರ್ಪರ ಮೃದೂಕ್ತಿ ಪುಗದ ತದೀಯ ||
ಶ್ರುತಿಯಂ ನಿರ್ವೇದಂ ನಿಲೆ |
ಮತಿಯೊಳ್ ನಿಲ್ಕುಮೆ ಸರಾಗ ಮಾಗುಪಯೋಗಂ || ೨೩ ||

ಆ ಸಾಹಸ ಭೂಷಣೆ ನಾ |
ಲ್ವಾಸಿರ್ವರ್ ಕುಡದ ಕೂಸುಗಳ್ವೆರಸ ಹರ್ಷ ||
ಚಾಷ್ಟಸನ ಪೆಱವಿಡಿ ದಘಮಂ |
ತ್ರಾಸಿಸ ಲಂದಮಳ ದೀಕ್ಷೆಯಂ ಕೆಯ್ಗೊಂಡರ್ || ೨೪ ||

**ವ||** ಅಂತಾಕನ್ನಿಕೆ ಸ್ವಯಂಪ್ರಭ ಜಿನೇಂದ್ರ ಪಾದಪದ್ಮೋಪಾಂತದೊಳ್ **ಕನಕಶ್ರೀ** ನಾಮಾರ್ಯಿಕಾಭಿಧಾನೆ ತಪಶ್ಚರಣ ನಿರತೆಯಾಗಿ ಸುರೇಂದ್ರ ಲೋಕಾತಿಥಿಯಾದಳ್, ಇತ್ತ ಪುರುಷರತ್ನಕ್ಕೆ ಸ್ತ್ರೀರತ್ನಮಲ್ಲದೆ ಸಾಮಾನ್ಯಮಣಿಯುಂ ಪಸುರ್ಮಣಿಯುಂ ದೊರೆಯಲ್ಲ ವೆಂಬಂತೆ ಜೈನಶಾಸನ ಚೂಡಾಮಣಿಗೆ **ವಿಜಯೆ** ಯೆಂಬೊಳಗ್ರಮಹಿಷಿ ಯಾಗಿರೆ—

ಉ|| ರವಿಗಂ ಸಂಜೆಗ ಮೊಪ್ಪಿ ತೋಱು ವುದಯಾದ್ರೀಂದ್ರಾಗ್ರದೊಳ್ ದೀಪ್ತಿ ಪು |
ಟ್ಟುವವೋಲ್ ಕಾರ ಮುದಗ್ರ ಮೇಘತತಿಗಂ ಕಾರ್ಗಾಲದೊಳ್ ಮಿಂಚು ಪು ||
ಟ್ಟುವವೋ ಲಿಂದುಗ ಮೊಂದಿನಿಂದ ಕಳೆಗಂ ಸಂದೂಜದೊಳ್ ಕಾಂತಿ ಪು |
ಟ್ಟುವವೋಲ್ ನಂದನ ನಿಂಗಂ ವಿಜಯೆಗಂ ತದ್ವಂಶದೊಳ್ ಪುಟ್ಟಿದರ್ || ೨೫ ||

ವ|| ಅಂತು ಪುಟ್ಟಿ ನಾಮಕರಣದೊಳ್ ನಾನು ವೊಂದು ಪೆಸರೊಳ್ ಬಳೆಯೆ—

ಕಂ|| ಪಿರಿದ ಮತಿಗಂ ನಿಕಾಮೋ |
ಪರಮಕ್ಕಂ ಮೆಚ್ಚಿ ತಾನು ಮನುಜನು ಮಿದರ್ ||
ಕುರ ದಳ ಸವರ್ಣ ವರ್ಣಗೆ |
ಕುರಾಗ್ರಮತಿ ಸುಮತಿ ಯೆಂದು ಹರಿ ಪೆಸರಿಟ್ಟಂ || ೮೬ ||

ಬಾಲತ್ವದೊಳಂ ಗುಣಮಣಿ |
ಮಾಲಿನಿ ಶಿಶು ಸುಮತಿ ಸುರ ಕರಾರ್ಪಿತ ಸುಮನೋ ||
ಮಾಲಾಭ್ಯರ್ಚಿತ ಪದ ನಖ |
ಮಾಲಿಗೆ ಜನಪತಿಗೆ ವಿನಯ ವಿನಮಿತೆ ಯಕ್ಕುಂ || ೮೭ ||

ವ|| ಅಂತು ನಿಸರ್ಗದೊಳ್ ದೇವಗುರುಭಕ್ತೆಯುಂ, ಮಾತಾಪಿತೃ ಶಿಕ್ಷಾನುರಕ್ತೆಯು ಮಾಗಿ ಸ್ವಭಾವದೊಳ್ ಸಂಸಾರ ಶರೀರ ಭೋಗ ನಿಸ್ಸಾರತೆಯ ನಱಿತುಂ ಕಳಕಳಾಪದೊಳ್ ನೆರೆದು ಜವ್ವನಂ ನೆಱೆಯೆ ನೆಱೆಯೆ—

ಕಂ|| ನವ ವಯಸ ಮಯಸಮುಂ ನೋ |
ಡುವಂಗೆ ತರ ರೂಪು ನೆರೆಯೆ ಲಾವಣ್ಯ ರಸಂ ||
ಭುವನ ತ್ರಿತಯಂ ತೃಣದಿಂ |
ದವಸ್ತು ವೆನಿಸಿದುದು ಸುಮತಿ ಮೆಯ್ನೆರೆಯಲೊಡಂ || ೮೮ ||

ವ|| ಅಂತು ವರಯೋಗ್ಯೆಯಾದ ಪತಿಂವರೆಯ ನಱಿದು ಅಪರಾಜಿತ ನೀಕೆ ಕನ್ಯಾಗ್ರಹ ಜಂ ಮಂಡಲಯುಂ, ಮವಧೀರಿತ ಮಹೀಪಾಲಕುಮಾರ ಮಂಡಲಿಯು ಮಾದ ಳೀಕೆಯ ನಿನ್ನಾಗಳ್ ಕುಡುವೆ ನೆಂದು ತದನುರೂಪ ವರಾನ್ವೇಷಣ ವ್ಯಾಪಾರ ಪಾರಾಯಣನಾಗಿ ಸಮಸ್ತ ಖೇಚರ ಭೂಮಿ ಗೋಚರ ಪರ್ಯವಸಾನ ಮಾಗಿ ರಾಜಕುಮಾರರೊಳ್ ಮಾಕೆಗನುರೂಪ ನಪ್ಪ ವರನ ನಱಿಸಿ ಪಡೆಯದೆ ಮಂತ್ರಿ ಮಂಡಳ ಸಮಾಲೋಚಿತ ಕಾರ್ಯ ಪರ್ಯವಸಾನ ನಾಗಿ—

ಕಂ|| ವರರೊಳ್ ಮನೋಭವಂ ಗನು |
ವರಮುಂ ಪೊಸಯಿಸುವಪ್ಪೋಲ್ ಪತಿಂವರೆಗೆ ಸೊಯಂ ||
ಬರಮುಂ ಪೊಸಯಿಸಿದಂ ನಿಖಿ |
ಲರಾಜಕಂ ನೆರೆಯೆ ಸಾನುಜಂ ಬಲದೇವಂ || ೮೯ ||

ಅಂತಲ್ಲಿಗೆ ವಂದು ನೃಪರ್ |
ತಂತಮ್ಮಂ ಮೆಱೆದು ಪೊಚಿಲ ಪೊಱಪೊಚಿಲೊಳ್ ಬೀ ||
ಡಂ ತೀವಿ ಬಿಡಿಸೆ ಪುರವರ |
ಕಾಂತೆ ಗದೊಂದಾದು ದಭಿನವಂ ಕಟಿಸೂತ್ರಂ || ೯೦ ||

ವ|| ಅವರ್ಕ್ಕೆ ಸಂತಸಂ ಬಟ್ಟು ಕಲಂಕಾಚಾರ ಸಾರನು ಮನಂತವೀರ್ಯನುಂ ಶುಭ ಮುಹೂರ್ತ

ಪೋಲ್ ಕನ್ನೆಯಂ ನೆರೆಯೆ ಕೈಗೆಯ್ಸಲ್ವೇೞ್ದು ಮನುಷ್ಯವಾಹ್ಯ ಮಪ್ಪ ಚತುರಂತಯಾನವನೇಱಿಸಿ ಸ್ವಯಂವರಸಭಾ ಭೂಮಿತಳಕ್ಕೆ ಕನ್ನೆಯಂ ಪೋಗಲ್ವೇೞ್ದೊಡಾಕೆ ಬರ್ಪನ್ನೆಮ ಮಿರದೋೞಿಯೊಳಂ ಮಂಚಸ್ಥರಾಗಿರ್ದ ರಾಜಕುಮಾರರ್ಕಳೊಳ್—

ಕಂ|| ಶೃಂಗಾರ ಚೇಷ್ಟೆಗಳ್ ಪಿರಿ |
ದಂಗಳ್ ನೆಗೞ್ದುವು ಮಹಾನಿಳಾಹತಿ ವಿವಿಧ ||
ತ್ತುಂಗ ತ್ತರಂಗ ಲಹರೀ |
ಭಂಗುರ ಗಂಭೀರ ಜಳಧಿ ವೇಳಾಕೃತಿಯಿಂ || ೯೧ ||

ವ|| ಅಂತು ಚಂದ್ರೋದ್ಗತಿಯಿಂ ಸುಚ್ಚಳಿಸಿದ ಸಮುದ್ರವೇಳೆಯಂತೆ ನೃಪಮಾಳೆ ನಿಜಲೀಳೆಯಂ ಮೆಱೆದು ಪಂಪರಿಯಾಗೆ ಮಂಚ ಮಧ್ಯ ವೀಥಿಯಂ ಕನ್ನೆ ಪುಗುತ್ತುಂ -

ಕಂ|| ಪ್ರಮದಾನಿಮಿಷಕ್ಕೆ ಮುಸುಱುವ |
ತಿಮಿ ಕುಳದವೊಲ ವನಿಪಾಲ ನಯನ ಚಯಂ ಸಂ||
ಭ್ರಮದಿ ನೊಡ(ನ)ನಿತು ಮಾನೃಪ |
ಕುಮಾರಿಯಂ ಸುತ್ತಿಮುತ್ತಿ ಕೊಳ್ಳ ಪಸರದೊಳ್ || ೯೨ ||

ವ|| ಒರ್ವಳ್ ವಿಮಾನ ಪರೀತೆ ಗಗನಸ್ಥೆಯೊಳ್ -

ಉ|| ಪೇವತೆ ನಿಂದಿದಂ ನುಡಿವ ಳಕ್ಕ ನೆಗೞ್ತೆಯ ಪುಷ್ಕರಾರ್ಧದೊಳ್ |
ಭಾವಿಸು ಪೂರ್ವಮಂದರದ ಭಾರತದೊಳ್ ಪುರಮುಂಟು ನಂದನಂ |
ಭೂವನಿತೇಶ ನಾಳ್ದೊ ನದ ನಲ್ತ **ಮಹೇಂದ್ರ** ನೃಪಂ ನೃಪಂಗೆ ಮಾ |
ದೇವಿ ದಲಂತನಂತಮತಿ ತನ್ಮಿಥುನಕ್ಕೆ ಮನಕ್ಕೆ ಸಂತಸಂ || ೯೩ ||

ಕಂ|| ಪುಟ್ಟಿ ದಲಾನುಂ ನೀನುಂ |
ಪುಟ್ಟಿದೆ ವಂದೆನ್ನ ಪೆಸರ **ನಂತಶ್ರೀ** ಶ್ರೀ ||
ಪುಟ್ಟಿ **ಧನಶ್ರೀ** ನಾಮದ |
ನಿಟ್ಟೆರ್ ನಿನಗಲ್ಲ ಪಿರಿಯ ನಾಂ ನೀಂ ಕಿಱಿಯಳ್ || ೯೪ ||

ವ|| ಆಗಿ ಸುಖ ಮಿರ್ಪಿನ ಮೊಂದುದಿವಸಂ ವಸಂತಸಮಯದೊಳ್ ನಾಮಿರ್ವರುಂ ವನ ವಿಹಾರ ನಿಮಿತ್ತಂ ಪೋಗಿ:—

ಕಂ|| ಸದ್ಧರ್ಮ ವತ್ಸಳರ್ ಮತಿ |
ಶುದ್ಧತೆ ನಿಲೆ **ನಂದಗುಪ್ತ**ರಿತ್ತೊಡೆ ಸುಖ ನಂ ||
ವೃದ್ಧಿ ಗುಪವಾಸಮಂ ಕೊಂ |
ಡಿ ದ್ದಾಂಬುರು ಹಾಸ್ಯೆ ಬೇಱೆ ಸಿದ್ಧಾಚಳದೊಳ್ || ೯೫ ||

ವ|| ಪ್ರೋಷಧ ವ್ರತ ಪವಿತ್ರ ಗಾತ್ರೆಯರ್ ಮಾಗಿ ಮತ್ತಮುಲ್ಲಿಯೆ ಕಿಕ್ಕಿಱಿಗಿಱಿದು ಬೆಳೆದಪರ್ ಕೊಳೆ ಪೂತ ಚೂತವನಮೆ ಬಾೞ್ಕೆಯಾಗೆ ಪೊದರ್ತುಗುಳ್ದು ಕಡಲ್ತೆಳದಿರ್ಸುವ ಲಸದಶೋಕೋದ್ಯಾನ ಮಧ್ಯದೊಳ್ ನಾಲ್ಕುಂ ರಕ್ತಾಶೋಕಂಗಳ ನಡುವಣದೊಳ್—

ಕಂ|| ಲಲಿತ ಲತಾಮೃದು ಶಾಖಾ |
ವಲಿ ಮಿೞ್ಗೆ ಯಾಗೊರ್ವರೊರ್ವರಂ ತೂಗಿ ಲತಾ ||
ಲಲಿತೆ ನಾ ಖೇಚರರು ಮು |
ಯ್ಯಲಾಡೆ ಮನ ಮುಯ್ಯಲಾಡೆ ಖೇಚರ ನೊರ್ವಂ ||೯೬ ||

**ವ||** ತ್ರಿಪುರ ಪರೇಶ್ವರಂ **ವಜ್ರಾಂಗ** ನೆಂಬೊಂ ಪಿಡಿದೆೞೆದುಕೊಂಡು ಗಗನತಳಕ್ಕೆ ನೆಗೆವುದುಮಾತನ ಪ್ರಾಣೇಶ್ವರಿ **ವಜ್ರಮಾಲಿನಿ** ಕಂಡು ಪುರುಡು ಮುಳಿಸು ಮೊಡವಳೆದು ನಿಶಿತಾಸಿಧೇನುವಂ ಕಿೞ್ತು ಬೆನ್ನಟ್ಟಿ ಮುಟ್ಟಿ ಬೆಱಗಿಲ್ಲದಾತನ ಬೆನ್ನಂ ಜನ್ನಿವರವಿಕ್ಕಿದಂತಿರೆ ಪೊಯ್ಯೆ ನೊಂದು ನಿತ್ತರಿಸಲಾಱದೆ ಭೋಂಕನೆ ಬಿಟ್ಟು ತಾಂ ಮಹೀತಳಕ್ಕೆ ಬೀೞುತ್ತುಂ ನಮ್ಮ ನೋವಿಂಗಾಱದೆ ಪರ್ಣಲಘುವೆಂಬ ವಿದ್ಯೆಯಂ ಬೆಸಸುವುದುಮಾ ವಿದ್ಯಾದೇವತೆ —

ಕಂ|| ಜನನಿ ನಿಜೋತ್ಸಂಗದೊಳೊ |
ಯ್ಯನೆ ತಂದಿರಿಸುವವೊಲಿಕ್ಕಿ ತೊಡೆಯೊಳ್ ಬೞಿಯಂ ||
ಮನ ವೊಸೆದಿಕ್ಕಿರ್ದ ಸುಖಾ |
ಸನದೊಳ್ ಕುಳ್ಳಿರಿಸುವಂತೆ ಸಿಕತಿಳ ತಳದೊಳ್ || ೯೭ ||

**ವ||** ಆ ಭೀಮಾಟವೀಸರಸ್ತೀರದೊಳಿರಿಸಿ ಪೋಪುದುಂ ನಾ ಮಲ್ಲ ಧೈರ್ಯಮನೆ ಮನದೊಳವಳಂಬಿಸಿ ಚತುರ್ವಿಧಾಹಾರ ಶರೀರಪ್ರತ್ಯಾಖ್ಯಾನ ಪೂರ್ವಕಂ ಸನ್ಯಸನದಿಂ ಮುಡಿಪಿ ಸೌಧರ್ಮೇಂದ್ರಂಗಾಂ **ನವಮಿಕೆ** ಯೆಂಬ ದೇವಿಯೆ ನಾದೆಂ, ನೀನುಂ **ಕುಬೇರಂಗೆ ರತಿ**ಯೆಂಬ ಮನೋವಲ್ಲಭೆಯಾದೈ. ಇಂತಿರ್ವರುಮೊರ್ಮೆ **ನಂದೀಶ್ವರ** ದ್ವೀಪದೊಳೊರ್ವೊರ್ವರಂ ಕಂಡು ಅಱಿದೊಡನೆ ಜಿನೇಂದ್ರ ಮಹಿಮೆಯಂ ಮಾಡಿ ಮನುಷ್ಯಲೋಕದೊಳ್ ನಮ್ಮೊಳಾರಾದೊಡಮೊಂದೊರ್ವರಂ ಪ್ರತಿಬೋಧಿಸುವಂತು ಪೂಣ್ದು ಪೋದೆವದಂ ನೀನೀಗಳ್:--

ಕಂ|| ಮಱೆದು ಬಿದೀ ಸಂಸಾರಮ |
ನಱಿಯುಪ ರಂತೆ ಸುಮಲ್ಲ ದಲ್ಪಸುಖಕ್ಕಂ ||
ತೆಱಗಿ ಮರುಳಕ್ಕ ಕನಸಿನ |
ತೊಱೆಯೊಳ್ ನೀರ್ಗುಡಿದು ತಣಿವ ನಱಿಸಿದ ರೊಳರೇ || ೯೮ ||

**ವ||** ಅದಱಿಂ ದೆನ್ನನುಡಿ ಯೆಂಬುದು ನಿನಗೆ ಪರಿಪಾಕ ಪಥ್ಯ ಮಿದ ನವಜ್ಞೆಗೆಯ್ವುದುಂ ನಿರಾಕರಿಸುವುದುಂ ಕಿಂಪಾಕಪರಿಪಾಕ ಸಂಕಾಶ ವಿಷಯದೊರೆಯ ಪರಿಗ್ರಹಭಾರದಿಂ ಮುೞುಗಲ್ಕಲ್ಲದೆಂದಿಂಗಂ ನೆಗೆಯಲ್ಕಕ್ಕುಮೆ? ಮೇಗಪ್ಪುದಂ ನೀನಱಿವೆ ಯೆಂದು ಮಾಣ್ಬುದು ಮದೆಲ್ಲಮುಮ ನೆಯ್ದೆ ಕೇಳ್ದು ತದ್ದೇವೀರೂಪಮುಂ ಕಂಡು:—

ಕಂ|| ಅಱಿವ ನೆಡೆವಱಿದು ಕೆಟ್ಟುದ |
ನಱಿಸಲ್ ಪೋಪಂತೆ ಮುಚ್ಛೆವೋಪುದು ಮೊಡ ನಿ ||
ರ್ದಱಿಕೆಯ ಪರಿಜನ ಮಿರದೆ |
ಬ್ಬಱಿಸಲೊಡಂ **ಸುಮತಿ** ಮುಚ್ಛೆಯಿಂ ದೆಟ್ಚಿತ್ತಳ್ || ೯೯ ||

ವ॥ ಅಂತು ಮುಚ್ಚೆಯಿಂ ಬೆಚ್ಚುತ್ತು ಸುಮತಿ ತಮ್ಮಕ್ಕನನಂತಶ್ರೀಯಪ್ಪ ದೇವಿಗಿಂತೆಂದಳ್—

ಚಂ॥ ಅನುಭವಿಸುತ್ತು ಮಿರ್ದು ಸುಖದಿಂ ಸುಖಮಂ ಸುರಲೋಕದೊಳ್ ಪುರಾ ।
ತನ ಭವ ಮೋಹದಿಂ ದನುಜೆ ಯೆಂದೆನ ಗಿಷ್ಟಮತಿ ಪ್ರಕಾಶಮಂ ॥
ಜನಯಿಸ ನಿನ್ನದೊಂದು ದಯೆಗೇಂ ತೊದಳಿಕ್ಕ ಮಹಾಪ್ರಸಾದ ಮಾ ।
ಜಿನ ಮತಮಂ ಭವನ್ಮತಮುಮಂ ಮಱಿದಿಂ ದವಿವೇಕಿ ಯಪ್ಪೆನೇ ॥ ೧೦೦ ॥

ಕಂ॥ ಇದು ಭವದ ಮಳಿನ ಸೌಖ್ಯಾ ।
ಭ್ಯುದಯ ಮಲ್ಲದೆ ಮದೀಯ ಮಹಿಮೋನ್ನತಿಯ ॥
ಲ್ತಿದ ನಱಿದೆಂ ಮಾರ್ಗಂ ದ ।
ಪ್ಪಿದ ಕುರುಡರ ನಱಿದ ಬಟ್ಟೆ ಗುಯ್ಯಾರೆ ಪಿರಿಯರ್ ॥ ೧೦೧ ॥

ವ॥ ಅದಱಿಂದ ಮೆಮಗೆ ನಿಮ್ಮ ನುಡಿ ಮರ್ದಿನ ಕೈಪೆಯಂತುಟಿ, ಮತ್ತಮಾತುರ ನೌಷಧ ಭೀರುವಾದೊಡಂ ಭಿಷಗ್ದೋಷಮಾಗದಂತೆ ನಿಮ್ಮ ಪೇಳ್ದುದ ನುಪೇಕ್ಷಿಸಿದೊಡೆನ್ನ ದೋಷಂ, ಪುನ ರ್ದರ್ಶನಂ ಯಥಾಸ್ಥಾನಕ್ಕೆ ಬಿಜಯಂ ಗೆಯ್ಯಿ, ಮೆಂದು ಮುಕುಳಿತ ಕರಕಮಳೆ ವಿಸರ್ಜಿಸುವುದು ಮಾದೇವಿ—

ಕಂ॥ ಗಗನಂ ನಿಜಭೂಷಣದೀ ।
ಪ್ತಿಗಳಿಂ ತಳಿತಱಿಸಿ ಪೊಳೆಯೆ ಮಿಂಚಿನ ಗೊಂಚಲ್ ।
ನೆಗೆದಂತೆ ನೆಗೆದು ಸುರಲೋ ।
ಕ ಗಮನಮಂ ಮನುಜಲೋಕದಿಂ ಪೊಗಱಿಸಿದಳ್ ॥ ೧೦೨ ॥

ವ॥ ಇತ್ತ ಸುಮತಿ ಸುಮತಿವೆಸರಂ ನನ್ನಿಮಾಡಿ ತನ್ನ ಸಖೀಜನಕ್ಕಿಂತೆಂದಳ್, ಪರಮಾರ್ಥಮಂ ಮಧ್ಯಸ್ಥತೆಯುಮ ನಧರಿಸದವಧಾರಿಸುವಾಗಳ್ ದೇವತೆಯ ನುಡಿದ ನುಡಿ ಸಾರಮಸಾರಂ, ಉಪಾದೇಯ ಮನಾದೇಯು, ಮೆಂಬಿನಿತಂ ನಿಮಗಱಿಯಲಕ್ಕುಮೆ ವಲಂ ವಿಷಯಾಸಕ್ತಿಯೊಳಾಯಾಸೈಕ ನಿರತರಾಗಿರ್ಪ ಪ್ರಾಕೃತ ಜನಂಗಳ ಗಮನಮೋ ಸಮಸ್ತ ವೇದಿಗೆ ಹೃದಯಂಗಮ ಮಾಗದದುಮಂ ನೀಮೆ ಪೇಱಿ ಮೆಂದವರೊಳ್ ಪರೀಕ್ಷಾಕ್ಷಮೋದಾರ ವೀರ ವಾಕ್ಯಂಗಳಂ ನುಡಿಯುತ್ತುಂ ರಥಮಂ ಮಗುಳ್ಚಿಲ್ವೇಳ್ದು—

ಕಂ॥ ಕಾಂತಾರತ್ನಮ ನೆಮಗ ।
ಪ್ಪಂತಾಗಿರೆ ಮಾಳ್ಪೆ ನೆಂದು ನೆರೆದ ಮಹೀಭೃ ॥
ತ್ಸಂತತಿಯ ಬಿಟ್ಟವಾಯ್ ಬಿ ।
ಟ್ಟಂತಿರೆ ಬಂದಾಕೆ ಪೊಕ್ಕಳಿರ್ದ ದರಮನೆಯಂ ॥ ೧೦೩ ॥

ಉ॥ ಪೊಕ್ಕು ನಿಜಾಂಬಿಕಾ ಜನಕರಂ ಸುತೆ ಬೀಱಿಕೊಳೆ ಕನ್ನೆ ಮುನ್ನೆ ತ ।
ತ್ವಕ್ಕತಿಲೌಲ್ಯೆ ಬಾಲ್ಯದೊಳ ಮಾಗದು ಮಾಣಿಸಲೆಂಬ ಚಿಂತೆಯಿಂ ॥
ಬೆಕ್ಕಸರಾಗಿ ನಮ್ಮಳಿಪೆ ಸಾಲದೆ ಭವ್ಯರ ನಾರ್ಗೆ ಬಾರಿಸಲ್ ।
ಬಕ್ಕುರ ಮೆನು ತ್ತಣಂ ಮಿಡುಕ ರಕ್ಕಟ ಲಿಪ್ಪದ ರೂಪಿದೆಂಬಿನಂ ॥ ೧೦೪ ॥

**ವ||** ಬಿಲ್ಲುಂ ಬೆಱಗು ಮಾಗಿರ್ದ ಜೈನ ಶಾಸನ ಚೂಡಾಮಣಿಯುಂ ವಿಜಯೆಯು "ಮೆಮ್ಮ ವಂಶಕ್ಕೀಕೆಯೆ ಪತಾಕೆ" ಯೆಂದಭಿವರ್ಣಿಸಿ ಪುತ್ರೀವಿಯೋಗ ವಿಷಾದಮುಮಂ, ತತ್ತಪೋಗ್ರಹಣ ಪ್ರಮೋದಮುಮಂ ಸೂಚಿಸುವಂತಿರೆ ಪೆರ್ಚಿ ಬಂದೊಱಿ ಮುಗುವ ಶೋಕಬಾಷ್ಪಂಗಳುಮ ನಾನಂದಾಶ್ರುಜಲಂಗಳುಮಂ ತೋಱಿದು ಮಗಳ ಮೊಗಮ ನತಿಸ್ನೇಹ ಪಾಶಾಳಂಬಿತ ಮನಸ್ಕರಾಗಿ ನೋಡಿ—

ಕಂ|| ತನಯೆ ತಪದಿಂದೆ ನೀಂ ನಿ |
ನ್ನನೆ ಯಲ್ಲದೆ ನಮ್ಮ ಕುಲಮುಮಂ ಬೆಳಗಿದ ಯೆಂ ||
ತೆನೆ ಮುಗಿಲ ಮುತ್ತು ಮುಗಿಲಂ |
ನೆನೆಯಿಸಿ ಮಂಡಲಿಯ ನಿಪುಣರಿಂ ಪೊಗಟಿಸದೇ || ೧೦೫ ||

**ವ||** ಎಂದು ಗಂಭೀರ ಧೀರೋದಾರ ಸಾರೋಕ್ತಿಗಳಿಂ ನುಡಿದೊಡಂಬಟ್ಟ ತಾಯುಂ ತಂದೆಯುಮಂ ಬಿಡಿಸಿ ತಪಸುಗಮ್ಯಮಾನೆ ರಾಜಮಂದಿರದಿಂ ಪೊಱಮಟ್ಟು **ಸುಮತಿ** ಸುವ್ರತಾಗಣಿನಿ ಸಮಕ್ಷಮೊಳ್ ಪರಮ ದೀಕ್ಷೆಯ ನಯ್ನೂರ್ವರ್ ಮಹೀಪಾಲ ಕನ್ನೆಯರೊಡನೆ ಕೆಯ್ಕೊಂಡಳ್—

ಕಂ|| ಮತ್ತಿತ್ತ ಚಕ್ರಿಯುಂ ಚತು |
ರುತ್ತರವದಶೀತಿ ಲಕ್ಷಪೂರ್ವಂ ಬಟ್ಟ ||
ತ್ಯುತ್ತಮ ಸುಖ ಪವಡಿಸಿ ತ |
ನ್ನುತ್ತಮರ್ಯ ಮಕೂಲ ವಿಶದ ಶಯ್ಯಾತಳದೊಳ್ || ೧೦೬ ||

ಇರೆ ಛಿದ್ರಿಸಿದೊಂ ಜವ ನನು |
ವರಕ್ಕ ಮಿದಿರ್ಗಂ ಪೊಣರ್ಕೆಗಂ ಸುಗಿದಪೊಲಾ ||
ಹರಿಯುಂ ಮೂದಲಿಸಿ ಚಲಂ |
ಬೆರಸಿ ನಿರಾಕರಿಸಿ ಹರಿಯ ಸಿಱಿಪುದು ಮೊಗ್ಗೇ || ೧೦೭ ||

**ವ||** ಅಂತನಂತವೀರ್ಯಂ ಭವಾಂತರಿತ ನಪ್ಪುದುಂ—

ಮ|| ಬಲದೇವಂ ಬಲದೇವ ನುಜ್ಜ್ವಲಣೆಯೊಳ್ ಮುಂದಾದರಂ ಕೊಂದ ಮೆ |
ಯ್ಗಲಿ ತಮ್ಮಂ ಸಯೆ ಬಳ್ಳಿಯುಂ ನಿಗಳಮುಂ ತಟ್ಟಿಂದುಪ್ಪಂ ಬಳ್ಳಿ ಸಂ ||
ಕಲೆಯುಂ ಪೋದ ಗಜಂ ಬನಕ್ಕೆ ತಳರ್ವಂತುದ್ವೇಗದಿಂ ಮೋಹ ಸ್ಮಂ |
ಖಲೆ ಪಾಱಿಟ್ಟಿ ತಪೋವನಕ್ಕೆ ತಳದಾರ್ತ್ಮೀಯಾನ್ವಯೈಶ್ವರ್ಯದೊಳ್ || ೧೦೮ ||

**ವ|| ಅರಿಂಜಯನ**ಂಬೊಂ ತನ್ನ ಕಿಱಿಯ ಮಗನ ನಭಿಷೇಕ ಪೂರ್ವಕಂ ಸಿಱಿಸಿ ಸಪ್ತ ಶತ ಕ್ಷಿತಿಪಾಲ ಸಮನ್ವಿತಂ ಸ್ವಯಂಪ್ರಭ ತೀರ್ಥೇಶ್ವರ ಪಾದಾರವಿಂದ ಸಮಕ್ಷದೊಳ್ ಜಿನನಾಥ ರೂಪಮುಂ ತಾಳ್ದಿ—

ಕಂ|| ಧೀರತೆ ಗಿಡದೆ ಪರೀಷಹ |
ವೀರರ ನುಗ್ರೋಗ್ರ ತಪದೊಳಂ ಗೆಲ್ದು ತಮೋ ||
ವೈರಿ ವಿಷಯಕ್ಕೆ ಮನೆ ದಸಿ |
ಧಾರೆವೊಲಪರಾಜಿತಂ ವಿರಾಜಿತ ನಾದಂ || ೧೦೯ ||

**ವ||** ಅಂತು ತಪೋನಿಯಮದೊಳಮಾ ಜಿನಚಂದ್ರ ಮುನೀಂದ್ರಂ ಯೋಗೀಂದ್ರ ಚಂದ್ರನಂ ಪೊಗೞಿಸಿ ನಿರಾಕುಳ ಮೋಕ್ಷವಿಹಾರಿಯಾದೊ ನನಂತವೀರ್ಯನುಂ **ರತ್ನಪ್ರಭೆಯುಂ ಘರ್ಮೆಯು**ಮೆಂಬ ಮೊದಲ ನರಕದ ಪದಿಮೂಱುಮಿಂದ್ರಕಂಗಳೊಳ್ **ಸೀಮಂತ**ಮೆಂಬ ಮೊದಲಿಂದ್ರಕದೊಳ್ ನಾಲ್ವತ್ತಿರ್ಛಾಸಿರ ಸಂವತ್ಸರ ಮಾಯುಷ್ಯಮಾಗಿ ಪುಟ್ಟಿದ ನಿತ್ತಲ್ ಉರ್ವರಾಸ್ವ ತಿಲಕನಪ್ಪ ತಪೋಧನನುಂ ಸಿದ್ಧಗಿರಿಯೊಳಾತ್ಮಪರ ನಿರಾಪೇಕ್ಷಮಪ್ಪ—

ಕಂ|| ಪ್ರಾಯೋಪಗಮನದಿಂ ಮುನಿ |
ನಾಯಕ ನಿರವಯದು ತೊಱೆದು ನಿಜತನುವ ನಯು ||
ಶ್ರೀಯು ಜೆಗೆನಿಸು ವಮರ |
ಶ್ರೀಯೊಳ್ ನೆಗಱ್ದ ಚ್ಯುತೇಂದ್ರ ಪದಮಂ ಪಡೆದಂ || ೧೧೦ ||

**ವ||** ಅಂತು—

ನರಿದಿರ್ದ ಮೆಂತು ಮೂಲಾಂ |
ಕುರಂಗ ಳೊಳಗೊಂ ದಘೋಗ ಮೊಂದೂರ್ಧ್ವಗ ಮಂ ||
ತಿರೆ ವಾಸುದೇವ ಬಲದೇ |
ವರೊ ಳೊರ್ವ ನಧೋಗ ನೊರ್ವ ನೂರ್ಧ್ವಗ ನಾದೊಂ || ೧೧೧ ||

**ವ||** ಅಚ್ಯುತೇಂದ್ರಂ ಮೂನೂಱಯ್ವತ್ತು ಸವಿರಾಜಿತ ವಿಮಾನಂಗಳುಂ ಮೂವತ್ತುಮೂವರ್ ದಿವಿಜರುಂ, ಪಯಿಂಛಾಸಿರ್ವರ್ ಸಾಮಾನಿಕಾಮರರುಂ, ನಾಲ್ವತ್ತುಸಾಸಿರ್ವರಂಗ ರಕ್ಷಕ ದೇವರುಂ, ನಾಲ್ವರ್ ಲೋಕಪಾಲರುಂ, ಗಜ ತುರಗ ರಥ ಪದಾತಿ ಮಹೋಕ್ಷ ಗಂಧರ್ವ ನಟೀ ವಿಕಲ್ಪಿತ ಮಾದೇೞುಂ ಪಡೆಯು ಮೊಳಗಣ ನಡುವಣ ಪೊಱಗಣ ಮೂಱುಸಭೆಯುಂ, ಮೂವತ್ತಿರ್ವರ್ ಪ್ರಧಾನ ದೇವಿಯರುಂ, ಅಱುವತ್ತು ಮೂವರ್ ವಲ್ಲಭೆಯರುಂ ತನಗೆ ಪ್ರಸಿದ್ಧಮಾಗೆ—

ಕಂ| ಪೊರೆಯುನೆ ಮಾದೇವಿಯರಿ |
ಙ್ಬರಾಗೆ ತಣಿದಂ ಮನಃಪ್ರವೀಚಾರಂ ತ ||
ತ್ಸುರಪತಿ ಸುರಲೋಕ ಸುಖಾಂ |
ಬುರಾಶಿಯೊಳ್ ಕೂಡಿ ಮೂಡುತುಂ ಮುೞುಗುತ್ತುಂ || ೧೧೨ ||

ವಿಕರಣ ಸಂಭವ ದೇವೀ |
ನಿಕರಮು ಮಚ್ಚರಸೆಯರ್ ಪಲರ್ ತದ್ದೇವೀ ||
ಪ್ರಕರ ಕ್ಕಳವಿಯ ನಪಿನಾ |
ಯಕ ನಱೆಯಂ ಪೇೞ ಲುೞಿದ ನವ ನೆತ್ತಱಿಪಂ || ೧೧೩ ||

ಸುರ ನಿಪ್ಪತ್ತಿರ್ಛಾಸಿರ |
ಬರಿಸಕ್ಕೊಂದೂರ್ಮೆ ನೆನೆವ ನುಣಿಸಂ ಮಾಸಾಂ ||
ತರಿತ ಮೆನಿಪೊಂದು ಸಂವ |
ತ್ಸರಕ್ಕೆ ನುಯ್ಪೊಂ ನವೋರು ಸೌರಭ ನಿಭಮಂ || ೧೧೪ ||

ಪರಮ ಸುಖಾಮೃತ ಪಿಂಡದ |
ಪೊಱೆ ಮೂಱು ನೊಱಂ ಶರೀರಮಾಗಿಪ್ಪ ||
ತ್ತಿರಡೆ ಸಮುದ್ರೋಪಮ ವ |
ತ್ಸರಂ ಬರಂ ಬಾೞ್ದು ಮಚ್ಯುತೇಂದ್ರಂ ದಿವದೊಳ್ || ೧೧೫ ||

**ವ||** ಅಂತು ದಿವ್ಯ ಸುಖ ಪರಂಪರಾ ಪರಿಣತಾಂಗ ನನಂಗ ರಾಗರಸಪೂರ ಪರಿಪ್ಲಾವಿತಾಂತರಂಗ ನಚ್ಯುತಾಮರೇಶ್ವರಂ **ನಂದೀಶ್ವರ** ದ್ವೀಪಕ್ಕೆ ಪರಿವಾರಾಮರೇಶ್ವರರ್ ಸಹಿತಂ ಪೋಗಿ ಜಗತ್ತ್ರಿತಯ ಚೂಡಾಮಣಿಗಂ ಜನದಧಿಮುಖಾದಿ ನಗಾಕೃತ್ರಿಮ ಚೈತ್ಯಾಲಯಂಗಳೊ ಳಷ್ಟಾಹ್ನಿಕ ಮಹಾಮಹಿಮೆಯಂ ಮಾಡಿ ಬಂದೊಂದು ದಿವಸಂ—

ಮ|| ಅಮರಾನೀಕದ ಸುತ್ತು ಪೋಲೆ ದಿನನಾಥಾವಂಧ್ಯ ಸಂಧ್ಯಾಭ್ರವಿ |
ಭ್ರಮಮಂ ವಾಹನ ದೇವ ದಂತಿ ಶಿರದೊಳ್ ಕೂರಂಕುಸಂ ಚಾರಣ ||
ಕ್ರಮದಿಂದಾ ದಱುವತ್ತು ನಾಲ್ಕು ಪೊಳೆಪಿಂ ಕಣ್ಗೊಪ್ಪೆ ಮೇಲಪ್ಪಕೃ |
ತ್ರಿಮ ಚೈತ್ಯಾಲಯ ವಂದನಕ್ಕೆ ನಡೆದಂ ಸೌಜನ್ಯ ಕಂದಾಂಕುರಂ || ೧೧೬ ||

— **ಗದ್ಯ** —

ಇದು

ಜಿನೇಂದ್ರ ಚರಣ ಸರಸೀರುಹ ಶಿಲೀಮುಖಾಯಮಾನ

**ಶ್ರೀಮದುಭಯಕವಿ ಚಕ್ರವರ್ತಿ**

ನಿರ್ವರ್ತಿತಮುಂ

**ಅಮ್ಮನಭಕ್ತಾಭಿಧಾನ ವಿದ್ಯಾನಿಧಾನ ಮಲ್ಲಪಾರ್ಯ**

ತನನುಜಾತಾಭಿಜಾತ ಸಾರಸ್ವತ

ಪುನ್ನಮಾರ್ಯ ಕಾರಿತಮುಮಪ್ಪ

**ಪುರಾಣಚೂಡಾಮಣಿಯೊಳ್**

ಚತುರ್ಥಾಶ್ವಾಸಂ.

———

|| ಶ್ರೀ ||

# ಶಾಂತಿಪುರಾಣಂ.



## ಪಂಚಮಾಶ್ವಾಸಂ.

ಕಂ|| ಶ್ರೀ ಜಿನಚಂದ್ರಂ ವಿಬುಧಪ |
ಮಾಜಂ ಬೆರಸಂದು ವಂದನಾ ಭಕ್ತಿಯೊಳಿಂ ||
ರಾಜಿಸಿದನೊ ಗಮನದೊಳ್ಪ |
ರಾಜಿತಚರ ನಚ್ಯುತೇಂದ್ರ ನಪಗತ ತಂದ್ರಂ || ೧ ||

ವ|| ಬಂದು ಜಂಬೂದ್ವೀಪದ:—

ಉ|| ಮಂದರಶೈಲಮಂ ದಿವಿಜನಾಯಕನೆಯ್ತರೆ ಭದ್ರಶಾಲದಿಂ |
ಸಂಧಿಸಿ ನಿಂದ ನಂದನದಿ ನೊಪ್ಪುವ ಸೌಮನಸಾಖ್ಯದಿಂ ಮನೋ ||
ನಂದನ ಮಪ್ಪ ಪಾಂಡುಕದಿ ನಾ ಗಿರಿರಾಜವಿಲಾಸ ಮುಬ್ಬಿಯಂ |
ತಂದುದು ಕಾಣ್ಕೆಯಂ ತನಗೆ ತರ್ಪ್ಪವೊ ಲಂತದ ನಿಂದ್ರ ನೆಯ್ದಿದಂ || ೨ ||

ವ|| ಎಯ್ದಿ ಕ್ರಮದೊಳ್ ಮುಂ ಪೇೞ್ದ ನಾಲ್ಕುಂ ಬನಂಗಳೊಳಗೆ ನಾಲ್ಕು ನಾಲ್ಕಾಗೆ:—

ಕಂ|| ಬೇಱಿರ್ದ್ದ ವಿರಾಜಿತ ಪದಿ |
ನಾಱು ಮಕೃತ್ರಿಮ ಜಿನಾಲಯಂಗಳ್ಗೆ ಮನಂ ||
ಬೇಱಿಕೆ ನುಡಿ ಬೇಱಿಕೆ ಕಾಯಂ |
ಬೇಱಿಸಿಸದೆ ಕರಣಶುದ್ಧಿಯಿಂ ಪೊಡವಟ್ಟಂ || ೩ ||

ವ|| ಅಂತು ದೂರದೊಳ್ ಪೊಡೆವಟ್ಟೆಯ್ದೆವಂದು ಬಲಗೊಂಡೊಳಗಂ ಪೊಕ್ಕು ಕ್ರಿಯಾಪೂರ್ವಕದಿಂ ದೇವರಂ:—

ಕಂ|| ಬಂದಿಸಿ ಬೞಿಕೆ ಯಥಾಕ್ರಮ |
ದಿಂ ದಮುಖಾರ್ಚನೆಗಳಿಂದ ಮರ್ಚಿಸಿ ಪರಮಾ ||
ನಂದಂ ಕಡೆಯ ಜಿನೇಶ್ವರ |
ಮಂದಿರದೊಳ್ ಕಂಡ ನೂರ್ವ ನಂಬರಚರನಂ || ೪ ||

ವ|| ಕಂಡು:—

ಕಂ|| ಬಗೆ ಬೆಚ್ಚು ನಟ್ಟೆ ದಿಟ್ಟಿಯ |
ನುಗಿಯಲ್ಕಂ ಬಗೆಯ ತಾಱದೆ ವಿದ್ಯಾ ||
........................................ |
........ಬರೆದಂಬರ ಚರೇಂದ್ರ ನಿರ್ಪಾಂತಿರ್ದಂ || ೫ ||

**ವ||** ಅಂತು ಭಾವಾನುಬಂಧ ನಿಜಮೋಹದಿ ನಿರ್ವರು ಮೋಹೋರ್ವರಂ:—

ಉ|| ಸಂತಸವಂತನೆಯ್ದೆ ನಡೆ ನೋಡುವುದುಂ ಖಚರೇಂದ್ರನಂದನೆ |
ನ್ನಿಂ ತವೆ ಪುಣ್ಯಮೂರ್ತಿಯುತನೈ ಪರಮೇಶ್ವರ ನೀನು ಮುಂತು ನೋ |
ಟ್ಟಂತಿರೆ ನೋಂತನೇ ಮನುಜಕೀಟಕನೊಳ್ ನಿನಗೆನ್ನೊಳಾವುದ |
ತ್ಯಂತ ಮನೋಹರಂ ಸಕಳನಾಕಿನಿಕಾಯಸಭಾಭಿವಂದಿತಾ || ೬ ||

**ವ||** ಎಂದತಿಭವ ಸೌಧರ್ಮಿಕೆಯ ಕೂರ್ಮೆಯ ಭರದಿಂ ದೆಱಗುವಂತೆಱಗಿ ಪೊಡವಡುವುದುಂ:-

ಕಂ|| ದೇವೇಂದ್ರನು ಮಾಗಳ್ ದೇ |
ಶಾವಧಿಯಿಂ ಚಿತ್ತದೊಳ್ ಪ್ರಯೋಗಿಸಿ ನಿಜ ಜ |
ನ್ಮಾವಳಿ ಸಮೇತ ಮಾತ್ಮೀ |
ಭಾವಮನಱಿದಂ ವ್ಯತೀ [ತ] ಭವಸಂತತಿಯಂ || ೭ ||

**ವ||** ಅಂತು ಭವಾಳಿಯ ನೋಳ್ಪುಯೆ ಪೂರ್ವಾಪರ ಪರಾಮರ್ಶಂಗೆಯ್ದು:--

ಕಂ|| ಕಂಡು ದಿವಿಜೇಶ್ವರಂ ಬಗೆ |
ಗೊಂಡಿರೆ ನುಡಿದಂ ವಿಯಚ್ಚರಂ ಮುಂ ನಿನ್ನಂ ||
ಕಂಡಱಿಯದೆಯುಂ ಸ್ವಾಮಿ |
ಕಂಡಂತಾದಪುದಖಂಡಿತ ವ್ಯಾಮೋಹಂ || ೮ ||

ನಿನ್ನ ದಯೆವೆರಸು ನೋಟ್ಟ ಮ |
ಪೊನ್ನತಿಯುಂ ಸತ್ಪ್ರಸಾದಮುಂ ಕಿಱುಕುಳ ನ |
ಪ್ಪನ್ನಂದಿಗನೊಳನುಚಿತ ಮಿ |
ದು ನಿಮ್ಮಡಿ ನೆನಸಿ ಕಳಿಯ ಮತ್ತಂಶಯಮಂ || ೯ ||

**ವ||** ಅದಱ ನವಧಿಬೋಧಲೋಚನ ನಪ್ಪ ನಿನಗೆ ಗೋಚರ ಮಲ್ಲದುದೊಂದು ಮಿಲ್ಲ. ರೂ ದರ್ಶನಮಾತ್ರದೊಳಿಲ್ಲಿಂ ವ್ಯಕ್ತಮಕ್ಕುಂ. ಮತ್ತೀಮಾನುಬಂಧ ಕಾರಣಮುಮಂ ಭವದ್ವಯ ವಿಶೇಷೋದಯ ನಿಮಿತ್ತಮುಮಂ ಕೇಳಲಿಟ್ಟೆಯಾದಪುದೆನೆ:—

ಕಂ|| ಪದವಪ್ಪುದೆಯುಂ ಬಗೆ ಬೆದ |
ರದೆಯುಂ ಕತೆ ಕಿಡದೆಯುಂ ಭವಾವಳಿ ತಡಮಾ ||
ಗದೆಯುಂ ನವಿ ತವದೆಯು ಮಂ |
ಬುದ ನಿನದ ನತಂದ್ರನಿಂದ್ರನಾ ಜನ ಚಂದ್ರಂ || ೧೦ ||

**ವ||** ಇಂತೆಂದ ನೀ ಜಂಬೂದ್ವೀಪದ ಭರತಕ್ಷೇತ್ರದೊಳುಂಟು:—

ಮ|| ವಿಜಯಾರ್ಧಂ ಗಿರಿಚಕ್ರವರ್ತಿ ವಿಜಯ ಪ್ರಾರಂಭದಿಂ ಗೆಯ್ದ ದಿ |
ಗ್ವಿಜಯಾರ್ಧಂ ತನಗಿಕ್ಕೆಯಾಗೆ ಪೆಸರಂ ಪ್ರೋಲ್ದಿರ್ದ ದಂಭೋಧಿ ಯು ||
ಗ್ಮ ಜಲಕ್ಷಾಳಿತಪಾದ ಮಲ್ಲಿ ದೊರೆವೆತ್ತಾ ದಕ್ಷಿಣ ಶ್ರೇಣಿಯೊಳ್ |
ತ್ರಿಜಗತ್ಸಾರತರಂ ವಿಯಚ್ಚರಪುರಂ ಚೆಲ್ವಿಂದವಾಗ್ಗೋಚರಂ || ೧೧ ||

ಕಂ|| ವಿವಿಧ ವಿಯಚ್ಚರ ರಥಿನೀ |
ನಿವಹ ರಥ ಪ್ರತತಿ ತನಗೆ ನೂಪುರ ಮಾಗೆ ||
ಪ್ಪುವುದೆಸೆ ರಥನೂಪುರ ಚ |
ಕ್ರವಾಳ ಮೆಸೆಗವಯವಂಬೊಲತಿರಮಣೀಯಂ || ೧೩ ||

ವ|| ಅದ ನಾಳ್ವಂ ಜ್ವಳನಜಟಿಯೆಂಬೊಂ ವಿದ್ಯಾಧರರಾಜ ನಾತಂಗೆ:

ಮ|| ಕುಲವಿದ್ಯಾದಿ ನಿಜಾನ್ವಯ ಪ್ರಕೃತಿಯೊಳ್ ತಜ್ಜಾತಿ ವಿದ್ಯೋತ್ಕರಂ |
ಕುಲವೆಣ್ಣೊಳ್ ವಿಧಿಪೂರ್ವ ಸಾಧಿತ ಮಹಾಮಂತ್ರ ವ್ರಜಂ ತನ್ನ ತೋ |
ಳ್ವಲದಿಂ ಪೆರ್ಚಿಸಿ ಕೊಂಡಕಾಲಲನೆಯೊಳ್ ಮೇಗಿಂಗ ಮೆಕ್ಕೆಕ್ಕೆಗಂ |
ಚಲಕಂ ಗೆಯ್ವವೊಲಂಜಿ ಬೆಚ್ಚಿ ಬೆಸಕೆಯ್ದಿರ್ದಂ ಮನಂಗೊಂಡುವೋ |

ಕಂ|| ಅವನಿಂ ವಧುಗಂ ಶ್ರೀಗಂ |
ಸವತಿ ಯೆನಲ್ ಜ್ವಳನಜಟಿಗೆ ಮಾದೇವಿ ಮನೋ ||
ಭವನ ನನೆಗಣೆಗೆ ಮೊಣೆ ವಾ |
ಯ್ಮುವೇಗೆ ಸುರಗಗನಚರನರಸ್ತ್ರೀರತ್ನಂ || ೧೪ ||

ವ|| ಅಂತಾ ವಿಯಚ್ಚರೇಶ್ವರ ದಂಪತಿಗೆ ಸಮಸಂದ ಸಂತಸಂ:—

ಕಂ|| ಪುಟ್ಟುವವೊಲಗ್ರತನಯಂ |
ಪುಟ್ಟಿದ ನಾಮೂರ್ತಿವೊಂಗ ಮಾದಿತ್ಯಂಗಂ ||
ಪುಟ್ಟಿದುದೆನಿಸಿದು ದವನೊಡ |
ವುಟ್ಟಿದುದಂಬರ ಚರೇಂದ್ರ ಸಾಂದ್ರಂ ತೇಜಂ || ೧೫ ||

ವ|| ಅಂತರ್ಕಕೀರ್ತಿಯೆಂಬ ಪಿರಿಯಮಗಂ ಬಳೆಯೆ:—

ಕಂ|| ಸಕಳ ಕಳಾವಿದನಪ್ಪ |
ರ್ಕಕೀರ್ತಿಯಿಂ ಕಿಱಿಯಳಾವ್ರುಲಸದತಿ ಮೃದುಕೋ ||
ರಕದಿಂ ಬಱಿಯಂ ಮಂಜರಿ |
ನಿಕಾಮ ಕೋಮಳ ವಿಲಾಸದಿಂ ಪುಟ್ಟುವವೋಲ್ || ೧೬ ||

ಚಂ|| ಅಭಿನವರೂಪ ಹಾವ ನವ ಭಾವ ಸಮನ್ವಿತೆ ಪುಟ್ಟಿದಳ್ ಸ್ವಯಂ |
ಪ್ರಭೆ ಮಗಳಾಕೆ ಪಾರ್ಶ್ವಚರ ಭೂಚರ ಖೇಚರ ನೇತ್ರಪುತ್ರಿಕಾ ||
ನಿಭೆ ಮದನಾವನೀಜನಿಭೆ ಮಾನವ ಮಾನಸ ಕಂಜ ಭಾನು ವ |
ತ್ಪ್ರಭೆ ನಯನೋತ್ಪಲೇಂದು ಕಿರಣಪ್ರಭೆ ಯಪ್ಪುದು ತಪ್ಪದೊಪ್ಪುಗುಂ || ೧೭ ||

ವ|| ತದೀಯ ಜನಕಂ ಜ್ವಳನಜಟಿ ಮಹಾರಾಜಂ ಶುಭದಿನ ಮುಹೂರ್ತದೊಳ್ **ಅರ್ಕಕೀರ್ತಿ**ಗೆ ಗಗನಕೂಟ ಪುರಾಧೀಶನಪ್ಪ **ಜ್ಯೋತಿರಥಂಗಂ** ಸುಂದರಿದೇವಿಗಂ ಪುಟ್ಟಿದ **ಜ್ಯೋತಿರ್ಮಾಲೆ**ಯಂ ತಂದು ಮದುವೆಯಂ ಮಾಡಿ ಮತ್ತಂ ಸ್ವಯಂಪ್ರಭೆಗಂ:—

ಕಂ|| ಅತಿಶಯ ವಿಶದ ಕಲಾ ಪರಿ |
ಣತಿಯೊಳ್ ಪಣಸಾಗೆ ನೆರೆವವೋಲ್ ಯೌವನ ಮುಂ ||
ನ್ನತಿ ನೆರೆಯೆ ನೆರೆಯೆ ಕನ್ಯಾ |
ವ್ರತ ಮೊಡ ನೆಱೆದುದು ತದೀಯ ಗುರು ಜನವಿನುತಂ || ೧೮ ||

**ವ||** ಅಂತು ಯೌವನಂ ನೆಱೆವಿನಂ ಒಂದು ದೆವಸಂ ಶ್ರೀ ಪಂಚಮಿಯೊಳುಪವಾಸನಿರತೆಯಾಗಿ ಸಿದ್ಧಕೂಟ ಜಿನೇಂದ್ರ ಮಂದಿರದೊಳ್ ತ್ರಿಭುವನೈಕ ಲಲಾಮನ (ಜಿನನ) ನಭಿಷೇಕಪೂರ್ವಕ ಮಷ್ಟ ವಿಧಾರ್ಚನೆಗಳಿಂದ ಮರ್ಚಿಸಿ ಬಂದು ನಿಜಜನಕಂಗಂ ಜನನಿಗಂ ತಮ್ಮಣ್ಣನಪ್ಪರ್ಕಕೀರ್ತಿಗಂ ಸೇಸೆಯ ನಿಕ್ಕಿ ತನ್ನ ಚೆಂಬೊನ್ನ ಕನ್ನೆವಾಡಕ್ಕೆ ಪೋಪಳಂ ಜ್ವಳನಜಟಿ ನೋಡಿ:—

ಚಂ|| ಅಮಿತ ಮದಾಲಸಾಂಗಜಮತಂಗಜಮೋ ನಡೆಗೊಂಡನಂಗ ಜಂ |
ಗಮಲತೆಯೋ ಮದೋತ್ಕ ಕಳಹಂಸೆಯೊ ಚೇತನವೆತ್ತ ಚಿತ್ರಮೋ ||
ಸಮದ ಮನೋಜ ಕೇತನಮೊ ಕಣ್ಮಸೆಯಿಟ್ಟರಲಂಬೊ ಕಾಮ ಚಾ |
ಪಮೊ ಕುಸುಮಾಸ್ತ್ರಚಕ್ರಿಕರಚಕ್ರಮೊ ಕಾಂತೆ ಬಸಂತ ಕಾಂತೆಯೋ || ೧೯ ||

**ವ||** ಎಂದು ಬಗೆದು ಮಗಳೀಱುಂ ಜವ್ವನಮುಮಂ ಕನ್ಯಾವ್ರತನಿಯತಮಾದ ಪಾವನಮುಮಂ ಸೌಂದರ್ಯಸಂಪ್ರತಿಪತ್ತಿಯುಮಂ, ಲಾವಣ್ಯಸದ್ಭಾವಮುಮಂ, ಸಂಭೋಗಪ್ರಾಪ್ಯಾಭಾವಮುಮಂ, ವಿಭ್ರಮ ಸಂಭಾವಮುಮಂ, ಕಾಮಸಂಭ್ರಮಾವಧಾರಣಮುಮಂ, ವಿಲಾಸ ಸಮೇತತೆಯುಮಂ, ಮಿಥುನಲೀಲಾ ವ್ಯಪೇತತೆಯುಮಂ, ಬೇಱೆವೇಱೆ ಪಚ್ಚಿ ಪಚ್ಚಿ ಮಂತ್ರಿವರ್ಗದೊಳಾಲೋಚಿಸಿ:—

ಕಂ|| ಜನಪತಿ ಬೞಿಯಂ **ಸಂಭಿ** |
**ನ್ನ**ನೆಂಬ ನೈಮಿತ್ತಿಕಂಗೆ ಬೞಿ ಯಟ್ಟೆ ಚಿರಂ ||
ತನರಿರ್ ದೃಷ್ಟ ಪರಂಪರ |
ವಿನೂತ ವಿದ್ಯಾವಿಶೇಷ ವಿದರ್ ಪೇೞಿಂ || ೨೦ ||

ಮ|| ನರರೊಳ್ ಮತ್ಸುತೆಗೀ ಸ್ವಯಂಪ್ರಭೆಗೆ ಪೇೞಾರ್ ಧನ್ಯರಾರ್ ಮಾನ್ಯರಾರ್ |
ಮೊರೆಯೆಂದಂದವನೀಶ ನೆಟ್ಟೆ ಬೆಸಗೊಂಡಾಗಳ್ ನಿಮಿತ್ತಜ್ಞನಂ ||
ಬರ ಭೂಗೋಚರರೊಳ್ ಪರೀಕ್ಷಿಸಿ ನಿಮಿತ್ತಾಂಗಂಗಳೊಳ್ ನೋಡಿ ಕಂ |
ಡಿರ ದಿಂತೆಂದ ನಧೀಶನಂ ಬಗೆದು ಕೇಳ್ ಪೇೞ್ವೆಂ ಖಗಾಧೀಶ್ವರಾ || ೨೧ ||

ಭರತಕ್ಷೇತ್ರ ಲಲಾಮ ಮಪ್ಪುದು ಸುರಮ್ಯಂ ನಾಡು ತತ್ಪೋದನಂ |
ಪುರಮುಂಟಂತದುವಂ **ಪ್ರಜಾಪತಿ** ಮಹೀಪಾಲಂ ದಲಾಳ್ಗುಂ ಜಗ ||
ಕ್ಕೆರಡುವ್ವನ್ನದ ಲೇಖೆಯಂತಿರೆ ತಮರ್ಪಾಲಕಂಗಿಪ್ಪ ಸುಂ |
ದರಿಯರ್ ಸುಂದರರೂಪೆಯರ್ ಸೊಬಗೆಯರ್ ಕೂರ್ತಿರ್ಪರುರ್ವೀಶ್ವರಾ || ೨೨ ||

ಕಂ|| ಆ ವಧುವಿರಿರ್ವರೊಳೆ ವಿಜ |
ಯಾವತಿಯೆಂಬಳ್ ವಿಳಾಸವತಿ ಪಿರಿಯ ಮಹಾ ||
ದೇವಿ ಮೃಗನಯನಯುಗೆ ಮೃಗ |
ಯಾವತಿ ಕಿಱಿಯರಸಿ ಯಾಗಿ ಸಲೆ ಪಲಕಾಲಂ || ೨೩ ||

**ವ||** ಅಲ್ಲಿ ಪಿರಿಯರಸಿಯ ಮಗಂ ವಿಜಯನುಂ, ಕಿಱಿಯರಸಿಯ ಮಗಂ ತ್ರಿಪೃಷ್ಠನುಮೆಂಬರ್ ಬಲದೇವ ವಾಸುದೇವರಾಗಿ ಪುಟ್ಟಿದರವರೊಳಗೆ:—

ಕಂ|| ವಿಜಯಂ ಲಕ್ಷ್ಮೀ ನಿಲಯಾಂ |
ಬುಜಂ ಜಯಶ್ರೀ ಪ್ರಿಯಂ ತ್ರಿಪೃಷ್ಠ ನರಾತಿ ||
ಧ್ವ [ಜಿ]ನೀ ಸಮಸ್ತ ಮದಸಾ |
ಮಜಕುಲನಗಕುಲಿಕೆ ಶಸಿಯುಂ ಮೞಸಿಯುಂ ಮಾದಂ || ೨೪ ||

ಆ ಕಿಱಿಯನ ನಿಭರಿಪು ಕೊಲೆ |
ಲೋಕವನಿಭರಿಪು ವನಸಗ ಪ್ರೋಜ್ಜ್ವಲಯುಂ ಜಯ ||
ಶ್ರೀಕಬಲಿತ ವೈರಿ ಸಿರಾ |
ಲೋಕಂ ಮಾಡಿದ ನಖಂಡಭೂಮಂಡಲಮಂ || ೨೫ ||

**ವ||** ಅಂತು ಬಾಳಕೇಳೀಲೀಳೆಯುಂ ಪ್ರಜಾಪಾಲನಮು ನಪ್ಪುಕೆಯಿ ಸಿವ್ಹಾದೇಶದಿಂ ಮತ್ತೊಂದು ದಿವಸಂ ತಮ್ಮಯ್ಯ ನೋಲಗದೊಳ್ ಮಾತುಮಾತಾಗೆ ಕುಲವೃದ್ಧರ ನುಡಿಯಂ ವಿಜಯಂ ಕೇಳ್ದು ತಮ್ಮನುಂ ತಾನುಂ ಅನೇಕ ಕುಲರಾಜ ಸಮಾಜಂ ಬೆರಸು ಆಡುವ ನವದೊಳ್ ಪೋಗಿ ಕೋಟಿಕ ಶಿಲೆಯಂ ತೋಱೆ:—

ಮ|| ಕ್ಷಿತಿನಾಥತ್ವಮ ನೊಲ್ವ ರಾಜತನಯರ್ ಪ್ರೋತ್ಕ್ಷಿಪ್ತಲೀ ಪುಸ್ತರ |
ಕ್ಕೆ ತಗುಳ್ವೆಂಬುದು ಮೆತ್ತಿಕೊಂಡು ಗಗನಕ್ಕೀಡಾಡಿ ವಾಮೋತರಾ ||
ಯತ ಹಸ್ತಾಗ್ರದೊಳಾಂತು ತಾಳ್ದುದದಱಿಂ ಜಾಳತ್ವದೊಳ್ ಕೋಟಿಕಾಂ |
ತಿತ ಮಾಕಲ್ ತಿರಿಕಲ್ ತ್ರಿಪೃಷ್ಠಮಹಿಪಂಗಕ್ಕುಂ ಪೆಜಂಗಕ್ಕುಮೇ || ೨೬ ||

**ವ||** ಅದಲ್ಲದೆಯುಂ ಮಳಕಾಪುರವರೇಶ್ವರಂ **ಮಯೂರಗ್ರೀವಂಗಂ ನೀಳಾಂಜನ**ೆಗಂ ಪುಟ್ಟಿದ ನಿಖಿಳ ಖೇಚರ ಲಲಾಮಾಯಮಾಣಂ ತ್ರಿಖಂಡಾಧಿಪಂ ಅರ್ಧಚಕ್ರವರ್ತಿ ಯಪ್ಪ **ಹಯಗ್ರೀವಂ ಆತ್ರಿಪೃಷ್ಠಂ**ಗಿದಿರ್ಚೆ:—

ಮ|| ವನನಾಗಾರಿಯ ನಾಂತ ದಂತಿಶಿಶುವೋಲ್ ದಿಗ್ದಂತಿಯೊಳ್ ಪೋರ್ದ ಪೊ |
ನನವೋಲ್ ಗಾಳಿಯ ಕೋೞಿಯೊಳಿಟ್ಟ ಸೊಡರ್ವೋಲ್ ದಾವಾಗ್ನಿಗೊಡ್ಡಿರ್ದ ಕಾ ||
ನನಕುಂಜಂಬೊಲಿನಂಗೆ ನಿಂದ ತಿಮಿರವ್ಯೂಹಂಬೊಲುಗ್ರಾಹಿ ಮ |
ರ್ದನದೊಳ್ ಮಚ್ಚರವುಳ್ಳ ಬಾಳಫಣಿವೋಲ್ ನೀಡಿಲ್ಲದಳ್ಕಾಡುಗುಂ || ೨೭ ||

**ವ||** ಈ ವಚನ ಮಾದೇಶವಚನ ಮಂತು:—

ಚಂ|| ತ್ರಿಭುವನ ಭೂಷಣೋಪಮೆಗೆ ಸಂಗಮದೊಳ್ ಪರಭಾಗ ವಿಶಾಸ್ವಯಂ |
ಪ್ರಭೆಗೆ ಲುಲತ್ತಟಿತ್ಪ್ರಭೆಗೆ ಬಂಧುರ ಸಿಂಧುರ ನೀಲನೀರದ ||
ಪ್ರಭ ನಭಯಂ ತ್ರಿಪೃಷ್ಠ ನುಱಿದರ್ ನಿಲೆ ಕಲ್ಪಲತಾಶ್ರಯಕ್ಕೆ ನಿ |
ಷ್ಪ್ರಭತನುವುಳ್ಳರಂದೊರೆಗೆ ವಾರದವೋಲ್ ದೊರೆಯಾಗ ಲಾರ್ಕುಮೇ || ೨೮ ||

**ವ||** ಅದಱಿಂ ನಿಮ್ಮ ಕೊಂಡಾಟದ ಮಗಳಪ್ಪ:—

ಕಂ|| ಕಿಱಿಯವ ಳಾತನೊಳಲ್ಲದೆ |
ಪೆಱರೊಳ್ ಸಂಪೂರ್ಣ ನಿಜಮನೋರಥೆ ಪೆಱದೆಂ ||
ಮಱಿದುಂಬಿ ಪೂತ ಚೂತದೊ |
ಳೆಱಗುಗು ಮೆಱಗುಗುಮೆ ಸಲ್ಲಕೀ ಪಲ್ಲವದೊಳ್ || ೨೯ ||

ಚಂ|| ಎನೆ ಖಚರಾಧಿನಾಥ ನವಧಾರಿಸಿ ದೂತನ ನಿಂದು ನೆಂಬೊನಂ |
ಮನಮೆನಿಪನ್ನನಂ ನಯದಿ ನಟ್ಟಿದೊಡಾತನು ಮೆಯ್ದು ಪೋಗಿ ಪೌ ||
ದನ ಪುರಮಂ ಪ್ರಜಾಪತಿ ಮಹೀಪತಿ ಮಂದಿರಮುಂ ತದುರ್ವರೆ |
ಶನ ಮತದಿಂದೆ ಪೊಕ್ಕು ಮಣಿಮಾಲೆಯ ಲೀಲೆಯ ಚಿತ್ರಶಾಲೆಯಾ || ೩೦ ||

**ವ||** ಮೃಗೇಂದ್ರವಿಷ್ಟರಾರೂಢ ನಾಗಿರ್ದ ಪ್ರಜಾಪತಿಮಹೀಪಾಲನಂ ದ್ವಾರಪಾಲಕ ಸಂದರ್ಶಿತಂ ಕಂಡು ಮಹೀತಳಾಶ್ಲಿಷ್ಟ ಲಲಾಟಪಟ್ಟ ನೆಱಗಿ ಪೊಡವಟ್ಟು ಯಥೋಪದಿಷ್ಟಾಸನದೊಳ್ ಕುಳ್ಳಿರ್ದು—

ಕಂ|| ಭೂಪಂ ಬೆಸಗೊಳೆ ಮಧುರಾ |
ಳಾಪಂ ಬಿನ್ನವಿಕು ನಿಂದು ಶರದಿಂದು ಯಶೋ ||
ರೂಪ ನಧಿರೂಪ ಶೀಳ ಕ |
ಲಾಪಂ ಮತ್ಸ್ವಾಮಿ ನಿಮ್ಮ ಭಾವಂ ದೇವಾ || ೩೧ ||
ಜ್ವಳನಜಟಿ ವೈರಿಭೂಭೃ |
ಜ್ಜ್ವಳನಂ ನಮಿ ಬಾಹುಬಲಿ ಮಹಾಭುಜರಿಂದಂ ||
ತೊಲಗದದಾಮುಂ ತಾಮುಂ |
ತೊಲಗಿಸೆ ತೊಲಗಿದುದು ತಮ್ಮ ವರ್ತನ ವಿರಾಗಂ || ೩೨ ||

**ವ||** ಎಂದು ಪಟ್ಟಸೂತ್ರದೆರಡೆಳೆಯುಮಂ ಗಂಟಿಕ್ಕುವಂತೆ ಪರಂಪರಮುಂ ಪಱಿಮುಱಿವುವಾದ ನಣ್ಪಂ ಪುನರ್ನವಂ ಮಾಟ್ಪ ಬಗೆಯಿಂ ಎನ್ನ ನಿಂತೆಂದಟ್ಟಿದ ನೆಮ್ಮರಸಂ, ತನ್ನ ಮಗಳಪ್ಪ ಕನ್ಯಾರತ್ನಮುಂ ಸ್ವಯಂಪ್ರಭೆಯುಂ:—

ಉ|| ಕಂಪಿನ ಪೆಂಪು ಪೊಂಪುಱಿ ಯೆನಲ್ ದೊರೆವೆತ್ತ ನಮೇರು ಮಾಲೆ ಯಿಂ |
ಪಂ ಪರಿಚುಂಬಿಸಲ್ ಬಯಸಿ ಬರ್ಪ ಳಿಮಾಳಿಕೆಯಂತೆ ನಿಚ್ಚ ನಿ |
ಚ್ಚಂ ಪುನರುಕ್ತದಿಂ ಖಚರ ಭೂಚರ ಕೋಟಿ ಮರಲ್ದು ಬೇಡಿ ಬಾ |
ಯಂ ಪೊಳಪುತ್ತು ಮಿರ್ಪುದು ಪುರೋಪವನಾಂತರ ಭೂಮಿಭಾಗದೊಳ್ || ೩೩ ||

ಕಂ|| ಆ ಯುವತಿ ರತ್ನಮುಂ ಭವ |
ದೀಯಾತ್ಮಜ ಪುರುಷ ರತ್ನದೊಳ್ ಕೂಡುವಭಿ ||
ಪ್ರಾಯಂ ಪ್ರೀತಿಲತಾ ಶಾ |
ಖಾಯಮ ನಡರ್ಪನೆ ಯೆಂದು ಖೇಚರರಾಜಂ || ೩೪ ||
ಒಸೆದಟ್ಟಿದ ನಟ್ಟಿದ ವಿಭು |
ಗೆ ಸಂತಸಂ ಮಾಡಿ ಬರೆದ ಮಾಱೋಲೆಯ ನೆ ||
ಯ್ದಿಸಿದೊಡೆ ನಡೆಯುತ್ತುಂ ಬಾ |
ಚಿಸಿ ತಡೆಯದೆ ಬರ್ಕು ಮಿರ್ಕುಮೇ ಖಚರೇಂದ್ರಂ || ೩೫ ||

ಉ|| ಎಂಬುದು ಮುಂಬುದ ಧ್ವನಿಗೆ ಪೆರ್ಚಿದ ಮತ್ತಮಯೂರದಂತೆ ರಾ |
ಗಂ ಬಗೆಯಂ ಪಳಂಚಲೆಯೆ ತನ್ನೆರಡುಂ ಕೆಲದೊಳ್ ಮಗಂದಿರಿ ||
ರ್ದಿಂಬಿಸಮರ್ಕೆ ಗಿರ್ಕೆಲದ ಬೀಟಿಲ ಕಲ್ಪಕುಜಂಗಳೊಲಪ್ಪಿ ಸ |
ಣ್ಪಂ ಬಗೆದಟ್ಟಿದೋಲಿವೆರಸಾಲಿಸಿ ದೂತನ ಮಾತನೆಲ್ಲಮಂ || ೩೬ ||

**ವ||** ಕೇಳ್ದು ಮೂಱು ಲೋಕಮು ನಾಳ್ದಂತೆ ಗೆಯ್ದು ಸಂತಸಂಬಟ್ಟು ಬಂದ ದೂತನಂ ದಾನ ಸನ್ಮಾನಾದಿಗಳಿಂ ಸಂತಸಂ ಬಡಿಸಿ ತ್ರಿಪೃಷ್ಠ ನೊಡಂಬಡಿಸಿ ಜ್ವಳನಜಟಿ ಮಹೀಪಾಲಂಗೆ ಬಱಿವೆರಸು ತನ್ನ ಮನೆಯೊಳಗ್ಗಳಮಪ್ಪಮೂಲ್ಯ ವಸ್ತುಗಳಂ ಪ್ರಜಾಪತಿ ಮಹಾರಾಜಂ ಪಾಗುಡಂಗಟ್ಟಿ ಸಂಪೂರ್ಣೇಂದುಮುಖಿಯು ನಿಂದು ನಾಳಿನ್ನದೆ ಬಂದ ಪೊೞ್ತು ಪೊೞ್ತಾಗೆ ರಥನೂಪುರಚಕ್ರವಾಳಕ್ಕೆ ಬೇಗಮಟ್ಟುವುದು ಮಾತನುಂ ಗಗನಗಮನನಾಗಿ ವಿವಿಧನದವನದೀನಗನಗರ ಜನಪದಾಸ್ಪದಂ ನಿಜನಾಥಪುರವರಮ ನೆಯ್ದಿ ರಾಜಕೇತನ ನಿವಿಷ್ಟ ನೊಡ್ಡೋಲಗಂ ಗೊಟ್ಟಿರ್ದ ಗಗನಚರೇಂದ್ರನಂ ದೂರಾವನತ ಮಸ್ತಕಂ ಕ್ಷಿತಿತಳ ನಿಪಾತಿತ ಸಾಷ್ಟಾಂಗ ನಾಗಿ ಕಂಡು:—

ಹರಿಣೀವೃತ್ತಂ|| ಮುಕುಳಿತ ಕರೋಪೇತಂ ದೂತಂ ಪ್ರಜಾಪತಿ ಪಾರಮಾ |
ರ್ಥಿಕ ವಚನ ಸದ್ಭಾವಂ ಭಾವಂಗುಣಾಯನ ಭೂಷಣ ||
ಪ್ರಕರಮು ನಿವೇಂದೌತ್ಸುಕ್ಯಾಕ್ರಾಂತ ನಿಟ್ಟಿದೊ ನಾತ್ಮಪು |
ತ್ರಿಕ ವಿವಹನ ಪ್ರೀತಂ ರೋಮಾಂಚ ಕಂಚುಕಿತಾಂಗಕಂ || ೩೭ ||

**ವ||** ಎಂದು ಬಿನ್ನಪಂಗೆಯ್ಯಲೊಡಂ ಬದ್ಧರಸನುಂ ಸಿದ್ಧರಸವೇದನು ಮಾದ ರಸವಾದಿಯಂತೆ ಜ್ವಳನಜಟಿ ರಾಗಿಸಿ ನೈಮಿತ್ತಿಕನಂ ಬರಿಸಿ ತದಾತನಮು ಮತ್ಯಂತ ನೂತನಮು ಮಪ್ಪುದೊಂದು ಲಗ್ನಮಂ ಪೇೞು ಮೆಂಬುದುಂ ಆತಂ ತನ್ಮುಹೂರ್ತಮೆ ಶುಭಮುಹೂರ್ತ ಮೆಂಬುದುಂ ಅಂಬರಚರರಾಜ ನಂಬರಚರ ಗೋಚರೋಚಿತ ಪ್ರಸ್ಥಾನದಿಂ ಪಯಣಂಬೋಗಿ ತನ್ನ ಬರವು ನಱಿದು ಪುರವರಮು ನಾಗಳಷ್ಟಶೋಭೆಗೆಯ್ಸಿ ಬೇಗಮಿದಿರ್ವಂದ ಪ್ರಜಾಪತಿ ಮಹೀಪಾಲನಂ ಜ್ವಳನಜಟಿ ಮಹಾರಾಜಂ ಯಥಾರ್ಹ ಪ್ರತಿಪತ್ತಿಯಿಂ ಕಂಡು ಮೈದುನ ನಿರ್ವರುಂ ಪುತ್ರಪುತ್ರೀ ಸಹಿತಂ ಪೊೞಲಂ ಪುಗುವಾಗಳ್ ವಿದ್ಯಾಧರ ಭೂಮಿಗೋಚರರೊಂದಾಗಿ ಭೂಮಿಮಾರ್ಗದಿಂ ರಾಜಮಾರ್ಗದೊಳಗನೆ ಬರ್ಪುದುಂ ಪೌರ ನರ ನಾರೀ ಜನಂಗಳುತ್ತುಂಗ ಪ್ರಾಸಾದ ಗೋಪುರಾಟ್ಟಾಳಕ ಕೋಟಿಗಳ ನೇಱಿ ನೋಡುತ್ತುಂ:—

ಮ|| ಎಸೆದೊಪ್ಪಿರ್ದ ವಿಮಾನಮಾಲೆ ಖಚರಾನೀಕಕ್ಕೆ ಚಿಹ್ನಂಗಳಾ |
ಗಸದೊಳ್ ಪಣ್ಣಿದ ಪೊನ್ನ ಪಣ್ಣಿಗೆ ಯಿಭಂಗಳ್ ಚಿಹ್ನ ಮುರ್ವೀಚರ ||
ಪ್ರಸರಕ್ಕುರ್ವಿಯೊಳಂತರಾಳದೊಳ ನೇಕಸ್ತ್ರೀವೃತಾನೂನ ಯಾ |
ನ ಸಮೂಹಂ ಖಗ ಕನ್ನೆಗಗ್ಗಳದ ಚಿಹ್ನಂ ನೋಡಿ ಮೆಂಬನ್ನೆಗಂ || ೩೮ ||

**ವ||** ಬರ್ಪಾಕೆಯು ನೀಕೆ ಸ್ವಯಂಪ್ರಭೆ ಯೆಂದಱಿದು:—

ಮ|| ಸ್ರ|| ಎರಡುಂ ಭಾಗಂಗಳೊಳ್ ತನ್ನಣುಗಿನ ಸುತರು ನ್ಮತ್ತನಾಗಂಗಳಂ ಜೀಂ |
ಕರಿಸುತ್ತಿಂಬಾಗಿ ಬಂಬಲ್ವರಿಯಿಸೆ ತುರಗಾರೂಢನಿ ಬರ್ಪ ನಸ್ಮ ||
ದ್ಧರಣೀಶಂ ಮತ್ತುದಾತ್ತಂ ಜ್ವಳನಜಟಿ ದಲಾಬರ್ಪ ಸುತ್ತೇಭವತ್ಸಿಂ |
ಧುರರಾಜಸ್ಕಂಧ ಸಂಬಂಧುರ ಲುಳಿತ ತಟಿದ್ದಾಮ ಶಂಕಾಂಕುಶಾಂಕಂ || ೩೯ ||

**ವ||** ಎಂದಜಾತಪೂರ್ವವಿಸ್ಮಯಸ್ಮೇರಮುಖರಾಗಿರೆ ಬಂದು ರಾಜಗೇಹಮಂ ಪೊಕ್ಕು ಕಱು ಮಾಡದೊಳ್ ವಿದ್ಯಾಧರ ರಾಜನ ನಿರಿಸಿ ಸ್ವಯಂಪ್ರಭೆಗಂ ರಾಣೀವಾಸದ ಕನ್ನೆವಾಡದೊಳ್ ಪರಿವಾರಿಕಾ (ದೌವಾರಿಕಾ) ಸಮೇತಮಿರವಂ ಮಾಡಿ ಮಜ್ಜನಭೋಜನಾದಿ ದಾನಸನ್ಮಾನಂಗಳೊಳ್ ಜ್ವಳನಜಟಿಯಂ ಸಂತಸಂಬಡಿಸಿ ಪ್ರಜಾಪತಿ ಮಹಾರಾಜಂ ವಿವಿಧ ವಿನೋದ ದರ್ಶನಾನಂತರಂ ಪುಣ್ಯದಿನದೊಳ್ ತ್ರಿಪೃಷ್ಠನಂ ಸ್ವಯಂಪ್ರಭೆಯೊಳ್ ನೆರಪಿ:—

ಕಂ|| ಸಾರತರ ಕಲ್ಪ ತರುಗ ಮು |
ದಾರೋತ್ತಮ ಕಲ್ಪಲತೆಗ ಮುಭಿವೃದ್ಧಿಗೆ ಪೊ ||
ಯ್ಯಾರೆಱವಂತಾಗಿರೆ ಕೆ |
ಯ್ಯಾರೆಱೆದರ್ ಖಚರಪತಿಯು ಮವನೀಪತಿಯುಂ || ೪೦ ||

ಪಸಿದ ಪರಕೆಗಳಾಮು ಪು |
ಸಿರುತಂ ದಂಪತಿಗೆ ಧರೆಗೆ ಪೂಣ್ದೀಯೆ ಧನೋ ||
ತ್ಕರಮಂ ಸಮನಾದರ್ ಬಡ |
ವರೊಡೆಯ ರೆಲ್ಲರ್ ಸಲೀಲ ರಥನರ್ ಧನದರ್ || ೪೧ ||

**ವ||** ಎಂಬಿನಂ ಪೊಸಯಿಸಿದ ವಿವಾಹ ಕಲ್ಯಾಣ ವಿರಾಮದೊಳ್ ಜ್ವಳನಜಟಿಯು ಮರ್ಕಕೀರ್ತಿಯುಂ:—

ಕಂ|| ತಲೆಬಳಿವಳಿ ಯೆಂಬಿಸ್ರವೆ |
ನೆಲಕೆಲ್ಲಂ ಪರಿಯೆ ನುಡಿದು ವಿದ್ಯಾಸಹಿತಂ ||
ಕುಲಧನ ಸಹಿತಂ ಹರಿಕರಿ |
ವಿಲಾಸಿನೀ ಸಹಿತ ಮಿತ್ತರುಳ್ಕೊಡಮೆಗಳಂ || ೪೨ ||

**ವ||** ಅಂತು ನಿರ್ವಹಿಸಿದ ವಿವಾಹವ್ಯತಿಕರದ ಪರೆದ ಪಡೆಮಾತ ನರ್ಧ ಚಕ್ರವರ್ತಿ ವಿಜಯಾರ್ಧ ಶೈಲಮೂರ್ಧವರ್ತಿ ದೇಖಾವಳೀ ವಿಲಾಸ ಸಮಗ್ರೀವ ನಶ್ವಗ್ರೀವಂ ಕೇಳ್ದು:—

ಕಂ|| ರತ್ನಂಗ ಳೆರಡರೊಳ್ ಸ್ತ್ರೀ |
ರತ್ನಮ ನೆನಗೆಂಬ ಬಗೆಯಿ ನಿರ್ದನ್ನೀ ಶ್ರೀ ||
ಪತ್ನೀಶತೆಯಂ ಬಗೆಯದೆ |
ಯತ್ನಪರರ್ ದೇಸಿಗಂಗೆ ಕೂಸಂ ಕೊಟ್ಟರ್ || ೪೩ ||

ಕೊಟ್ಟೊಡಮೇಂ ಕನ್ನಿಕೆಯಂ |
ಕೊಟ್ಟೊಂಗ ಮಿದಾಗದೆಂದು ಕುಡೆ ಕೊಂಡೆನಗೇ ||
ಗೆಟ್ಟಪುದೆಂದು ಮನಂ ಪೊಲೆ |
ಗೆಟ್ಟಿರೆ ಕೊಂಡಂಗ ಮೆನಗ ಮುಱಯ ಲ್ಕಕ್ಕುಂ || ೪೪ ||

ಶಾ|| ಎಂದಾಗಳ್ ವಿಳಯಾನಿಳೋಚ್ಛಳಿತ ಕೂಪಾರಾರವಂ ಖೇಚರೇಂ |
ದ್ರಂ ದಷ್ಟಾಧರ ನಾತ್ಮಪೀಠ ತಳಮಂ ಪೊಯ್ದೆಟ್ಟು ನಿಂದಾಗಳಂ ||
ತೊಂದುಗ್ರಂ ಕರಿ ಪಟ್ಟದಿಂ ನಡೆವವೋಲಾಸ್ಥಾನದಿಂ ಬಂದು ನಿಂ |
ದಂ ದೌವಾರಿಕ ಭೂಮಿಗೊಳ್ ಸ್ಫುರದುರುಶ್ಮಶ್ರೂತ್ಕರಂ ಭೀಕರಂ || ೪೫ ||

**ವ||** ಅಂತಲ್ಲಿಂ ಬಂದು ನಿಲ್ವುದುಂ ಸಂಭ್ರಮಾಕುಳನು ಮವನತೋತ್ತಮಾಂಗನು ಮಾಗಿ ಬಂದು ಮುಂದೆ ನಿಂದು ಸೇನಾಗ್ರಗಣ್ಯಂ ಬೆಸನಂ ಪಾರುತ್ತು ಮಿರೆ:—

ಕಂ|| ಆ ಚಕ್ರಿ ಭ್ರೂಲತೆ ಸಚ |
ರಾಚರಮಂ ನೆರಪಮೇಚಿ ನೆರಪುವ್ರದುಂ ದೂ ||
ರ್ವಾಚಳಗೋಚರ ಖಚರ ಮ |
ಹೀಚರ ದೊರ್ಮೋದಲೆ ನೆರೆದ ರಪರಿಮಿತ ಬಲರ್ || ೪೬ ||

ನೆರೆದು ನಭೋ ಭೂ ವಳಯಾಂ |
ತರಂಗಮೊಳ್ ತಮ್ಮ ಹಯಮೆ ಹಯುವವಾಗಿರೆ ಖೇ ||
ಚರರಾಜಂ ತಳರ್ದಂ ನೆಗ |
ಳ್ದ ರಥಾವರ್ತಾದ್ರಿ ಗದ್ರಿ ತಳರ್ದಂತಾಗಳ್ || ೪೭ ||

**ವ||** ಅಂತು ರಥಾವರ್ತಾಚಳಮ ನೆಯ್ದಿ ಬೀಡಂ ಬಿಟ್ಟು ಮದುವೆ ನೆರೆದಿರ್ದ ಮರಸುಮಂ ನೆರೆ ದಿರ್ದ ನೃಪವರರುಮಂ ಮೂದಲಿಸಿ ಮಾತಂ ಬೂತುಮ ನಟ್ಟುವುದುಂ ದರ್ಪಸಪ್ತ ತ್ರಿಪೃಷ್ಠ ಕುಮಾರಕಂ:—

ಕಂ|| ಕೊಲ್ಕೆ ನರಾತಿಯು ನಿಂದೆ ಪೂ |
ನಲ್ಲಿರಿವಿನ ಮೆಯ್ದೆ ವೀರರಸ ಮೇ ಮಾತೋ ||
ಪ್ಕಲ್ಕೆಯ್ದಿ ದಿಂದೆ ತಜಾದು ಪ |
ಡಲ್ವಡಿಸನೆ ಖಚರಸೈನ್ಯ ಪಿಶಮಾಟವಿಯುಂ || ೪೮ ||

**ವ||** ಎಂದು ಗರ್ಜಿಸಿ ಬಂದೋನಂ ಮುದೂರ್ತಮಾತ್ರಮುಸ್ಪೋಡಂ ತಡೆಯಲೀಯದೆ ಬೂತಿಂಗೆ ಧನಮುಮಂ ದೂತಂಗೆ ಪ್ರಸಾಧನಮುಮ ನಿತ್ತು ಪೋಗಲ್ವೇಳ್ದು ತಾನು ಮಾತನ ಬಟಿವಟಿಯನ:

ಮ|| ವಿಜಯಶ್ರೀ ರಣದೊಳ್ ಸ್ವಯಂಪ್ರಭೆ ಜಯಾರಂಭಂ ಮಹೋಗ್ರಾಜಿಯೊಳ್ |
ವಿಜಯಂ ವೀರರಸಂ ನಿಜಾಭಿ ಮುಖದೊಳ್ ಕಾಮಂ ಸಮಗ್ರಾಹವ ||
ಧ್ವಜ ನಮ್ಮಂ ಸಮುತ್ಸೈಕ ಸಾಹಸಮದಂ ಭಾವಂ ತ್ರಿಪೃಷ್ಠಂಗೆರೆ |
ಧ್ವಜಿನೀ ವಾರಣಮೇನೊ ಯೂಥಪಥದಿಂದ ಕ್ಲೇಶ ಮೆಂಬನ್ನೆಗಂ || ೪೯ ||

**ವ||** ಪಯಣದ ಮೇಲೆ ಪಯಣಂ ಬಂದು ರಥಾವರ್ತ ಮಹೀಧರಮ ನೆಯ್ದಿ ಬೀಡಂ ಬಿಟ್ಟು ಬೇಗದೊಳ್ ಬೇಗಮುಣ್ಮುತ್ತಾಗಿಯುಂ ಅಡಿಗಿಡದೆಯುಂ ಇನಿಸೆಡೆಗುಡದೆಯುಂ ಸಾರ್ಚಿ ಸ್ತ್ರ್ಯಣದಿಂ ಪೆರ್ಚಿದ ಕೋಪೋದ್ರೇಕಮನಾಜಲೀಯದೆಯುಂ ಬೇಗಮನುವರಮಂ ಸಾರಲ್ವೇಳ್ದು ರುಳೋಳ್ ಕೊಳ್ಳಿವಿಸಿಸಿಯುಂ ರವಳಿ ಘೋಷಿಸಿಯುಂ ನಾಲ್ಕುಜಾವಮು ಮನುವರಮನೆ ಸಮಕಟ್ಟುತ್ತುಮಿರೆಯುಂ,

ಕಂ|| ವನಿತೆ ಪರಸ್ತ್ರೀ ಪೆಜಗಿ |
ತ್ತನಿತಜೀೂಳಜಾದಜಾದು ಮಳುಪ ನಾದ ಶ್ವಗ್ರಿಂ ||
ವನ ಮಿಟ್ಟು ಪೊಟ್ಟುವಾರ್ದಪು |
ದೆನಗೇಂ ತಡಮೆಂಬ ತೆಱದಿ ನಿನ ನುದಯಿಪುದುಂ || ೫೦ ||

ವ|| ಚಕ್ರವರ್ತಿ ಯುದ್ಧಸನ್ನದ್ಧನಾಗಿ ಸಮಸ್ತ ಸಾಮಗ್ರೀ ಸಹಿತಂ ಶಿಬಿರದಿಂ ಪೊಱಮಟ್ಟೋಡಿದ ನಂತೆ:—

ಕಂ|| ಆಯು ತಪೆ ಪಾರದರಿಗ ನ |
ಪಾಯಮ ನೆತ್ತಜೀವ ಸುಚಿತ ವಾಕ್ಯಾರ್ಥಂ ಕೊ ||
ಳ್ಳೀಯೆ ಪರದಾರಗಮನ ಮ |
ನಾಯುಷ್ಯಂ ತಮ ಗೆಸಲ್ ಮನಂದಂಪಸೇ || ೫೧ ||

ವ|| ಇತ್ತ ತ್ರಿಪೃಷ್ಠನುಂ ವಿಜಯನು ಮರ್ಕಕೀರ್ತಿಯುಂ ಪ್ರಜಾಪತಿಯುಂ ಜ್ವಳನಜಟಿಯುಂ ಪಸರಿಸಿ ಸಮಕಟ್ಟ ಮೂಱು ಮೊನೆಯಾ ಗೊಡ್ಡಿ ಸ್ವಯಂಪ್ರಭೆಗಂ ಬೀಡಿಂಗಂ ತಮ್ಮ ನಚ್ಚುವ ವಿದ್ಯೆಗಳಂ ಕಾಪುವೆಟ್ಟು ಪರಿಚ್ಛೇದಕ್ಕೆ ವಂದು ನಿಂದಾಗಳ್:—

ಕಂ|| ಆ ಸಮಯದೊಳರಿಬಲ ಸಂ |
ತ್ರಾಸಿ ಬಲಿಷ್ಠಂ ತ್ರಿಪೃಷ್ಠ ನಶ್ವಗ್ರೀವೋ ||
ದ್ಭಾಸಿ ಪ್ರದೀಪಮುಂ ಕಿಡೆ |
ಬೀಸುವವೋ ಲನುವರಕ್ಕೆ ಕೆಯ್ವೀಸುವುದುಂ || ೫೨ ||

ಹರಿಣೀವೃತ್ತಂ|| ಎರಡು ಬಲಮುಂ ಘೋರಂದಾರ್ದು ಖೇಚರ ಭೂಮಿಗೋ |
ಚರ ಸಮುದಿತಂ ಬಾನೊಳ್ ಭೂಭಾಗದೊಳ್ ಕಿಡಿಗುಟ್ಟಿದಂ ||
ತಿರೆ ಪೊಣರ್ದು ಬಿಲ್ವಿಲ್ಲಿಂ ತೇರ್ ತೇರ ನಾನೆಯು ಮಾನೆಯಂ |
ಹರಿ ಪರಿಯ ನಾಂತಾಗಳ್ ನಿಂದಣ್ಮಿ ಮುಣ್ಮಿಟ ಯಪ್ಪುದುಂ || ೫೩ ||

ಕಂ|| ತೊಟ್ಟನೆ ಕೊಳೆ ಚತುರಂಗದ |
ಮುಟ್ಟಂ ಕೆದಱಿದವೊಲಂತಕಂ ಪೆಣನಂ ಸಾ ||
ಲಿಟ್ಟವೊಲಿರೆ ಸೈನ್ಯಂ ಪಡ |
ಲಿಟ್ಟವೊಲಿರೆ ಪರಿವ ಪಿರಿಯ ಕರಿಯಂ ವಿಜಯಂ || ೫೪ ||

ಕಂಡಣೆದು ನೂಂಕಿ ಮದವೇ |
ತಂಡಮ ನಿದಿರಾದ ವಿಪುಳ ಕಂಠನ ನಿನಿಸಂ ||
ಕೊಂಡಿರದೆ ಕೊಂದು ಗೆಲ್ಲಂ |
ಗೊಂಡಂ ಬಗೆಗೊಳ್ವ ತೆಱದೆ ವಿಜಯಾಂಗನೆಯಂ || ೫೫ ||

ವ|| ಅಂತು ವಿಜಯ ನಶ್ವಗ್ರೀವನ ಮಗನಪ್ಪ ವಿಪುಳಕಂಠನಂ ತನ್ನವಾರ್ಯ ವೀರ್ಯಕೆ ಮುಡಿಗಿಕ್ಕುವಂತಿಕ್ಕೆ ಕೆಯ್ಮಿಕ್ಕ ಖಳೊಳ ನಿಬರು ಮೊಂದಾಗಿ ಬಂದು ತಾಗೆ ದಿವ್ಯಚಾಪಂ ಪೊಱಮುಯ್ವಂ ತಾಗೆ:—

ಕಂ|| ತೆಗೆನೆಱೆದು ಚಿತ್ರಮೂಲಾ |
ದಿಗಳುಮ ನೋರೊಂದೆ ಸರಲೊ ಳೋರೊರ್ವರ ನಾ ||
ವಗ ಮೆಚ್ಚಂತಕ ಮುಖಮುಂ |
ಪುಗಿಸಿದ ನಾರಾಂಪೊ ರುಱದೆ ಹಲಿಯಂ ಕಲಿಯಂ || ೫೬ ||

ವ|| ಅಂತು ಬಲದೇವನ ಶ್ವಗ್ರೀವನ ತಮ್ಮನಪ್ಪ ಸುಕಂಠನುಮಂ ಮೃತ್ಯು ಕಂಠೀರವಕ್ಕೆ ಗ್ರಾಸಂ ಮಾಡಿ ಮುಗುಳ್ದು ಹಲಾಯುಧಮ ನೆತ್ತಿಕೊಂಡು:—

ಕಂ|| ಧೃತವಿಷಮಬಾಣಸಂ ಜನ |
ಪತಿ ಗೆಲ್ದು ಪೊಲಾತನಂ ಪ್ರಜಾಪತಿ ಧರಣೀ ||
ಪತಿ ಕಾಮದೇವನಂ ಗೆ |
ಲ್ದು ತಳರದ ನಿವಾರ್ಯ ವೀರ್ಯಮಂ ಪೊಸಯಿಸಿದಂ || ೫೭ ||

ಸ್ರ|| ಅಂತಾಸಂಗ್ರಾಮದೊಳ್ ತನ್ನನುಜ ತನುಜ ಜಾಮಾತೃವರ್ಗಂ ಪಡಲ್ಪ |
ಟ್ಟಂತಾಗಳ್ ಮೊಟ್ಗಿ ತಟ್ಗಿ ಪೂರ್ದು ಮಣಿದಿಭಮಂ ಕೀಱಿ ಬಿಟ್ಟಿಕ್ಕಿ ಪಾಂಗ ||
ಪ್ಪಂ ತಶ್ವಗ್ರೀವ ನೆಟ್ಟಂದಪಿತನ ಮೊನೆ ಯುತ್ತುತ್ತಣಂ ಪೇೞ್ ತ್ರಿಪೃಷ್ಟಂ |
ಭಪ್ರಂತಾತ್ಮಂ ತೊೞು ತೊೞಂದೊದಱ ಗಜಮಹಾಪೃಷ್ಟಸಿಷ್ಟಂ ತ್ರಿಪೃಷ್ಟಂ || ೫೮ ||

ಕಂ|| ಇದಿರಂ ಪರಿಯಿಸಿ ನಿಜಮದ |
ರದನಿಯ ನಿತ್ತಿತ್ತ ಪರಿಯೆ ಸಣ್ಮಿಣ್ಮಂದಾ ||
ಮೊರ್ವಪಿಸ ಸೋನೆಯ ಕೋಲ್ಗಳ |
ಪುದುಪಿನ ಕಱಮೊರಡಿಯನ್ನ ನಾದೊಂ ಖಚರಂ || ೫೯ ||

ಇಸುವಂಬ ನಂಬಿಸಿಂ ಖಂ |
ಡಿಸಿ ಗರುಡಧ್ವಜನ ಗಜದ ಮೊಗಚರ್ಮವು ನ ||
ರ್ಬಿಸುಪಿನ ಪುಸೆ ಪೊಸ ಮುಸೆಯಂ |
ಬನದಳ ಮೊಡನೆಱಗಿ ತುಱುಗಿ ಪಾಯ್ದುವು ಕೆಲವುಂ || ೬೦ ||

ವ|| ಅಂತು ಕಡುಗೆಯ್ಯನಾಗಿ ಶೀಘ್ರಸಂಧಾನ ಮಿಸು ಪಶ್ವಗ್ರೀವನ ತಕ್ಕುಂ ಬೇಗಯ್ಕೆಯುಂ ಕಿಡೆ:--

ಕಂ|| ಎಸಿತೆಸಿ ತಿಸುವಂಬುಗಳಸಿ |
ತಸಿತಱ ನವ ನಂದು ತಱದು ನೆರೆದಶ್ವಗ್ರೀ ||
ವನ ಬಿಲ್ಲ ಗೊಣೆಯುಮಂ ಘೋಂ |
ಕನೆ ಕುಱದಱ ವಱದ ನಬ್ಜ ಜಠರಂ ಧುರದೊಳ್ || ೬೧ ||

ವ|| ಅಂತು ಬಿಲ್ಲ ಗೊಣೆಯುಮಂ ಪಱಪುದುಂ ದೇವಚಾಪದಂತೆ ನಿರ್ಗುಣಮಪ್ಪ ಬಿಲ್ಲ ನೀಡಾಡಿ ನಾಡಾಡಿಯಲ್ಲ ಪಣ್ಮು ಕೆಯ್ಗಣ್ಮೆ ಪೊಣ್ಮೆ ತನ್ನುಳ್ಳ ವಿದ್ಯೆಗಳಂ ಬೆಸಸಿ ಕಾದುವಾಗಳ್:-

ಕಂ|| ಅಂತಾ ವಿದ್ಯೆಗಳಂ ನರ |
ಕಾಂತಕ ನಲಿಸದೆ "ವಿಷಂ ವಿಷಸ್ಯೌಷಧ" ಮೆಂ ||
ಬಂತಿರೆ ವಿದ್ಯೆಗಳಿಂ ಗೆ |
ಲ್ದಂ ತನ್ನಂ ಮುನ್ನೆ ಮೆಚ್ಚದೊಂ ಮೆಚ್ಚುವಿನಂ || ೬೨ ||

ವ|| ಅಂತಶ್ವಗ್ರೀವಂ ನಿರಾಯುಧನುಂ ನಿರ್ವಿದ್ಯನುಮಾಗಿ ಕೆಲಸಂ ನೋಡಿ ತನ್ನ ದಕ್ಷಿಣ ಪಕ್ಷದೊಳಿರ್ದ ಚಕ್ರಮುಂ:—

ಕಂ|| ಕೊಂಡಿಡೆ ಶಾರ್ಙ್ಗಧರಂ ಕಡ |
ಗೊಂಡೊಂ ಕುಡುವಂತೆ ಮುಗುಟ್ಟದಂ ಕೊಂಡಿಡೆ ತ ||
ಚ್ಚಂಡಾಂತರಂ ಸಂದರ |
ದುಂಡಿಗೆ ಥಟಿಗೆಸಿಸಿ ಮುಂದೆ ಬಿಟ್ಟುದು ಹರಿಯಾ || ೬೩ ||

ವ|| ಅಂತಶ್ವಗ್ರೀವನಂ ಕೊಂದು ತನ್ನ ಕೊಂದ ಕೊಳ್ಗುಳಕ್ಕೆ ಬಂದ ಸ್ವಯಂಪ್ರಭೆಗೆ ತ್ರಿಪೃಷ್ಠ ನಶ್ವಗ್ರೀವನ ಕಬಂಧಮುಂ ಸುಟ್ಟ ತೋಱಿ ನೋಡು ನೋಡೆಂದು:—

ಮಾಲಿನೀವೃತ್ತಂ|| ಬಲಿದ ಮದದ ಬಲ್ಲಾಳನ್ನ ಕೈಯ್ವೆಟ್ಟ ನಿನ್ನಂ |
ಕೊಳಲು ಮದಿರದೆನ್ನೊಳ್ ಕಾದಲುಂ ಬಂದು ಚಕ್ರಂ ||
ಕೊಳೆ ಕೆಡೆದಿವ ನಶ್ವಗ್ರೀವ ನೀಯುಟ್ಟಿಯುಂ ಮು |
ಚ್ಚಳಿಸಿದುದು ಪಯೋಂಭೋಜಾತ ಮಂಭೋಜನೇತ್ರೆ || ೬೪ ||

ವ|| ಎಂದು ಪತ್ತುಮಣ್ಮೆ ಸತ್ತುರ ಗಂಡವಾತ ನುಪಮಾತೀತಂಪಾಡಿ ಪೊಗೞ್ದು ಕೊಳ್ಗುಳಮಂ ಬಿಸಿ ತದ್ವಿದ್ಯಾಧರ ರಾಜಂ ಮೊದಲಾಗೆ ಕಾದಿ ಸತ್ತ ನೆಗೞ್ತೆಯ ಖೇಚರರೆಲ್ಲಂ ಶರೀರ ಪೂಜಾಪೂರ್ವಕಂ ಸಂಸ್ಕಾರವಿಧಿಯಂ ನಿರ್ವರ್ತಿಸಿ ದಕ್ಷಿಣೋತ್ತರ ಶ್ರೇಣಿಗಳೆರಡುಮಂ ತಮ್ಮ ಮಾವಂ ಜ್ವಲನಜಟಿಗೆ ಕೊಟ್ಟು ತಾನುಂ ತ್ರಿಖಂಡ ಮಂಡಲಾಧಿಪತ್ಯಮುಂ ತಾಳ್ದಿ ಪೌದನಪುರಮಂ ಪೊಕ್ಕು ಜಯಮೆಂಬ ಚಕ್ರರತ್ನಮುಂ, ಶಾರ್ಙ್ಗಮೆಂಬ ಚಾಪಮುಮಂ, ಮಹೋಘಮುಖಿಯೆಂಬ ಶಕ್ತಿಯುಮಂ, ಜಯಾನಂದಮೆಂಬ ಖಡ್ಗಮುಮಂ, ಕೌಮೋದಕಿಯೆಂಬ ಗದೆಯುಮಂ, ಪಾಂಚಜನ್ಯಮೆಂಬ ಶಂಖಮುಮಂ, ಕೌಸ್ತುಭಮೆಂಬ ಆಭರಣಮುಮಂ, ಪೂಜಿಸಿ ತಾನುಂ ಚಕ್ರವರ್ತಿಪದದೊಳ್ ವಿರಾಜಿಸಿ ಸುಖ ಮರಸುಗೆಯ್ಯುತ್ತಿರ್ದ ನನ್ನೆಗಂ:—

ಕಂ|| ಜ್ವಲನಜಟಿ ನಿಜ ಪುರೋಪವ |
ನದೊಳೆ ಮಧುಮಾಸ ವಿರತಿಯೊಳ್ ಮಸುಳ್ದ ಕಂ ||
ಬೆಳಿಸಿದ ಮಯ್ಯ್ವರ ನಿನಿಸಾ |
ಕುಳ ನಾದೊಂ ಬಗೆದು ನೋಡಿ ಸಂಸೃತಿ ವಿಧಿಯಂ || ೬೫ ||
ದಿವಸದೊಳೆ ತರುಗಳುಂ ಮಾ
ರ್ದವಮುಂ ಕೆಯ್ಗೊಳ್ಗು ಮಲ್ಲವಂ ದೊಣಗುಗು ಮೀ ||
ಭವವಾರಿಧಿಯೊಳ್ ಮುೞುಗಿದ |
ವಿವೇಕಶೂನ್ಯಂಗನಾರ ಮಿಂತಿದೆ ಸಾರಂ || ೬೬ ||

ವ|| ಎಂದು ತತ್ತ್ವಭಾವನೆಗೆ ಮನಂದಂದು ರಾಜ್ಯದೊಳರ್ಕಕೀರ್ತಿಯ ನಭಿಷೇಕಪೂರ್ವಕಂ ನಿಱಿಸಿ ಪಿರಿಯ ಜನಾಭಿನಂದ ರಪ್ಪಭಿನಂದನಗುರೂಪಾಂತದೊಳ್ ನಿಶ್ಚಳಿತತಪಶ್ಚರಣನಿರತನಾದೊಂ ತದಗ್ರ ಮಹಿಷಿ ವಾಯುವೇಗೆಯುಂ ಶ್ರೀಮತಿ ನಾಮಾರ್ಯಿಕಾ ಸಮೀಪದೊಳ್ ಮೋಕ್ಷಹೇತು ಭೂತ ಜೈನದೀಕ್ಷೆಯಂ ಕೆಯ್ಕೊಂಡ ಳದಂ ಕೇಳ್ದತ್ತ ವಿಜಯನ ನಾಧಿರಾಜ್ಯದೊಳ್ ನಿಱಿಸಿ:—

ಪೃಥ್ವೀವೃತ್ತಂ|| ಪ್ರಜಾಪತಿ ನೃಪಂ ಜಗತ್ಪತಿ ಪದಕ್ಕಡರ್ದಪ್ಪನೂ |
ನಜ್ಜೈನ ಶುಭದೀಕ್ಷೆಯಂ ಮನದೆ ಕೊಂಡು ಕೈಕೊಂಡ ನಂ ||
ದಜೇಯ ವಿಹಿತಾಸ್ರವಾಖ್ಯ ಮುನಿಮುಖ್ಯಪಾದದ್ವಯಾಂ |
ಬುಜಾಂತಿಕದೊಳಂತೆ ಭವ್ಯರಿರರೀ ಭವಾರಣ್ಯದೊಳ್ || ೬೭ ||

**ವ||** ಅಂತು ಜಾತರೂಪಧರನು ಮಭಿಜಾತರೂಪ ಮನೋಹರನು ಮಾಗಿ ಮುಕ್ತ್ಯಂಗನಾಪಾಂಗ ಭ್ರೂಭಂಗ ಸಂಗ ಸಮೀಪ ನಪ್ಪುದುಂ:—

ಕಂ|| ಗಗನಚರ ಸಕಲ ಸಾಮ್ರಾ |
ಜ್ಯಗಾಮಿಯಪ್ಪರ್ಕಕೀರ್ತಿಗಂ ಜ್ಯೋತಿರ್ಮಾ ||
ಲೆಗ **ಮಮಿತತೇಜ** ನೆಂಬೊಂ |
ಮಗನಾದೊಂ ಖೇಚರೇಂದ್ರ ಬಗೆಗೊಳ್ವುದಿದಂ || ೧೮ ||

ಎನ್ನಿಂ ಕಿಱಿಯಳ್ ಸಗ್ಗದ |
ಕನ್ನೆಯರಂ ಹಾವಭಾವ ವಿಭ್ರಮಗತಿಯಿಂ ||
ಪನ್ನಗುವಳ್ ಮುದದಿಂ ಸಿರಿ |
ಯನ್ನಳಿನೆ ಸುತಾರೆ ಯೆಂಬಳಂಬರಗಮನಾ || ೧೯ ||

ಶ್ರೀವಿಜಯಂ ವಿಜಯಂ ನವ |
ಭಾವಜ್ಯೋತಿಃಪ್ರಭಾಖ್ಯೆ ಯೆಂಬರ್ ಮಕ್ಕಳ್ ||
ಮೂವರ್ ಕೊಂಡಾಡಿದ ಮಾ |
ದೇವಿಗ ಮಂದರ್ಧ ಚಕ್ರವರ್ತಿಗ ಮಾದರ್ || ೨೦ ||

**ವ||** ಆಗಿ ಸುಖದಿಂ ಬಳೆಯೆ:—

ಕಂ|| ಧರೆಯಂ ಪಾಲಿಸಿ ಪದ್ಮೋ |
ದರ ನೆಣ್ಬತ್ತೊಂದು ಲಕ್ಕ ಬರಿಸಂ ಬಟ್ಟು ||
ಪರಮಾಯುವ ತೌಕಲೊಳ್ |
ಧರ್ರಾತ್ರದೊಳ್ ಕಱಿದು ಸಪ್ತಮಾವನಿಗಿೞಿದೊಂ || ೨೧ ||

**ವ||** ತದ್ವಿಯೋಗ ದುಃಖದೊಳ್ ಮಗಂ ಶ್ರೀವಿಜಯಂಗೆ ಪಟ್ಟಮಂ ಕಟ್ಟಿ ವಿಯುತಾಸ್ರವ ಗುರುಗಳ ಚರಣನಳಿನ ಸಮೀಪದೊಳ್:—

ಕಂ|| ರಾಜ್ಯಕ್ಕಂ ತ್ರಿಭುವನ ಸಾ |
ಮ್ರಾಜ್ಯಕ್ಕಂ ಬಗೆಯ ದಸ್ತುಮರಕಾಂತರ ದಿಂ ||
ವಿಜಯಪುರಸ್ಸರಂ ಪ್ರ |
ವ್ರಜ್ಯಮ ನವಯುವದೆ ಹಲಧರಂ ಧರಿಯಿಪ್ಪುದುಂ || ೨೨ ||

ಪರಮುಕ್ತಿಪ್ರಮದೆ ಪತಿಂ |
ವರೆ ಪುರುಷನ ನಱಸಿ ಕೊಳ್ವಪ್ಪೋಲ್ ವಿಜಯಮುನೀ ||
ಶ್ವರನಂ ಕೆಯ್ಕೊಂಡಳ್ ದೇ |
ವರ ಪಲವುಂ ತೆಱದ ಪಱಿಗಳೊಡ ನೆಸವಿನೆಗಂ || ೨೩ ||

**ವ||** ಅಂದರ್ಕಕೀರ್ತಿಯು ಮಮಿತತೇಜ ನಪ್ಪನಗೆ ತನ್ನ ರಾಜ್ಯಮನಿತ್ತಭಿನಂದನ ಮುನಿಪ್ರಧಾನ ಪಾರ್ಶ್ವದೊಳಾಶಾಂಬರನಾದೊ ನಂದಿನ ಶ್ರೀವಿಜಯನ್ನೆ ನೀಂ, (ನಿನ್ನ) ಚಕ್ರೇಶ್ವರರಾಜ್ಯ

ದೊಳ್ ನಿಂದು ಶ್ರೀಗಂ ವಿಜಯಕ್ಕಂ ಪೊತ್ತವೊಡವಳಿಗನಾಗಿಯೆ ಸಮಸ್ತ ರಾಜಕಮು ನೆಱಗಿಸಿ ಶ್ರೀ ವಿಜಯನೆಂಬ ಪೆಸರ ನನ್ವರ್ಥಂ ಮಾಡಿ ಯಂದಿನ ನಿನ್ನಪ್ಪ ಚಕ್ರವರ್ತಿಯ ತನಯಂ:—

ಕಂ|| ಜ್ಯೋತಿಃಪ್ರಭಾಸ್ವಯಂವರ |
ಜಾತೋತ್ಸವ ವಿಧಿಗೆ ಸಾನುಜಂ ಶ್ರೀವಿಜಯಂ ||
ಖ್ಯಾತಿಯ ರಾಜಕುಮಾರ |
ವ್ರಾತರ್ಕಳ್ ಬೆಸೆವೆರಸು ಬಱಯಟ್ಟುವುದುಂ || ೭೪ ||

ಮ|| ಕುಲಮಂ ನಾಭಿತನೂಭವಂ ಮಹಿಮೆಯಂ ಸತ್ಪಾತ್ರದಾನಂ ನಿರಾ |
ಕುಲಮಂ ಜೀವದಯಾರಸಂ ವಿಭವಮಂ ಪಂಚಾಂಗಮಂತ್ರಂ ಚತು ||
ರ್ಬಲಮಂ ಪ್ರಾಭವಮೆಯ್ದೆ ಮಾಡೆ ಪಡೆದಂ ನ್ಯಾಯಾನ್ವಿತಂ ತೊಟ್ಟನಾ |
ಬಲಿಗೊಪ್ಪಂ ತೆಗೆವಂತೆ ಬಂದುದು ವಯೋವಿಭ್ರಾಜಕಂ ರಾಜಕಂ || ೭೫ ||

ಕಂ|| ಎಱಗೆಱಗುವ ಕಿಱುವಿಾನಂ |
ತಿರೆ ಕನ್ಯಾಮಿಷಕೆ ರಾಜನಿಕುರಂಬಂ [ಬಂ] ||
ದಿರೆ ಬಯಸಿ ಬಱಸಿದೊಂ ನೋ |
ದರ ಮಯ್ದುನ ನಮಿತ ತೇಜನಂ ಶ್ರೀವಿಜಯಂ || ೭೬ ||
ಬಂದಮಿತತೇಜ ನುಪವನ |
ದೊಂದೆಡೆಯೊಳ್ ಬೀಡುವಿಡುವುದುಂ ಶ್ರೀವಿಜಯಂ ||
ಬಂದ ನಿವಿರಂ ಹಿಮಾಂಶುಗೆ |
ಮಾಂದಿರದಿದಿರಪ್ಪ ತೆಱದಿ ನಂಬುಧಿ ಸಲಿಲಂ || ೭೭ ||

ವ|| ಅಂತಿದಿರ್ವಂದೊಡಗೊಂಡು:—

ಹರಿಣೀಪ್ಲುತ್ತಂ|| ಪುಗಿಸೆ ಪೊಟಿಲಂ ಮುಂದಿಟ್ಟಾನಂದ ತೂರ್ಯರವಂ ದಿಯು |
ದ್ದಿಗವನಿ ತಟೋಪಾಂತಕ್ಕಭ್ಯರ್ಣಮಾಗೆ ಸಮುಗ್ರವಾ ||
ರ್ಧಿಗಳೆರಡೆನಲ್ ಮೆಯ್ವೆತ್ತಾಮೆಯ್ದು ನಿರ್ವರು ಪೊಪ್ಪಿ ಬೀ |
ದಿಗಳೊಳಗಣಿಂ ಬಂದುರ್ವೀಪಾಲ ಗೇಹಮು ನೆಯ್ದಿದರ್ || ೭೮ ||

ವ|| ಅಂದು ಬಂದಮಿತತೇಜಂ ವೆರಸು ಶ್ರೀವಿಜಯಂ ರಾಜಭವನಮಂ ಪುಗುವುದುಂ ಅದಱ ಕೆಲದೊಳ್ ಸಮ್ಮೇದ ಶಿಬಿರ ನಿವೇಶದೊಳಂಬರೇಚರರಾಜಂ:—

ಮಲ್ಲಿಕಾಮಾಲೆ|| ಬಗ್ಗವಕ್ಕಿಯ ಬಳ್ಗಿಗಾವಣ ಪೋಳಿಯಿಂ ನೊಗಯಿಪ್ಪ ಸ |
ಮ್ಯಗ್ಗವಾಕ್ಷದ ವಂಕದಾರದ ಕೇತಕಿಗರ್ಯನೊಂದಿ ನಿಂ ||
ವಗ್ಗಳಿಕ್ಕೆಯ ನೀಱು ನಿಟ್ಟ ನಿವೇಶದೊಳ್ ಮದನಂ ಮನ |
ಕ್ಕೆಗ್ಗು ಪೊರ್ದದ ರೂಪಿನೊಳ್ ನೆಲಸಿರ್ಪವೋಲ್ ಸುಖ ಮಿರ್ದನಂ || ೭೯ ||

ಕಂ|| ಮನೆಗಾ ಶ್ರೀವಿಜಯಂ ಬಿ |
ಜ್ಜನ ನಲ್ಲಗೆ ರಾಜ ನಮಿತತೇಜಂ ವಲ ಮೆಂ ||
ಬಿನೆಗಂ ಶ್ರೀವಿಜಯಂ ಮೈ |
ದುನಂಗೆ ನಿಜಲಕ್ಷ್ಮಿಯಂ ನಿವೇದಿಸಿ ನೆಗಟ್ಟಂ || ೮೦ ||

ಶಾ|| ಆನೀತಾಖಿಳ ರಾಜಲೋಕಮು ನನರ್ಘಾಕಾರಮಂ ನಿಕ್ಕ ಕ |
ನ್ಯಾನೂನೋಚಿತ ರತ್ನಮಂ ತನಗೆ ಮಾಡಲ್ಕೆಂದು ಬಂದಿರ್ದ ನೀ ||
ಶ್ರೀನಾಥಂ ದಲ ಮೋಘಮೆಂಬ ಬಗೆಯಿಂ ಕಣ್ಗೊಳ್ ತೊಟಲ್ಕಂದದಿಂ |
ದಾ ನಿದ್ರಾಂಗನೆ ಸೋಟಿ್ಗವಂದ ಳಿರುಳೊಳ್ ತತ್ಕೀಚರಾಧೀಶನಾ || ೮೧ ||

ಕಂ|| ಕರ್ಣಾಭರಣ ನಿಪೀಡಿತ |
ಪೂರ್ಣಾಂಸ ಸುಪಕ್ಷ್ಮದಾಪಹೃತಕುಂಕುಮ ಸ ||
ಛೃರ್ಣಪ್ರತ್ಯೂಷಂ ಸಿ |
ದ್ಧಾರ್ಣವದಾ ತಡಿಯ ನಮಿತತೇಜಂ ಕಂಡಂ || ೮೨ ||

ವ|| ಆಗಳ್

ಕಂ|| ಉಪ್ಪವಡಿಸುವುದು ಮಱಿಕೆಯ |
ಪಪ್ಪಕ ದೊಡನಾಡಿಗಳ್ ಪ್ರಬೋಧಿಸಿದರ್ ಮೇ ||
ಲಪ್ಪ ಪದರಚನೆಯಿಂ ದೊರೆ |
ಯಪ್ಪ ಮಹಾಮಂಗಳ ಪ್ರಬೋಧನೆಯಿಂದಂ || ೮೩ ||

ಒರ್ವಂ ಶ್ರೀವಿಜಯಂ ನೀ |
ನೋರ್ವಯ್ ಖಚರೇಶ ಪೊತ್ತು ನಿಂದಿರ್ ದೊರೆವೆ ||
ತ್ತುರ್ವೀಭರಮಂ ಪೋದುದು |
ಶರ್ವರಿ ಬೆಳಗಾದು ದೇಟಿ ಶಯ್ಯಾತಳದೊಳ್ || ೮೪ ||

ಪಾರಿಜಗಂಧಿ ವಿಭಾತ ಸ |
ಮೀರಂ ನಿಜಸುರಭಿ ಸಿನ್ನಸುಯ್ಯದಱೊಳ ದೆಂ ||
ತೋರಂ ತಕ್ಕುಮೊ ಪರಗುಣ |
ಹಾರಿಗೆ ನಿಜಗುಣ ಮದೇಕೆ ಸಮನಿಸಿದಪುದೋ || ೮೫ ||

ಇರುಳಿನ ಸೂಟಿಂ ನಿದ್ರೆಗೆ |
ಸಿರಿ ಕೊಟ್ಟು ವಿಯೋಗಭರದಿ ಸಿರಿ ಪಗಲಿನ ಸೂಟಿ್ ||
ಸಿರಿಗಾಗಲೆ ನೇಟ್ಟುದು ತಡ |
ದಿರ ದುಪ್ಪವಡಿಸು ವಿಯಚ್ಚರಾಂಬರ ಭಾನೂ || ೮೬ ||

ಪ್ರತಿಬುದ್ಧಂ ತ್ವನ್ಮುಖ ಮುಚಿ |
ತತಾರಕಂ ತುಂಬಿವೆರಸಿದಂಬುಜ ಮೆಂಬೀ ||
ದ್ವಿತಯಮು ಮೋರೊಂದಂ ಪೋ |
ಲ್ತು ತೋಱಿ ಗತನಿದ್ರ ನಾಗು ನೀಂ ಜಿನಚಂದ್ರಾ || ೮೭ ||

ಭವದಾನನಕ್ಕೆ ಸೋಲ್ತಾ |
ತ್ಮ ವಿಲಾಸಮ ನುಟಿದ ತೆಱದೆ ರುಚಿಗೆಟ್ಟು ದಿಗಂ ||
ತ ವಿಲಂಬಿಬಿಂಬ ನಂಬುರು |
ಹವೈರದಿಂ ದುಡುಪ ನುಡಪ ನಾದಂತಾದಂ || ೮೮ ||

ಕಂ|| ದ್ರುಮಪಲ್ಲವ ತಳನಿಪತಿತ |
ಹಿಮಾಂಬು ಘುಟಿಕಾಳಿ ನಾಡೆ ಸೊಗಯಿಸಿದಪುದು ||
ತ್ತ್ವಮ ಭವದಧರ ಸ್ಥಿತದಂ |
ತ ಮರೀಚಿ ವಿಲಾಸ ಸರಸ ದರಹಸಿತ ನಿಭಂ || ೮೯ ||

ಮುದದಿಂ ದಿನ ಸುದಯಂಗೆ |
ಯ್ಯುದೆಯುಂ ಕಟ್ಟಿೞಿಯ ಸರುಣ ನಳಿದೊಂ ನಿನ್ನ ||
ಭ್ಯುದಯದೊಳಂತಂ ನೀನೆಯ |
ನಿದಿರ್ ತಲೆವಿಲ್ಲ ನೆಱೆದು ತಪಿಸುವ ತೇಜದಿಂ || ೯೦ ||

ಉ|| ಬಾಳಮರೀಚಿಮಾಳಿ ಕಿರಣಾವಳಿಗಳ್ ಪ್ರೊಳೆವೀ ಸುಧಾತುಷ್ಟಿ |
ಲಾಳ ತಟಾಭಿಘಾತಮ ನೊಡಂಬಡಿಸುತ್ತಿರೆ ಪಕ್ಷಯುಗ್ಮನಿ ||
ದ್ರಾಳುತೆ ಬಿರ್ಚಿ ಬಳ್ಳಿಯುಲಿ ಪೆರ್ಚೆ ಮನಂ ಬಿಡೆ ಪೊಯ್ಯೆ ಕರ್ಣಮುಂ |
ಲೀಳೆಯಿ ನೀಶ ನಿನ್ನ ಗಜರಾಜಗ ಳೆೞ್ದಪು ವೆತ್ತೆ ನಿದ್ರೆಯಿಂ || ೯೧ ||

ಕಂ|| ಭವದೀಯ ವನಾಯುಜ ಹಯ |
ನಿವಹಂ ಕೇಳ್ ಮೂಱನಿಟ್ಟು ನಿಶ್ವಾಸಂ ಸ್ಸಂ ||
ಧವಮಂ ಮಾಸಿಸೆ ಸೊಗಯಿಸಿ |
ತು ವಿಸಿದ್ರಂ ದೇವ ದೀರ್ಘ ಪಟಮಂಡಪದೊಳ್ || ೯೨ ||

ವ|| ಎಂದು ವಂದಿವೃಂದಾರಕವೃಂದಂ ಅಭಿನಂದಿಸುವ ಮಂಗಳವಚನರಚನೆಗಳಿಂದಂ ಕುಮಾರ ನುರ್ವರಾಸ್ಯತಿಲಕಂ ಗಂಗಾಸಿಕತಿಳತಳದೊ ೞೊಱಗಿ ತಮದ್ವೇಶದಿಂ ಕಪಿಲಾಕರೇಣುವೆರಸಿ ಪುಂಡರೀಕಗಜಮೇೞ್ವಂತೆ ಸೊಬರಸಿವೆರಸು ಸೆಜ್ಜೆಯಿ ನೆೞ್ದು ಕುಳ್ಳಿರ್ದು ಪ್ರಾಭಾತಿಕ ಕ್ರಿಯೆಯುಂ ನಿರ್ವರ್ತಿಸಿ ಶ್ರೀವಿಜಯನ ಬೞಿ ಬರ್ಪುದುಂ ಕುಶಲವಿರಚಿತಾನುರೂಪ ವೇಷಭೂಷಣನಾಗಿ ರಾಜ ಸಮಾಜ ವಿರಾಜಮಾನಮುಂ ಸ್ವಯಂವರಪ್ರದೇಶಮ ನೆಯ್ದೆ ವಂದು ಎರಡೊಳಿಯ ಚೌಪಳಿಕೆಗಳೊಳ ಮೋಳಿಯೊಳೆಯ್ದೆ :—

ಕಂ|| ಹರಿಪೀಠಸ್ಥಿತರಂ ಭಾ |
ಸುರ ರತ್ನಮರೀಚಿ ಮೇಚಕಿತ ತನುಗಳ ನಾ ||
ವರಜಿನಚಂದ್ರಂ ಕಂಡಂ |
ಸುರೇಂದ್ರ ವಿಭವರ ನಿಳಾಧಿರಾಜಾತ್ಮಜರಂ || ೯೩ ||

ವ|| ಕಂಡು ಮಂಚೋಭಯಾಂತರ ವೀಥಿಯೊಳಗನೆ ಬರ್ಪ ದೀನಜನತಾ ಕಲ್ಪಾಂಘ್ರಿಪನಂ:-

ಕಂ|| ನನೆಯ ಸರಲ್ಗಳುಮಂ ಕ |
ಬ್ಬಿನ ಬಿಲ್ಲುಮ ನೊಲ್ಲದಿಲ್ಲಿ ಗವತರಿಸಿ ದನಂ ||
ಗನ ನೆಯ್ದೆ ಕಾಣ್ಬವೋಲ್ ಕಂ |
ಡು ನೃಪಕುಮಾರರ್ ಸ್ವಯಂವರಾಶೆಯ ಸುಟೀದರ್ || ೯೪ ||

ವ|| ಅಂತನಿಬರ ಮನಕ್ಕೆ ತಲ್ಲಣಂ ಬರ್ಪಂತೆ ಬಂದು ತನ್ನಂ ಮುಂದಿಟ್ಟು ಶ್ರೀವಿಜಯ ನೇಱಿಸೆ ಮೊತ್ತಮೊದಲ ಚೌಪಳಿಗೆಯಂ ಮಣಿಮಯ ಸೋಪಾನ ಪಙ್ಕ್ತಿಯಿಂದ ಮೇಱಿ ಶಿಲಾ ತಲಂಗಳಿಂದ ಮುತ್ತುಂಗನಗೋತ್ಸಂಗಮನೇಱುವ ಮೃಗರಾಜನಂ ಪೋಲ್ತು ಅಲ್ಲಿ ಪರಾರ್ಧ್ಯ ರತ್ನ ರಚಿತಾನೇಕ ಹರಿವಿಷ್ಟರದ ಮೇಗೆ ಸಮೀಚೀನ ನಾನಾವರ್ಣೋಪಚಿತಾಸ್ತರಣೋಪಪನ್ನ ಪ್ರಚ್ಛದಾ ಚ್ಛಾದಿತಾಸನದೊಳ್ ಕುಳ್ಳಿರ್ದು ರತ್ನಮಂಡನಾಯೋಗ ಪರಿಗೃಹೀತ ಸುರೇಂದ್ರ ಕರೀಂದ್ರ ಪೃಷ್ಠಗತ ನಪ್ಪ ಮಹೇಂದ್ರನನೆ ಪೋಲ್ತುಂ ಸೌಜನ್ಯ ಕಂದಾಂಕುರ ನಿರ್ಪುದುಂ:- –

ಕಂ|| ಆರಾಜ ಪರಂಪರೆಯು ಶ |
ರೀರಂಗಳೊ ಳುರ್ವರಾಸ್ಯತಿಲಕನ ತೇಜಂ ||
ರಾರಾಜಿಸಿ ಪೋಲ್ತುದು ನವ |
ವಾರಿದ ನಿಕುರುಂಬದೊಳಗೆ ಪೊಳೆವೆಳಮಿಂಚಂ || ೯೫ ||

ವ|| ಅಂತನೇಕ ಸಿಂಹಾಸನ ಮಸ್ತಕಸ್ಥಿತ ರಾಜಕುಮಾರ ಮಧ್ಯದೊಳಧರೀಕೃತ ಸನತ್ಕುಮಾರ ಕುಬೇರವಿದ್ಯಾಧರ ಕುಮಾರಂ ಕೈಗಟ್ಟಿಯ್ದೆ ಸೊಗಯಿಸಿ ನಾನಾವಿಧಕಲ್ಪಮಹೀರುಹಾರಾಮದೊಳಗಣ ಪಾರಿಜಾತ ಮಿರ್ಪಂತಿರ್ಪಿನಂ: —

ಕಂ|| ನೆರವಿಯ ಕಣ್ಗಳ್ ನೃಪರನಿ |
ಬರುಮಂ ಬಿಸುಟುರ್ವರಾಸ್ಯ ತಿಲಕನೊಳಿರೆ ನೀ ||
ರರುಹಂಗಳ ನೊಲ್ಲದೆ ಚಂ |
ಚರೀಕತತಿ ಗಂಧಹಸ್ತಿಯೊಳ್ ನೆಲಸುವವೋಲ್ || ೯೬ ||

ಸ್ರ|| ಆಗಳ್ ಸೂತರ್ ಸ್ವಕೀಯಾನ್ವಯ ವರಸುಗಳಂ ಬಣ್ಣಿಸುತ್ತಿರ್ಪಿನಂ ದಿ |
ಗ್ಭಾಗಂ ಮಾಂಗಳ್ಯತೂರ್ಯಸ್ವನದೊಳೆ ಬಧಿರೀಭೂತ ಮಪ್ಪನ್ನೆಗಂ ಪೊ ||
ತ್ತೀಗಳ್ ಬರ್ಕೆಂಬುದುಂ ಶ್ರೀವಿಜಯನ ಮತದಿಂ ದೆಯ್ದೆ ಕೆಯ್ಗೆಯ್ದು ಮಾಗಳ್
ಬೇಗಂ ಜ್ಯೋತಿಃಪ್ರಭಾಕನ್ನಿಕೆ ಮಸಕದೆ ಕೊಲ್ವಾನೆ ಬರ್ಪಂತೆ ಬಂದಳ್ || ೯೭ ||

ವ|| ಅಂತು ರಥಮುಂ ಮನೋರಥಮುಂ ನಿಮಿರೆ ವಿವಾಹಮಂಗಳ ವೇಷಸನಾಥೆಯಾಗಿ ಮಂಚಾಂತರ ರಾಜಮಾರ್ಗಮುಂ ಪೊಕ್ಕು ಪ್ರತಿವರರುಮಂ ನೋಡಿ:—

ಕಂ|| ಆದಿಬ್ರಹ್ಮವಿಧಾನದಿ |
ನಾದತಿಶಯ ಸೃಷ್ಟಿ ಯೆನಿಸಿದಾ ಕನ್ನಿಕೆಗಿಂ ||
ದ್ರಾದಿ ನೃಪಮತಿಗಳಿರದಿದಿ |
ರ್ಪೋದುವು ತನುವಿರೆ ಮದೇಭರಿಪುವಿಷ್ಟರದೊಳ್ || ೯೮ ||

ಆರಾಜಕುಮಾರರ ಶೃಂ |
ಗಾರಾಭಿನಯಂಗಳೊಡನೆ ನೆಗೞ್ದುವು ಒಲವುಂ ||
ಮಾರುತ ಹತ ಮಹಿರುಹ ಶೋ |
ಭಾರುಚಿರಂಗಳ್ ಸ್ವಯಂವರಾಸ್ಥಾಯಿಕೆಯೊಳ್ || ೯೯ ||

ವ|| ಅಂತು ನಾನಾವಿಧ ಲೀಲಾವಿಲಾಸ ಸೌಂದರ್ಯ ಸಮನ್ವಿತ ವಿಭ್ರಮಾಭಿನಯಂಗಳನಂಗ ಶೈಲೂಷ ನುಪಾಧ್ಯಾಯನಾಗೆ ರಾಜಪುತ್ರಪಾತ್ರಂ ತಗುಳ್ದು ನುನ್ನತಿಯಂ ಕೊಂಡಾಡಲೆತ್ತಿಕೊಂಡಲ್ಲಿ:-

ಕಂ|| ಲೀಲಾಬ್ಜಮಂ ಕರೋದ್ಧೃತ |
ನಾಲಮ ನಂತಃಪರಾಗ ಪರಿವೇಷಮ ನಾ ||
ಲೋಲದಲಿ ನಿಹತ ಮಧುಕರ |
ಮಾಲೆಯ ನೊರ್ವಂ ತಗುಳ್ದು ತಿರಿಪಿದ ನಾಗಳ್ || ೧೦೦ ||

ವ|| ಆತನು ಮಲ್ಲದೆ:—

ಕಂ|| ಸೊಗಯಿಪ ನಲ್ಲಳ ಘನಕುಚ |
ಯುಗಲಕ ಮೊಳ್ದೊಡೆಗ ಮೊದವಿ ದುಗುಲೊಳ್ ಪೊಂಗೀ ||
ವಗೆಯ ಪೊಸಗಜ್ಜೆಗಳಂ ಲೀ |
ಲೆಗೆ ಸೂಟಿಯೊಳ್ ಸೀಳಲೊರ್ವ ನುದ್ವೃತ ನಾದಂ || ೧೦೧ ||

ವ|| ಆ ವಿಳಾಸ ವಿಶೇಷ ರಸರಾಶಿಯು ಮಲ್ಲದೆ:—

ಕಂ|| ಇಂಬಾಗಿರೆಯುಂ ಮಕುಟಮ |
ವಂ ಬಿಣ್ಪಿನೊಳೋರೆನ್ದೋದೊ ಡೋಸರಿಪವೊಲೊ ||
ರ್ವಂ ಬಹಳ ನಖಮಯೂಖ ಕ |
ದಂಬಕಮಂ ಕರಮ ನುತ್ತಮಾಂಗಕ್ಕೊಯ್ದಂ || ೧೦೨ ||

ವ|| ಆ ಮನೋಜರಾಗ ಹೇತುಭೂತ ರಾಜವಿದ್ಯಾವಿವೇಕನೆನಿಸಿದ ಮಹಾಪುರುಷನು ಮಲ್ಲದೆ:

ಕಂ|| ಎಡಗೆಯ್ಯನೂಱಿ ಪೀಠದ |
ಕಡೆಯೊಳ್ ಮುಯ್ವುದ್ದ ಮಾಗೆ ಮುರಿದ ಬೆಷಂಗ ||
ಚ್ಚುಡಿದಿರೆ ಹಾರಂ ಕೆಲಕೊ |
ರ್ಗುಡಿಸೆ ನಿಜಾನುಗರೊಳಾಗ ಳೊರ್ವಂ ನುಡಿದಂ || ೧೦೩ ||

ವ|| ಆ ಲೀಲಾಶುಂಭದಂಭೋಧಿ ಯಲ್ಲದೆ:—

ಕಂ|| ಹಾರದ ಲಂಬಣಮಂ ಕೇ |
ಯೂರ ಶಿಖಾಕೋಟಿಯೊಳ್ ತಗುಳ್ದದ ನಿಭಹ ||
ಸ್ತೋರುಭುಜಂ ಸಾಚೀಕೃತ |
ಚಾರುವದನ ನೊರ್ವ ನಿರದುರಕ್ಕದ ನುಯ್ದಂ || ೧೦೪ ||

ವ|| ಆಹೃದಯಾಂಗಭೂಷಣನು ಮಲ್ಲದೆ:—

ಕಂ|| ಬಗೆ ಮತ್ತೊಂದೆನೆಯುಂ ಗೆ |
ಯ್ವೊಗ ಮಿತ್ತೊಂದೆನೆಯು ಮಂಗುಳೀ ನಖಚಯಕಾಂ ||
ತಿಗಳ ನವಗಯ್ಸಿ ಸಲೆ ಪಾ |
ಸಗೆಯ ದೆಸೆದೆಸೆಗೆ ಪೊರಳ್ಚಿದಂ ಮತ್ತೊರ್ವಂ || ೧೦೫ ||

ವ|| ಅನ್ನೆಗ ಮನವರತ ಸಂಧುಕ್ಷ್ಯಮಾಣ ಕಾಲಾಗುರುಧೂಪ ಧೂಮ್ರ ಸುರಭಿ ಪರಿಮಳ ಮಿಳದಳಿಕುಳಾಕುಳೀಕೃತ ಕನ್ಯಾಪರಿವಾರ ವಿಲಾಸ ವಿಲಾಸಿನೀ ವಿನೋದ್ಯಮಾನೆಯ ನಾಭರಣ ಪ್ರಭಾ ಪರಿಭೂತ ಪ್ರಭೂತ ಜ್ಯೋತಿಃಪ್ರಭೆಯಂ ಜ್ಯೋತಿಃಪ್ರಭೆಯಂ ಪ್ರತೀಹಾರಂ ಮಗಧಾಧಿರಾಜಾಭಿಮುಖಂ ಮಾಡಿ:—

ಮ|| ಶರಣಾಯಾತ ಶರಣ್ಯ ನಪ್ರತಿರಥಂ ರಾಜಾನ್ವಯಾಯೈಕ ವಿ |
ಸ್ತರಣಂ ಮಾಗಧ ಕಲ್ಪಶಾಖಿ ಮಗಧಾಧೀಶಂ ಸಿತಚ್ಛತ್ರ ಚಾ ||
ಮರ ಸಿಂಹಾಸನ ಪಾಳಿಕೇತನ ಸಮುದ್ಯದ್ರಾಜ ಚಿಹ್ನಂ ಕರಂ |
ದೊರೆ ನೋಡೀತನ ನಿನ್ನ ರೂಪ ಕುಲ ಸೌಂದರ್ಯಂಗಳಬ್ಜಾನನೇ || ೧೦೬ ||

ಕ್ಷಿತಿನಾಥರ್ ಪಲರುಳ್ಳೊಡಂ ಬಗೆದು ಕೇಳ್ ನೀನಕ್ಕ ರಾಜಾನ್ವಯ |
ಸ್ಥಿತಿ ವಿಶ್ವಾವನಿ ಗೀತನಿಂದೆ ದೊರೆಯಾಯ್ತೆಂತೆನ್ನ ಸಜ್ಯೋತಿರು ||
ನ್ನತಿ ಋಕ್ಷಗ್ರಹ ತಾರಕಾನಿಕರದಿಂ ದೇನಾದುದೇ ರೋಹಿಣೀ |
ಪತಿಯಿಂ ಪಾದುದು ರಾತ್ರಿಗಂಬುಜದಳವ್ಯಾಲೋಲ ಲೀಲೇಕ್ಷಣೇ || ೧೦೭ ||

ಕಂ|| ಅನುದಿನ ಮಿಾಗತ ವೃಜಿನಂ |
ಜಿನೇಂದ್ರ ಪೂಜಾವಿಧಾನಮಂ ಮಾಡಿ ಮಹೀಂ ||
ದ್ರನುಮ ನೊಡನಿಱಿಸಿ ನಾಕಮ |
ನನಾಥ ಮೆನಿಸಿದ ನನೂನಪೀನ ನಿತಂಬೇ || ೧೦೮ ||

ನೆರೆ ದೀತನೊಳವನಿಪ ಸುಂ |
ದರನೋಳ್ ಪುಗೆ ರಾಜಗೃಹ ಗೃಹಾಳಿ ಗವಾಕ್ಷಾಂ ||
ತರ ಕೃತ ಸರೋಜ ಮೆನಿಸುವ |
ಪುರಾಂಗನಾ ನಯನ ಸುಖಮ ನೊದವಿಸು ಸುದತೀ || ೧೦೯ ||

ವ|| ಎಂದ ಧಾತ್ರೀ ಪುತ್ರಿಯ ಮಾತನೆಯ್ದೆ ಕೇಳ್ದಾತನಂ ನೋಡಿ:—

ಕಂ|| ಪೊಟವನೆ ಭಾವಿಸ ದೇಜಯು |
ಮಿಟಿಯೆಯು ಮಾಗಳ್ ನಖಾಗ್ರ ವಾಲಾಗ್ರದಿ ನೊಂ ||
ದುಟಿಯ ದವಯವಮ ನವಯವ |
ಮುಟಿಯದು ಮೆನಿಸದೆ ಕುಮಾರಿ ನೋಡಿದ ಳಿನಿಸಂ || ೧೧೦ ||

ವ|| ನೋಡಿ:—

ಕಂ|| ವರನ ಕೊರಲಳವಿ ಗೆತ್ತಿ |
ರ್ದ ರತ್ನ ನವಮಾಲೆ ನೇಲೆ ನೆಲನಂ ನೋಡು ||
ತ್ತಿರೆ ಕನ್ನಿಕೆ ಧಾತ್ರಿಜೆಯಂ |
ತಿರದೆ ಕುಮಾರಿಕೆಯ ಮನದ ಪರಿಚಾರಿಕೆಯಂ || ೧೧೧ ||

ವ|| ರಥಮಂ ನಡೆಯಿಸೆಂಬುದುಂ:—

ಚಂ|| ತಡೆಯುದೆ ಚಿತ್ರವೇತ್ರಧರೆಯುಂ ರಥಮಂ ಕ್ಷಿತಿಪಾಂತರಕ್ಕದಂ |
ನಡೆಯಿಸಿದಳ್ ಸವಿಾರಣ ಸಮುತ್ಥ ವಿಲೋಲ ತರಂಗಲೇಖೆ ಚೆ ||
ಲ್ವಿಡಿದ ಸರೋರುಹಾಂತರಕೆ ಮಾನಿತ ಮಾನಸ ರಾಜಹಂಸಿಯಂ |
ನಡೆಯಿಸುವಂತೆ ಸುಂದರನತಾಂಸೆಯ ನಲ್ಪಕಪೋಲಮಾಂಸೆಯಂ || ೧೧೨ ||

ಶಾ|| ಮತ್ತಿತ್ತಂ ಲಲಿತಾಂಗ[ನಂಗ] ವಿಷಯಾಧೀಶಂ ಸುರಸ್ತ್ರೀ ಜನೋ |
ದಾತ್ತಪ್ರಾರ್ಥಿತ ಯೌವನಂ ದಿವಿಜರಾಜತ್ವಂ ತರಾಷ್ಟಕ್ಕೆ ಮ ||
ಯ್ವೆತ್ತತ್ತೀಪರಮೇಶ್ವರಂಗೆ ಗಜಶಿಕ್ಷಾಸೂತ್ರದಿಷ್ಟಕ್ಕೆ ಮೂ |
ವತ್ತಿರ್ವರ್ ನಯಕಾರ ರೀತನ ಗಜವ್ರಾತಂಗಳಂ ತಿರ್ದುವರ್ || ೧೧೩ ||

ಕಂ|| ಅರಿಯುವತಿ ಬಾಷ್ಪ ಬಿಂದೂ |
ತ್ಕರಂಗಳಪಸೂತ್ರಹಾರಮಂ ಸ್ತನದೊಳ್ ಪೋ ||
ಲ್ತಿರೆ ತವಿಸೆ ಪಗೆವರಂ ಸಕ |
ಳ ರಾಜ್ಯಮಂ ವೀರಭೋಜ್ಯ ನೆನಿಸಿದ ನೀತಂ || ೧೧೪ ||

ಈತಂ ನಿಸರ್ಗಭಿನ್ನ ನಿ |
ಕೇತನಮಂ ಶ್ರೀ ಸರಸ್ವತೀದ್ವಯಮುಮಂ ತಂ ||
ಮೋತೊಂದೆ ಮೆಯ್ಯೊಳಿರಿಸಿದ |
ನೀತಪ ಪವದೊಳ್ ತೃತೀಯೆ ಯಾಗಿರು ನಿರುತಂ || ೧೧೫ ||

ಉ|| ಎಂಬುದು ಮಂಗರಾಜನೊಳಿದಿರ್ಚಿದ ಭಾವನೆ ಪೊಚ್ಚಮಾಗೆ ಹೇ |
ಮಾಂಬುರುಹಾಸ್ಯೆ ಸೋಲ್ವುದೆನೆ ಕನ್ನಿಕೆ ಜನ್ಯೆಯು ನೊತ್ತಿ ಪೋಯ್ತು ಯಾ ||
ನಂ ಬಿಡದಾತನೊಳ್ ಸಹಸಮಾಗದು ಭಾವಕೆ ಕೂಟಮಾದುದಿ |
ಲ್ಲೀಂ ಬಗೆ ನಾಡೆ ಭಿನ್ನರುಚಿಯೋ ರಮಣೀ ರಮಣೀಯ ಸೃಷ್ಟಿಯಾ || ೧೧೬ ||

ಕಂ|| ಪಾದಿಯು ಮಾ ಸುಕುಮಾರಿಕೆ |
ಗಾದರದಿ ನವಂತಿ ನಾಥನಂ ತೋಱಿದ ಳಂ ||
ದೂದಯ ಕಾಂತನ ಸಹಿತನಿ |
ಷೂದನನಂ ದಿವಿಜರಾಜಲೀಲಾಸ್ಪದನಂ || ೧೧೭ ||

ಈತನ ಯಾನದೊಳಗ್ರ ಪ |
ದಾತಿ ಪದೋದ್ಧೂತ ಧೂಳಿ ಸಾಮಂತ ಶಿಖಾ ||
ನೂತಮಣಿ ತರಣಿ ಕಿರಣ |
ವ್ರಾತಕ್ಕಸ್ತಮಯ ಸಮಯಮಂ ಪುಟ್ಟಿಸುಗುಂ || ೧೧೮ ||

ಈ ನವಯೌವನ ನೊಡನೆ ಮ |
ನೋನಯನ ಶರೀರ ಸುಖಮ ನನುಭವಿಸುಗೆ ಶಿ ||
ಪ್ರಾನಗಿ ಯೆರಡುಂ ತಡಿಯು |
ದ್ಯಾನಪರಂಪರೆಯೊಳತನುತನುತನುಲತಿಕೇ || ೧೧೯ ||

ವ|| ಎನೆಯುಂ:—

ಕಂ|| ಜ್ಯೋತಿಃಪ್ರಭೆ ಖರಕಿರಣ |
ಜ್ಯೋತಿಯೊಳೆಸೆವವೊಲೆಸಲೊಲ್ದಳೆ ಸಮುಖಿ ||
ದ್ಯೋತಿತ ಮಿತ್ರಾಬ್ಜನೊಳಭಿ |
ಜಾತಹಿತೋದಯನೊಳಂತವಂತೀಶ್ವರನೊಳ್ || ೧೨೦ ||

ತದನಂತರ ಮಿರದಾಕೆಯ |
ಸುದಾತ್ತ ಧಾತ್ರೀ ತನೂಜೆ ಪರಿವಿಡಿಯೊಳ್ ತಂ ||
ದಿದಿರೊಳ್ ನಿಱಸಿ ತಗುಳ್ದು ನು |
ಡಿದಳ್ ಪ್ರಪಂಚಮು ನನೂಪ ವಿಷಯಾಧಿಪನಾ || ೧೨೧ ||

ಎರಡೆ ಭುಜಂ ಮನೆಯೊಳ್ ಸಾ |
ಸಿರಮೆ ಭುಜಂ ಪೊಸೆಯೊಳೀ ಮಹೀಪತಿ ಗರಸಂ ||
ಬೆರಡಕ್ಕರ ಮನ್ಯರೊಳ |
ರ್ಥರಹಿತ ಮನ್ವರ್ಥ ಮಿಾತನೊಳ್ ಮೃಗನಯನೇ || ೧೨೨ ||

ಬಗೆಯೊಳ್ ತನಗಹಿತಮು ನಾರ್ |
ಬಗೆದೊಡಮಾಗಳೆ ಕೃತಾಸ್ತ್ರ ನವರಿದಿರೊಳ್ ತೊ ||
ಟ್ಟಗೆ ನಿಂದು ಕೆಡಿಸುಗುಂ ಪ್ರಜೆ |
ಬಗೆ ಕಿಡೆ ಮುಮ್ಮರ್ತಿಯಿ ನಿಂತು ಪಿರಿಯುರು ಮೊಳರೆ || ೧೨೩ ||

ಕ್ಷಿತಿಪತಿ ಸುತೆ ನೀ ನಿಂಮುಹಿ |
ಪತಿ ಯುತ್ಸಂಗಸ್ಥೆಯಾಗಿ ವಾತಾಯನ ಪ ||
ದ್ಧತಿವಿಡಿದು ನೋಡು ಮಾಹಿ |
ಷ್ಮತಿಗೆ ಕಟೀಸೂತ್ರ ಮಾದ ರೇವಾನದಿಯಂ || ೧೨೪ ||

ವ|| ಎನೆ:—

ಕಂ|| ಅತಿಸುಂದರ ನಿರತಿಶಯಾ |
ಕೃತಿಯಾಗಿಯು ಮಾತ ನಾಕೆ ಯಿರ್ದೆವ್ರುಗನೆ ಶರ ||
ದ್ಗತ ಜಲದ ಗಗನತಳ ವಿಲ |
ಸಿತೇಂದು ಸೊಗಯಿಸದ ತೆಱದಿ ನಬ್ಜಿನಿ ಗಿನಿಸಂ || ೧೨೫ ||

ಕಂ|| ನೃಪಪುತ್ರಿ ಶೂರಸೇನಾ |
ಧಿಪನಿದಿರೊಳ್ ರಥಿನಿ ನಿಲ್ವುದುಂ ಚತುರಕಳಾ ||
ಲಪನೆ ನೃಪೇಶ್ವರ ವರ್ಣನ |
ನಿಪುಣೆ ಪತಿಂವರೆಯ ಮುಂದೆ ನಿಂದಿಂತೆಂದಳ್ || ೧೨೬ ||

ವ|| ನಿನ್ನೀ ಪಯೋಧರ ಚಕ್ರವಾಕಯುಗಳಕ್ಕೀತನ ಭುಜೋರುಪಂಜರಮೆ, ನಿನ್ನೀ ರಂಭಾಸ್ತಂಭೋರುದಂತಿಗೀತನ ಕುಸುಮಶರ ಶರಧಿ ಪ್ರತಿನಿಧಿಯಾದೂರುಯುಗಲಾಲಾನಸ್ತಂಭಮೆ, ನಿನ್ನ ಸಕಳ ಕಳಾಧರ ಮಂಡಳೋಪಮಾನ ಗಂಡಭಿತ್ತಿಗೀತನ ದಿಙ್ನಾಗ ಕಪೋಲಫಲಕ ಪರಿಹಾಸಿಯೆನಿಸಿದ ಕಪೋಲಯುಗಳೋದಯಾಚಳಮೆ, ನಿನ್ನ ರಕ್ತಾಶೋಕ ಪಲ್ಲವೋಲ್ಲಾಸ ನಿವಾಸಿಯಪ್ಪಧರಪಲ್ಲವರುಚಿಗೀತನ ಕುಂದಕುಟ್ಮಳಾವಳಿ ಲೀಲಾವಲೇಪ ಲೋಪಿಯಪ್ಪ ಸುಲಿಪಲ್ಲೋಳಿಯೆ, ನಿನ್ನ ಹೇಮಲತಾವಿತಾನೋಪಮಾನತನುಲತಾಪ್ರತಾನದ ತಗುಳ್ಗಿಂಗೀತನನಲ್ಪಕಲ್ಪಪಾದಪೋಪಮಾನಾನೂನಾಂಗಯಷ್ಟಿಯೆ ದೊರೆ ಮತ್ತಮಿಾತಂ—

ಕಂ|| ನೀಪಕುಲನಾಗಿ ನೃಪತಿಲ |
ಕೋಪಮನೀತನನೆ ಸಾರ್ದು ಗುಣಗಣ ಮುಱಿದ ||
ತ್ತಾಪೂಸಪೋರ್ತಮ ನಘಕುಲ |
ಲೋಪಕನಂ ಪೊರ್ದಿ ಪಗೆಯ ಸುಳಿಪಂತೆ ಜಗಂ || ೧೨೭ ||

ಅಂಗದ ತೊಲಗದ ಕಾಂತಿಮ |
ನಂಗೊಳಿಸುವು ದೀತನೋಲಗಂ ಗೊಟ್ಟಿರೆ ಪ ||
ಪ್ತಾಂಗದ ರಾಜ್ಯದ ತೇಜಮ |
ಸುಂಗೊಳಿಸುವು ದನ್ಯಮಂಡಲಾಧೀಶ್ವರರಂ || ೧೨೮ ||

ಈತನರಸಿಯರ ಕುಚಪರಿ |
ಧೂತ ಶ್ರೀಖಂಡ ಮುದುರೆ ಮಧುರೆಯೊಳಾ ಪೆ ||
ರ್ಮಾತಿನ ಕಳಿಂಗ ಸುತೆ ಗಂ |
ಗಾತರಳತರತ್ತರಂಗೆ ಯೆನೆ ಸೊಗಯಿಸುಗುಂ || ೧೨೯ ||

ಈ ವರನುಂ ನೀನುಂ ನಾ |
ನಾವಿಧ ನವಕುಸುಮ ಶಯ್ಯೆಯೊಳ್ ರಮಿಯಿಸು ಬ್ಬಂ ||
ದಾವನದೊಳಿಂದ್ರವನಪರಿ |
ಭಾವಿಯೊಳಗಲದೆ ಸುಗಂಧ ಪಾಟಳಗಂಧೀ || ೧೩೦ ||

ಘನಸಮಯದೊಳಿರ್ದು ಶಿಲಾ |
ಸನದೊಳ್ ಶೈಳೇಯ ಸುರಭಿತಳದೊಳ್ ಗೋವ ||
ರ್ಧನ ಕಂದರದೊಳ್ ಶಿಖಿ ನ |
ರ್ತನಂಗಳಂ ನೋಡು ಮದನ ಮದಗಜಗಮನೇ || ೧೩೧ ||

ವ|| ಎನೆ ಮನಂದಾರದೆ—

ಕಂ|| ಅಂಗದವಿರಾಜಿ ಭುಜನ ಕ |
ಳಿಂಗೇಶನ ಮುಂದೆ ನಿಱಿಸಿ ನೃಪಕನ್ನೆಯ ನಿಂ ||
ತೆಂಗುಂ ಭುಜಿಷ್ಯೆ ಮದನನ |
ಭೃಂಗೀಧ್ವನಿ ತನ್ನ ದನಿಗೆ ಸಮನೆನಿಸುವಿನಂ || ೧೩೨ ||

ಖ್ಯಾತಂ ಮಹೇಂದ್ರಗಿರಿ ಸಾ |
ರಾತಿಶಯಂ ಪತಿ ಮಹೇಂದ್ರಗಿರಿಗಂ ಪ್ರಾಚೀ ||
ಸ್ರೋತಃಪತಿ ಪ್ರಯಾಣದೊ |
ಳೀತಂ ಜಂಗಮ ಮಹೇಂದ್ರ ಮೆನಿಸಿಕುಂ ಘಟೆಯಿಂ || ೧೩೩ ||

ಗುಣಹತ ಕರಯುಗ ಕಾಳಿಮ |
ಕಿಣಂಗ ಳೆಸದೀತನೊಳ್ ರಿಪುಶ್ರೀ ಪಿಡಿಪೆ ||
ತ್ತಣಿಯರ ಮಟಿಲೆ ಪಸಿತಶೋ |
ಷಣ ಸಾಂಜನ ಬಿಂದುವೆಂಬ ಬಗೆಯಂ ಪಡೆಗುಂ || ೧೩೪ ||

ಚಂ|| ರವಜಿತ ಯಾಮತೂರ್ಯರವಮೀಶನ ನಬ್ಧಿಯ ನಿದ್ರೆಯತ್ತಲು |
ಪ್ಪವಡಿಸುವಂತು ಮಾಟ್ಪುದು ಗವಾಕ್ಷನಿರೀಕ್ಷಿತ ವೀಥಿಮಾರ್ಗದೊಳ್ ||
ನವಯುವ ನೀತನೊಳ್ ನೆರೆದು ಪಂದುಪವಾಂತ ಲವಂಗ ಪುಷ್ಪವ |
ತ್ಪವನವಿದಾರ್ಯಘರ್ಮಲವೆಯಾಗಿ ವಿಹಾರಿಸು ವಾರ್ಧಿ ತೀರದೊಳ್ || ೧೩೫ ||

ಕಂ|| ದೌವಾರಿಕೆ ಬಣ್ಣಿಸಿದೊಡ |
ಮಾವಧು ತನ್ನೃಪನ ನುಜಿಪೆ ಪೋದಳ್ ಸಿರಿಯಂ ||
ಜೀವದ ಮತಿ ತರೆ ಪುಣ್ಯಾ |
ಭಾವದಿ ನದು ನೆಲಸಿ ತೊಲಗಿ ಪೋದಂತಾಗಳ್ || ೧೩೬ ||

ಆರಾಜಕನ್ಯೆಯಂ ಪ್ರತಿ |
ಹಾರರವಸ್ಥಿತೆಯ ನುಯ್ದು ದಕ್ಷಿಣ ದಿಗಕೂ ||
ಪಾರಪತಿ ಯಿದಿರೋಳಿರಿಸಿ ಚ ||
ಕೋರಾಕ್ಷಿಯ ನಿತ್ತ ನೋಡು ನೋಡೆಂದಾಗಳ್ || ೧೩೭ ||

ಹರಿಚಂದನ ವಿಚ್ಛುರಿತಾಂ |
ಗರಾಗ ನತಿರುಚಿರಹಾರ ನೇನೆಪದನೊ ನಿ |
ರ್ಝರಮುಂ ಬಾಲಾತಪಮುಂ ||
ಜಿರಸಿರ್ದದ್ರೀಂದ್ರನಂತೆ ಪಾಂಡ್ಯನೃಪೇಂದ್ರಂ || ೧೩೮ ||

ಭವದೀಯ ಪರಮಗುರು ಚ |
ಕ್ರವರ್ತಿ ದಿಗ್ವಿಜಯದೊಳ್ ಕರಂ ತಡವುದ ನಿಂ ||
ಭುವನೇಶಂ ಬಾಯ್ಕೇಳದೊ |
ಡವಂ ತಡೆಯದೊಂ ತ್ರಿಪೃಷ್ಟ ನಂಬುಧಿ ತಟದೊಳ್ || ೧೩೯ ||

ಎಂತಾನುಂ ಸ್ಥಳಜಳದು |
ರ್ಗಂ ತವೆ ಬಾಯ್ಕೇಳ್ದು ನೀತ ನದೆ ದಿಗ್ವಿಜಯಾ ||
ತ್ಯಂತೋತ್ಸವ ಮದೆ ರುಚಿ ಚತು |
ರಂತಾವನಿಗದೆ ರಥಾಂಗ ವಿಜಯಾಂಗ ಫಲಂ || ೧೪೦ ||

ಕಂ|| ಶ್ರೀಮಜ್ಜಿನಬಿಂಬಂ ಚೂ |
ಡಾಮಣಿ ಮಣಿಮುಕುಟದೊಳ್ ಕುಳಂ ವೃಷಭ ಜಿನ ||
ಸ್ವಾಮಿಕೃತಂ ನವನಯ ನಭಿ |
ರಾಮಂ ಸಮನೆಂಬರೇಂ ಸುಪುಣ್ಯನೊ ಪಾಂಡ್ಯಂ || ೧೪೧ ||

ಮ|| ಮೃದುತಾಂಬೂಲ ಲತಾಪಿನದ್ಧ ಪಿಲಸತ್ಪೂಗದ್ರುಮೌಘಂ ಸಮು |
ಚ್ಛ್ರಿದುರೇಲಾವ್ರತತೀಪರೀತ ವಿಪುಲ ಶ್ರೀಖಂಡ ಭೂಜಂ ತಮಾ ||
ಳವಳಪ್ರಸ್ತರಣಂ ಲತಾಂಗಿ ಮಳಯಕ್ರೀಡಾಚಳಂ ನೀನು ಮಾ |
ಮದನಾಕಾರನು ಮಲ್ಲಿ ಸಿಚ್ಚಲು ಮಿರಿಂ ಕೇಳೀ ವಿನೋದಂಗಳಿಂ || ೧೪೨ ||

ಕಂ|| ಹರಿನೀಲವರ್ಣ ನೀ ಸುಂ |
ದರತನು ನೀಂ ರೋಚನಾಭೆಯೊಳ್ ನೆರೆಯಲೊಡಂ ||
ಪರಭಾಗವಾಗಿ ನಿಮ್ಮಿ |
ವರ್ ರಿರವು ಕಾರ್ಮುಗಿಲ ಮಿಂಚಿ ನಿರವಿಸ ತೆಜದಿಂ || ೧೪೩ ||

ಅತಿ ದಿವಿಜೇಂದ್ರ ವಿಳಾಸನೊ |
ಳತಾಂತವಿಾತನೊಳಡಂಗಿ ರತ್ನಾಕರಭೂ |
ಷಿತೆಯಾದ ದಕ್ಷಿಣದಿಶಾ |
ಸತಿಗೆ ವಿಳಾಸವತಿ ಸವತಿಯಾಗಿರು ಸುಖದಿಂ || ೧೪೪ ||

**ವ||** ಎಂದೊಡಂ:—

ಕಂ|| ದಿವಸಕರಾದರ್ಶನ ಬ |
ದ್ಧವಿಪರ ನವವನಜದೊಳೆಡೆ ವಡೆಯದ ಪರಕ್ಕೈ ||
ರವಮಿತ್ರಕಿರಣದಂತವ |
ಳ ವಚನ ಮೊಳಪುಗದೆ ತನ್ಮನಃಪದ್ಮಿನಿಯೊಳ್ || ೧೪೫ ||

ಆವರ್ತನಾಭಿ ನಸುನ |
ಕ್ಕಾವರನಿಂದತ್ತಪೋದಳಧಿಕೇಚ್ಛೆಯೊಳ ||
ನ್ಯಾವನಿಪತಿಯೊಳ್ ತಡೆಗುಮೆ |
ದೇವಾಪಗೆ ತಡೆಯದೆಡೆಯೊಳಂಭೋಧಿವರಂ || ೧೪೬ ||

ಆ ವಧುವೊಲ್ಲದೆ ಬರೆ ಸಕ |
ಳಾವನಿಪರ್ ತಮ್ಮರಾಗ ಮೋಗಡಿಸಿರೆ ಕೆ ||
ಯ್ದಾವಿಗೆ ಬರೆ ಪೆಱಗಣ ಭವ |
ನಾವಳಿ ಮಸುಳ್ದಂತೆ ಮಸುಳ್ದ ರೆರಡೋಳಿಯೊಳಂ || ೧೪೭ ||

ಮ|| ಸುದತೀಸ್ಯಂದನ ಮಾತ್ಮಮಂಚ ನಿಕಟಾಗ್ರೋದ್ದೇಶಮುಂ ಮುಟ್ಟಿ ಪ |
ರ್ವದು ಮಿನ್ನೆನ್ನುಮ ನೂಲ್ಗು ಮೊಲ್ಲ ಳಿವಳೆಂಬಾಶಂಕೆ ಪುಟ್ಟಿತ್ತು ಚಿ ||
ತ್ತದೊಳಾ ಜೇಗದೊಳುರ್ವರಾಸ್ಯ ತಿಲಕಂ ಗತ್ಯುನ್ನತಂ ದಕ್ಷಿಣಾಂ |
ಸದ ಬದ್ಧಶ್ಲಥ ಬಾಹುಕೀರ್ತಿ ಕಳೆದ ತ್ತಂದಾದ ಸಂದೇಹಮಂ || ೧೪೮ ||

ವ|| ಅಂತು ದೀನಜನತಾಕಲ್ಪಾಂಘ್ರಿಪಂ ವನಕರಿ ಕದಡೆ ತಿಳಿದ ಸರೋವರದಂತೆ ಪ್ರಸನ್ನಾಂ
ರಂಗ ನಾಗಿರ್ದನ್ನೆಗಂ ಕನಕ ದಂಡಹಸ್ತೆ ಯಾಗಳಿಂತೆಂದಳ್:—

ಉ|| ಕ್ಷೋಣಿಗೆ ಹಾರವಲ್ಲಿ ರಜತಾದ್ರಿ ತದದ್ರಿಗೆ ಬಿಂಕೆ ನೋಡು ಭ |
ಶ್ರೇಣಿಗಳಂತವಂ ವಿನಮಿಯುಂ ನಮಿಯುಂ ನಯದಾಳ್ದರುತ್ತರ ||
ಶ್ರೇಣಿಗಧೀಶನೂರ್ವ ನಮಿತಪ್ರತಿಪಾಲಕ ದತ್ತದಕ್ಷಿಣ |
ಶ್ರೇಣಿಯ ನಾಳ್ದ ನೂರ್ವ ನವರೊಳ್ ನಮಿವಂಶ ನಪಾರ ಪೌರುಷಂ || ೧೪೯ ||

ಕಂ|| ಜ್ವಳನಜಟಿಯೆಂಬೊ ನಹಿತ |
ಜ್ವಳನಂ ಜಾಜ್ವಲ್ಯಮಾನ ಮಣಿಮುಕುಟಾಂಶೂ ||
ಜ್ಜ್ವಳ ಖೇಚರೇಂದ್ರ ಪರಿಷ |
ತ್ಪ್ರಳಯಂ ನೋಡ ಳಸಮಿಳಿತ ಮುಗ್ಧಾಂಪಾಂಗೀ || ೧೫೦ ||

ಉ|| ಆ ಗಗನೇಚರೇಂದ್ರನ ಮಗಂ ಪೆಸರಿಂ ನೆಗೞ್ದರ್ಕಕೀರ್ತಿ ವಂ |
ಶಾಗತ ಖೇಚರೇಂದ್ರ ವಿಭವಂ ಭವದೀಯ ವಿನೂತಮಾತುಳಂ ||
ಭೋಗಪರಂಪರಾಪರಿಗತಂ ಮಗನಾ ವಿಭುಗಾಳ್ದು ಮು |
ದ್ಯೋಗಿ ವಿರೋಧಿ ದರ್ಪಮಥನಂ ರಥನೂಪುರ ಚಕ್ರವಾಳಪಂ || ೧೫೧ ||

ಕಂ|| ಆಪಗತ ಪತ್ರಲತಾವಳಿ |
ವಿಪುಯುವತಿಕಪೋಲಪಾಳಿ ಪೇೞ್ಗುಂ ನೆಗೞ್ದಾ ||
ನೃಪನ ನಿರತಿಶಯ ಶೌರ್ಯ |
ಪ್ರಪಂಚಮಂ ಚಂಚರೀಕ ಸಮಚಿಕುರಚಯೇ || ೧೫೨ ||

ವ|| ಮತ್ತಮಾದಿವ್ಯಾನುಭಾವಂ:—

ಕಂ|| ಐರಾವತ ಗಜಕುಂಭ |
ಸ್ಫಾರಣ ವಿಶ್ಲಥ ವಿಕಾಸಿ ಕೇಯೂರಂ ಕೇ ||
ಯೂರದೊಳೊರಸೆ ಸುರೇಂದ್ರನೊ |
ಳೋರಾಸನ ಮಿರ್ದ ನರ್ಹ ದಾಸ್ಥಾಯಿಕೆಯೊಳ್ || ೧೫೩ ||

ಕುಲನಗಮ ನಡರ್ದ ಜಲನಿಧಿ |
ಜಲಮುಂ ಪಾಯ್ವಹಿನಿವಾಸಮುಂ ಪುಗುವ ಮರು ||
ನ್ನಿಲಯಕ್ಕೊಗೆ ವೀತನ ಕೀ |
ರ್ತಿಲತಾಂಗಿ ಚಲಾಂಗಿ ಖಚರ ನಚಳಿತ ನಬಲೇ || ೧೫೪ ||

ಬಾಲೆಗೆ ಗುಣಕಾಂತಿ ವಯೋ |
ಲೀಲೆಗೆ ವಿನಯಪ್ರಧಾನ ಗುಣಗಣಿಗೆಣೆ ಭೂ ||
ಪಾಲಂ ನಿನಗದಱಿಂ ದನು |
ಕೂಲಂ ಬಿದಿ ಬಿಸುಗೆ ಸಿಂಧುವೊಲ್ ಮಾನದಿಯೊಳ್ || ೧೫೫ ||

**ವ||** ಎಂದಿಂತಾಕಾರಾನುರೂಪ ದೌವಾರಿಕಾ ವಚನರಚನಾಶ್ರವಣಸಮುಪಜಾತ ಸಾಧ್ವಸಭಯಮು ಮೆಱಕಮುಂ ಪೆರ್ಚಿ ಸಂಜಾತನೇಪಥು ಕರಪಲ್ಲವ ಪರಿಚ್ಯುತಸ್ವೇದೋದಬಿಂದು ಸಂದೋಹಸಿಕ್ತಾ ಪೂರ್ವಪ್ರವಾಲಾಂಕಮಧೂಕಮಾಲಾ(ಭಾ)ಪರಿಷ್ಕೃತಚಂಚತ್ಪಂಚರತ್ನಮಯದಾವಾಭಿರಾಮಭಾಸ್ವ ಜ್ಜನಚಂದ್ರ ಚಂದ್ರಪ್ರಭೆಗೆ ಜ್ಯೋತಿಸೋಲ್ವಂತೆ ಜ್ಯೋತಿಃಪ್ರಭೆ ಸೋಲ್ತು:—

ಕಂ|| ಅವಯವ ಸಮುದಯ ಶೋಭಾ |
ನವದ್ಯ ನಪ್ಪುರ್ವರಾಸ್ಯ ತಿಲಕೇತರನಂ ||
ನವವಧು ಪೊಲ್ಲಳೆ ಮಧುಕರಿ |
ನವಾಮ್ರದೊಳ್ ಪಾಯ್ಗು ಮೆಲವದೊಳ್ ಪಾಯ್ದಪುದೇ || ೧೫೬ ||

ಆಕೆಯ ಮನಮುಱದಖಿಳ ಕ |
ಲಾಕೋವಿದ ಮಾನ್ಯ ಜನ್ಯ ನಿಸ್ತರವಚನ ||
ವ್ಯಾಕುಳತೆ ತಗುಳೆ ಪೊಗೞಳ |
ನೇಕೋಕ್ತಿಯಿ ನುರ್ವರಾಸ್ಯ ತಿಲಕನ ರೂಪಂ || ೧೫೭ ||

ಪೊಗೞ್ವಾಕೆ ಮಾಣೆ ನಾಣೆಸಿ |
ನಗಲೆ ನಯಂ ಬೀಱ ದಿಟ್ಟಿ ನಿಂದ್ಪುಲಿ ಪೊಸವಾ ||
ಸಿಗದೊಳೆಸೆ ಯೆನೆ ಕುಮಾರನ |
ಪೆಗಲೊಳ್ ನೆಲೆ ನೆರೆಯೆ ಮಾಲೆ ಮೂಡಿದ ತೆಱದಿಂ || ೧೫೮ ||

**ವ||** ಅಂತೆಯ್ದೆ ಸೋಲ್ತು ಮಧಿಕಲಜ್ಜಾಭಾವದಿಂ ಮಾಲೆ ವೊಡಲಱಯದೆ ಕುಮಾರ ಗ್ರೀವಾ ಳೋಕನೆಯಾ ಗಿರ:—

ಕಂ|| ಮನಮುಱದು ನಗೆಯೊಳಾ ನೃಪ |
ತನಯೆಯ ರಥಮುಂ ನೃಪಾಂತರಕ್ಕುಯ್ವುದೊ ಪೇೞ್ ||
ಎನೆ ನೊಂದು ನಿಷಾದಿಗೆ ಮುಳಿ |
ದನಂಗ ನೃಪಯಾನ ನಾಗಮುಂ ವಧು ಪೋಲ್ತಳ್ || ೧೫೯ ||

ಕಣ್ಬಟ್ಟತನದಿಂ ಪೇೞಲ್ |
ನಾಣ್ಚಿರ ತನ್ನೊಳಗ ನಬಲೆ ಪೊಱ ಪೊಣ್ಮೆಮದಾ ||
ಕಣ್ಚೆಲ್ಲದ ಬಳಸುವ ಕಡೆ |
ಗಣ್ಬಪಳತೆ ಯೊಡ ನಲಂಪು ಪೊಱಪೊಣ್ಮುವಿನಂ || ೧೬೦ ||

**ವ||** ತದನಂತರಮಿರ:—

ಮ|| ನಯನಾನಂದನ ದಾಮಮುಂ ಹಿಮಕರಾಂಶೂದ್ದಾಮಮುಂ ಕನ್ನೆ ತ |
ನ್ನಯ ಕೆಯ್ಯೊಳ್ ಕುಡೆ ಮಾಲೆ ಪೂಡೆ ಸಮದಂ ಕಂಠಸ್ಥ ನಕ್ಷತ್ರ ಮಾ ||
ಲೆಯಿ ನೈರಾವತದಂತೆ ತತ್ಕರತಳಾಯಾತ ಸ್ಫುರದ್ರತ್ನ ಮಾ |
ಲೆಯ ನುದ್ಭಾಸಿಸಿದಂ ಸ್ವಯಂವರದೊಳಾ ಸೌಜನ್ಯಕಂದಾಂಕುರಂ || ೧೬೧ ||

— **ಗದ್ಯ** —

ಇದು

ಜಿನೇಂದ್ರ ಚರಣ ಸರಸೀರುಹ ಶಿಲೀಮುಖಾಯಮಾನ

**ಶ್ರೀಮದುಭಯಕವಿ ಚಕ್ರವರ್ತಿ**

ನಿರ್ವರ್ತಿತಮುಂ

**ಅಮ್ಮನಭಕ್ತಾಭಿಧಾನ ವಿದ್ಯಾನಿಧಾನ ಮಲ್ಲಪಾರ್ಯ**

ತದನುಜಾತಾಭಿಜಾತ ಸಾರಸ್ವತ

ಪುನ್ನಮಾರ್ಯ ಕಾರಿತಮು ಮಪ್ಪ

**ಪುರಾಣಚೂಡಾಮಣಿಯೊಳ್**

ಪಂಚಮಾಶ್ವಾಸಂ.

|| ಶ್ರೀ ||

# ಶಾಂತಿಪುರಾಣಂ.



## ಷಷ್ಠಾಶ್ವಾಸಂ.

ಕಂ|| ಶ್ರೀಪತ್ನೀಮೃದು ಭುಜಲತೆ |
ಕೋಪಮ ಮಾಪಾಳೆ ಕೊರಲೊಳಿರೆ ಕರ ಮೆಸೆದಂ ||
ಭೂಪತಿ ಕನ್ಯಾ ಬಾಹುಲ |
ತಾಪಾಶಾಶ್ಲೇಷತೋಷದಿಂ ಜಿನಚಂದ್ರಂ || ೧ ||

ಉ|| ಸಾರದ ಮುಕ್ತ ಶೀತಕರನಂ ನವಚಂದ್ರಿಕೆ ಪೊರ್ದುವಂ ತಕೂ |
ಪಾರದ ಸಿಂಧುಸಿಂಧು ಪುಗುವಂತೆ ಸುರೇಭಮ ನಭ್ರಮೂಗಜ ||
ಸ್ತ್ರೀ ರಮಣೋಚ್ಛ್ರಿಯಿಂ ದೆಳಸುವಂತೆ ಸಮಾನವರಂಗೆ ಕನ್ನೆ ಕೆ |
ಯ್ಯಾರೆ ಕನಲ್ದೊನಲ್ದುದ ಮನಂ ನೆರೆದಿರ್ದ ಸುರೇಂದ್ರಯೂಥದಾ || ೨ ||

ಕಂ|| ಪರಸುವ ಪೌರರ ಪರಕೆಯ |
ಸರಂ ಶ್ರವಣಶೂಲ ಮಾಗಿ ಕಿವಿಯೊಳ್ ಪುಗುವಂ ||
ತಿ[ರೆ] ಕಿವಿಯಂ ಪುಗೆ ನೆರೆದರ |
ಸರ ಮಕ್ಕಳ್ ಪಿರಸರಾದ ರಾಸಂಕಟದೊಳ್ || ೩ ||

ವ|| ಅಂತು ನಡುವಗಲ (ಕಂಜ) ಕುಮುದವನದ ವಿಕಾಸಕ್ಕಮ ವಿಕಾಸಕ್ಕಂ ನೆಲೆಯಾದುಭಯ ಪಕ್ಷರಾಜಲೋಕದನುಜೀವಿಲೋಕದ ಪುರನಾರೀಜನಂಗಳೊಳೀತಳ್ತೊಳಂ ಪಾಣ್ಬುದುಂ ಮುಂಚಸ್ಥ ರಾಜನ್ಯಕಮುಂ ಶ್ರೀವಿಜಯಂವಿಸರ್ಜಿಸೆ ಪ್ರತ್ಯೂಷತಾರಕಾಕಾರದಿಂ ಮುಂಪಮುಂದಾಯಮಾನಪ್ರಭಾ ಪ್ರಸರಂ ತಮ್ಮ ತಮ್ಮ ಶಿಬಿರ ನಿವೇಶಂಗಳ್ಗೆ ಪರೆದು ಶ್ರೀವಿಜಯನೊಳ್ ಮುರ್ವರಾಸ್ಯ ತಿಲಕನೊಳ ಮನಿಬರ್ ನೆರೆದುಂ ಕಾದಿಯು ಮೊದವಲಾಱದುದಱ ನೊಱೆಯೊಳಗಣ ಕೂರಸಿಯಂತೆ ಕೂರ್ಪು ಗಿಡದೆ ಸೌಜನ್ಯಮ ನುಂಟುಮಾಡಿ ನಿಜದೇಶ ಪ್ರಸ್ಥಾನಾಭಿಮುಖರ್ ಅಂತಸ್ಥ ಕೋಪಾವಲೇಪರ್ ಬಹಿಃಪ್ರಸೋದಂಗಳಿಂ ಸಂವೃತಾಕಾರರ್ ಗೂಢ ನಕ್ರ ಪ್ರಸನ್ನ ಹ್ರದಗಳಂತೆ ಪಯಣಂ ಪೋದರ್. ಇತ್ತ ಪಾಪೇಭಕಂಠೀರವಂ ಕಂಠೀರವ ವಧೂಪ್ರಭೆಯುಂ ಜ್ಯೋತಿಃಪ್ರಭೆಯ ನುಪಾಯನ ಸಮೇತೆ ಯಪ್ಪ ನೃಪವಿದ್ಯೆಯುಂ ಮುಂದಿಟ್ಟು ಪುಗುವಂತೆ ಪೊೞಲಂ ಪುಗೆ:—

ಸ|| ಆಯತ ರಂಗವಲ್ಲಿ ಪರಿಶೋಭೆಯ ಸಂಚಿತ ಚಾರು ಕೀರ್ಣ ಪ |
ರ್ಣಾಯುಧ ಪಾಳಿತೋರಣ ವಿರಾಜಿತಮುಂ ಬಹುನೂತ್ನ ಕೇತನ ||
ಚ್ಛಾಯ ನಿವಾರಿ ತೋಷ್ಣಮ ನನಿಂದಿತ ಸುಂದರ ರಾಜಮಾರ್ಗಮುಂ |
ಶ್ರೀಯ ನಿವಾಸಮುಂ ಪುಗೆ ನೃಪೇಶ್ವರ ಕನ್ಯಕೆಯುಂ ಕುಮಾರನುಂ || ೪ ||

ಕಂ|| ಆತನ ನಾಗಳ್ ನೋಡುವ |
ಕೌತೂಹಳದಿಂ ಸುಧಾಗೃಹಾಗ್ರಂಗಳೊ ೞ ||
ರ್ದಾತರಳೇಕ್ಷಣೆಯರ್ಕಳ್ |
ವಾತಗವಾಕ್ಷಂಗಳೆಡೆಗೆ ತಡೆಯದೆ ನಡೆದರ್ || ೫ ||

ವ|| ಅಂತು ವಿಶ್ವಕರ್ಮನಿರ್ಮಿತ ನವಕರ್ಮ ಜಾಲಾಂತರಂಗಳೊಳ್ ಕುವಳಯಿತಂಗಳಾಗಿ ತೊಳಗಿ ಪೊಳೆವ ಬೆಳ್ಳಿಯ ನಿಡಿಯ ತುಱುಗೆನೆಗಣ್ಗಳಿಂ ಪೌರವಾರವಿಳಾಸಿನೀ ಜನಂಗಳ್ ಪರಿತ್ಯಕ್ತಾನ್ಯವ್ಯಾಪಾರರಾಗಿ ಬಹಿರಂತಃಕರಣಂಗಳ್ ನಕಳಂಕಾಚಾರಸಾರನನೆ ಲಕ್ಷ್ಯಂ ಮಾಡಿ ನೋಡುವಲ್ಲಿ ಯೊರ್ವಳ್: —

ಕಂ|| ಮುಡಿ ಬಿಟ್ಟೊಡದುವ ನವಯುವ |
ದೆಡೆಗೆಯ್ಯೊಳ್ ಪಿಡಿದು ಮುಡಿಯುಮಂ ಮಱೆದು ನಯಂ ||
ಕಡೆಗೋಡಿಪ್ಪೋಗೆ ಕಣ್ಣೊಳ್ |
ಜೆಡಂಗೊಡಂಬಡೆ ಮೃಗಾಕ್ಷಿ ಪರಿದೀಕ್ಷಿಸಿದಳ್ || ೬ ||

ಇಂಬಿನೊ ಳಡಿಯೂಡುವ ನವಿ |
ಯಂ ಬಾರಿಸಿ ತೆಗೆದು ಕಾಲ ನೊರ್ವಳ್ ನೋಟ್ಟಾ ||
ಡಂಬರ ವಡಿಯಿಟ್ಟು ಗವಾ |
ಕ್ಷಂಬರ ಮುಲತಗೆಯ ಪಜ್ಜೆಯಂ ಪಸರಿಸಿದಳ್ || ೭ ||

ಎಡಗಣ್ಣೊಳೆಚ್ಚಿ ದಂಜನ |
ಮೊಡಂಬಡೆನೆ ಬಲದ ಕಣ್ಣೊಳೆಚ್ಚದೆ ಕುಡುಪಂ ||
ಪಿಡಿದು ಗವಾಕ್ಷ ಕ್ಕೊರ್ವಳ್ |
ನಡೆದಳ್ ನೋಡಲ್ಕೆ ಬಿನಯ ಕಲ್ಪಾಂಘ್ರಿಪನಂ || ೮ ||

ನಡೆಯೆ ಜಟುಳತೆಗೆ ಕಣಯಂ |
ಸಡಿಲ್ದೊಡದ ನಡದ ಕೆಯ್ಯೊ ಳೊಸರಿಸುತ್ತುಂ ||
ನಡೆದು ಗವಾಕ್ಷಂಬರ ಮೋ |
ಗಡಿಸದೆ ನವ ವರನ ನಬಲೆ ನೋಡಿದ ಳೊರ್ವಳ್ || ೯ ||

ಅರೆಗಟ್ಟೆ ತುರಿಪದಿಂ ಪರಿ |
ತರೆ ಮೇಖಲೆ ನೋಡ್ಪ ಕಾಲ್ಗೆ ವರೆ ಮದನ ಮದೋ ||
ದ್ಧುರಗಂಧಗಜಂ ನಿಗಳಂ |
ಬೆರಸಿಪ್ಪಂತಿರ್ದು ನೋಡಿದಳ್ ನವ ಳೊರ್ವಳ್ || ೧೦ ||

ಕನದಖಿಳ ಕನಕ ವಾತಾ |
ಯನಂಗಳೊಳ್ ಸುರಭಿ ಗಂಧಗರ್ಭಿಣಿಗಳ್ ನೂ ||
ತನ ನಯನ ಪದಯುಗಂಗಳ್ |
ಕನಕ ಸರೋಜಂಗಳಾದು ವವರ ಮೊಗಂಗಳ್ || ೧೧ ||

ವ|| ಅಂತು ಸೌಜನ್ಯ ಕಂದಾಂಕುರನ ಲಾವಣ್ಯರಸಮಂ ಕಣ್ಗಳ್ ಪೀರ್ವಂತೆ ನೋೞ್ಪ ನಗರ ನಾರವಿಲಾಸಿನಿಯರ ಮತ್ತಿನಿಂದ್ರಿಯ ಪ್ರಪಂಚಂಗಳೆಲ್ಲಂ ಚಕ್ಷುರಿಂದ್ರಿಯಮನೆ ಪೊಕ್ಕುವು ಮಱೆದ ವಿಷಯಯೋಗಂಗಳ್ ನಱುಯದೇಕೇಂದ್ರಿಯ (ಭೂತ) ಚೂತಲತಾಕಾರಮಂ ಕೆಯ್ಕೊಂಡು ಬಲ್ಲಿಂ ಬೆಱಗು ಮಾಗಿ ನೋಡೆ ವಧೂವರರ್ ಬರೆವರೆ:—

ಕಂ|| ಆದ ಸೋಯಂಬರಮಂ ಜಗ |
ದಾದಿಯ ನೃಪರಮಿತ ಮತಿಗಳಿದ ನೋೞ್ಪಿತ ನು ||
ತ್ತಾದಿಸಿದ ರಲ್ಲಿದಂ ಮುದಿ |
ತೋದಿತನಂ ವರನ ಸೀಕೆ ಪಡೆಗುಮೆ ನೃಪರೊಳ್ || ೧೩ ||

ವ|| ಅದಲ್ಲದೆಯುಂ "ಸಮುಮಯೋರೂಪ ಲಾವಣ್ಯಪುಣ್ಯಮ ನಿಪ್ಪಂದ್ವಮಂ ಕೂಡಿದ ವಿಧಿ ಗವರಂ ಪುಟ್ಟಿಸಿದ ಮಹಾಪ್ರಯತ್ನಂ ಸಫಲಮಾದುದು. ಈ ರಾಜಸಹಸ್ರದೊಳೀಕೆ ತನಗನುರೂಪ ನಪ್ಪನ ನಱಿದು ಮಾಲೆ ಯಿಡಿದಳ್, ಇನ್ನಮ ಪುರಾತನ ಭವಸಂಬಂಧಮೆಂದಿಸಿ" ಎಂದಿಂತರ್ಥ ಭೂತಂಗಳನೆನಿತಾನುಮಂನುಡಿವನಾಗರಕಶ್ರೋತ್ರಸುಖಮುಖರವಾರ್ತಾಪ್ರವೃತ್ತಾಕ್ಷರಂಗಳಂಕೇಳುತ್ತುಂ ಮಂಗಳವಿಧಾನಾಧಾನ ಸನಾಥ ಭವನಮಂ ಪೊಕ್ಕು ಕುಮಾರನಂ ಮುನ್ನಂ ಹುತಾಗ್ನಿಯಾಗಿರ್ದ ಪುರೋಹಿತನ ನಿಱಿಗೊಂಡಗ್ನಿಸಾಕ್ಷಿಯೊಳ್ ಜ್ಯೋತಿಃಪ್ರಭೆಯುಂ ಯಥೋಕ್ತವಿಧಿಪೂರ್ವಕಂ ಕುಡುವುದುಂ:—

ಹರಿಣೀವೃತ್ತಂ|| ವಧೂಕಾಂತರ್ ಪಾಣಿಗ್ರಹಣ ವಿಧಿಯೊಳ್ ರಾಗವಿಸರರ್ |
ಸುಧಾಸಿಕ್ತಾಶೋಕವ್ರತತಿಯ ಮಹೋಕಾವನಿಜಮುಂ ||
ಮಧುಶ್ರೀಯೊಳ್ ತೞ್ತಿರ್ದುದುವು ತಿರ ತೞ್ಪಿಂದೆನಿಸಿದ |
ಪ್ರದಾನಾಸಂಗೋಭಂ ಬೆದಱಿ ನೆರೆದಿರ್ದಂ ಮದುವೆಯೊಳ್ ||

ಕಂ|| ಸುಕುಮಾರ ಕುಮಾರನ ಕಂ |
ಟಕಿತಾಂಗಪ್ರಕೃತಿಗಂ ವಧೂಸ್ವಿನ್ನಾಂಗ ||
ಪ್ರಕೃತಿಗಮನಂಗನೆಂ ಪ |
ೞ್ಚಿ ಕೊಟ್ಟನೋ ಬೆಱಿಬೆಱಿ ರಸಮಂ ಪಸೆಯೊಳ್ ||

ವ|| ಎಂದು ಪರ್ರಾಸ್ಯತಿಲಕ ಪ್ರಮೋದೋದಯಮುಮಂ ಜ್ಯೋತಿಃಪ್ರಭೆಯ ಲಜ್ಜಾಪತ್ರಮ ಭಾರವಮುಮಂ ಭಾವುಕರ್ ಭಾವಿಸಿ ಬೇಱಿಬೇಱಿ ಮೆಚ್ಚಿ ಪಚ್ಚು ಪೊಗೞೆ ಮತ್ತಂ:—

ಕಂ|| ಓರೊರ್ವರ ಕಣ್ಗಳ್ ಸಂ |
ಚಾರಿ ಕಟಾಕ್ಷೇಕ್ಷಣಂಗಳೆಡಮೊ ಲಜ್ಜಾ ||
ಪ್ರಾರಂಭಮ ನನ್ಯೋನ್ಯ ವಿ |
ಸಾರಿ ನವಪ್ರಣಯದಿಂ ಕ್ರಿಯಾವಿರಮಣದೊಳ್ ||

ವ|| ಬಳಿಸಾನುಂ ಬೇಗದಿಂ:—

ಕಂ|| ಉರಿವಗ್ನಿಕುಂಡಮಂ ಬಲಿ |
ವರೆ ದಂಪತಿ ಕನಕಶೈಲಮಂ ಬಳಸುವ ನಾ ||
ನರದಿರುಳ ತೇಜನ ನಿಂದನು |
ಕರಿಸಿದುದಾಗಳ್ ತದೀಯ ಮಹಿಮಸಹಿತ್ವಂ || ೧೭ ||

ವ|| ಅಂತಲ್ಲಿಂ ಬಱಯುಂ:—

ಕಂ|| ಪ್ರಮದ ಪುರೋಹಿತ ವಚನ |
ಪ್ರಮಾಣದಿಂದಗ್ನಿಕುಂಡದೊಳ್ ಲಾಜೆಯುಮಂ ||
ಕ್ರಮದಿಂದ ಮಿಕ್ಕಿದಳ್ ಸೆಣೆ |
ದ ಮನಃಪ್ರಣಯಕ್ಕೆ ಮುಡಿಗೆಯಿಕ್ಕುವ ತೆಱದಿಂ || ೧೮ ||

ತಲ್ಲಿಂದಂ ಲಾಜದವಿಸಾ |
ಪಲ್ಲವ ಶುಭಗಂಧಿ ನೆಗೆದ ಪೊಗೆ ಸೊಗಯಿಸಿತು ||
ತ್ಫುಲ್ಲಾಬ್ಜಾಸ್ಯೆಯ ನವಯುವ |
ಪಲ್ಲವದ ವತಂಸ ಮೆನಿಸಿ ಗಂಡದ್ವಯದೊಳ್ || ೧೯ ||

ವ|| ಆಗಳಾಚಾರಧೂಪಗ್ರಹಣಾಂಜನ ಕ್ಲಿಂದ ಸನಾಕುಲಾಕ್ಷಿ ಪರಿಮ್ಲಾನ (ತಾ) ಮ್ರಚಾಂಕು (ರೀಭೂತ) ರ ಕರ್ಣಪೂರ ಪಾಟಳ ಗಂಡರೇಖಮುಖ ಮಂಡಳ ಜ್ಯೋತಿಃಪ್ರಭೆಯೊಂದು ಲೀಲಾಲಕ್ಷ್ಮೀ ಗಾವಾಸ ಮಾಗಿರೆ ಸೌಸ್ನಾತಿಕರುಂ, ಬಂಧುಸಹಿತಂ ಶ್ರೀವಿಜಯನುಂ, ಪುರಂಧ್ರೀವರ್ಗಮುಂ ಬಂದು ಕನಕಪೀಠಸ್ಥಿತರಪ್ಪ ಮದೆವಂಗಂ ಮದೆವಳ್ಗೆ ಮಾದ್ರಾಕ್ಷತಾರೋಪಣಂ ಗೆಯ್ದರ್:—

ಉ|| ಶ್ರೀವಿಜಯಂ ವಿವಾಹಮ ನೊಡಂಬಡೆ ತಂಗೆಗೆ ಮಾಡಿ ಜೀಡಿದಂ |
ಗೀವುದನಿತ್ತು ಖೇಚರ ಮಹೀಚರ ಕೋಟಿಗೆ ಬಾಯಿನಂಗಳಂ ||
ತೀವಿದ ಕೋಶ ಕೋಶಗೃಹಮುಂ ಬಱದಾಗಿರೆ ಕೊಟ್ಟು ತನ್ನ ಸಿ |
ತ್ತೋವದೆ ನ್ಯಮನಂಗೆ ಮೆಱೆದಂ ನೆರೆದನ್ನಯದೊಂದು ನ್ಯಮೆಯಂ || ೧೯ ||

ಕಂ|| ಬಱವಱ ಯೆಂಬುದು ಬಡವಂ |
ಗಱಪಂಗೆಂ ಮುಟ್ಟೆ ಖಚರಕೇತುಗೆ ಸಿರಿ ಪೊಂ ||
ಪುಱ ಪೋದ ರೂಪ್ಯಗಿರಿಕುಳ |
ವಱಯಿಂದಂ ಬಂದ ಕೋಶಗೃಹಮಂ ಗೃಹಮಂ || ೨೦ ||

ವ|| ಆವಱಂದಂ ತಮ್ಮುತಿರ್ವರ ತಳ ಬಱವಱಯಿಂದು ಶ್ರೀವಿಜಯನುಂ ವಿಜಯನು ಮುರ್ವರಾಸ್ಯತಿಲಕನುಮಂ ಜ್ಯೋತಿಃಪ್ರಭೆಯುಮಂ ಕಱಪಲ್ ಮಾಱು ಪಯಣಮೊಡಪ್ಪಿಗಿ ತಮ್ಮಂ ಬೆರಸು:—

ಕಂ|| ಶ್ರೀವಿಜಯ ನತ್ತ ಮಗುಟ್ದ ಸ |
ಮಾವಾಸ್ಯೆಯೊಳೊಡನೆ ನಡೆದು ಕಡೆಯೊಳ್ ರವಿ ರಾ ||
ಜೀವರಿಪುವಿಂ ವಗಲ್ದ ಪ್ರ |
ಲಾವಿರ್ಭೂತ ಪ್ರತಾಪ ನಧಿರೂಢರಥಂ || ೨೧ ||

ವ|| ಅಂತು ಚಕ್ರವರ್ತಿ ತನೂಜಂ ಕಳಿಪಿ ಮಗುಟ್ದುದು ಮತ್ತ ಕತಿಪಯದಿನಂಗಳಿಂ:—

ಚಂ|| ಜಲಜಸರಸ್ತಟಂಗಳೊಳಶೋಕ ಮಹೀರುಹ ರಮ್ಯಭೂತಳಂ |
ಗಳೊಳನವದ್ಯ ನದ್ಯುಭಯ ತೀರದ ಸೈಕತ ಮಾಧವೀಗೃಹಂ ||
ಗಳೊಳೆಡೆಮಾಡಿ ಬೀಡುವಿಡುತುಂ ಖಚರೇಶ್ವರ ನೆಯ್ದಿದಂ ನಿರಾ |
ಕುಳಗತಿ ಲೀಲ ನಪ್ರತಿರಥಂ ರಥನೂಪುರ ಚಕ್ರವಾಳಮಂ || ೨೨ ||

**ವ||** ಎಯ್ದೆ ಪೊೞಲ ನಾಗಳಸ್ತಶೋಭೆಗೆಯ್ದು ಮಹಾವಿಭೂತಿಯಿಂ ಪೊಕ್ಕನವರತಂ ವಿಷಯ ಸುಖನಿರತನಾಗಿ ಮಿತದಿನಂಗಳ ಸಮಿತತೇಜನಿರ್ದು ತನ್ನ ತಂಗೆಯ ಸುತಾರೆಯ ಸ್ವಯಂವರ ವಿವಾಹಕಲ್ಯಾಣಕಾರ್ಯ ಪರ್ಯಾಲೋಚನ ವಿರಾಮದೊಳ್, ಶ್ರೀವಿಜಯಂ ಮೊದಲಾಗೆ ವಿಶ್ವಂಭರಾಧೀಶ ತನೂಜ ಸಮಾಜಮುಂ ಬರಿಸೆ (ಬಱಿಸೆ) ಬಂದು ಶ್ರೀವಿಜಯಂ

ಮ|| ಗಗನಕ್ಷ್ಮಾಚರರೊಳ್ ಸ್ವಯಂವರದೊಳೀ ಸ್ತ್ರೀರತ್ನಮಂ ಕನ್ನೆಯಂ |
ಬಗೆಗೊಂಡಂತೊಳಗೊಳ್ವೆ ನೆಮ್ಮೆನುತಿರ್ಪುರ್ವೀಶರಿರ್ದಂತೆ ಕಂ ||
ತುಗೆ ಕನ್ಯೋತ್ತಮೆ ರಾಜಕೋಟಿ ತನಗಕ್ಕುಮ್ಮನ್ನ ಮಾಗಳ್ ಸುತಾ |
ರೆಗೆ ತಾರಾಧಿಪನಂತೆ ವಿಸ್ತರಿಸಿದಂ ಪ್ರಾಜೇಶ್ವರ ಪ್ರೀತಿಯಂ || ೨೩ ||

**ವ||** ಅಂತು ಪಿರಿದುಂ ವಿಭೂತಿಯೊಳ್ ಸ್ವಯಂವರದೊಳ್ ಶ್ರೀವಿಜಯಂ ಸುತಾರೆಯೊಳ್ ನೆರೆದಿಂ ಬೞಿಕ ಮಕಳಂಕಾಚಾರಸಾರ ನನೇಕ ಪಸದನ ದುಡುಗೊಱೆ ಸಹಿತಂ ಕಳಿಪೆ ಪೌದನ ಪುರಕ್ಕೆ ಪೋಗಿ ಸುಖಸಂಕಥಾ ವಿನೋದದಿ ನರಸುಗೆಯ್ಯುತ್ತುಮಿರೆ ಮತ್ತೊಂದು ದಿವಸ ಮಾಸ್ಥಾನ ಮಂಟಪಮಧ್ಯಸ್ಥಿತ ಚಾರು ಚಾಮೀಕರ ಮೃಗೇಂದ್ರ ವಿಷ್ಟರದೊಳ್ ತ್ರಿಪೃಷ್ಠತನಯಂ ಶ್ರೀವಿಜಯ ನಿರೆ:—

ಕಂ|| ತ್ರಿಜಗದ ತಿಲಕಂ ವಿದ್ಯಾ |
ಭಿಜಾತ ಗಂಧಂ ನಿಮಿತ್ತವಿದ ನಾಸಭೆಯೊಳ್ ||
ದ್ವಿಜ ನಱುದಿಂತೆಂದ ನಮೋ |
ಘಜಿಹ್ವ ನೆಂಬೊಂ ಸಮಸ್ತ ವಸುಧಾಧಿಪನಂ || ೨೪ ||

**ವ||** ಇಂದಿಂಗೇೞು ದಿವಸದಂದಿಂಗೆ ಪೌದನಪುರಾಧೀಶ ಮಸ್ತಕದೊಳ್ ನಿರ್ಘಾತಾಪಾತಮಕ್ಕು ಮೆಂದಾದೇಶಂ ಗೆಯ್ವುದುಂ ತತ್ಸಭಾಪತಿಯು ಸಮಸ್ತಸಚಿವರೊಳೞಿಮುನಿಕಾರನೈಮಿತ್ತಿಕನಂ ಕಣ್ಣಂ ಕಿಡೆ ಜಡಿದು:—

ಕಂ|| ಅದು ನಿನ್ನಯ ತಲೆಯೊಳ್ ಬೀ |
ೞ್ವುದಕ್ಕೆ ಶುಭಮಕ್ಕೆ ಸಾರ್ವಭೌಮಂಗೆ ವಲಂ ||
ಬುದು ಮೆನ್ನಯ ತಲೆಯೊಳ್ ಸುರಿ |
ವುದು ಕಾಂಚನವೃಷ್ಟಿ ಮೆಚ್ಚಿ ನಿಮ್ಮ ಮಹೀಶಂ || ೨೫ ||

**ವ||** ಎಂದು ನಿಶ್ಶಂಕನುಂ ನಿಸ್ಸಹಾಯನುಮಾಗಿ ನುಡಿದಮೋಘಜಿಹ್ವನ ಸ್ಥಿರತ್ವಕ್ಕೆ ಮೆಚ್ಚಿ ನೀನಾರ್ಗೆನಂಬೆ ಯೆಲ್ಲಿರ್ದು ಬಂದೆ ಯೆಂದರಸಂ ಬೆಸಗೊಂಡೊಡಾಂ ಸಿಂಧುವಿಷಯದ ಪದ್ಮಿನೀಖೇಟದ ವಿಪ್ರಪ್ರವರ ನಷ್ಟಾಂಗ ಮಹಾನಿಮಿತ್ತ ವಿಶಾರದಂ ವಿಶಾರದನೆಂಬೊಂ, ತದೀಯ ಪುತ್ರನೆ ನಾನಮೋಘ ಜಿಹ್ವ ನೆಂಬವ ನೆನೆ ತರ್ಜನ ನಿರತರಪ್ಪ ದುರ್ಜನರಂ ಜಾರಿಸಿ ಸನ್ಮಾನಪುರಸ್ಸರಂ ನೈಮಿತ್ತಕನಂ ಪೋಗ ಲ್ವೇೞ್ದು ಶ್ರೀವಿಜಯಂ ಮಂತ್ರಿಮಹತ್ತರ ಪುರೋಹಿತ ಪ್ರಭೃತಿಪ್ರಧಾನಪುರುಷರೊಳಾಳೋಚಿಸಿ ಮಹಾಶನಿರಕ್ಷೋಪಾಯಮಂ ಬೆಸಗೊಳೆ ಭೂಮಿಗೃಹಪ್ರವೇಶ ಮಂಜೂಷಿಜಯಾವಗಾಹಾದಿ ರಕ್ಷೋಪಾಯಂಗಳನೇಕಂಗಳಂ ಮಂತ್ರಿಗಣಂ ನುಡಿದು ತೋಱಿ ಮಾಣೆ ಮೆಂದವರಂ ಮಾಣಿಸಿ ಮಣಿ ವಿಭೂಷಣನೆಂಬಮಾತ್ಯೋತ್ತಮ ನುಪಾಖ್ಯಾನಮನಿಂತೆಂದು ಪೇೞಲ್ತಗುಳ್ದಂ, ಒಂದು

ಪರ್ವತೋಪಕಂಠದೊಳ್ **ಕುಂಭಕಾರಕಟಕ**ಮೆಂಬುದು ಪೊೞಲುಂಟಲ್ಲಿ **ಚಂಡಕೌಶಿಕ**ನೆಂಬೊಂ ಪಾರ್ವಂ ದುರಾಚರಣಂ, ಆತನ ಭಾರ್ಯೆ **ಸೋಮಶ್ರೀ**ಯೆಂಬೊಳಾಕೆ ವ್ಯಂತರಾರಾಧನೆಗಳಿಂ **ಮುಂಡಕೌಶಿಕ**ನೆಂಬೊನಂ ಮಗನಂ ಪಡೆದಳಾಮಗಂ ಬಳೆಯೆ ವಳೆಯೆ ಮುೞಿದು ಕೊಲಲಿರ್ದ ಕುಂಭ ನೆಂಬ ರಕ್ಕಸಂಗೆ ನಡುಗಿ ಚಂಡಕೌಶಿಕಂ ಮುಂಡಕೌಶಿಕನ ನೊಯ್ದು ದ್ರಿ ಗುಹಾಂತರದೊಳ್ ಪ್ರಯತ್ನಂ ಬೆರಸಿರ್‍ಸಿ ಕಾಪುದು ಮಲ್ಲಿಯುಂ:—

ಕಂ|| ಪರಮಾರ್ಥತೆ ಹಿತ ಮಹಿತಮ |
ಪರಮಾರ್ಥತೆ ಯೆನ್ನ ದಾತ್ಮ ಜನಕಜ್ಞಾನ ||
ಸ್ಥಿರತೆಯೊಡನೊಡನೆ ಜರವಜ |
ಗರಗರಳ ಗತಾಯು ಮುಂಡಕೌಶಿಕ ನಟುದಂ || ೨೬ ||

ಅವಱಿಂದಂ ಜೀವಕ್ಕ |
ಭ್ಯುದಯಮನಭ್ಯುದಯ ಮೆಂಬಿದಂ ಧರ್ಮಾಧ ||
ರ್ಮದ ಮತಿಯೆ ಮಾಣ್ಕು ಮಜ್ಞಾ |
ನದೊಳಿನ್ನೀನೆಂಬುಪಾಯಮಂ ಕೆಯ್ಕೊಳ್ವಾ || ೨೭ ||

ಪೌದನ ಪುರಾಧಿ ಪತ್ಯಮ |
ನಾದಕ್ಷನ....ಯಕ್ಷ ಬಿಂಬಕ್ಕಿತ್ತಿಂ ||
ತಾದರದಿ ನೇಱು ದಿವಸಮ |
ನಾದಿ ಜಿನಾಲಯದೊಳರ್ಚನಾದಿಕ ಸಹಿತಂ || ೨೮ ||

**ವ||** ಇರಂದಿರಿಸೆ ಶಾಂತ್ಯಭಿಷೇಕಪುರಸ್ಸರಂ ಪೂಜಾವಿಧಾನಮಂ ಸಪ್ತವಾಸರಾವ ಸಾನಂಬರಂ ಮಾಡಲ್ವಗುಳ್ವದುಂ ಪರಿಪೂರ್ಣಾವಧಿ ದಿವಸ ನಾಯಂತನ ಸಮಯದೊಳ್ ಶ್ರೀವಿಜಯನಿಪ ಚಿತ್ರ ಶಾಲೆಯೊಳಗಣ ಸಿಂಹಾಸನದೊಳಧಿಗತರಾಜ್ಯಾಭಿಷೇಕಕಿರೀಟಪಟ್ಟಬದ್ಧ ಮಪ್ಪ ವೈಶ್ರವಣ ಪ್ರತಿಮ ಶ್ರೀವಿಜಯನಾಸ್ಥಾನದೊಳಿರೆ:—

ಕಂ|| ತುಡೆ ಧನ್ವಿ ಸರಲ ನೊರ್ವಂ |
ಗೆಡವುಗೆ ಮತ್ತೊರ್ವನವನನದು ತಱಿವಪೊಲೊ ||
ಳ್ವಿಡುಗದೆ ಯಕ್ಷಪ್ರತಿಮೆಯ |
ನಡುವಲೆಯೊಳ್ ಬಿೞ್ದು ವಶನಿ ಸುರಾಪ್ತಿನೆಗಂ || ೨೯ ||

**ವ||** ಅಂತು ತಾಮ್ರಮಯ ಗುಹ್ಯಕಪ್ರತಿರೂಪಂ ಕಿಚ್ಚಿಂಗೆ ತೋಱಿದರಗು ಕಱಗುವಂತೆ ಕಱಗಿ ಪೊನಲ್ವರಿಯೆ ಬಿೞ್ದಿಂದ್ರಾಯುಧಮಂ ಕಂಡು ಬೆಕ್ಕಸಂಬಟ್ಟು ಪದ್ಮಿನಿ ಖೇಡಂಬೆರಸು ಮಂಡಲಮ ನಮೋಘ ಜಿಹ್ವಂಗೆ ಮುಚ್ಚುಗೊಟ್ಟು ಶ್ರೀವಿಜಯಂ ನಿಜರಾಜ್ಯದೊಳ್ ನಿಂದು:—

ಹರಿಣೀವೃತ್ತಂ|| ಜನನಿ ತನಗಿತ್ತುದ್ಯದ್ವಿದ್ಯಾದ್ವಯಂ ಬೆಸಕೆಯ್ಯೆ ಕಾಂ |
ಚನಮಯ ವಿಮಾನಾಭ್ಯಾರೂಢಂ ಸುತಾರೆಯೊ ಕೋಪಳೊಳ್ ||
ಮನದೆಱಕದಿಂ ಪೋದಂ ಜ್ಯೋತಿರ್ವನಕ್ಕೆ ವಿಹಾರಿಸಲ್ |
ಜನಪತಿ ಪೆಱಂಗಿರ್ದೊಂದುತ್ಪಾತಮಂ ಸಚಿವೋತ್ತಮಂ || ೩೦ ||

ವ|| ಸಂಭ್ರಮಾಕುಲಿತ ಚಿತ್ತಂ ಸ್ವಯಂಪ್ರಭೆಗ ಮಱಪಿ ವಿಷಾದ ವ್ಯಾಪಾದಿತ ಪ್ರಮೋದರಾಗಿರ್ಪಿನೆಗಂ ಅಪೂರ್ವಖಚರನಚಿರರುಚಿರರೋಚಿರ್ನಿಚಯ ನಿಚಿತ ಕಕುಭಾಂಬರ ನಂಬರಚರ ನವನಿಗವತರಿಸಿ ರಾಜಮಂದಿರಮುಂ ಪೊಕ್ಕು ವಿನಯವಿನಮಿತ ಮಣಿಮುಕುಟನಾಗಿ ಸ್ವಯಂಪ್ರಭೆಯಂ ಕಂಡು ನಿಜಾಗಮನಕಾರಣಮ ನಿಂತೆಂದು ಬಿನ್ನಪಂ ಗೆಯ್ದಂ:—

ಕಂ|| ಆನಪ್ಪೊಡೆ ಸಂಭಿನ್ನಮ |
ಹಾ ನೈಮಿತ್ತಿಕನ ಮಗನೆ ನೆಮ್ಮಯ್ಯನು ಮಿಂ ||
ದಾನು ಮೊಡವೋಗಿ ಕಂಡು ಜ |
ನಾನಂದನರುರ್ವರಾಸ್ಯ ತಿಲಕರ ನರಸೀ || ೩೧ ||

ಓಲಗಿಸಿ ನಿಜಪುರಕ್ಕೆ ವಿ |
ಶಾಲತರಾಂಭೋದ ಮಾರ್ಗದೊಳ್ ಬರೆ ಶರಣೆಂ ||
ಬಾಲಾಪ ರುದಿತ ನಿನದಮ |
ನಾಲಿಸಿ ನಿಂದಿನಿಸ ನೆಮ್ಮ ತಂದೆಯು ಮಾನುಂ || ೩೨ ||

ವ|| ನಿಲ್ವಿನ ಮಮ್ಮಿರ್ದೆಡೆಗನತಿದೂರದೊಳ್ ವಿಮಾನಾರೂಢಂ ನವಯೌವನ ಶ್ರೀ ಮಧುರ ರೂಪಾಳಂಕರಣಭೂತ ಪರಿದೇವನಂ ಯಶೋಭಿರಾಮ ಪ್ರಮೋದ ಸನಾಥ ಪಾರ್ಶ್ವನ ನಂಬರಚರನಂ ಕಂಡು ತತ್ಸಮೀಪ ಸ್ತ್ರೀರೂಪಮಂ ಸುತಾರೆಯೆಂದಱದು ತಂದಿರ್ವರುಮ ಮೊಂದೊರ್ವರಂ ಮೂದಲಿಸಿ ತದ್ವಿಯಚ್ಚರ ವಿಮಾನಕ್ಕಡ್ಡಮಾಗಿ ನಿಂದಾಗಳ್:—

ಕಂ|| ಹಾಹಾಧ್ವನಿ ಕರುಣಾವ್ಯಾ |
ಮೋಹಮ ದೆರ್ದೆಯೊಳಗೆ ಬಳೆಯೆ ಸುತ್ತಿರ್ದೊಡಮಂ ||
ಸಾಹಸಿಗಂ ಕೇಳ್ದಂ ಧೃತ |
ಮೋಹಂ ಕೇಳ್ದುಮೆ ಜಿತಾರ್ತಕುರರೀರವಮಂ || ೩೩ ||

ವ|| ಅಂತು ಪುಯ್ಯಲಿಟ್ಟೊಳಱ ಪಳವಿಸಿ ಬಾಯಱದಟ್ಟಿ ಸುತಾರೆಯ ನಂಜಲಂಜಲೆಂದು ಮಂಡಲಾಗ್ರಮಂಡಿತ ದೋರ್ದಂಡರೆ ಮಾಗಿ ಪೋಗಿ ಪಗೆವನೊಳ್ ತಡೆಯದೆ ತಾಗುವೆಮ್ಮ ರಭಸಮಂ ಕೇಳ್ದು ವಿಮಾನಾಜಿರದೊಳಿರ್ದ ನಿಮ್ಮ ಸೊಸೆ ಬಾಡಿದ ಸಸಿ ಮಱಯಂ ಪೆತ್ತಂತೆ ರಾಗಿಸಿ ನಯಂಬೆತ್ತಿಂತೆಂದಳ್:—

ಕಂ|| ಜ್ಯೋತಿರ್ವನದೊಳ್ ಛಿದ್ರಿಸಿ |
ಪಾತಕ ನಿತ್ತ ಶನಿಘೋಷ ನಸ್ಮತ್ಪತಿಯಂ ||
ಮಾತೇಂ ನಿಜನಗರಕ್ಕೆಱ |
ದೀತಂ ಕೊಂಡೊಯ್ದ ಪೊಂ ವಿಯಚ್ಚರ ನೆನ್ನಂ || ೩೪ ||

ವ|| ಅವಱಂದಂ ಬೇಗಂ ಪೋಗಿತಂದಿರ್ವರುಂ ಮದೀಯ ಜೀವಿತೇಶ್ವರನಂ ಕಾಯಲ್ವೇಱ್ವುದು. ಇನ್ನಿನಿಸುಬೇಗಂ ತಡೆದಿರಪ್ಪೊಡೆನ್ನಂ ಕಾಣದಮೋಘಂ ಪ್ರಾಣಪರಿತ್ಯಾಗಂಗೆಯ್ಗು ಮೆಂಬುದುಂ, ಪೋಪರ್ ಪೋಗರಂಬಾಶಂಕೆ ಪೆರಸಿದ ವಿರೋಧಿ ನೋಡೆನೋಡೆ ಶ್ರೀವಿಜಯ ಪ್ರಾಣತ್ರಾಣ ನಿಮಿತ್ತಂ ಜ್ಯೋತಿರ್ವನಮಂ ಮನೋಜವದಿನೆಯ್ದಿ ಸುತಾರಾರೂಪಧಾರಿಣಿಯಾಗಿ ಕುಕ್ಕುಟಸರ್ಪದಶನ

ದ(ಶಾ)ಂಶವ್ಯಾಜದಿಂ ಬಿಟ್ಟು ಪಟ್ಟಿರ್ದ ಬಹುರೂಪಿಣಿಯೆಂಬ ಅಶನಿಘೋಷನಘೋಷಣ ವಿದ್ಯೆಯುಮ ನವಂಸುತಾರೆ ಗೆತ್ತಿರ್ದೆಯೊಳಿಟ್ಟು ಸುಡಲ್ ಚಿತಾರೂಢನಾಗಿರ್ದ ಶ್ರೀವಿಜಯನುಮಂ ಕಂಡು ಬೇಗ ಮಗ್ನಿಕುಂಡದಿ ನುರ್ಗಿಪ್ಪರನಂ ಪೂಜಿತೆಗೆದು ಬಳಿಕೆನ್ನ ತಂದೆ ಸಂಭಿನ್ನಂ ಬಹುರೂಪಿಣೀ ವಿದ್ಯೆಯನಾಟಂದೊಡೊಳಱಿ ಪೇಳಱಿ:—

ಕಂ|| ತದ್ವಿದ್ಯೆ ಪೋಗೆ ವಶನಕು |
ಮುದ್ವತಿ ಪೂಜಿಪೂಣ್ಕೆ ನಗೆಮೊಗಂ ಬೆರಸು ನೃಪಂ ||
ಸದ್ವಿದ್ಯಾನಿಧಿ ಪೇಳಿನೆ |
ತದ್ವಾರ್ತೆಯ ನಾಗಳಱಿಪಿದಂ ಸಂಭಿನ್ನಂ || ೩೫ ||
ನೃಪತಿ ಸುತಾರಾ ಹರಣ |
ಪ್ರಪಂಚಮಂ ಜಲಕನಱಿದು ಮಯ್ದುನನ ಪೂಟ |
ಲ್ಗಪಮತಿ ಸಂಭಿನ್ನಂ ಬೆರ |
ಸು ಪೋದ ನಿತ್ತಟ್ಟೆ ನಿಮಗೆ ಪೇಟಲ್ಕೆನ್ನಂ || ೩೬ ||

ವ|| ಎಂಬುದುಂ ದೀಪ ಶಿಖಂಬೆರಸು ಸ್ವಯಂಪ್ರಭಾದೇವಿಯು ಮಾಪ್ಪೊಟ್ಟ ಪೊಟ್ಟಾಗೆ ರಥ ನೂಪುರ ಚಕ್ರವಾಳಪುರಕ್ಕೆ ಪೋಗಿ ರಾಜಮಂದಿರಮಂ ಪೊಕ್ಕು ತನ್ನ ಮುನ್ನೆ ಕನ್ನೆತನದಂದೆತ್ತಿ ಕೊಂಡಾಡಿದ ಮಾತಾಪಿತೃಪಕ್ಷದ ಜನನೀ ಜನಂಗಳ್ ನೋಡೆ ತನಗಿದಿರ್ವಂದೆಱಗಿ ಪೊಡೆವಟ್ಟು ಕಂಡ ಮಗಳುಮ ನಳಿಯನುಮಂ ಕಂಡು ಪರಸಿ ಪ್ರಣಯಿಸೀ ವಿಯೋಗ ಪರಿಭವಾನಲದಹ್ಯಮಾನ ಮಾನಸನಪ್ಪ ಶ್ರೀ ವಿಜಯನುಮಂ ಭಂಗಿಸಿ ವಿಶ್ಲೇಷೋಪತಾಪಾಂತಸ್ತಪ್ಯಮಾನ ಹೃದಯನಪ್ಪ ಕಲಂಕಾಚಾರ ಸಾರನುಮಂ ಲೋಕಜ್ಞತಾದಿ ಮೃದುವಚನ ರಚನೆಗಳಿಂದ ಮಾಜಿ ನುಡಿದು ಕಿಱಿದು ಪೊಚ್ಚಿಸಿರ್ದ ನಿಜಸ್ನುಷಾವಿರಹ ವಿಧುರೆ ಪೊಣ್ಮುವ ಕಣ್ಣನೀರ್ಗಳಂ ನಿದಾಘಸಮಯ ಸರಸಿಯಂ ತಱಿಸಿ ಮಿಗಲೀಯದೊಳಗಡಂಗಿಸಿ ಸಭೆಯೊಳಿಂತೆಂದಳ್:—

ಉ|| ಆದಿ ಜಿನೇಂದ್ರನುಂ ನಮಿಯು ಮಿರ್ವರ ಪೂರ್ವಜರಿಂತು ಚಿಂತೆಯಂ |
ಖೇದಮು ಮಲ್ತು ನಾಯಕಗುಣಂ ರಿಪುಭೂಮಿಯ ನುಯ್ದು ಪಾಯಮುಂ ||
ಪೋದೆಡೆಯಂ ಪ್ರಕಾಶಮಱಿದುಂ ತಡೆವೊಂಗಡ ಮೆಂದೊಡಂಗನಾ |
ನಾದ ಮಿದೆಂತೊ ಸೈರಿಸುವರಾತ್ಮ ಪರಾಭವಮಂ ಕುಲೋದ್ಭವರ್ || ೩೭ ||

ವ|| ಎಂಬುದುಂ ಸೌಜನ್ಯ ಕಂದಾಂಕುರಂ ಶ್ರೀವಿಜಯಂಗೆ ಹೇತಿ ವಿದಾರಿಣಿಯುಂ ಬಂಧ ವಿಮೋಚನಿಯು ಮೆಂಬಿವೆರಡುಂ ವಿದ್ಯೆಗಳಂ ಕೊಟ್ಟು ಮತ್ತಂ ಸಾಧಿತ ಮಹಾವಿದ್ಯಂ ಮಾಡಿ ಮಿತ್ರನ ನಭ್ಯುದಯಮಿತ್ರಂ ನಿಜತನೂಜನಪಿತಮಾಜಿಗೆ ಮುಂದಟ್ಟಿ ತಾಂ ಸಹಸ್ರ ರಶ್ಮಿವೆರಸಗ್ರಿಮಂತನೆಂಬ ಪರ್ವತದೊಳ್ ಮಹಾ ಬಳಾಭಿಧಾನವಿದ್ಯೆಯಂ ಸಾಧಿಸಿಕೊಂಡಾ ವಿದ್ಯೆವೆರಸು ಮನೋನಿಲ ವೇಗದಿಂ ಬಂದು ಚಂಪಾಪುರಮ ನೆಯ್ದೆ ವರ್ಪನ್ನೆಗ **ಮಶನಿಘೋಷಂ ಶ್ರೀವಿಜಯನೊಳ್** ಬಹು ರೂಪಿಣಿ ವಿದ್ಯಾಪ್ರಭಾವದಿಂ ಕಾದುವಾಗಳ್:—

ಮ|| ನೆಲದಾಕಾಶದ ದಿಕ್ತಟಂಗಳೆಡೆಯೊಳ್ ಪರ್ವಿರ್ದ ತದ್ರೂಪ ಸಂ |
ಕುಲಮಂ ಕಂಡಸುರಾತ್ಮಜನ್ಮನ ಮಹಾವಿದ್ಯಾಬಲಂ ಶೀರ್ಣ ಪ ||
ಲ್ವಲ[ದಂ] ತಾಗೆ ನಿಜಾಗ್ರವಿದ್ಯೆ ತವಿಸುತ್ತಿರ್ಪನ್ನ ಮಾಟಂದು ದೋ |
ರ್ವಲದೇಕಾಂಗ ನಿವಂ ವಲೆಂದು ನುಡಿದಂ ಸೌಜನ್ಯಕಂದಾಂಕುರಂ || ೩೮ ||

ವ|| ಅಂತಿಂದ್ರಜಾಲಿಗನಂತೆ ವಿಯದವನೀದಿಗ್ಭಾ[ಗ]ದೊಳ್ ತನ್ನ ರೂಪೆ ರೂಪಾಗಿ ಬಹುರೂಪದಿಂ ಕಾದುತ್ತಿರ್ದಸುರಂ ದೀನಜನತಾ ಕಲ್ಪಾಂಘ್ರಿಪನಿಂ ಭಿನ್ನವಿದ್ಯನುಮಭಿನ್ನ ಸನ್ನಾಹನುಮಾಗಿ ಪೆಱತೆಗೆದು ಪೋಗಿ:—

ಕಂ|| ಜಾರಂಗೆ ವಿಜಯ ಕಾಮಿನಿ |
ಕೂರಳೆ ಚಲಮಿರದು ಕೆಯ್ದು ಬೆಸಕೆಯ್ವುದು ಸಂ ||
ಸಾರದೊಳೆನೆಯುನೆ ಪಟಹ ಮೊಳ |
ಸೋರೆ ಖಗೇಶಾವನೀಶಸೈನಿಕರಾರ್ದರ್ || ೬೯ ||

ವ|| ಅಂತು ತನ್ನಂ ಮುನ್ನಂ ಬೀರನೆಂದವರ್ ಭೀರುವೆನೆ, ಕಲಿಯೆಂದವರಯ್ಯಗಲಿಯೆನೆ, ಪ್ರಾಣವನೆ ಕಾವ ಬಗೆ ಮಿಗೆ ಸ್ವಾಮಿದ್ರೋಹನಾದ ವೈದ್ಯನಂತೆ ಸುತಾರಾಪಹರಣಮನೆಯ್ದಿಯುಂ ಪೆಸಗೆಟ್ಟೋಡುವಶನಿಘೋಷನ ಸುವರ್ಣಾಸ್ಯತಿಲಕಂ ಕೊಂದಲ್ಲದಿರೆನೆಂದು ವಿದ್ಯೆಗಳಂ ಬೆನ್ನೊಳ್ ತಗುಳ್ವೇೞ್ದು ತಾನುಂ ಶ್ರೀವಿಜಯನುಂ ವಿದ್ಯಾಧರ ಶೂರಸೈನ್ಯಾವಸ್ಕಂದನ ಸಮನ್ವಿತಂ ಬೆಂಕೊಳ್ವುದುಂ ಅಶನಿಘೋಷನ ಶರಣ ನಾಶಿಕ್ಯನಗರ ಸಮೀಪದ ಗಜಧ್ವಜಾಭಿಧಾನಾಚಲದ ಮೇಗಿರ್ದ:

ಚಂ|| ವಿನಿಹತಕಲ್ಮಷಂ ಜಿನನನಂತ ಚತುಷ್ಟಯಭಾಗಿ ಭವ್ಯಸಂ |
ದನನಖಿಲಾಮರೇಂದ್ರ ಖಚರೇಂದ್ರ ಸುರೇಂದ್ರನತಂ ಶರಣ್ಯನ ||
ಪ್ಪಿನಮಭವಾಂಘ್ರಿ ಪದ್ಮಯುಗಳಕ್ಕೆಱಗಿರ್ಪುದುಮಾಗಳೋಡುವಾ |
ತನ ಭಯಮಟ್ಟುವಾತನ ಚಲಂ ತವುತಂದುವು ತತ್ಸಮೀಪದೊಳ್ || ೭೦ ||

ವ|| ಅಂತು ಬಱುತು ಬೆಳ್ಕೋಟೆ ನೋಡುವಶನಿಘೋಷನ ಭಯರಸಮುಂ, ಕರುತ್ತು ನಟ್ಟು ಬೆನ್ನಟ್ಟುವ ಗಗನಚರೇಂದ್ರನ ರೌದ್ರರಸಮುಂ ನಿದ್ರಾವಿದ್ರಾವಣನ ಲೋಚನದ್ವಯ ರಸನಮಂ ತೊಡಸೊಡನೆ ಪೋಣ್ಬುದುಮಶನಿಘೋಷಂ ಮನದೊಳ್ ನಿಶ್ಶಂಕನಾಗಿ:—

ಕಂ|| ಅವಯವದಿಂ ಪಂದುರ್ಚುವ |
ಭವಭಯಮುಂ ಶಿಥಿಲಮಾದುದೆಂದೊಡೆ ತಾಂ ಶಾ ||
ತ್ರವಭಯಮೇಂ ಗಹನಮೊ ಕ |
ರ್ಮವೈರಿ ನಿರ್ಮೂಲನಾಂಘ್ರಿ ಕಮಲಾಂತಿಕದೊಳ್ || ೭೧ ||

ವ|| ಎಂದು (ಬಗೆದು) ಬಗೆಯುತ್ತಿರ್ದನಂ ಪಾಪೇಭಕಂಠೀರವನುಂ ಶ್ರೀವಿಜಯನು ಮಜಾತನ ಪಾದಪಯೋಜಯುಗಳಕ್ಕೆಱಗಿ:—

ಕಂ|| ಅಕ್ಕಟ ಬಡವನೊಳೇತನೊ |
ಳಕ್ಕುಮೆ ಚಲಮೀತನಿಂದ ಮಧಿಕನೊ ಳಕ್ಕುಂ ||
ತಕ್ಕುದೆ ಮುಳಿಸು ಜಿನೇಂದ್ರನ |
ಪಕ್ಕದೆ ಪೊತ್ತಿಸೆಯು ಮನಲ ಸುಡುಗುಮೆ ಜಲದೊಳ್ || ೭೨ ||

ವ|| ಅಂತು ವಿದ್ಯಾಧರ ಶಿಖಾಯಮಾನ ಸುವರ್ಣಾಸ್ಯ ತಿಲಕನುಮವನೀಶ್ವರ ಶಿರೋಮಣಿ ಮಯೂಖ ಮಾಲಾಲೋಲಲೀಲಾಪಾದಪದ್ಮಶ್ರೀಕಂ ಶ್ರೀವಿಜಯನುಂ ವಿನಯಾಂಬುಜಾತ ಬಂಧುವನಪಗತಕಾಲುಷ್ಯ ನೀರಾಗ ಲೋಚನನಂ ಭಕ್ತಿ ಭರಾನತ ದೋಲಗಿಸುತ್ತಿರ್ಪನ್ನೆಗಂ ಸುತಾರಾಸಮೇತಂ ಸ್ವಯಂಪ್ರಭೆ ಬಂದು ತತ್ಕೇವಳಿಗೆ ಭಯವಿನಮಿತರಾಗಿ ಕುಳ್ಳಿರಲೊಡಂ:—

ಕಂ|| ವಿಜಯಾರ್ಧೇಶಂ ಬೆಸಗೊಳೆ |
ವಿಜಯಾಖ್ಯ ಜಿನೇಂದ್ರ ನಱುಯೆ ಬೆಸಸಿದ ನಾಗಳ್ ||
ತ್ರಿಜಗನ್ನುತ ಜಿನಧರ್ಮಮು |
ನಱೆಯುಮಂ ಜೀವಕರ್ಮ ಭೇದಸ್ಥಿತಿಯಂ || ೪೩ ||

ವಾತಾಹತ ಭವತೃಷ್ಣಾ |
ಪಾತಂ ತಣಿಸಿದುದು ಮೊತ್ತಮೊದಲೊಳ್ ಪರಿಷ ||
ತ್ಪ್ರೀತಿಕರ ಮಮಿತತೇಜ |
ಶ್ಚಾತಕಮಂ ಜಿನವಚೋಮೃತಾಂಭಃಪೃಷತಂ || ೪೪ ||

ಸಾಧಿತ ಸಮ್ಯಗ್ದರ್ಶನ |
ಬೋಧಚರಿತ್ರಂಗಳೆಂಬ ಧರ್ಮ ಮಿದವ್ಯಾ ||
ಬಾಧಂ ಧರ್ಮ ಮಿದಲ್ಲದು |
ದಾಧಿ ವ್ಯಾಧಿಪ್ರದಂ ಶರೀರಿಗಪಥ್ಯಂ || ೪೫ ||

ತತ್ವಾರ್ಥ ಶ್ರದ್ಧಾನ ಪ |
ಟುತ್ವಂ ಸಮ್ಯಕ್ತ್ವಮದು ನಿಸರ್ಗಾದಿಗಮಾಂ ||
ಗತ್ವದಿ ನಿರ್ತರ ನರ್ಹ |
ತ್ತತ್ವಮೊಳಂಬರ ಚರಾಸ್ಪಯಾಂಬರಭಾನೂ || ೪೬ ||

ಲೋಕಾಲೋಕಾವಿತತ ವಿ |
ಲೋಕಂ ಜ್ಞಾನಂ ಸಮೂರ್ಜಿತಾವದ್ಯ ವಿದ ||
ಪ್ರೀಕಂ ಚರಿತ್ರ ಮಱು ಪರ |
ಲೋಕಮು ಮಾಲೋಕಮುಂ ತದಾಯತ್ತಂಗಳ್ || ೪೭ ||

ಜೀವಾದಿ ಸಪ್ತ ತತ್ವದೊ |
ಳಾವಿಷ್ಕೃತ ನ[ವ]ಪದಾರ್ಥದೊಳ್ ಜ್ಞಾನಮುಮಂ ||
ಜೀವಂ ದರ್ಶನಮುಮ ನದ |
ನೀ ವೆಂಬುದನಾದಿ ನಿಧನ ಸಂಗ ಪ್ರಮಿತಂ || ೪೮ ||

ಹಿಂಸೆ ಪುಸಿ ಕಳವು ರತಿ ರಾ |
ಗಂ ಸಕಳಪರಿಗ್ರಹಂಗಳೆಂಬಿವ ನಱಿದ ||
ರ್ಥಂ ಸಕಳಮೆಂದು ತೊಱೆವುದು |
ಸಂಸಾರದೊಳಣು ಮಹಾವ್ರತಂಗಳ್ ಕ್ರಮದಿಂ || ೪೯ ||

**ವ||** ಮತ್ತಂ ಮಿಥ್ಯಾವಿರತಿಪ್ರಮಾದಕಷಾಯ ಯೋಗಾಭಿಧಾನ ಬಂಧಹೇತೂಚ್ಚನೀಚಕರ್ಮ ಪರಿನಿರ್ಮಿತ ಚತುರ್ಗತ್ಯುಪಲಕ್ಷಿತಂ ಸಂಸಾರ ಸಾಗಾರ ನಿರಗಾರ ಧರ್ಮದ್ವೈತದೊಳ್ ದಾನಪೂಜಾ ಶೀಲೋಪವಾಸ ಭೇದಭಿನ್ನಂ ಗೃಹೀತಧರ್ಮ ಮಲ್ಲಿಯುಂ ಆಹಾರಾಭಯ ಭೈಷಜ್ಯ ಶಾಸ್ತ್ರಭೇದದಿಂ ದಾನಂ ಚತುರ್ವಿಧಂ, ಇಂದ್ರ ಚಕ್ರವರ್ತ್ಯಾದಿ ನಿತ್ಯ ನಿರ್ವರ್ತ್ಯಮಾನಂ ಮಹಾಮಹ ಸರ್ವತೋ

ಭದ್ರಾದಿಕಂ ಪೂಜಾವಿಧಾನ ಮನೇಕವಿಧಂ, ವ್ರತಪರಿರಕ್ಷಣಂ ಶೀಲಂ, ಸಾಕಾರ ನಿರಾಕಾರ ವಿರಚಿತ ಮುಪವಾಸಂ, ಮತ್ತ ಮುಪಾಸಕಗುಣ ಸ್ಥಾನಂಗಳ್:—

ಸ್ರ|| ಸಮ್ಯಕ್ತ್ವಂ ಸದ್ವ್ರತೌಘಂ ಶಮತೆ ಸಮಯುತಂ ಪ್ರೋಷಧಂ ಗುಲ್ಮವಲ್ಲೀ |
ಸಾಮ್ಯೋರ್ವೀಜ ಪ್ರಘಾತಂ ರಜನಿಸುರತರಾಗಂ ಮಹದ್ಬ್ರಹ್ಮಚರ್ಯಂ ||
ಕಾಮ್ಯಾರಂಭೋಪಹಾನಂ ಪರಿಹೃತ ಸಕಲಗ್ರಂಥ ಮಸ್ತಾನುಮೋದಂ |
ಭೂಮ್ಯುದ್ದಿಷ್ಟ ಪ್ರದೇಶ ತ್ಯಜನ ಮಱವು ದೇಕಾದಶಂ ಖೇಚರೇಂದ್ರಾ || ೫೦ ||

ವ|| ಮತ್ತಂ ಯತಿನಿಕಾಯದ ವಿಶದ ದಶ ಧರ್ಮಂಗಳೊಳ್:—

ಕಂ|| ಪ್ರವರಕ್ಷಮೆ ಮಾರ್ದವ ಮಾ |
ರ್ಜವಂ ಮಹತ್ಸತ್ಯ ಮುಚಿತಶೌಚಂ ಯಮ ಮಾ ||
ಸವಿಶೇಷ ತಪಸ್ತ್ಯಾಗಂ |
ವಿವಿಧಾ ಕಿಂಚಿನ್ಯ ಮುಪಗತ ಸ್ತ್ರೀಸಂಗಂ || ೫೧ ||

ಪಂಚಶೀವೃತ್ತಂ|| ಸಜಿವ ನುಡಿವಾಹಾರಂ ಗೊಳ್ವೆಯ್ದಿ ಕೊಳ್ವಿಡುವಯ್ದು ಮೊ |
ಳ್ನಡಕವೆ ಸಮಿತ್ಯಾಖ್ಯಂ ಚೇತೋವಚಸ್ತನು ಗುಪ್ತಿ ಮೂ ||
ಱೊಡಲಡಿಗೆ ವರ್ಪನ್ನಂ ಬೇಱ್ಕುಂ ಮುಮುಕ್ಷು ಗಿದೆಂದೊಡಂ |
ಬಡು ಜಿನವಚಸ್ತಂಭಂ ಸಂಬಭ್ರಗಾಮಿ ಶಿಖಾಮಣೀ || ೫೨ ||

ಕಂ|| ಅಕ್ಷಾಂತಿ ಲೋಭ ಹಾಸ್ಯ ಭ |
ಯಕ್ಷಯ ಸೂತ್ರಾನುಭಾಷಣಾ ನಿಯಮ ಮಿವ ||
ಯ್ದುಕ್ಷೂಣ ಸತ್ಯಮಱದು ಪ |
ರೀಕ್ಷಿಸಿ ಕೇಳ್ ಮುನಿಗೆ ಗಗನಚರಕುಲತಿಲಕಾ || ೫೩ ||
ಯುವತಿಕಥಾಲೋಕನ ಭೂ |
ತವಿಭವ ಚಿಂತಾಂಗ ಸಂಸ್ಕೃತಂ ವೃಷ್ಯರಸಾ ||
ಭ್ಯವಹಾರತ್ಯಜನಂ ಪಂ |
ಚವಿಧಂ ಬ್ರಹ್ಮವ್ರತಂ ಜಿನೇಶ್ವರ ಮತದೊಳ್ || ೫೪ ||

ವ|| ಮತ್ತಮದು ಬಾವರ ರೂಪದಿಂ ತ್ರಿವಿಧಂ:—

ಕಂ|| ಜನನಿ ಸುತೆ ಭಗಿನಿ ವಯಸದೊ |
ಳಿನಗಧಿಕೆಯು ಮೂನೆಯುಂ ಸಮಾನೆಯು ಮೆಂದಂ ||
ಗನೆಯ ನವಲೋಕಿಸುವುದೆನೆ |
ಮನೋಹರಂ ಬ್ರಹ್ಮಚರ್ಯ ಮಾರ್ಯ ಪ್ರಣುತಂ || ೫೫ ||

ಕಂ|| ಬಯಸುವ ಬಯಸಿದ ಪಂಚೇಂ |
ದ್ರಿಯ ವಿಷಯಂಗಳ ನತಿಪ್ರಿಯಂ ಸಂತತಮ |
ಪ್ರಿಯ ಮೆಂಬಿವ ನುೞದ ತಪೋ |
ನಿಯಮಂ ನಿಷ್ಕಿಂಚಿನತ್ವ ಮರ್ಹನ್ಮತದೊಳ್ || ೫೬ ||

**ವ||** ಎಂದು ದೇಶಸಕಲ ಪ್ರವರಗುಣಸ್ಥಾನ ವ್ರತರೂಪಮುಂ ಸಂಕ್ಷೇಪದೊಳ್ ವಿಜಯ ಕೇವಳಿ ಬೆಸಸುವುದುಂ ವಿಬುಧವನಜ ವನಹಂಸ ನೇಕಾದಶ ವಿಧಶ್ರಾವಕ ವ್ರತಮೆಲ್ಲಮುಂ ಹೃದಯಂಗಮಾಧಿಕ ಸಮ್ಯಗ್ದರ್ಶನ ಪುರಸ್ಸರಂ ತನಗಲಂಕಾರಂ ಮಾಡಿ:—

ಕಂ|| ಕ್ಷಪಿತ ದುರಿತನ ವಚಃ ಕ |
ರ್ಣ ಪೂರಮುಂ ಶ್ರವಣ ನಿಕಟದೊಳ್ತಾಳ್ದಿ ಪರಂ ||
ತಪ ನಾಜಿನಚಂದ್ರಂ ಜೈ |
ನ ಪಾದನತ ಮಕುಟ ವರ್ತಿಯುಂ ಬಿನ್ನವಿಕುಂ || ೫೭ ||

ಮದನುಜೆಯೊಳಶನಿ ಘೋಷಂ |
ಗದೇಕೆ ಪಿಱಿದಾಗ್ರಹಂ ಕಟಿಲ್ವೇೞ್ದುವದಂ ||
ತ್ರಿದಶೇಂದ್ರ ವಂದ್ಯ ಬೆಸನೆನೆ |
ಪೊದಟ್ದುದರ್ಹನ್ಮುಖೇಂದು ದಿವ್ಯನಿನಾದಂ || ೫೮ ||

ಸ್ರ|| ನಾನಾಭಾಷಾತ್ಮಕಂ ಮಾನವ ದಿವಿಜ ಸದಃಕರ್ಣಪಾತ್ರಕ್ಕೆ ತದ್ವಿ |
ಜ್ಞಾನಂ ತಂತಮ್ಮ ಭಾಷಾರವದಿ ನೆಸೆಯೆ ಪೊಣ್ಮಿತ್ತು ದಿವ್ಯಧ್ವನಿ ಪ್ರಾ ||
ದಾನಂ ಪೇೞ್ದಂ ಜಿನಂ ಕೇಳ್ದೊರಖಿಳ ವಿನೇಯಾರ್ಥಿಗಳ್ ತತ್ಕಥಾ ಸಂ |
ತಾನಂ ಧರ್ಮಶ್ರವಃಸುಂದರ ಮೆನೆ ಪೆಱದೇವಣ್ಣಿಪೊಂ ಬಣ್ಣಿಪಣ್ಣಂ || ೫೯ ||

**ವ||** ಎಂಬ ಪೆಂಪು ದೊರೆವೆತ್ತು ಕಥಾರಸ ಮತಿಶಯಮುಂ ಪೊಂಪುೞಿಯೋೞಿಯು ಮಾಗೆ ವಿಜಯ ಕೇವಳಿಗಳಿಂತೆಂದು ಬೆಸಸಿದರೀ ಜಂಬೂದ್ರುಮೋಪಲಕ್ಷಿತದ್ವೀಪದ ದಕ್ಷಿಣಭರತದ ಮಳಯ ವಿಷಯದ ರತ್ನಪುರಮುಂ **ಶ್ರೀಷೇಣ**ನೆಂಬ ನರಸ ನಾಳ್ವೊ ನಾತಂಗೆ:—

ಚಂ|| ಸೊಗಯಿಸೆ ಸಿಂಹನಂದೆಯುಮನಿಂದಿತೆಯುಂ ತನುಜನ್ಮ ಜನ್ಮಭೂ |
ಮಿಗಳವಱಿಂದಮಾಮಹಿಭುಜಂ ಕರಮೊಪ್ಪಿದನೈಂದ್ರ ಪಾರುಣಾ ||
ದಿಗಳನತೀವ ರಕ್ತ ನಿನ ನಗ್ಗಳ ಮೊಪ್ಪುವಪೋಲಧೀಶನಾ |
ಕೆಗಳೊಳಪತ್ಯರಂ ಪಡೆದ ನಿರ್ವರ ನಿಂದ್ರ ಸುಪೇಂದ್ರನೆಂಬರಂ || ೬೦ ||

ಕಂ|| ಆ ಭೂಪನ ಭುಜಯುಗಬಲ |
ವೈಭವಮೆ ತನೂಜಯುಗಳ ಮಾದುದು ವಿದ್ಯಾ ||
ಪ್ರಾಭವದಿನೆಸೆದು ಯೌವನ |
ಶೋಭೆ ಗಡಪರ್ದರೆನಿಸಿದರ್ ಪ್ರಿಯತನಯರ್ || ೬೧ ||

**ವ||** ಎನಿಸಿ ಭವ್ಯತಾಗುಣಮಣಿ ಜನ್ಮಸ್ಥಾನಮಾಗಿ ವಿಜಿತಾಹಿತನರೇಂದ್ರಾತ್ಮೀಚ್ಛಾ ಸೇನಾ ಪರಿಚ್ಛದರಪ್ಪರವರವರಿರ್ವರೊಳಂ ಕೃತದಾರಪರಿಗ್ರಹನಿಂದ್ರಂ ಯುವರಾಜ್ಯಪದದೊಳ್ ನಿಂದು ತನ್ನ **ಶ್ರೀಮತಿ**ಯೆಂಬರಸಿಯೊಳ್ ಕಳಾಭಿನೂತ ಚಂದ್ರಪ್ರತಿಚ್ಛಂದಂ ಚಂದ್ರನೆಂಬೊಂ ಮಗನಂ ಪಡೆದು ಸಂತಸದಿಂದಿರ್ಪಿನಂ ಆದಿರಾಜ ಪರಂಪರಾ ಪುತ್ರ ಪೌತ್ರನಕಳಂಕಾಚಾರಸಾರಂ ಸುಖದೊಳರಸುಗೆಯ್ಯೆ ಮತ್ತೊಂದು ದಿವಸದೊಳೊರ್ವಳ್:—

ಉ|| ಸುಂದರಿ ಸಾಧ್ವಸಾಕುಳೆ ಸಭಾಂತರಮಂ ಪುಗುತಂದು ರಕ್ಷ ರ |
ಕ್ಷೆಂದು ನೃಪಂಗೆ ಪುಯ್ಯಲಿಡುತುಂ ನಿಲೆ ಭೂಪ "ನಭೂತಪೂರ್ವ ಮಾ ||
ಕ್ರಂದನಮೆಂದು ಮೆನ್ನರಸಿನೊಳ್ ನಗೆಯೊಳ್ ಮೊದಲಾಗೆ ಕೇಳಲಾ |
ಗಿಂದಿದು ಚೋದ್ಯ" ಮೆಂದು ಸಿರದಿರ್ದನಿಸಂ ಖುತಭಂಗಶಂಕೆಯಿಂ || ೬೨ ||

**ವ||** ಬಳಿಕ ಮಾಕೆಯಂ ನಿನಗಿನಿವಿಱಿದು ಭಯಾವೇಶ ಮಾರದೆಸೆಯಿಂದ ಮಾದುದೆಂದರಸಂ ಬೆಸಗೊಳ್ವುದು ಮಾಬಾಲಿಕೆ ಗದ್ಗದಕಂಠೆ ವಾಮಕರಪಲ್ಲವಾಂಗುಳಿ ನಯಾಕ್ಷಿಪ್ತಾಶ್ರುಸ್ರಪೆ ದಕ್ಷಿಣ ಹಸ್ತಾಚ್ಛಾದ್ಯಮಾನ ಸ್ತನಾಂಶುಕೆಯಾಗಿ ಬಿನ್ನವಿಕುಂ. ನಿನ್ನ ಪುರೋಹಿತಂ **ಸತ್ಯಕಿ**ಗಂ **ಜಂಬೂವತಿ**ಗಂ ಪುಟ್ಟಿದೆನಾಂ **ಸತ್ಯಭಾಮೆ**ಯೆಂಬೆನೆನ್ನಂ **ಕಪಿಳ**ನೆಂಬೊಂಗೆ ಕೊಟ್ಟರ್. ಕೆಲಕಾಲಕ್ಕಾತನ ದುರಾಚರಣಕ್ಕಾಂ ಕೊಕ್ಕರಿಸುತ್ತಿರೆ ತದೀಯ ಜನಕ ನೆಮ್ಮ ಮನೆಗೆ ಬಿರ್ದುವಂದನಂ ಸನ್ಮಾನ ದಾನಾದಿಗಳೊಳ್ ಸಂತಸಂ ಬಡಿಸಿ ಮನಂ ಗೊಂಡೊಳಪೊಕ್ಕು ಬೆಸಗೊಳ್ವುದು ಮಾಮಹಾನುಭಾವ ನಿಂತೆಂದಂ:—ಮಗಧ ವಿಷಯದ ಚಲಗ್ರಾಮದೊಳ್ **ಧರಣೀಜಟ**ನೆಂಬೆ ನಾನೆನ್ನ ಪಾರ್ವಂತಿ ಯಶೋಭದ್ರೆಯೆಂಬಳೆನಗ ಮಾಕೆಗಂ **ಶ್ರೀಭೂತಿಯುಂ ನಂದನಭೂತಿ**ಯು ಮೆಂಬ ರಿರ್ವರ್ ಕೂಸುಗಳೊಳರಾಗೆನ್ನ ಗೃಹದಾಸಿಯ ನೊಳಗಿಟ್ಟಲ್ಲಿ ಪುಟ್ಟಿದನಿವಂ ಕಪಿಲನೆಂಬೊನೇಕ ಸಂಧಿ ಯಪ್ಪುದಱಿಂ ನಾನುಂ ಮತ್ತಿನ:—

ಕಂ|| ಮತ್ತನಯರ್ಕಳ ನೋದಿಸೆ |
ಮತ್ತಿವ ನಕ್ಲೇಶದಿಂ ಶ್ರುತಿ ಸ್ಮೃತಿ ಶಾಸ್ತ್ರೀ ||
ಪಾತ್ರಮುಖನಾಗೆ ಜಡರ |
ಸ್ಮತ್ತನುಜರ್ ಕಲ್ಲದಿರೆ ತದಂಬಿಕೆ ಮುಳಿಸಿಂ || ೬೩ ||

ತೊಟ್ಟಿನ ಮಗನಧ್ಯಯನಮೆ |
ಬಾಟಿತ್ತು ಮದಾತ್ಮಜರ ಬುದ್ಧಿಯುಂ ವೃದ್ಧಿಯುಮೇಂ ||
ಬಾಟಿತ್ತು ನಿನಗೆಂದಬಿಲ್ದಳ್ |
ತಟ್ಟಿರೆ ಸತಿ ಸುಮತಿ ಕುಮತಿ ಖೇದಾಂಧತೆಯಿಂ || ೬೪ ||

**ವ||** ಮೆಲ್ಲನಾಕಾಂತೆಯನಧ್ಯಯನದೊಳ್ ಪ್ರತಿಬೋಧಿಸಲ್ ಬಂದಾಂ ನಿನ್ನ ಮಗಂದಿರ ನೋದಿಸುವಲ್ಲಿಗೊಡನೊಡನೆ ಬಂದಿವಂ ಕುಶಾಗ್ರಮತಿ ಕಲ್ತುಂ ಮತ್ತಮಿವರ್ಕಳೇಗೆಯ್ದುಂ ಕಲಲಾಱ ರೇಗೆಯ್ವೆ ನೆಂದೊಡಾಕೆ ನಿರುತ್ತರೆಯಾಗಿ ಎನ್ನ ದೆಸೆಯ ಮುಳಿಸ ನುಱಿದಂ ದಿಂದಿತ್ತಂಗೆ ನಿಂದು ಪೊತ್ತು ಕಾಯ್ದು ಬೆಸಂಸಿ ನಿರ್ವಂದದಿ ನಟ್ಟೆ ಕಳೆಯೆ ಬಂದನಿದೀತನ ವೃತ್ತಕಮೆಂದು ವಿಪ್ರಂ ಪೋಪುದುಮಾಂ ಚಿಂತಾರ್ಣವಾವಗಾಹದೊಳಿರ್ದೊಡೀ ಪೋದ ರಾತ್ರಿಯೊಳ್ ನಿನ್ನ ನೋಲಗಿಸಿ ಕಪಿಲಂ:—

ಕಂ|| ನಿಚ್ಚಲಿ ಕಾರಿರುಳೊಳ್ ಪೊಱ |
ಪಚ್ಚಮ ನುಟ್ಟಿರ್ದಱುಂಕಿ ಕಕ್ಷದೊಳಾಪಾ ||
ಟಚ್ಚರ ಭಯದಿಂದುಟ್ಟು ಪ |
ಟಚ್ಚರಮಂ ಮನೆಗೆ ವಂದು ನಿಂದಂಗಣದೊಳ್ || ೬೫ ||

**ವ||** ಕವುಂಕುಳಿಗೊಳಿಱುಂಕಿದುಟ್ಟುದುಂ ಮೇಲುದುಮಂ ತೆಗೆದುಟ್ಟುಂ, ಪೋದುದುಂ ಮನೆಯಂ ಪೊಕ್ಕು ವಿದ್ಯಾಪ್ರಭಾವದಿಂ ಮನೆಯೊಳ್ ನಾನದೆಬಂದೆನೆಂದು ನುಡಿಯೆ ಕೇಳ್ದಾಂ ಮನದೊಳ್ ನಾಣ್ಚಿದ ನನೆಯದ ನಿನಗೆ ನಾಂಬುದುಂ ನನೆವುದು ಮೆತ್ತಣಿಂ ಬಂದುದೆಂದಿರಲನ್ನವರಂ ಬಲ್ಲಾಳ್ತನ ದೊಳೆನ್ನನನುಭವಿಸಲ್ ಬಂದೊಂ ನೀನುಂ ವರ್ಣಾಶ್ರಮ ಗುರುವಯ್ ಎನ್ನಂ ಕಾವುದೆಂದೆನಲೊಡಂ:

ಕಂ|| ಪರಿಭವಿಸಿ ಕಪಿಲನಂ ಪುರ |
ವರದಿಂ ಕಳೆದಿರಿಸಿ ಸತ್ಯಭಾಮೆಯ ನಂತಃ ||
ಪುರದೊಳ್ ಕಿಱಿಯಱಸಿಯ ಪಿರಿ |
ಯರಸಿಯ ಪಕ್ಕದೆ ತದೀಯರಕ್ಷಣವಿಧಿಯಂ || ೬೬ ||

**ವ||** ಒಂದು ದಿವಸಂ ಮಧುಸನ್ನಿಭಂ ಮಧುಸಮಯದೊಳ್ ಸೌಧಪುರಾಭ್ಯಂತರದೊಳ್ ಶ್ರೀಷೇಣಮಹೀನಾಥಂ:—

ಕಂ|| ದಾರಿತ ಭೂಭಾಗಂ ವೈ |
ಭಾರಾಚಳಕೇಳಿಗಂಗನಾಸಹಿತಂ ಬಂ ||
ದಾರೂಢ ಭಕ್ತಿ ಕುಲ ನಿ |
ಸ್ತಾರಕ **ನಾದಿತ್ಯಯಶನ** ನನಶನ ಕೃಶನಂ || ೬೭ ||
ಮುನಿಪತಿಯಂ ಕಂಡು ಮನೋ |
ಜನಿಭಂ ಸಾಷ್ಟಾಂಗವೆಱಗಿ ಪೊಡವಟ್ಟು ಯತೀಂ ||
ದ್ರನ ಪಕ್ಕದೆ ಧರ್ಮವ ನಾ |
ಜಿನಚಂದ್ರಂ ಕೇಳ್ದು ತಾಳ್ದಿ ಮನದುಪಶಮಮುಂ || ೬೮ ||

**ವ||** ಅಂತಾದಿತ್ಯಯಶೋಮುನೀಂದ್ರರ ಪಕ್ಕದೆ ಧರ್ಮಮಂ ಕೇಳ್ದು ವ್ರತರಕ್ಷಣ ಕ್ಷಮ ನಪ್ಪುದಱಿಂ ಜಿನಚಂದ್ರಂ ದಾನಧರ್ಮಾದಿಗಳೊಳ್ ಪೊರೆದು ಮುನಿಚರಣಯುಗಳಕ್ಕೆಱಗಿ ದ್ರವ್ಯ ಭಾವಾರ್ಚನೆಗಳಿಂದ ಮರ್ಚಿಸಿ ಗೃಹೀತಧರ್ಮನುಂ ನಿಗ್ರಹೀತಾಶೇಷದೋಷನು ಮಾಗಿ ನಿಜರಾಜ ಧಾನಿಗೆ ವಂದು:—

ಕಂ|| ವಸುಧೆಯ ನೇಕಾಯತ ಮಾ |
ನಸ ನಱಿವಿಂ ನೆಱಿದು ರಾಜಧರ್ಮದಿ ನಭಿರ ||
ಕ್ಷಿಸೆ ಪೋಯ್ತು ಕಾಲ ಮಾದುದು |
ಬಸನಂ ಮಹಿಪತಿಗೆ ಪಾತ್ರದಾನೋನ್ನತಿಯಾ || ೬೯ ||

**ವ||** ಅಂತನೂನ ಪಾತ್ರದಾನಾಧೀನಮಾನಸಂ ಸಮ್ಯಗ್ದರ್ಶನವ್ರತಾಚರಣಾ ವ್ರತೋಪೇತಂ ದೀನಜನತಾಕಲ್ಪಾಂಘ್ರಿಪಂ ಶ್ರೀಯಂ ನಿರಾಕುಳಮನುಭವಿಸುತ್ತುಮಿರ್ದು ಮತ್ತೊಂದುಪುಣ್ಯದಿನ ದೊಳನಾರಸಮಯದೊಳ್ ದ್ವಾರಾಪೇಕ್ಷೆಯೊಳಿರ:—

ಚಂ|| ಹಿಮಕರನಂತೆ ಸತ್ಪಥಸಚಂಕ್ರಮಣರ್ ನಭದಂತೆ ವೀತಸಂ |
ಗಮ ರುದಭಾರದಂತೆ ಸಕಳಾಶಯಹಾರಿಗ ಳರ್ಕನಂತೆ ದು ||
ರ್ದಮತಿಮಿರಪ್ರಭೇದ ರವನೀಧರದಂತಚಲರ್ ಸಮುದ್ರದಂ |
ತಮಿತಗಭೀರ ರಾಕೃತಿಯುತರ್ ಮುನಿನಾಯಕ ರಿರ್ವರುರ್ವಿಯೊಳ್ || ೭೦ ||

ವ|| ಈರ್ಯಾಮಾರ್ಗಪರ್ಯಾವಲೋಕನ ಮಂದ ಮಂದಗಮನನಿರತ ರವಧಿಬೋಧಾವಭೂತ ರೂಪದರ್ಶನಕ್ಷಪಿತಸಂದೇಹಸಂದೋಹರ್ ಚಾರಣಗುಣಮಣಿ ಭೂಷಣ ಮಂಜರೀ ರೋಚಿಃಕರಂಬಿತ ಚರಣ ಸರಸೀರುಹರಾದಿತ್ಯಗತಿಗಳು ಮಮಿತಗತಿಗಳುಮೆಂಬ ದಿಬ್ಯತಪೋಧನರಂಬರಮಾರ್ಗದಿ ನವನಿಗವತರಿಸಿ ರಾಜಮಾರ್ಗದೊಳಗನೆ ಮಾಸೋಪವಾಸಪಾರಣೆಯೊಳರಮನೆಗೆ ಚರಿಗೆ ವರ್ಪುದುಂ ಪ್ರಾಪೇಭಕಂಠೀರವಂ ಕಂಡು:—

ಕಂ|| ಅಭಿಗಮನಾಂಘ್ರಿಪ್ರಕ್ಷಾಳನ |
ಶುಭಾಸನಾರ್ಚಾ ಪ್ರಣಾಮಕರಣಾಹಾರ ||
ವ್ಯಭಿಚಾರಶುದ್ಧಿ ನವ ಭೇ |
ದಭೂತ ಪುಣ್ಯೈಕ ಪಣ್ಯನಿಧಿ ನಿಱಿಸುವುದುಂ || ೭೧ ||

ವ|| ತನ್ಮುನೀಶ್ವರರ್ ನಿಲೆ:—

ಕಂ|| ಬಗೆಯಟ್ಟಿಗೆ ಶಕ್ತಿಗೆ ಭ |
ಕ್ತಿಗೆ ವಿಪುಳಕ್ಷಮೆಗೆ ದಯೆಗೆ ತಿಳಿವಱಿವಿಂಗಾ ||
ವಗ ಮೊದವಿದುದಾರತೆಗಂ |
ಜಗದಧಿಪತಿ ನೆಱೆದು ನಿಱಿಸಿದಂ ಮುನಿವರರಂ || ೭೨ ||

ವ|| ಅಂತುಂ ತನ್ನಿರ್ವರಗ್ರಮಹಿಷಿಯರುಂ ದ್ವಿಜತನೂಜೆ ಸತ್ಯಭಾಮೆಯುಂ ಪರ್ಯುಪ್ಪಿಸಕ್ತೆಯರು ಮನುಮೋದಾನುರಕ್ತೆಯರು ಮಾಗಿರೆ ತನ್ನೊಡನೊಡನೆ ಸಮಶುಭಪರಿಣಾಮದೊಳ್ ನೆಗೞೆ ಪರಮ ಪವಿತ್ರೋತ್ತಮ ಪಾತ್ರಕ್ಕೆ ಶ್ರೀಷೇಣಂ:—

ಕಂ|| ಧನ ಮುಚಿತದಾನದೊಳ್ ಜ |
ವ್ವನಂ ತಪೋನಿಯಮದೊಳ್ ಸ್ವಜೀವಂ ಸನ್ಯಾ ||
ಸನದೊಳ್ ಪೋದಂಗೇ ಪೋ |
ಯ್ತೆನೆ ಸುಜನರ್ ನೃಪತಿ ಪಾತ್ರದಾನಮ ನಿತ್ತಂ || ೭೩ ||

ವ|| ಈವುದುಂ ತದನಂತರ ಮಿನ್ನಪ್ಪ ಮಹಿಮಾಶ್ಚರ್ಯಮ ನಱಿಪುವಂತೆ ಪಂಚಾಶ್ಚರ್ಯಂಗಳ್:

ಉ|| ಧ್ವಾನಿತದೇವದುಂದುಭಿರವಂ ಸುರಿತರ್ಪ ದಳನ್ನಮೇರು ಸಂ |
ತಾನಕವೃಷ್ಟಿ ಕೊಳ್ವ ಪೊಸರನ್ನದ ಪೊನ್ನ ಪೊದಟ್ಟ ಸೋನೆ ಮಂ ||
ದಾನಿಳ ನಿಚ್ಚೆ ಬೆರ್ಚೆಯೊಳ ಗಚ್ಚಱಿದಂತಿರೆ ದೇವರಾರ್ವಹೋ |
ಧ್ವಾನ ನಿನಾದ ಮೊಪ್ಪಿದುದು ರಾಜಿತ ರಾಜಗೃಹಾಂತರಾಳದೊಳ್ || ೭೪ ||

ವ|| ಆಶ್ಚರ್ಯಂ ನೆಗೞೆ ಲೋಕಂ ಪೊಗೞೆ ತದ್ಧರಣೀಶ್ವರಂ ಪುಣ್ಯೋಪಾದೇಯ ನಾಗಿರ್ಪಿನಂ ಪಿರಿಯನಪ್ಪಿಂದ್ರನರಸಿ ಶ್ರೀಮತಿಗೆ ಬೞಿವೞಿಯೆ ಬಂದ ವಸಂತಸೇನೆಯ ನೊರ್ಮೊದಲೆ ಕಂಡು:—

ಕಂ|| ನಿಧಿಯಂ ಕಂಡಂ ತೊಳಗಿಡೆ |
ಮದಿರಾಕ್ಷಿಯ ನಿಂದ್ರ ನಿಡಿದ ನನೆಗಣೆಯಿಂ ಶೀ ||
ವಿದ ದೊಣೆಗೆಣೆಯಾಗೆರ್ದೆ ಕೋ |
ಟ್ಟುದಿ ಗೊಳೆ ಸೈರಿಸದುಪೇಂದ್ರ ನವಳೊಳ್ ನೆರೆದಂ || ೭೫ ||

**ವ||** ಅನ್ನೆಗಮವಸರಸ ನಱಿದು:—

ಕಂ|| ಬಾರಿಸೆ ವಾರಿಸೆ ಬಂದು ಮ |
ನೋರಮೆಗಳುಪಿದ ನೃಪೇಂದ್ರ ನತಿರಕ್ತರನಾರ್ ||
ವಾರಿಸುವರ್ ಸಂಧ್ಯಾರಾ |
ಗಾರುಣ ರುಚಿ ವಾರಿಸಲ್ಕೆ ಪರ್ಕುಮೆ ರವಿಯೊಳ್ || ೭೬ ||

**ವ||** ಎಂಬೀ ವ್ಯತಿಕರಮ ನಿಂದ್ರ ನಱಿದು:—

ಕಂ|| ಸ್ಮಯಮೆರ್ದೆವುಗೆ ಕಿವಿವುಗೆ ಮ |
ನ್ಯಯೋಕ್ತಿ ಕೊಲೆಗೆಯ್ದು ತನ್ನ ಬಗೆಯಿಂ ತತ್ಕಾಂ ||
ತೆಯೊಳಳುಪಿ ನೆರೆದೊಡೇಂ ಕ |
ಯ್ಪೆಯುಣ್ಬರಂ ರಸಮೆ ಬಾರಿಕುಂ ಕೆಮ್ಮಸಿರಿಂ || ೭೭ ||
ತಪ್ಪದೆ ಗುರುವಚನಮುಮಂ |
ತಪ್ಪಲ್ ಬಸನಿಗೆ ಮದೀಯ ಕೋಪದ ಪದನೇಂ ||
ತಪ್ಪಿದುದೆ ಪರಕಳತ್ರಮ |
ನಪ್ಪಿದುರಂ ಬೆರಸು ಖಳನ ತಲೆಯಂ ಕೊಳ್ವೆಂ || ೭೮ ||
ಇಟ್ಟವ ನಿಟ್ಟಗಳಿನ್ನಂ |
ನಟ್ಟೊಡ ಮೆನ್ನಿಟ್ಟ ಶಂಕು ಸಂಕುಲ ಮವನಂ ||
ನಟ್ಟೊಡ ಮಿಭರದ ಮಿಭಮಂ |
ನಟ್ಟೊಡ ಮೆನ್ನವನ ಮುಳಿಸನಱಿಯಲ್ಕಕ್ಕುಂ || ೭೯ ||
ಒಡವುಟ್ಟಿದ ನರಸಿಯ ನೆಂ |
ನೊಡವುಟ್ಟಿದ ರೆನ್ನದಬ್ಬೆಯುಂವತ್ತಿಗೆ ಯುಂ ||
ದೊಡೆ ನಾಲಗೆಯಾತನ ತಲೆ |
ಸಿಡಿಲ್ದು ಪಾಱಿಟ್ಟು ಮೆನ್ನ ಪಾಱುಂಬಳಿಯೊಳ್ || ೮೦ ||
ಒಡಲ ವಡವಡಪ್ಪಿನ ಮೆ |
ಲ್ವಡಗಪ್ಪಿನ ಮಲಸದಾಯ್ದು ಸುಡುವಿನ ಮಿಭದೊ ||
ಳ್ಪಡಗುಮ ಸಡುಗುಮೆ ರತಿಯ |
ಗ್ಗಡಗೊಲ್ವಪ್ಪಿನ ಮಿಘೇಂದ್ರದಿಂ ತುಳಿಯಿಸುವೆಂ || ೮೧ ||

**ವ||** ಎಂದಿಂದ್ರಂ ಮೃಗೇಂದ್ರನಂತೆ ಗರ್ಜಿಸಿ ಚತುರಂಗಬಲಸಮೇತಂ ಪೊಱಮಟ್ಟು ಬೂತಟ್ಟೆ ದೊಡ್ಡು ನೃಪೇಂದ್ರನುಮಿದಿರಿದಿರಂ ಗಱಿವಱಿಯ ಪಾವು ಬರ್ಪಂತೆ ಬಂದು ತಾಗುವುದುಂ:—

ಕಂ|| ಉಭಯಾಬ್ಧಿ ರವದಿ ನಿಭಘಟೆ |
ಯಿಭಘಟೆಯೊಳ್ ಕುದುರೆ ಕುದುರೆಯೊಳ್ ತೇರ್ ತೇರೊಳ್ ||
ಸುಭಟರ್ ಸುಭಟರೊಳುಱದಿಱಿ |
ದುಭಯಬಲಂ ಪೊಟ್ಟನಾದೊಡಿಂದ್ರ ನೃಪೇಂದ್ರಂ || ೮೨ ||

**ವ||** **ಮೂಗುರ್ಚಿದೆಮ್ಮೆ ವೋರಿಯುಂ,** ಪೆಱಮುಟ್ಟದ ತಗರುಂ ತಾಗುವಂತೆ ತಂತಮ್ಮೊಳಿದಾನೆಗಳಂ ಸೂಂಕಿ **ಚಕ್ರಾಚಕ್ರಿ**ಯುಂ ಖಟ್ಗಾಖಟ್ಗಿಯು ಮಾಗೆಯುಂ ಪೆಣದಿಱುವ ಪವದೊಳ್:—

ಕಂ|| ಕಡುಗರ್ಪಿಡಿದೆರಡಬ್ಬದ |
ನಡುವೆ ಬೆಡಂಗಿಡಿದು ತೊಳಗಿ ಪೊಳೆವಳಪಿಂಚೊಂ ||
ದೆಡೆವುಗುವ ತೆಱದಿ ನೆರಡಿಭ |
ದೆಡೆವುಗೆ ಮಣಿಕುಂಡಲಾಭಿಧಾನಂ ಬಚರಂ || ೮೩ ||

**ವ||** ಇಂದ್ರನುಮುಪೇಂದ್ರನುಂ ನೋಡಿ:—

ಕಂ|| ಎಡೆವುಗುವುದು ಮಾನೆಯ ನಡೆ |
ಯೆಡೆಯಿಂ ದಳವಡಿಸಿ ನಿಜಾಸ ಮಣಿಕುಂಡಲನೇಂ ||
ಜಡರಿರೊ ವಸಂತಸೇನೆ ದ |
ಲೊಡವುಟ್ಟಿದ ಳಕ್ಕು ಮಿಱುವ ನಿನಗಂ ತನಗಂ || ೮೪ ||

ವ|| ಎಂತೆನೆ:—ಧಾತಕೀಷಂಡದ ಮೂಡಣಮಂದರದ ಪೂರ್ವವಿದೇಹದ ಸೀತಾನದಿಯ ಬಡಗಣ ತಡಿಯ ಪುಷ್ಕಳಾವತೀ ವಿಷಯದ ವಿಜಯಾರ್ಧ ಪರ್ವತದ ದಕ್ಷಿಣಶ್ರೇಣಿಯೊಳಾದಿತ್ಯಪುರಮನಾಳ್ವ **ಸುಕುಂಡಲಂ**ಗ, **ಮಮಿತೆಗಂ** ಸೀತಾನದಿಯ ಬಡಗಣತಡಿಯ ಪುಷ್ಕಳಾವತೀ ವಿಷಯದ ಪುಂಡರೀಕಿಣಿಯ:—

ಕಂ|| ಕುಸುಮಿತ ಬಹಿರುಪವನ ಭೂ |
ಪ್ರಸರದೊಳಿರ್ದಮಿತ ಕೀರ್ತಿ ಕೇವಳಿಯುಂ ಬಂ ||
ದಿಸಿ ಮಧ್ವ ವ ಪದ್ಧತಿಯಂ |
ಬೆಸಗೊಳೆ ಬೆಸಸಿದ ನಘಾರಿ ದಿವ್ಯಧ್ವನಿಯಿಂ || ೮೫ ||

**ವ||** ನೀ ನತೀತಭವದೊಳ್ ಉಪಾರ್ಜಿತೋರ್ಜಿತಪುಣ್ಯನೆಯಾಗಿ ಸೌಧರ್ಮ ಕಲ್ಪದೊಳ್ ದೇವನಾದೈ, ನಿನ್ನ ಮೂವರ್ಮಗಳ್ದಿರೊಳ ಗಿರ್ವರಲ್ಲಿಯೆ ದಿವಿಜರಾದರ್, ಒರ್ವಳನಂಗರಾಗರಸ ರಸಿಕತೆಯಿಂದ ಮಪ್ಸರಃಸಮುದಯದೊಳಮರವಾರವನಿತೆಯಾದಳ್, ಎಂದು ಕೇವಳಲೋಚನಂ ಬೆಸಸುವುದುಂ ಎನಗಾಮೂವರುಂ ಮಗಳ್ದಿರಾದಂದಮುಮಂ ನಾನಾಭವದಿಂದ ಮತ್ತಣಭವದೊಳೆಲ್ಲಿ ಪುಟ್ಟಬಂದೆ ನೆಂಬುದಮಂ ಬೆಸಸುವುದೆ [ನೆ] ಸೌಧರ್ಮಕಲ್ಪ ಸಮುತ್ಪತ್ತಿವರ ಮಲ್ಲಿಂದತ್ತಣ ಭವ ಪ್ರಾದುರ್ಭಾವಮುಮಂ, ಭವಾವನೀರುಹವಿದಾರಕುಠಾರಂ ಬೆಸಸಿದಂ. ಪುಷ್ಕರವರದ್ವೀಪದ ಪಡುವಣ ಮಂದರದ ಅಪರ ವಿದೇಹದ ಸೀತಾನದಿಯ ತೆಂಕಣ ತಡಿಯ ಸರಿದ್ವರ ವಿಷಯದ **ವೀತಶೋಕ**ಪುರಮನಾಳ್ದಂ **ಚಕ್ರಧರ**ನೆಂಬೊಂ ಸಕಲ ಚಕ್ರವರ್ತಿ, ತದಗ್ರಕಾಂತೆಯರ್ **ವಿದ್ಯುನ್ಮತಿಯುಂ ಕನಕಶ್ರೀಯು**ಮೆಂಬವರೊಳಗೆ ವಿದ್ಯುನ್ಮತಿಗೆ **ಪದ್ಮಾವತಿ**ಯೆಂಬಳ್ ಮಗಳ್, ಮತ್ತಿನ ಕನಕಶ್ರೀಗಂ **ಪದ್ಮಲತೆ**ಯುಂ, **ಕನಕಲತೆ**ಯುಮೆಂಬ ಮಗಳ್ದಿರಾಗಿ:—

ಉ|| ದಂಡಿತವೈರಿ ಚಕ್ರಧರನೆಂಬ ನೆಗಟ್ಟಿಯ ಚಕ್ರವರ್ತಿಷ |
ಟ್ಖಂಡಮು ನೇಕಭೋಗ್ಯಮ ನನಾಕುಳಮಾಳೆ ಜಿನಾಗಿಮೋಕ್ತಿ ಕೆ ||
ಯ್ಕೊಂಡಿರೆ ಚಿತ್ತಮಂ ಸುತೆಯರುಂ ನೃಪಕಾಂತೆಯರುಂ ವ್ರತಂಗಳಂ |
ಕೊಂಡೊರೊಡರ್ಚೆ ಸುವ್ರತ ತಪೋಧನೆ ತಮ್ಮ ನಣುವ್ರತಂಗಳಂ || ೮೬ ||

**ವ||** ಅಂತು ನೃಪನಗ್ರಮಹಿಷಿಯರಿರ್ವರುಂ ಮಗಳ್ದಿರ್ ಮೂವರುಂ ಶ್ರಾವಕವ್ರತಂಗಳಂ ಕೆಯ್ಕೊಂಡರಲ್ಲಿ ಕನಕಶ್ರೀಯುಂ ಕನಕಲತೆಯುಂ ಪದ್ಮಲತೆಯುಂ ಸಮ್ಯಗ್ದರ್ಶನಮನಸ್ಖಳಿತ ಮಾರಾಧಿಸಿ ನಿಜಾಯುರವಸಾನದೊಳ್ ಸಮಾಧಿವಡೆದು ಮುಡಿಪಿ ಸೌಧರ್ಮಕಲ್ಪದೊಳ್ ಸಾಮಾನಿಕ ದೇವರಾದೊರ್, ಆ ವಿದ್ಯುನ್ಮತಿಯುಂ ಪದ್ಮಾವತಿಯುಂ,ಸುದರ್ಶನೋತ್ತರ ಮಪ್ಪುಪಾಸಕ ವ್ರತೋಪಪನ್ನೆಯಪ್ಪುದಱಿಂ ಪದ್ಮಾವತಿ ಮೊದಲ ನಾಕದೊಳಚ್ಚರಸಿಯಾದಳ್, ಆ ಕನಕಶ್ರೀಯು ನೀಂ ಬಂದಿಲ್ಲಿಯೆ ನೀಂ ಮಣಿಕುಂಡಳನಾದೆಯೆಂಬುದು ಮೆನ್ನ ಮೂವರ್ ಮಕ್ಕಳುಮಿಲ್ಲಿ ಪುಟ್ಟಿದರೆಂಬುದಂ ಎನಗೆ ಬೆಸಸುವುದೆನೆ:—ಜಂಬೂದ್ವೀಪದ ದಕ್ಷಿಣಭರತದ ಮಳಯದೇಶದ ರತ್ನಪುರಮನಾಳ್ವೊಂ ಶ್ರೀಷೇಣನರಸಿಯಪ್ಪ ಸಿಂಹನಂದಿಗ ಮನಿಂದಿತೆಗಂ ಕನಕಲತೆಯಪ್ಪಂದಿನ ದಿವಿಜನು ಮೀಪದ್ಮಲತೆಯಪ್ಪ ದೇವನು ಮಿಂದ್ರನು ಮುಪೇಂದ್ರನು ಮೆಂಬ ಮಕ್ಕಳಾದ ರಿನ್ನಾ ಪದ್ಮಾವತಿಯೆಂಬಚ್ಚರಸಿಯು ತತ್ಪುರದೊಳ್ ವಸಂತಸೇನೆಯೆಂಬ ಪಣ್ಯಾಂಗನೆಯಾಗಿರೆ ತದೀಯಾಗ್ರ ಹಸ್ತ ಗ್ರಹ ಗ್ರಹ ಗ್ರಸ್ತ ರಿಂದ್ರನು ಮುಪೇಂದ್ರನು ಮೀಗಳ್ ಕಾದಿದಪರೆಂಬುದಂ ಬೆಸಸಿದ ಜನೇಂದ್ರ ಪಾದಾರವಿಂದಂಗಳ್ಗೆಱಗಿ ಸ್ನೇಹ ಪಾಶಪಾಶಿತನೆನಾಗಿ ನಿಮ್ಮಜ್ಞಾನ ವಿಳಸನಮಂ ಬಾರಿಸಲ್ ಬಂದೆನಲ್ಲದೆಯುಂ:—

ಮ|| ಸ್ರ|| ಮಗಳಕ್ಕುಂ ತಂಗೆ ತಾಯ್ಕ್ಕಾದಿನಿ ಸೊಸೆ ಮದವಳಜ್ಜ ಮುತ್ತಜ್ಜಿ ಮುತ್ತ |
ತ್ತಿಗೆ ಕೂಸಿತ್ತೆತ್ತೆಯೆಂಬೀ ನೂರೆಯ ವನಿತೆಯರ್ ಜನ್ಮ ಜನ್ಮಂಗಳೊಳ್ ತಾ ||
ಮೆ ಗಡಂ ಬೇಱಾಗಿ ಪುಟ್ಟಿರ್ದನುಭವಿಸುವರೆಂದಂದೆ ಸಂಸಾರದೊಳ್ ಪೇ |
ಸುಗೆ ಗೆಟ್ಟೇ ನಾಣಪುತ್ತಪ್ಪಱಿಜಗಳದೊಳೇನಮ್ಮ ತಕ್ಕೊಮರ್ಯಾಯುಂಟೇ || ೮೭ ||

ಕಂ|| ಎಂಬಿನಿತನಾತ ನಱಿಪಲೊ |
ಡಂ ಬಿಲ್ಲುಂ ಬೆಱಗುಮಾಗಿ ತಮ್ಮ ಮನಂ ಕ ||
ಯ್ಯಂಬೇಱನಧಟು ಮಸ್ತ್ರಕ |
ದಂಬಕಮುಂ ಸೋರೆ ತಮ್ಮುತಿರ್ವರುಮಾಗಳ್ || ೮೮ ||

ಗೞಗೞ ಸುರಿವಶ್ರುವ ಕೊರ |
ಲಿಱಿವಿಗ ಮಗಿಮುಟ್ಟಿ ವಟ್ಟಿ ಮೊೞಗಿಂಗಂ ಪೂಂ ||
ಪುಱಿಯೆನಿಸಿದಾತ್ಮನಿಂದೆ ಗ |
ಮೞಲ್ಗ ಮಿಂದ್ರನು ಮುಪೇಂದ್ರನುಂ ಪದನಾದರ್ || ೮೯ ||

**ವ||** ಆಗಿ:—

ಕಂ|| ಆಭವದೊಳ್ ತಾಯಾಗಿಯು |
ಮೀಭವದೊಳ್ ತಂದೆಯಾಗಿಯುಂ ನೀಂ ನೆಮ್ಮಾ ||
ರಾಭವಿಕವೃತ್ತಿಯುಂ ವಾ |
ಗ್ವೈಭವದಿಂ ಕಳೆದು ಪೊರೆದೆ ಯೆಮ್ಮನನಿಂದ್ಯಾ || ೯೦ ||

**ವ||** ಅಂತು ಮಲ್ಲದೆಯುಂ ಸೌಜನ್ಯ ಜ್ಞಾನಾಧೀನ ಮಾನಸನೆಯಾಗಿ ನೀನಿಲ್ಲವರಂ ಬಂದೆಮ್ಮಂ ಪ್ರಬೋಧಿಸಿದೆ ಯಲ್ಲದಂದು ಗಭೀರ ಘೋರ ಸಂಸಾರ ಪಾರಾವಾರಪಾತಕ್ಕೆ ಪಕ್ಕಾಗಲೀಯದೊಪ್ಪೊಂ ಕಾಪೊ ನದಱಿಂದ ಮೆಮಗೆ ನೀನೆ ಕಲ್ಯಾಣ ಮಿತ್ರನೈ, ನಿನ್ನಿಂದಗ್ಗಳಮಪ್ಪೊಡ ಮರ್ಹತ್ಪರಮೇಶ್ವರ

ನಲ್ಲದೆ ಪೆಱರಿಲ್ಲೆಂದಷ್ಟಾಂಗವೆರಸಿ ಪೊಡವಟ್ಟು ಖಚರೇಶ್ವರನಂ ವಿಸರ್ಜಿಸಿ ಸಕಲಕರ್ಮನಿರ್ಜರಾ ಕರಣ ಕಾರಣ ನಿರಂಜನ ದೀಕ್ಷೆಯಂ ಸುಧರ್ಮಮುನಿನಾಥ ಪಾದಪದ್ಮೋಪಕಂಠದೊಳಿಂದ್ರೋಪೇಂದ್ರರ್ ತಾಳ್ದಲೊಡಂ:—

ಕಂ|| ಬೇಗಂ ಜಿನಚಂದ್ರನ ಪೊಗ |
ರಾಗಂ ಬೇಸಗೆಯ ಬಿಸಿಲೊಳಟೞವ ಹರಿದ್ರಾ ||
ರಾಗದ ತೆಱದಿಂ ತನಯವಿ |
ಯೋಗದಿ ನೊರ್ವೊಡಲೆ ಕಂದಿ ಕುಂದಿದುದಾಗಳ್ || ೯೧ ||

ವ|| ಅಂತು ಪ್ರಿಯಪುತ್ರವಿಯೋಗ ವಿಹ್ವಲೀಭೂತ ಚೇತನೆಯಿಂ ಮೆಯ್ಯಂ ನಿಱುಸಲಾಱದೆಯುಂ ಪರಿಣತವಯಸನಾಗಿಯುಂ ಬಾಳಮರಣಮನೆತ್ತಿಕೊಂಡು:—

ಕಂ|| ನಂಜಿನೊಳೂಡಿದ ಕಂಜಮ |
ನೆಂಜಲಿಸಿದ ಮಧುಪನಂತೆ ವಿಷವಿಷಮುಕನ ||
ಕ್ಕಿಂಜಲ್ಕಮನುತ್ಪಲಮೊಂ |
ದಂ ಜನಪತಿ ಕಂಪುಗೊಂಡು ತೂಂಕಂಗೊಂಡಂ || ೯೨ ||

ಮ|| ವಿಕಚೇಂದೀವರ ಪತ್ರಪಾತ್ರನಟನಂಗೋಪಾಂಗಗಂಭೀರ ಕುಂ |
ಭಕಸಂರೇಚಕ ಪೂರಕಂ ಪರಿಮಳೋನ್ಮಿಶ್ರಂ ವಳದ್ರೋಮ ರೋ ||
ಮಕುಳಂ ನಂಜಿನ ಸುಯ್ಯ ಗಾಳಿ ನೃಪನಂ ಕೊಂದಿಕ್ಕಿತಾರ್ ಕಾವರಂ |
ತಕರಾಜಂ ಬಲಗರ್ವಿತಂ ಮುಳಿದೊಡಂ ತಾಯ್ವಾಲೆ ನಂಜಾದೊಡಂ || ೯೩ ||

ಉ|| ಬಾಯಟೞವಟ್ಟು ಮೆಟ್ಟಿಡುವಡಂಬಿಪ ರಂಡೆತನಕ್ಕೆ ಪೊರ್ದ ಭಿ |
ಪ್ರಾಯಮೆ ಸಿಂಹನಂದೆಗ ಮಸಿಂದಿತೆಗಂ ಮೃಗಕಂತವಾದ ತ ||
ತ್ಸಾಯಕಮುರ್ಚೆ ಪೋಗದೆ ಮೃಗೀಯುಗಳಂ ಮಡಿವಂತೆ ಸತ್ತ ರಾ |
ಘ್ರಾಯಿಸಿ ನೀಲನೀರಜಮ ನಿಷ್ಟವಿಯೋಗಮ ನಾಱೂಸೈರಿಪರ್ || ೯೪ ||

ವ|| ಮತ್ತಂ ಪುರೋಹಿತನ ಮಗಳಪ್ಪ:—

ಕಂ|| ಸತಿ ಸತ್ಯಭಾಮೆ ವಿಕಸಿತ |
ಶತಪತ್ರಪರಾಗ ಮಾತ್ಮನಾಸಾಪುಟ ನಿ ||
ಷ್ಪತಿತಂ ಕೊಳೆ ಮಡಿದಳ್ ಮಹಿ |
ಪತಿಯೊಳ ಮರಸಿಯರೊಳಂ ಪೊದಟ್ಟಿರೆ ನೋಹಂ || ೯೫ ||

ಪಱದೆಳಲಗೆಯುಮ ನಿಭಪತಿ |
ಪಱದ ನವಾಮ್ರಮುಮ ನೆಯ್ದೆ ಪೋಲ್ತುಪು ಜೀವಂ ||
ಪಱಪಟ್ಟು ಪೋಗೆ ತನುವಿಂ |
ಕಱಿಂಗಿ ಕಾಂತಾಶರೀರಮುಂ ನೃಪವಪುವುಂ || ೯೬ ||

ಆದಿತ್ಯವಿರಹದೊಳ ಮು |
ಕ್ಷೋದತಮಂ ಪರ್ವುವಂತೆ ಜಗನುಂ ಜೀವಂ ||
ಪೋದೊಡ ಮದಂಗರುಚಿ ಬೇ |
ಱಾದುದು ನಡೆಜಂತ್ರಮಲ್ತೆ ನರರ ಶರೀರಂ || ೯೭ ||

ವ|| ಆಗಳ್ ಮಂತ್ರಿಪುರೋಹಿತಸೇನಾನಾಯಕಾಂತಃಪುರಾಪರೋಧಜನಂಗಳ್ ಹಾಹಾಕರುಣ ಧ್ವನಿಬಧಿರಿತಾಶಾವಳಯರರಸಂಗಮರಸಿಯರ್ಗಂ ಸತ್ಯಭಾಮೆಗಂ ಶರೀರಪೂಜೆಯಂ ಮಾಡಿ ಕರ್ಪೂರಾ ಗುರು ಮದಾರ್ಕ ಚಂದನ ಹರಿಚಂದನಾದಿ ನಾನಾವಿಧ ಸುರಭಿತರೇಂಧನಂಗಳೊಳ್ ಶರೀರ ಸಂಸ್ಕಾರ ವಿಧಿಯಂ ವಿಧಿಪೂರ್ವಕಂ ನಿರ್ವರ್ತಿಸಿ ರಾಜ್ಯಾರ್ಹನಪ್ಪಿಂದ್ರಸ ಮಗಂ ಚಂದ್ರಸಂ ಧರಾಭಾರಾ ಧುರಂಧರಂ ಮಾಡಿದರಿತ್ತ ಶ್ರೀಷೇಣಂಗ ಮಾಮೂವರು ಮಂಗನೋತ್ತಮೆಯರ್ಗಮುತ್ತಮಪಾತ್ರ ದಾನದ ದಾನಾನುಮೋದದ ಭೂತಪುಣ್ಯದಿಂ ಧಾತಕೀಷಂಡದ ಮೂಡಣ ಮಂದರದುತ್ತರದಿಗ್ಭಾಗ ದೊಳುತ್ತರ ಕುರುವೆಂಬುತ್ತಮ ಭೋಗಭೂಮಿ ಸಮುತ್ಪತ್ತಿಸ್ಥಾನವಾದುದಲ್ಲಿ:—

ಕಂ|| ಮರಕತಮಣಿ ಕುಟ್ಟಿಮ ಮು |
ರ್ವರೆ ಚಂಚತ್ಪಂಚ ರತ್ನ ರುಚಿ ಪೆಳಗು ರಸಂ ||
ಪರಮಾನಂದರಸಂ ಸುರ |
ತರುಗಳ್ ಸವಿಯುರಲ್ ಪುರುಳ್ ಯುರಗಿಳಿಯ ರವಂ || ೯೮ ||

ಏಮಾತೊ ಮೊಱೆದು ಪಾಱುವ |
ಕಾಮಶರಸ್ಥಿತಿಯೊಳಿರ್ಪ ನೆಱೆಗೊಳ್ವೆಡೆಗಂ ||
ಕಾಮಶಿಳೀಮುಖಮಲ್ತೆ ಶಿ |
ಳೀಮುಖ ಮಾರೆಯ್ದೆ ಪೊಗಟ್ಟಿರುತ್ತರ ಕುರುವಂ || ೯೯ ||

ಅಭಿನುತ ಕಲ್ಪ ಮಹೀಜ |
ಪ್ರಭೆಗಳಿನಲ್ಲಿರುಳ ಪಗಲ ರುಚಿ ವಿಷಯ ವಿಭು ||
ಪ್ರಭುತೆಯ ಮನೋಭವನ ಜ |
ನ್ಮಭೂಮಿ ತದ್ಭೋಗಭೂಮಿಭೂಮಿವಿಭಾಗಂ || ೧೦೦ ||

ಅಮರವಿಮಾನಮು ಮಹಿಪತಿ |
ವಿಮಾನಮುಂ ನಾಕನಾಗಲೋಕಂಗಳೊಳು ||
ತ್ತಮ ಮಲ್ತಿವರ್ಕ್ಕ ಮತ್ತ್ಯ |
ತ್ತಮ ಮುತ್ತಮ ಭೋಗಭೂಮಿ ಭವನಾವಳಿಗಳ್ || ೧೦೧ ||

ವ|| ಮತ್ತಮಲ್ಲಿ:—

ಮ|| ಜಳದಗ್ರೀಷ್ಮ ಹಿಮಂಗಳಿಲ್ಲ ಮೊಳವುಲ್ನಾಲ್ಕಂಗುಳಂಗಳ್ಪರಂ |
ಬಳೆಗುಂ ತಣ್ಪಿನ ಬಿಣ್ಪಿನಂತೆಸಗುಗುಂ ಸೌರಭ್ಯಮಾಂದ್ಯಂಗಳಂ ||
ತಳೆದುದ್ಯಾನಭವಾನಿಳಂ ಸರಸಿಜಂ ಹೈಮಂ ವನಂ ಕೋಕಿಲಾ |
ಕುಳ ಮಬ್ಜಾಕರಮಂಬುವಿಸ್ಕಿರಚಿತಂ ನೀಚೋಚ್ಚನೀರೋಪಮಂ || ೧೦೨ ||

ವ|| ಅದಲ್ಲದೆ ಚೋರ ಡಾಮರಾಕ್ರಾಂತಿಯುಂ, ಮಿಟ್ಟಿಯ ಪಸವಿನ ಪೆಸರ್ವೆಸರುಂ, ಸ್ವಾಮಿಭೃತ್ಯಸಂಬಂಧದ ದೆಸೆಯುಂ, ಬಡವರ್ ಬಲ್ಲಿದರೆಂಬ ದೇಶಭಾಷೆಯುಂ, ಆಯಿಲದಳುಪಿನಿಟಿವಿಟಿಯುಂ, ಕುತ್ತದ ಮರುಕದ ಚಿತ್ತವೃತ್ತಿಯುಂ, ಮಪಮೃತ್ಯುವಿನ ಸತ್ವಬಾಧೆಯುಂ ಗಂಧಾಗಂಧಮುಮಿಲ್ಲಿನ್ನಾ ಭೋಗಭೂಮಿಗಳುತ್ತಮಮಧ್ಯಮಜಘನ್ಯಭೇದದಿಂ ತ್ರಿವಿಧಮಕ್ಕುಮಲ್ಲಿ ಯಾರ್ಯರ ಸಂಹನನಂಗಳ್:—

ಕಂ|| ಪರಮಪ್ರಮಾಣಮಱು ಸಾ |
ಸಿರಂಬರಂ ಮತ್ತೆ ಮಧ್ಯಮಸ್ಥಿತಿ ನಾಲ್ಕಾ ||
ಸಿರ ಮಧಮಮಾತ್ರ ಮಿರ್ಛಾ |
ಸಿರಂ ಶರಾಸನ ಮದುಕ್ರಮಕ್ರಮದಿಂದಂ || ೧೦೩ ||

ಮ|| ಬದರಾಕ್ಷಾಮಲಕ ಪ್ರಮಾಣ ಮಶನಂ ತ್ರಿ ದ್ವ್ಯೈಕ ಸಂಖ್ಯಾತ ಮಾ |
ತ್ರದೊಳಾಯುಷ್ಯದ ಸಂಖ್ಯೆ ಮೂಱಿರಡು ಮೊಂದೊಂದಲ್ಲ ಪಲ್ಯೋಪಮಂ ||
ಪದೆದಿತ್ತುತ್ತಮ ಮಧ್ಯಮಾಧಮ ಮಹಾ ಸತ್ಪಾತ್ರದಾಹಾರದಾ |
ನದಿ ನಾಭೂಮಿಗಳೊಳ್ ಕಷಾಯ ರಹಿತರ್ ಪರ್ಯಾಯದಿಂ ಪುಟ್ಟುವರ್ || ೧೦೪ ||

ವ|| ಮತ್ತಮುತ್ತಮ ಭೋಗ ಭೂಮಿಯ ದಂಪತಿಗಳ್ ಶುಕ್ಲ ಶೋಣಿತಂಗಳೊಂದೊಂದಱೊಳೊಂದಿ ಗರ್ಭಾಶಯನದೊಳ್:—

ಕಂ|| ಪರ್ವಿ ನಿಲೆ ಕಲಿಲ ಘನ ಪೇ |
ಶ್ಯಪೂರ್ವದಪರಿಣತಿಯನುಕ್ರಮಂ ನೆಱೆವುದು ಮಿ ||
ರ್ವರ್ವರೆ ನವಮಾಸಾಂತದೊ |
ಳೊಪ್ಪಾಯೊಳಮುಗ್ಗಾಗಿ ಸಂಕ್ರಮಿಪರವರ್ || ೧೦೫ ||

ವ|| ಸಂಕ್ರಮಿಸಿ:—

ಉ|| ಪುಟ್ಟಿದ ಜೀವರಾರಿ ಮಿಥುನತ್ವದೊಳಲ್ಲದೆ ಪುಟ್ಟದಾತ್ಮಜರ್ |
ಪುಟ್ಟಿರೆ ಸೀಂತು ಮಾಗುಳಿಸಿಯುಂ ಪಿತೃಗಳ್ ಕಱಿಗುತ್ತೆ ಸಗ್ಗದೊಳ್ ||
ಪುಟ್ಟುವ ರಕ್ಷೆದಾದಿ ಪರಿಚಾರಕರೀರಿಲ ಕಾಪು ಕಾಪೆ ಕೂ |
ರ್ತಿಟ್ಟವರಾತ್ಮಪುಣ್ಯಮ ವಿಪುಣ್ಯರ ನೋಳಿಯ ಕಾಪು ಕಾಗುಮೇ || ೧೦೬ ||

ವ|| ಅಂತವರ್ ಕರ್ಕಟಕೇಶ ಚರ್ಮರಾಗಿ ಪುಟ್ಟಿ ಪೂರ್ವೋಪಾರ್ಜಿತ ಸುಕೃತಮಹೀರುಹ ನಿಶಾಕರ ನಿಜಾಂಗುಳಿನಿಸ್ರವದ್ದುಗ್ಧಾಜ್ಯಧಾರೆಯ ಸವಿಯಂ ಸೇವಿಸಲೇೞೇೞು ದೆವಸಂಗಳುಂ ಪೋಗೆ ಪೋಗೆ:—

ಚಂ|| ತಡೆಯದೆ ಕುಳ್ಳಿರಲ್ ತುರಿಪದಿಂ ತೆವಳಲ್ ತದನಂತರಂ ತಳ |
ರ್ನಡೆ ನಡೆಯಲ್ ಬೞಿಕ್ಕೆ ಪದುಳಂ ನಡೆಯಲ್ ಕಳೆಯೆಲ್ಲಮುಂ ಕಲಲ್ ||
ಜಡರಿನ ಲೀಯದೋದ ನಱಿಯಲ್ ನವಯವ್ವನರಾಗಿ ಚೆಲ್ವನ |
ಚ್ಚುಡಿದಿಡಿದಿರ್ದ ಲಕ್ಷಣದಿ ನಾಂತಿರ ಲಂತವರಂತು ನೋಂತರಾರ್ || ೧೦೭ ||

ವ|| ಅಂತು ನಾಲ್ವತ್ತೊಂಭತ್ತು ದಿವಸದಿಂ ಪೆಱಿಯ ಮವರ್ಗಂ ಜೀವನೋಪಾಯ ಭೋಗೋಪಭೋಗ ವಿತರಣನಿರತ ಸುರತರು ಪ್ರಕರಂಗಳೊಳ್:—

ಕಂ|| ಮದಿರಾಭರಣಾಂಬರಸುರ |
ಭಿದಾಮು ವಾದಿತ್ರಮತ್ರ ಭೋಜನ ನಾನಾ ||
ಸದನಪ್ರದೀಪ ತೇಜೋಂ |
ಗದ ಪತ್ತುಂ ತೆಱದನಲ್ಪಕಲ್ಪಕುಜಂಗಳ್ || ೧೦೮ ||

ವ|| ಒಳವವರೊಳ್:—

ಕಂ|| ಈಗುಂ ಮಿಥುನರ್ಕಳ್ಕರೆ |
ರಾಗದ ರತದೊದವ ನೀವ ಕಣ್ಗಂ ಮನಕಂ ||
ರಾಗಮು ನೀಯದ ಸವಿಯ ಸ |
ಮಾಗಮುಮಂ ಪಡೆವ ಮದ್ಯಮಂ ಮದ್ಯಾಂಗಂ || ೧೦೯ ||

ಪೊಳೆವ ಮಣಿಮಕುಟ ಮೆಕ್ಕಾ |
ವಳಿ ಹಾರಂ ಕಟಕ ಮುದರಬಂಧಂ ಮಣಿಮೇ ||
ಖಳೆ ಮಕರಕುಂಡಳಂ ತೋ |
ಳ್ವಳೆ ಯೆಂಬಿವ ನವರ್ಗೆ ಭೂಷಣಾಂಗಂ ಕುಡುಗುಂ || ೧೧೦ ||

ಕುಡುಗುಂ ಚಿತ್ರಾವಳಿ ಪಳಿ |
ಯುಡವಟ್ಟೆ ಸುವರ್ಣ ಚೇಲಮುಂ ತಿವಟಂ ಪೂ ||
ವಡೆ ಕರ್ಮಂ ನೆರೆವಂ ಮಣ |
ಲೆಡೆಯುಂ ರತ್ಯಂಗ ವಸನಮಂ ವಸನಾಂಗಂ || ೧೧೧ ||

ಅದಿರ್ಮುತ್ತೆಯ ವಕುಲದ ನಾ |
ಗದ ಪೊಂಗೇದಗೆಯ ಹೇಮತಾಮರಸದ ಕುಂ ||
ದದ ಬಣ್ಣವಾಸಿಗಂಗಳ |
ನುದಾತ್ತಮಾಲ್ಯಾಂಗಮಹಿರುಹಂ ಕುಡುತಿರ್ಕುಂ || ೧೧೨ ||

ಅನವರತವಿತತ ಸುಷಿರಾ |
ವನದ್ಧ ಘನತತ ವಿಚಿತ್ರಭೇದ ನಿನಾದಂ ||
ಜನಯಿಸೆ ತೂರ್ಯಾಂಗಂ ಕನ |
ದನೋಕಹಂ ಪಲವುತೆಱದ ಪಱೆಗಳ ನೀಗುಂ || ೧೧೩ ||

ಅಹರಹದಭಿನವ ಮಣಿರುಚಿ |
ರಹಾಟಕ ಪ್ರಕರವಿರಚಿತಂಗಳ ನೆಂದುಂ ||
ಬಹು ಭಾಜನಂಗಳಂ ನಿ |
ರ್ವಹಿಸುವು ದವರವರ್ಗೆ ಭಾಜನಾಂಗ ಮಹೀಜಂ || ೧೧೪ ||

ಉದರ ಸಮಾಗ್ನಿಯ ಚಿಹ್ನದ |
ಪದದೊಳ್ ವೈದ್ಯೋಕ್ತನಪ್ಪ ಬಾಣಸಿಗನಪೋಲ್ ||
ತ್ರಿದಶಾಮೃತಾನ್ನಮಂ ಕುಡು |
ವುದವರ್ಗೆ ಭೋಜ್ಯಾಂಗ ತುಂಗ ಕಲ್ಪಮಹೀಜಂ || ೧೧೫ ||

ಕಂ|| ಎಸೆವ ಪವಡಿಸುವ ಮನೆ ಚಿ |
ತ್ರಸಾಲೆ ಸುರತಾಲಯಂ ಮಹೀಗೃಹಮಾರೋ ||
ಗಿಸುವ ಮನೆ ಮಂಡಪಂ ಗುಣ |
ನ ಸಾಲೆ ಯೆಂಬಿನಿತುಮಂ ಗೃಹಾಂಗಂ ಕುಡುಗುಂ || ೧೧೬ ||

ತಳದಳಿಸಿ ತೊಳಗಿ ಬೆಳಗುವ |
ವಿಳಸನ್ಮಣಿಕಿರಣಶಿಖಿಯ ಬಳಗದ ಬೆಳಗಂ ||
ತಳೆದೆಸೆವ ತಾಣದೀವಿಗೆ |
ಗಳನವರ್ಗೀಗುಂ ಪ್ರದೀಪ ದೀಪಾಂಗಕುಜಂ || ೧೧೭ ||

ಇಡಿದಡರೆ ಕೊಂಡ ಕುಸುಕಱ |
ಕಡುಗತ್ತಲೆ ತಲೆಯ ನೆತ್ತದೊತ್ತರಿಸದಣಂ ||
ಸೊಡರದೆಲೆ ಮಿಡುಕದಿರೆ ನೆಲೆ |
ಸೊಡರ್ಗಳನಾ ಜ್ಯೋತಿರಂಗತರು ಕುಡುತಿರ್ಕುಂ || ೧೧೮ ||

ವ|| ಮತ್ತಂ ಪೆಱಪು ಮಱಕೆಯ ಸುರತರು ನಿಕರಂಗಳೊಳ್:—

ಕಂ|| ಕರಗದವರಂತೆ ಸೂಟಾ |
ಯ್ತರಂತೆ ಕಂಚುಕಿಗಳಂತೆ ಪಡಿಯಱರಂತ ||
ಜ್ಜರಗುಜ್ಜರಂತೆ ಮನದಣು |
ಗರಂತೆ ಮೇಳದವರಂತೆ ನೆರೆದೋಲಗಿಕುಂ || ೧೧೯ ||

ವ|| ಅಂತೆನಿಸುವನೇಕಸುರತರುವಿಕೀರ್ಣಭೋಗೋಪಭೋಗಂಗಳುಮುಮನವರತ ಮನುಭವಿಸು ವಾರ್ಯರೊಳ್:—

ಚಂ|| ಮುಳಿಸು ವಿಘೂರ್ಣನಂ ತಿಳಿವುದಂಬು ಪರೋನ್ನತಿ ತತ್ತರಂಗ ಸಂ |
ಕುಳವಮರ್ದಪ್ಪು ತೆಪ್ಪ ಮೆರ್ದೆಗೊಂಡ ರಸಂ ರಸ ಮುಕ್ತಿಕಾಂತಿ ವಿಾಂ ||
ಬೊಳಪೆನೆ ಮೇರೆದಪ್ಪಿದ ರತಾಮೃತವಾರ್ಧಿಯ ನೀಸಿ ಮೂಡುತುಂ |
ಮುಳುಗುತು ಮಿರ್ಪರಲ್ಲ[ದ]ವರ್ಗಾವುದು ಮತ್ತಿನ ಕಜ್ಜಮುಜ್ಜುಗಂ || ೧೨೦ ||

ಧರೆಯ ಲಲಾಟ ಮುತ್ತರಕುರೂರ್ವರೆ ಧಾರಿಣಿಗುತ್ತಮಾಂಗ ಮು |
ತ್ತರಕುರುದೇಶ ಮುರ್ವರೆಯ ಕತ್ತುರಿಯೊಪ್ಪುವ ಪತ್ರಭಂಗ ಮು |
ತ್ತರಕುರುಧಾತ್ರಿ ಮೇದಿನಿಯ ಹಸ್ತ ವಿಳಾಸದ ಹೇಮಪದ್ಮ ಮು |
ತ್ತರಕುರುಭೂಮಿ ಯೆಂದಿನಿತ ನಲ್ಲದೆ ಬಣ್ಣಿಪನೆಂತು ಬಣ್ಣಿಪೊಂ || ೧೨೧ ||

ಮ|| ಅಣಿಮಾದ್ಯಷ್ಟಗುಣಂಗಳಿಂ ನೆಲೆಗಳಿಂ ಮೇಗಾರ್ಯರಿಂದೆಂದು ಟಿಂ |
ಟಣಿಸುತ್ತಿರ್ಪುದು ತಮ್ಮ ಮೆಚ್ಚುಗುಡೆ ಪೆತ್ತಾಮಾರ್ಯರ ಕ್ರೋಧರು ||
ಲ್ಬಣರಿಂದ್ರಾದಿಗಳಾರ್ಯ ರಾರ್ಯಚರಿತರ್ ನೋಕರ್ಮ ನೋದುಃಖ ಭೀ |
ಷಣಮೊಂದುಂ ಸುರ ನಿರ್ವಿಶೇಷ ಸುಖಸರ್ವಸ್ವಂ ಕುರೂರ್ವೀತಳಂ || ೧೨೨ ||

**ವ||** ಅಂತು ನಾಕಕ್ಕಮುಚ್ಚನೀಚವಿಚಾರದೊಳ್ ಸಮಾನಮುಮಂ ಮೇಗುಮಾದುತ್ತಮಭೋಗಭೂಮಿಯೊಳುರ್ವರಾಸ್ಯತಿಲಕನಪ್ಪ ಶ್ರೀಷೇಣನುಂ ಸಿಂಹನಂದೆಯುಂ ಮನಿಂದಿತೆಯುಂ ಸತ್ಯಭಾಮೆಯುಂ:—

ಮ|| ಗರಳೇಂದೀವರವಾಸಿತೋಗ್ರವಿಷಮುಂ ಪುಣ್ಯಾಮೃತಂ ನಿರ್ವಿಷೀ |
ಕರಣಂಗೆಯ್ವವೊಲೊರ್ಮೆಗೊರ್ಮೆಗೆರ್ದೆಯೊಳ್ ಬೈತಿಚ್ಚೆಯೊಳ್ ಕೂರ್ತ ||
ಕ್ಷಿರವಿಂ ಮುಚ್ಚುಗೆವೆತ್ತ ಪತ್ತುಗೆಯಿನಂತಾ ನಾಲ್ವರಂದಿರ್ವರಿ |
ರ್ವರಿ ಯುಗ್ಮದ್ವಯಮಾದರೆಂ ಸಫಲಮೋ ಸತ್ಪಾತ್ರದಾನೋದಯಂ || ೧೨೩ ||

ಕಂ|| ಪ್ರಮದೆಯರಾನೃಪದಾನಾ |
ನುಮೋದದಿಂದಲ್ಲಿ ಬಂದು ಪುಟ್ಟಿದರೇನು ||
ತ್ತಮಮೊ ಮುನಿದಾನ ದಾನಾ |
ನುಮೋದ ಸುಕೃತಾಗ್ರಗಣ್ಯ ಪುಣ್ಯ ಮಗಣ್ಯಂ || ೧೨೪ ||

**ವ||** ಅಂತಲ್ಲಿ ಜಿನಚಂದ್ರ(ನೆನಿಪ)ಶ್ರೀಷೇಣನುಂ ಸಿಂಹನಂದೆಯುಂ ಮಿಥುನರಾದರ್, ಭಾವಶುದ್ಧಿ ವಿಶೇಷದಿಂದ ಮನಿಂದಿತೆಯು ಮಾರ್ಯನಾಗೆ ಸತ್ಯಭಾಮೆ ತದಾರ್ಯೆಯಾದಳಿಂತು:—

ಕಂ|| ತವದ ಪುರಾತನ ಭವಬಂ |
ಧವಿಸ್ಫುರತ್ಪ್ರೇಮಮುಂತೆ ಬಂದವರ್ಗೆ ಪುನ ||
ರ್ನವಮಾದುದು ಪರಕಾಯ |
ಪ್ರವೇಶದುಪಯೋಗ ಯೋಗಿಯಂತಾಭವದೊಳ್ || ೧೨೫ ||

ಮ|| ಕಳಗೇಯಂ ಬಗೆಗೊಂಡ ರೂಪು ಕುಸುಮಾಮೋದಂ ರಸಾಸ್ವಾದಮು |
ಗ್ಗಳಮಪ್ಪಂಗಜರಾಗಮೆಂಬಿವಿನಿತುಂ ತಳ್ಪೊಯ್ಯೆ ಪಂಚೇಂದ್ರಿಯಂ ||
ಗಳೊಳಾರ್ಯೋತ್ತಮ ನುತ್ತಮಾರ್ಯವೆಸರವ್ಯಾಬಾಧದಿಂ ಮೂಡುತುಂ |
ಮುಳುಗುತ್ತುಂ ತಣಿದಂ ಸುಖಾಂಬುನಿಧಿಯೊಳ್ ಸೌಜನ್ಯ ಕಂದಾಂಕುರಂ || ೧೨೬ ||

— **ಗದ್ಯ** —

ಇದು

ಜಿನೇಂದ್ರ ಚರಣ ಸರಸೀರುಹ ಶಿಲೀಮುಖಾಯಮಾನ

**ಶ್ರೀಮದುಭಯಕವಿ ಚಕ್ರವರ್ತಿ**

ನಿರ್ವರ್ತಿತಮುಂ

**ಅಮ್ಮನಭಕ್ತಾಭಿಧಾನ ವಿದ್ಯಾನಿಧಾನ ನುಲ್ಲಸಾರ್ಯ**

ತದನುಜಾತಾಭಿಜಾತ ಸಾರಸ್ವತ

ಪುನ್ನಮಾರ್ಯ ಕಾರಿತಮುಮಪ್ಪ

**ಪುರಾಣಚೂಡಾಮಣಿಯೊಳ್**

ಷಷ್ಠಾಶ್ವಾಸಂ.

|| ಶ್ರೀ ||

# ಶಾಂತಿಪುರಾಣಂ.



## ಸಪ್ತಮಾಶ್ವಾಸಂ.

ಕಂ|| ಶ್ರೀಕುರುಭೂಮಿ ಭವಂ ದಿ |
ವ್ಯಾಕೃತಿ ಜಿನಚಂದ್ರದೇವನಿರೆ ಪರಸಲ್ ಬಂ ||
ದಾಕಾಶ ಚಾರಣರ್ ತಪ |
ದಾಕಾರಮೆ ರೂಪುಗೊಂಡು ಬಂದಂತಾಗಳ್ || ೧ ||

ತಾಗೆವರೆ ಗಗನಚಾರಣ |
ರಾಗಮನಮ ನಱಿದು ನಾಲ್ವರುಂ ನಡೆದಿದಿರಂ ||
ಪೋಗಿ ಜಿನಪಾದ ಪದ್ಮ ಪ |
ರಾಗಪರಾಗತ ಲಲಾಟತಟಮುಂ ತಳೆದರ್ || ೨ ||

ವ|| ಅಂತು ಯಶೋಧರ ಗುರುಚರಣ ಸರಸೀರುಹ ಮಕರಂದ ಬಿಂದು ಸಂದೋಹ ಚಂದ್ರಕಬಲ ಚಂದ್ರಕಿತಮುಖಚಂದ್ರರಾಗಿ ಸಮುತ್ತುಂಗಾಸನದೊಳಿರಿಸಿ ಧರ್ಮಮಂ ಬೆಸಗೊಳೆ ಸಂಕ್ಷೇಪದೊಳ್:

ಕಂ|| ಸದಲಂಕಾರೋದಾರಂ |
ವದನೇಂದು ಸುಧಾಚ್ಛಟಾಂಬು ಪಸರಿಸೆ ಮೊದಲಿಂ ||
ತುದಿವರ ಮುಚಿತಾಪ್ತಾಗಮ |
ಪದಾರ್ಥಸೂತ್ರ ಪ್ರಪಂಚಮಂ ಮುನಿ ನುಡಿದಂ || ೩ ||

ದೋಷೇತರನಾಪ್ತಂ ತ |
ದ್ಭಾಷಿತ ಮುಪಹಿಂಸ ಮಾಗಮಂ ಷಡ್ಭೇದಾ ||
ಕ್ಲೇಶಂ ಪದಾರ್ಥಮಿದೆ ಗಂ |
ಡೂಷಂ ನಿನಗಕ್ಕೆ ದುರಿತ ಕಫ ವಿಳಯನದೊಳ್ || ೪ ||

ಮ|| ಕೊಲೆಯಿಂದೊಂದ ನಸತ್ಯಮೆಂಬೆರಡ ನನ್ಯಾರ್ಥಕ್ಕೆ ಕಣ್ಣಿಟ್ಟು ಪಂ |
ಬಲಿಸುತ್ತಿರ್ಪಿರವಿಂದೆ ಮೂಱನೆ ಪರಸ್ತ್ರೀಯೆಂದು ನಾಲ್ಕಂ ದನಾ ||
ಕುಲಮೆಂದಯ್ದ ನನಾಕುಳಂ ತೊಱಿದೊಡೇಂ ಹೃಲ್ಲಾಸಮೇ ದೋಷಮೇ |
ಮಲಮೇ ತಲ್ಲಣಮೇ ಕೃತಾಂತಭಯಮೇ ಸಂತಾಪಮೇ ಬೇವಸಂ || ೫ ||

ಕಂ|| ಈವ್ರತಗಣ[ಮಣ]ಮಾದೊಡ |
ಣುವ್ರತ ಮಾಶ್ರಾವಕಂಗೆ ಗುರುತರವಿಧಿಯಿಂ ||
ಪ್ರವ್ರಜಿತದೆ ನಿಲೆ ನೆಲಸೆ ಮ |
ಹಾವ್ರತಮಕ್ಕುಂ ಜಿನಾಗಮಾಂಭೋನಿಧಿಯೊಳ್ || ೬ ||

ಆವ್ರತ ಶಿತಾಸಿ ಸಂಸಾ |
ರವ್ರತತಿಚ್ಛಿದುರಮಕ್ಕು ಮಾಸಂಸಾರಂ ||
ತೀವ್ರತರ ದುಃಖದಂ ನಾ |
ಳೀವ್ರಣಸದೃಶಂ ಶರೀರಿಗದ ಕಿಡೆ ನೆಗಱಿಂ || ೭ ||

ಮ|| ತವದಾಯುಷ್ಯದ ಕುಂದ ದಂದದ ಬಿಯಂ ಗೆಯ್ದುಂ ಪವಣ್ದೋಱಿಮು |
ದ್ಭವದೇನೋಂತೆನೆನಿಪ್ಪ ರೂಪಿನ ಮನಂ ಗೊಂಡಿರ್ಪ ಲಾವಣ್ಯದೊ ||
ಪ್ಪುವ ನೇಪಥ್ಯದಮರ್ಕೆ ನಿಲ್ಲವನಿಮೇಷೇಂದ್ರಾದಿಗಳ್ಗೆಂದೊಡಾ |
ಗ್ಗವು ನಿಲ್ಕುಂ ನವಸಾಂಧ್ಯರಾಗ ಹಿಮರುಂದ್ರೇಂದ್ರಾಯುಧಾಭಾಸಿಗಳ್ || ೮ ||

**ವ||** ಎಂದು ಪ್ರತಿಬೋಧಿಸಿ:—

ಮ|| ನಿಟಿಲನ್ಯಸ್ತ ಕರಾಬ್ಜಸಂಪುಟ ವಿನಮ್ರಾತ್ಮಾಂಗರಂ ಭಕ್ತಿಲಂ |
ಪಟರಂ ತನ್ಮುನಿ ಧರ್ಮವೃದ್ಧಿ ನಿಮಗೆಂದಾ ನಾಲ್ವರಂತಸ್ತಮಃ ||
ಪಟಮಂ ಪಿಂಗಿಸಿ ಭೋಗಭೂಮಿಜರ ಕಣ್ಗಾಗಳ್ ನಭೋ ಮಾರ್ಗ ಪ |
ರ್ಯಟನಂ ಶಿಕ್ಷಿಸಿ ಪೋದರಾತ್ಮ ನಿಯಮಕ್ಕತ್ಯಾರ್ಯರಿತ್ತನ್ನೆಗಂ || ೯ ||

**ವ||** ನಿಜಪ್ರತಿಬಂಧಕಲ್ಪಪಾದಪೋದ್ಯಾನದೊಳೊಂದುದಿವಸಂ ತೊಱಲ್ದು ನೋಡುತ್ತುಂ ವೈಶ್ರವಣ ನಿಮಿತ್ತಮೊಂದು ಪುಳಿನತಳೋದ್ದೇಶದೊಳ್ ಕುಳ್ಳಿರೆ:—

ಚಂ|| ವನರುಹ ಮೆಡ್ಡಮಪ್ಪ ಮೊಗಮಾದ ತಳಿರ್ತಳಮಾದ ಕೋಕಿಳ |
ಧ್ವನಿ ಸರಮಾದ ಪಣ್ಣಡಕೆ ಬಾಯ್ದೆಱೆಯಾದೆಳವಳ್ಳಿಯೇಳಿ ನೂ ||
ತನ ತನುವಾದ ಮಲ್ಲಿಗೆಯ ತುಂಬಿಯ ಕೂಟಮೆ ನೋಟಮಾದ ನಂ |
ದನವನ ಲಕ್ಷ್ಮಿ ಕಣ್ಗೆಸೆದು ತನ್ನನೆ ನೋಡಿಸಿದಳ್ ತಯಾರ್ಯರಿಂ || ೧೦ ||

**ವ||** ತದನಂತರಂ ನಿಜಾವಾಸಕ್ಕೆ ಪೋಗಿರ್ದು ಪಲವುಂಕಾಲಮನಂಗರಾಗರಸೈಕನಿಷ್ಠಿತರುಂ, ಮದನಾದ್ವೈತಮಾದ ಸಮಯ ಯುಗಳಂಗಳಂ ಕಂತುವೆ ಪರಮಾತ್ಮನಾಗೆ ತನ್ಮತಮೆ ಸಿದ್ಧಾಂತಮಾಗೆ ಕಾಮುಕೀ ಕಾಮುಕರೆ ಸಧರ್ಮರಾಗೆ ಮುಂಪುಟ್ಟಿದಾಚಾರ್ಯರಾಚಾರ್ಯರಾಗೆ ಸುರತಸುಖಮೇ ಸಂಸಾರನಿರತ ಸುಖಮಾಗೆ ಪ್ರಾಣೇಶ್ವರರ ಸಂಸರ್ಗಮೆ ಸ್ವರ್ಗಮಾಗೆ ನಿಜಾಯುಃಪಲ್ಯೋಪಮತ್ರಯಾವಸಾನ ಮೆಯ್ದುರೆಯುಂ ಕಾಮಾಂಧರಾಗಿ:—

ಕಂ|| ಬಗೆಯದಿರೆಯಿರೆ ಕೃತಾಂತಂ |
ಬಗೆದಂ ಪೆಱತೊಂದನಾರ ಪುಳುವಗೆಯುಮವಂ ||
ಬಗೆಯದಿರೆ ನಿಮಿರ್ಗು ಮಾತಂ |
ಬಗೆದೊಡೆ ಬಗೆದಂತೆ ಬಗೆದ ಬಗೆ ನಿಮಿರ್ದಪುದೇ || ೧೧ ||

ವ|| ಅಂತು ಪರಲೋಕಪ್ರಾಪ್ತರಾಗಿ:—

ಮ|| ಬನದಿಂದಂ ಬನದಾನೆಗಳ್ ಪಿಡಿಗಳಂ ಮುಂದಿಟ್ಟು ಪೋಪಂತೆ ಕಾ |
ಮಿನಿಯರ್ಕಳ್ವೆರಸಾರ್ಯರಾತ್ಮತನುಗಳ್ ತತ್ಕಾಲದೊಳ್ ಮಾಯವಾ ||
ಗೆ ನೆಳಲ್ವಿಚ್ಚಿಯ ರೂಪಿನಂತೆ ತಳರ್ದರ್ ಸೌಧರ್ಮ ಕಲ್ಪಕ್ಕೆ ಭಾ |
ವನೆ ಜೈನೋಕ್ತಿಯೊಳಾಗೆ ದುರ್ಗತಿಗವಾಜೀವಕ್ಕ ಮೇಂ ಸಮ್ಮದಂ || ೧೨ ||

ವ|| ಅಂತು ಮೊದಲ ಕಲ್ಪದ ಶ್ರೀನಿಳಯ ವಿಮಾನದೊಳ್ ಶ್ರೀಷೇಣಾರ್ಯಂ:—

ಕಂ|| ಉಪಪಾದ ಭವನತಳ್ಪದೊ |
ಳುಪಚ್ಛದಾಚ್ಛಾದ್ಯ ತಳದೊಳನವದ್ಯದೊಳ ||
ಗ್ಗಪಿತನಿರೆ ಪಾಸಿನೊಳ್ ನೂ |
ಸೆ ಪಾಸು ಕೃತಿಗೆಂದು ದಿವಿಜ ರುಲಿದರ್ ತಮ್ಮೊಳ್ || ೧೩ ||

ವ|| ಅಂತಾತನವತರಿಸಿ ಗಂಗಾತರಂಗ ತರಳದುಕೂಲವಸನಾಂತರೀಯೋತ್ತರೀಯಂ ಅಭಿನವ ಸುಜಾತಪಾರಿಜಾತಸುಮನಶ್ಶೇಖರಂ, ಅನರ್ಘರತ್ನಮಣಿಮುಕುಟಕಿರೀಟ ಮಯೂಖಮಾಲಿಕಾಪರಿಚಿತಪ್ರಭಾಕದಂಬಕಪ್ರತಿಬಿಂಬಿತವಿಮಾನ ಭಿತ್ತಿವಿತಾನಂ, ಪ್ರಲಂಬಕರ್ಣಾಭರಣಮಕರಿಕಾವಿತಾಢ್ಯ ಮಾನಕಪೋಲಫಲಕಂ, ಅವತಂಸೀಕೃತಸುಂದರ ಮಂದಾರಪ್ರತಿನವಪ್ರವಾಳಂ, ಏಕಾವಳೀವಿಳಾಸಾಪಹಸಿತಾಮೃತಡಿಂಡೀರಪಿಂಡಪಾಂಡುರಂ, ಉಪಾಸನಾಗತಶಾರದಶಶಾಂಕಶಂಕಾಜನನಮನೋಹರ ಹಾರಂ, ಅಂಘ್ರಿನಖಕಿರಣಾಚ್ಛಾರುಣ ಸಂಕಾಶ ಮೌಕ್ತಿಕ ಪದಬಂಧಂ ಆದೇವಂ ಶ್ರೀದೇವನಾಮಮಂ ತಾಳ್ದಿ:—

ಚಂ|| ಸುರಧನುವಂ ವಿಮಾನಮಣಿಕುಟ್ಟಿಮ ಮಾ ಶರದಭ್ರಮುಂ ನಿಜಾ |
ಸ್ತರಣ ದುಪಚ್ಛದಂ ಪೊಳೆವ ಮಿಂಚಿನ ಗೊಂಚಲನಂಚಿತೋತ್ತಮಾ ||
ಭರಣದ ದೀಪ್ತಿ ತೋರವನಿಯಂ ಪೊಸಮುತ್ತಿನ ಲಂಬಣಂ ನಿರಾ |
ಕರಿಸೆ ವಿಮಾನಮಂ ಜಲದಯಾನಮೆ ಗೆತ್ತಮರೇಂದ್ರ ನಾಯಕಂ || ೧೪ ||

ವ|| ಕನಸಿದು ನೆನಸೆಂದು ನಿಶ್ಚೈಸಿ ಮನದೊಳಿಂತೆಂದು ಬಗೆದುಂ:—

ಉ|| ಭೋರ್ಗರೆವಷ್ಟತೂರ್ಯರವಮಾರ್ಗೆ ಜಯಧ್ವನಿಯಾರ್ಗೆ ಪೇೞ ಮಾ |
ನಾರ್ಗೆ ವಿಮಾನಮಾರ್ಗುಲಿವ ವಂದಿಗಳಾರ್ಗೆ ಸುಖಾಮೃತಾಬ್ಧಿ ತಾ ||
ನಾರ್ಗಿದ ಭೂತಪೂರ್ವಮೆನಗೆಂದಮರಂ ಬಗೆದಂ ವಿಮೋಹಮಾ |
ರಾರ್ಗೆಭವಾಂತರಾಗಮದೊಳಾಗಳೆ ಪುಟ್ಟವೆ ಗರ್ಭಸಂಧಿಯೊಳ್ || ೧೫ ||

ವ|| ಆತನಪ್ರಾಪ್ತಪೂರ್ವ ಸುಖವಿಸ್ಮಯ ಸ್ಮೇರ ಮುಖಕಮಳಂ, ವಿದಿತಾವಿದಿತ ವೃತ್ತಾಂತಂ, ಅತ್ಯಂತ ಸಂತೋಷ ಪೀಯೂಷ ಸರೋವರಾವಗಾಹಂ, ಮಱಿದುದನಂತೆ ನೆನೆವಂತೆ ಅವಧಾನಾಧೀನ ಮಾನಸನಾಗಿ:—

ಚಂ|| ಧೃತಕಾಲಾಗುರುಧೂಪಧೂಮ ಮವನದ್ಧೋದ್ದಾಮದಾಮಂ ವಿಲಂ |
ಬಿತಲಂಬೂಷವಿಶೇಷ ಮುಚ್ಛ್ರಿತಪತಾಕಾನೀಕ ಮಾತೋದ್ಯ ಶೋ ||
ಭಿತ ಮೊಪ್ಪಿರ್ದುಪಪಾದಸದ್ಗೃಹದ ಮುಂದುತ್ಫುಲ್ಲ ಪುಷ್ಪೋಪಹಾ |
ರಿತ ಚಂಚನ್ಮಣಿ ಕುಟ್ಟಿಮಂ ಸುರಸಭಾ ಶ್ರೀಸುಂದರಂ ಮಂದಿರಂ || ೧೬ ||

**ವ॥** ಆ ಸಭಾಗೇಹದೊಳ್ ಉತ್ತಮ ಮಹತ್ತರ ದೇವರೆರಡುಂ ಕೆಲದೊಳಂ ವಾಹನಾಭಿಯೋಗ್ಯ ಕಿಲ್ಬಿಷಿಕಾಪ್ಸರೋರಗಗಂಧರ್ವರೋರೂರ್ವರೊಳ್ ಸಂದಣಿಸೆ ಭಗವದರ್ಹತ್ಪರಮೇಶ್ವರಗುಣೋಪರಚಿತ ವರ್ಣಪೂರರಸಗೇಯ ಪೂರಪರಿಪ್ಲಾವಿತಾಂತರಂಗನಾಗಿರೆ:—

ಕಂ॥ ತೆಱೆಯದೆ ರನ್ನದ ಪಡಿಗಳ್ |
ತೆಱೆದುವು ತಮ್ಮಿಂದೆ ದಿವಿಜ ಕೃತಪುಣ್ಯಮೆ ಕ ||
ಣ್ದೆಱೆದಂತೆ ಮೊಱೆದು ಪಾಱುವ |
ಪಱಮೆಗಳೊಡ ನುಣ್ಮೆ ಪೊಣ್ಮೆ ಘೂಪಾಮೋದಂ || ೧೭ ||

**ವ॥** ಆಗಳ್:—

ಕಂ॥ ಜಯ ಜೀವ ನಂದ ವರ್ಧ |
ಸ್ವ ಯಥಾ ಕಾಮಾರವಂ ತದೈಶ್ವರ್ಯ ನವೋ ||
ದಯಮಂ ಗೋಸನೆಗಳೆವಂ |
ತೆಯು ಮಸೆದುವು ದಶದಿಶಾವಸಾನಂಬರೆಗಂ || ೧೮ ||

**ವ॥** ಅನ್ನೆಗ ಮವ್ಯಕ್ತಕಾಲದೊಳೋದಿ ಮಱೆದ ವಿಷಮಶಾಸ್ತ್ರದ ಮೂಲಗ್ರಂಥಕ್ಕೆ:—

ಕಂ॥ ವಿವರಣೆ ಬರ್ಪೊಲಿರದವ |
ಧಿವಿಬೋಧದೆ ಬರೆ ಮನಕ್ಕೆ ಬಗೆಯೊಳ್ ಕಂಡಂ ||
ದಿವಿಜಪತಿ ತನ್ನ ಮುನ್ನಿನ |
ಭವಮಂ ಪೊಲಗೆಟ್ಟ ಬಟ್ಟೆ ಗಾಣ್ಬಂತಾಗಳ್ || ೧೯ ||

ಮ॥ ಇದಂ ಮೂಱನೆಯೆನ್ನತೀತಭವದೊಳ್ ಶ್ರೀಷೇಣನೆಂ ಕೊಟ್ಟನಾ |
ಕುಳಮಾಹಾರದ ದಾನಮಂ ಮುನಿಯುಗಕ್ಕಾ ಪುಣ್ಯದಿಂ ಭೋಗಭೂ ||
ತಳದೊಳ್ ಪುಟ್ಟ ಕಷಾಯಮಿಲ್ಲದುದಱಿಂ ದೇವತ್ವಮಂ ಪೆತ್ತೆ ನು |
ಜ್ಜ್ವಳದಾನಂ ಕಿಱಿದುಂ ಕರಂ ಪಿಱಿದೆ ದಲ್ ಸತ್ಕ್ಷೇತ್ರಬೀಜೋಪಮಂ || ೨೦ ||

ಸ್ರ॥ ಸೌಧರ್ಮಂ ಕಲ್ಪವಿಾ ಶ್ರೀನಿಲಯ ಮಿದು ವಿಮಾನೋತ್ತಮಂ ತನ್ನಿಬದ್ಧಂ |
ಮಾಧುರ್ಯಾತೋದ್ಯ ಮಿಂತೀ ಪೂಜಗಣಮರರಂದಾಲಸದ್ಬೋಧನವ್ಯಾ ||
ಬಾಧಂ ತಾತ್ಪರ್ಯದಿಂದಂ ಒಗೆದಱಿವುದು ಮಾದೇವದೇವೀವ್ರಜಂ ಪೂ |
ಕ್ಕಾಧನ್ಯಂಗೆಯ್ದು ವಂದಂದೆಱಗಿದುದುಚಿತ ಸ್ವಾಮಿಜನ್ಯಪ್ರತೀತಂ || ೨೧ ||

**ಚಂ॥** ಎಱಗಿ ಮಹತ್ತರಾಮರರಣಂ ಕರಮಂ ಮುಗಿದಿರ್ದು ಮುಂದೆ ನಿಂ |
ದಱಿಪಿವರಿಂತಿವರ್ ನಿನಗೆ ದೇವಿಯ ರೀ ಗಣಿಕಾಳಿ ನಿನ್ನ ಕ ||
ಣ್ಣಱಿದು ವಿನೋದಮಂ ಸಲಿಸುಗುಂ ನಿನಗೀ ಸುರರಾಳ್ಗಳಿತ್ತ ನೋ |
ಡ[ಱಿ]ಯನೆ ಯಿಾವಿಮಾನತತಿ ಗಿಂದ್ರವಿಭೂತಿಗ ಮದ್ವಿತೀಯನ್ಯೆ || ೨೨ ||

ಕಂ॥ ದೇವಭವತ್ಸುಕೃತಾ ವಿ |
ರ್ಭಾವಿತ ನುತಪುಣ್ಯನಾಹುದಿಂದಂ ನೀಂ ಶ್ರೀ ||
ದೇವನೆ ಯಿಂತೀಕ್ರಮದಿಂ |
ಶ್ರೀವಿಜಯ ಭವದ್ವಿಮಾನಮುಂ ಶ್ರೀನಿಳಯುಂ || ೨೩ ||

ಮ|| ಸ್ರ|| ಇದೆ ಸಾರಂ ಸ್ವರ್ಗಲೋಕಕ್ಕಿದೆ ಸುರಸಮಿತಿ ಪ್ರಾರ್ಥಿತಂ ಯೌವರಾಜ್ಯಾ |
ಸ್ಪದ ಮಿಂದ್ರ ಪ್ರಾಜ್ಯರಾಜ್ಯಕ್ಕಿದೆ ಬೆಳಸು ಸುಖಕ್ಕಾನವ ಶ್ರೀಗೆ ಚಿತ್ತಾ ||
ಭ್ಯುದಯಕ್ಕುತ್ಪತ್ತಿ ರಾಗಕ್ಕಿರಲೆಡೆ ವಿಭವಕ್ಕಾಲಯಂ ಲೀಲೆಗುದ್ಯ |
ನ್ಮದನಾವಾಸಂ ವಿಲಾಸಕ್ಕನವರತ ಮನೋಭಾಗ ಭಾವ್ಯಕ್ಕೆ ನಿಚ್ಚಂ || ೨೪ ||

ಮ|| ಅದಱಿಂದಂ ನಿನಗೀಪರಾರ್ಧ್ಯನಿಲಯಂ ಶ್ರೀಪ್ರಾಭವಂ ಜೈನ ಪಾ |
ದದುಪಾಸಾಸ್ತವದಿಂದ ಮಾಡುದು ಜಿನಾನಿಂದ್ಯಾಲಯಂಗಳ್ಗೆ ಮಾ ||
ಟ್ಟುದು ಪೂಜಾಪಿಭವೋತ್ಸವಂಗಳನವಂ ಮುಂದಿರ್ದು ನಂದೀಶ್ವರಾ |
ದ್ಯುದಿತದ್ವೀಪ ನಮಸ್ಕ್ರಿಯಾ ವಿಧಿಗಳಂ ನೀಂ ಮಾಡು ದೇವಾಧಿಪಾ || ೨೫ ||

ಕಂ|| ಎಂದು ಮಹತ್ತರ ದೇವರಿ |
ದಂ ದೇವಂ ಗಂದು ಬಿನ್ನಪಂ ಗೆಯ್ದೊಡೆ ನೀ ||
ಮೊಂದಂತೆ ಧರ್ಮದಿಂ ದಮೆ |
ಯಿಂ ದಾನದಿ ನಲ್ಲದಾಗವಖಿಳಸುಖಂಗಳ್ || ೨೬ ||

ಎನೆ ಎನೆ ತತ್ಕ್ಷಣದೊಳ್ ಸಿಂ |
ಹನಂದೆ ತತ್ಕಲ್ಪದೊಳ್ ನಿದಾನದಿ ನಾದೇ ||
ವನ ದೇವಿಯಾಗಿ ಪುಟ್ಟಿದ |
ಳನಂತರಂ ಶ್ರೀಪ್ರಭಾಭಿಧಾನ ಸಮೇತಂ || ೨೭ ||

ಇನಿಯನ ವಿಯೋಗಭರದಿಂ |
ಮುನಿದಿರಲಣಮುಱಿಕೆ ತಡೆದಿರ್ಕುಮೆ ಮಿಂ ||
ಚಿನ ಬಟಿಯ ಮೊಟಿಗುವೋಲ್ ಬೆ |
ನ್ನನೆ ಬಂದಳ್ ಸಿಂಹನಂದೆ ಗದು ಸಂದೆಯಮೇ || ೨೮ ||

ಚಂ|| ಪೊಸಮದದಾನೆಯಂ ನಸೆಯ ಪೆರ್ಬಿಡಿ ಜಂಗಮಕಲ್ಪವೃಕ್ಷಮಂ |
ಮಿಸುಗುವನಲ್ಪಕಲ್ಪಲತೆ ನೀರದಮಂ ಕುಡುಮಿಂಚು ಪೊರ್ದಿ ಶೋ ||
ಭಿಸುವವೊಲಾಸುರಾಧಿಪನನಾ ಪರಮೇಶ್ವರಿ ಪೊರ್ದಿ ನಾಡೆ ಕ |
ಣ್ಗೆಸೆದಳತೀತಜನ್ಮಕೃತಪುಣ್ಯಸಮಾನ ಮನಃಪ್ರವೃತ್ತಿಯಿಂ || ೨೯ ||

**ವ||** ಮತ್ತ ನಿಂದಿತಾರ್ಯನು ಮಲ್ಲಿಯೆ ಬಂದಮಳಪ್ರಭವಿಮಾನದಮಿತಪ್ರಭದೇವನಾದಂ, ಆ ದಿವಿಜೇಶ್ವರಂಗೆ ಸತ್ಯಭಾಮಾರ್ಯೆ ಸುಪ್ರಭೆಯೆಂಬ ದೇವಿಯಾದಳಂತಾ ನಾಲ್ವರು ಮಂದೋಱೂರ್ವರ ನಗಲ್ದಿರಲಾಱದೆ ಪೋಹದಿಂದಮೊಂದೆ ಕಲ್ಪದೊಳ್ ಪುಟ್ಟಿದರ್, ಶ್ರೀದೇವಂ ವಿಮಾನೋಪಾಂತಸ್ಥಿತಿಯೊಳ್, ಜಿನನಿಲಯಪ್ರಾಂಗಣದೊಳ್:—

ಕಂ|| ಪೊಸಮುತ್ತಿನ ಮಂಡಪದೊಳ |
ಗೆಸೆವ ಕನತ್ಕನಕ ಪೀಠದೊಳ್ ವಿಧಿಸಹಿತಂ ||
ಮಿಸಿಸಿ ಬಱಿಕ್ಕರ್ಚಿಸಿ ಪೂ |
ಜಿಸಿ ಮಣಿಮಯ ಜೈನಬಿಂಬಮಂ ಜಿನಚಂದ್ರಂ || ೩೦ ||

ಚಂ|| ಜಿನಪದಪದ್ಮದೊಳ್ ಮಣಿಕಿರೀಟತಟಂ ಜಿನನಾಥತತ್ವದೊಳ್ |
ಮನಮನವದ್ಯಜೈನಗೃಹದೊಳ್ ವಿವಿಧಾರ್ಚನೆ ಭಕ್ತಿಯೊಳ್ ವಿಭಾ ||
ವನೆ ಪರಿಶುದ್ಧಿಯೊಳ್ ತ್ರಿಕರಣಂ ಸಮಸಂದಿರೆ ಮುಖ್ಯಸೌಖ್ಯಭಾ |
ಜನ ನಮರಂ ತ್ರಿಲೋಕತಿಲಕಂಗೆ ಮಹಾಮಹಮಂ ಪೊಣರ್ಚಿದಂ || ೩೧ ||

ವ|| ಅಂತಾಷ್ಟಾಹ್ನಿಕಮಹಾಮಹಿಮೆಯ ನೆಂಟುದಿವಸಂಬರಂ ಮಾಡಿ ಜಿನೇಂದ್ರಮಹಮಂ ನಿರ್ವರ್ತಿಸಿ ತದನಂತರದೊಳ್ ಜೈನಶಾಸನಚೂಡಾಮಣಿ ಶ್ರೀದೇವಂ ಸೌಧರ್ಮೇಂದ್ರ ನಿಂದ್ರಾಣಿ ವೆರಸು ತನ್ನ ವಿಮಾನಕ್ಕೆ ಬರ್ಪುದನಱಿದಿದಿರ್ವಂದು ಯಥಾರೂಪಪ್ರತಿಪತ್ತಿಯಿಂದಮರಪರಿಷನ್ಮಧ್ಯ ದೊಳಮರೇಂದ್ರನ ನಿಱಿಸಿ ತಾನುಂ ನಿಜೋಚಿತಾಸನದೊಳ್ ಕುಳ್ಳಿರ್ದು ದೇವಾಂಗನಾಸಂಗೀತ ಪ್ರಸಂಗಪ್ರಸ್ತಾವನೆಯಂ ಪ್ರಾರಂಭಗೆಯ್ಯಲ್ವೇೞ್ವುದುಂ, ವಿಚಿತ್ರಸುರಸೂತ್ರಧಾರನಪ್ಸರಃಪಾತ್ರ ಪ್ರವೇಶ ಪ್ರದೇಶ ಪ್ರರೋಚನಾನಂತರಂ ಪುಷ್ಪಾಂಜಲಿವಿಕ್ಷೇಪಂ ಗೆಯ್ಯೆ:—

ಕಂ|| ಕೆದಱಿದ ಪುಷ್ಪಾವಳಿ ರಂ |
ಗದೊಳಿ ನಯಂಬಡೆಯೆ ರಂಗಭೂಮಿಕೆ ಪೂತೊ ||
ಪ್ಪಿದಪುದೆನಿಸಿದುದು ಸಮುಹ |
ಸ್ತದ ಗಾಂಧರ್ವರಿ ನಪೂರ್ವಸಂಗೀತಕದೊಳ್ || ೩೨ ||

ವ|| ಅಂತು ಕೈಶಿಕೀವೃತ್ತಿನರ್ತನೋಪೇತಮು ಮಂಗನಾಕುಸುಮಸುಕುಮಾರಾಂಗಸಮುಚಿತಮು ಮಪ್ಪ ಲಾಸ್ಯಮ ನಚ್ಚರಸೆಯರಾದಿ ಸಂಧ್ಯಂಗಗತನೃತ್ಯಾಂಗರಸಭಾವಾಭಿನಯಂಗಳ ನಿಂದ್ರಂ ಶ್ರೀ ದೇವಂಗೆ ನೋಡಿಕೊಳ್ಳಿಂಬಂತೆ ಪರಿಸ್ಫುಟಂ ಮಾಡಿ ಕರಣಾಂಗಹಾರಚಾರಿಪರಿಕ್ರಮಂಗಳೊಳ್ ಪೊಸಮಸೆಯ ಮಿಂಚಿನಂತಮರಸಮಾಜದ ಕಣ್ಗಳೊಳ್ ಪಳಂಚಿ ರಂಜಿಸಿ:—

ಕಂ|| ಮಂಜೀರಕ ಮಂಜುಳ ಮೃದು |
ಸಿಂಜಪರಿಸ್ಫುರಿತ ಮೆಸೆಯೆ ಭರತದ ಪಲವುಂ ||
ಪಂಜಿಕೆಗಳಂತದೇಂ ಸುರ |
ಲಂಜಿಕೆಯರ್ ವಿಷಮಮುಂ ಸಮಂ ಮಾಡಿದರೋ || ೩೩ ||
ನಿಲೆ ಸೂಚಿಯುಲರಸಳ್ ಕೊರ |
ಗಲೀಯುದಭಿನಯದ ಕರಣದ ಭ್ರಮರಿಯ ನಿ ||
ಶ್ಚಲತೆಯ ಲಘುತೆಯ ಮಾರ್ದವ |
ವಿಲಾಸ ನರ್ತನದಿ ನಮರಿಯರ್ ನರ್ತಿಸಿದರ್ || ೩೪ ||

ವ|| ಅಂತು ಸೂಚೀನಾಟ್ಯಪರ್ಯವಸಾನಂಬರಮಾದಾಕೆಗಳಾಡಿದಾಟಮನಿಂದ್ರಂ ನೋಡಿ ಮುಚ್ಚಿ ಮುಚ್ಚುಗೊಟ್ಟುಪಸಂಹಾರಿಸಿ ನಾಡೆಯುಂ ಬೇಗಮಂ ಶ್ರೀದೇವನೊಳ್ ಸಂಭಾಷಿಸಿ ತದ್ವಿಜನೊಡವರೆ ವಾಸವಂ ನಿಜಾವಾಸಕ್ಕೆ ಪೋಗಿ ಶ್ರೀದೇವನಂ ವಿಸರ್ಜಿಸೆ ಬಂದಾದೇವಂ ನಿಜವಿಮಾನದೊಳಿರ್ದು ಶ್ರೀ ಪ್ರಭೆಯುಮಮಿತ ಪ್ರಭೆಯುಮಮಿತಪ್ರಭನುಂ ಸುಪ್ರಭೆಯುಂ ಬೆರಸು:—

ಉ|| ಒರ್ಮೆ ಹಿಮಾದ್ರಿಗೊರ್ಮೆ ರಜತಾದ್ರಿವನಾವಳಿ ಗೊ[ರ್ಮೆ]ವಾರ್ಧಿಗೊ |
ರ್ಮೊರ್ಮೆ ಪಯೋಧಿಗೊರ್ಮೆ ಜಿನಮಂದಿರಸುಂದರಮಂದಿರಕ್ಕೆ ಮ ||
ತ್ತೊರ್ಮೆ ಮನುಷ್ಯಲೋಕಜಿನಪೂಜೆಗೆ ಪೋಗೆ ದಲೞ್ತಿಗೊರ್ಮೆ ಸೌ |
ಧರ್ಮದೊಳಿರ್ದುದಿಲ್ಲ ಮನಮಾ ದಿವಿಜೇಶ್ವರನೇಂ ಸಧರ್ಮನೋ || ೩೫ ||

**ವ||** ಅಂತು ವಂದನಾಭಕ್ತಿಗೆ ಪೆಱವುಮಱಿಕೆಯ ಕೃತ್ರಿಮಚೈತ್ಯಾಲಯಂಗಳ್ಗೆ ವಿವಿಧಾರ್ಚನಾ ವ್ಯಗ್ರಾಗ್ರಹಸ್ತ ಸುರಪರಿಜನನಾಗಿ ಪೋಗಿ:—

ಮ|| ಮುದಮಂ ಮಾಡುವ ಧೂಪಧೂಮಲತೆಯಿಂ ಕರ್ಪೂರದೀಪಾಳಿಪ್ರದೀ |
ಪದಿ ನೆತ್ತಂ ಬಿಡುಮುತ್ತಿನಚ್ಚಗಡೆಯಿಂ ಮಂದಾರಪುಷ್ಪೋಪಹಾ ||
ರದಿ ನುದ್ಗಂಧಸುಗಂಧದಿಂ ದಮೃತಸಾನ್ನಾಯ್ಯಾಜ್ಯದಿಂ ಗಂಧತೋ |
ಯದಿ ನಾಪ್ತಾಂಘ್ರಿಯ ಪೀಠಮರ್ಚಿಸಿದರಾ ಶ್ರೀದೇವನುಂ ದೇವಿಯುಂ || ೩೬ ||

**ವ||** ಅಂತನುಮೋದಮಾನ ಶ್ರೀಪ್ರಭಾದೇವ್ಯಾದಿಕಂ ಜಿನೇಂದ್ರ ಪಾದಾರವಿಂದಂಗಳ ನರ್ಚಿಸಿ ಮಗುಟ್ದು ಬಂದು ವಿಷಯಸುಖಾಸ್ವಾದನ ರಸಾಮೃತ ತತ್ಪರನಾಗಿರೆ:—

ಮ|| ತವದುತ್ಕಂಠತೆ ಮಳ್ಕುಮಳ್ಕದೆಱಕಂ ತಳ್ಕಯ್ಸದಟ್ಕೆಱ್ ಮನ |
ಕ್ಕವಚಂ ಮಾಡದಳುರ್ಕೆ ಕುಂದದಳುಪೇವಂ ಗೊಳ್ಳದಾಸಕ್ತಿ ಕೈ ||
ತವ ಮಿರ್ದಲ್ಲಿರದಿರ್ದೊಡಂಬಡಗಲಲ್ ಮೆಯ್ದಾರದೊಳ್ಪೆಂಬಿವಂ |
ದಿವಿಜಂ ಶ್ರೀಪ್ರಭೆಗಿತ್ತ ನಾಕೆ ದಿವಿಜಂಗಿತ್ತಳ್ ರತಕ್ರೀಡೆಯೊಳ್ || ೩೭ ||

**ವ||** ಅಂತು ಶ್ರೀದೇವಂ ಶ್ರೀಪ್ರಭೆಯುಂ ತಾನುಂ ಸುಪ್ರಭೆವೆರಸಮಿತಪ್ರಭನುಂ ಅಯ್ದು ಪಲ್ಯೋಪಮ ಪರಿಮಾಣದಾಯುಷ್ಯಮು ಮಾಗೆಯುಂ ಏೞುವರೆ ದಿವಸಮುಮೆ ಸುರಭಿ ನಿಶ್ವಾಸಾವಧಿ ಯಾಗೆಯುಂ, ಅಯ್ನೂರು ವರ್ಷ ಮಮೃತಾಹಾರ ಸಂಸ್ಮರಣ ಮರ್ಯಾದೆಯು ಮಾಗೆಯುಂ, ಪುಣ್ಯ ಸುಖಮಹಿಮಾಧಿಷ್ಠಾನಮಾದ ಮೊದಲ ಕಲ್ಪದೊಳ್ ನಿಖಿಳ ನಿರಾಕುಳ ನಿರ್ವ್ಯಂದ್ವನಿಳಿಂಪ ನಿರತಿಶಯ ಪರಮಾನಂದ ನಿಳಯಮುಮಪ್ಪ ಶ್ರೀನಿಲಯ ವಿಮಾನದೊಳಗೆ ಪಲ್ಯೋಪಮಪಂಚಕಾವಸಾನದೊಳಱು ದಿಂಗಳಾಯುಷ್ಯಮುಂಟೆನೆ:—

ಮಾಲಿನೀವೃತ್ತಂ|| ಸುರಭಿಕುಸುಮದಾಮಂ ಬಾಡಿ ನೀರೋಡೆ ದಿವ್ಯಾ |
ಭರಣರುಚಿಗಳಸ್ತೋದಸ್ತ ಸೂರ್ಯಾಂಶುಗಳ್ಪೋ ||
ಲಿರೆ ಮಸುಳೆ ನಿಜಾಂಗಂ ಮಂದಮಂದಾಯಮಾನಂ |
ತರುತಿರೆ ಮುಖಜೃಂಭಾರಂಭಮಂ ಜಿಂಹಭಾವಂ || ೩೮ ||

ಕಂ|| ಅಱುದಿಂಗಳ್ವರೆಗಂ ಪೆಱ |
ಪೆಱವನನುಷ್ಠಿಸದೆ ಜಿನಪದಾಂಭೋರುಹದೊಳ್ ||
ನಿಱಿಸಿ ಮತಿಯಂ ಸುರರ್ ಕ |
ಯ್ನಿಱಿ ನಿಱಿದೊಡನೊಡನೆ ಪೊಗೞಿ ತಱಿಸಂದಮರರ್ || ೩೯ ||

**ವ||** ಅಂತು ಷಣ್ಮಾಸಾವಧಿವರಮಾ ವಿಬುಧೇಶ್ವರ ನಾತ್ಮಾತೀತಭವಜ್ಞಾನವಿಳಸಿತಮನಮನವ ಧಾರಿಸಿ:—

ಚಂ|| ಅತಿವಯನಾಗಿ ಬಾಳಮೃತಿಯಿಂದಱಿದಂದಿನ ಮೂರ್ಖವೃತ್ತಿ ಪಂ |
ಡಿತಮೃತಿಯಿಂದ ಮಲ್ಲದದು ನೀಗದು ಪೋಗೆನಗೆಂಬ ಭಾವಿತಾ ||
ತ್ಮತೆ ಗಮರೇಂದ್ರನುಂ ಶಚಿಯು ಮಾಮರಣಂ ನಮಗಾದೊಡಲ್ತೆ ಭ |
ವ್ಯತೆ ಬಳೆದಿರ್ಕುಮೆಂದು ಬಯಸುತ್ತಿರೆ ಜೈನಗೃಹಾಂತರಾಳದೊಳ್ || ೪೦ ||

ವ|| ಆಗಳ್ ತನ್ನ ಸಹಜಾತದುಕೂಲಾಂಬರಮಂದಾರಮಾಲಾಭರಣಂಗಳ್ವೆರಸು ಜಿನೇಂದ್ರ ಭವನದೊಳಿರ್ದು ತನ್ನಲ್ಲಿಗೆ ವಂದ ಸೌಧರ್ಮೇಂದ್ರನಂ ಬೀಳ್ಕೊಂಡು:--

ಕಂ|| ಅಸಿತ ವಿಷೋತ್ಪಳ ಪರಿಮಳ |
ದುಸಿರೊಳ್ ಮಡಿದಂದಿನೆಗ್ಗು ನೀಗೆ ಜಿನಾಂಘ್ರಿ ||
ಶ್ವಸದಮೃತಾಬ್ಧಮ ನಾಘ್ರಾ |
ಯಿಸಿದಂ ಜಿನಚಂದ್ರ ನಾಸಹಾಯ ಸಮೇತಂ || ೪೧ ||

ವ|| ಅಂತು ಮುಗಿದ ಕೆಯ್ಯುಂ ನಿಶ್ಚಲಿತಮಪ್ಪ ಮನುಮುಂ ಎಱಗಿದ ಮಣಿಮಕುಟಮುಂ ಮುಚ್ಚಾರಿಸುವ ಪಂಚನಮಸ್ಕಾರ ಪದಂಗಳುಂ ಮೆಯ್ವೆತ್ತಿರೆ:--

ಕಂ|| ಉದಯಿಸೆ ರವಿ ತಾರೆಗಳೊ |
ಮ್ಮೊದಲನಿತು ಮದೃಶ್ಯ ಮಪ್ಪವೋಲ್ ಯಮನುದಯ ||
ಕ್ಕಿದಿರಾಗಿ ತಮ್ಮ ನಾಲ್ವರು |
ಮದೃಶ್ಯರಾದರ್ ಜಿನಾಂಘ್ರಿಕಮಲದ ಮೊದಲೊಳ್ || ೪೨ ||

ವ|| ಅಂತದೃಶ್ಯರಾಗಿ ಬಂದರ್ಕಕೀರ್ತಿಗಂ ಜ್ಯೋತಿರ್ಮಾಲೆಗಂ ಶ್ರೀದೇವನಾದ ನೀಂ ನಮಿತ ತೇಜನಯುಕಳಂಕಾಚಾರಸಾರನಯಾಗಿ ಪುಟ್ಟಿದಯ್. ಶ್ರೀಪ್ರಭೆಯುಂ ಬಂದಿಲ್ಲಿ ನಿನಗೆ ವಲ್ಲಭೆ ಜ್ಯೋತಿಃಪ್ರಭೆಯಾದಳ್, ಅಮಿತಪ್ರಭನುಂ ಬಂದಿಲ್ಲಿ ತ್ರಿಪೃಷ್ಠಂಗಂ ಸ್ವಯಂಪ್ರಭೆಗಂ ಶ್ರೀವಿಜಯ ನೆಂಬ ಮಗನಾದೊಂ, ಸುಪ್ರಭೆಯು ಮಾತಂಗರಸಿ ಸುತಾರೆಯಾದಳ್, ನೀಂ ಶ್ರೀಷೇಣನಾದಂದು ಸತ್ಯಭಾಮೆಯಂ ಮದುವೆ ನಿಂದೊಡೆ ತನ್ನಂ ನಿರ್ದಾಟಿಸಿ ಕಳೆಯೆ ಪೋಗಿ ಸತ್ತು ವಿವಿಧಜವಂಜವ ಚಕ್ರಾಕ್ರಮಣದಿಂ ಬಂದು ಭೂತರಮಣನಾಮಕಾಂತಾರದೈರಾವತೀತೀರದ ತಾಪಸಾಶ್ರಮದೊಳ್ ಮಿಥ್ಯಾತಪಶ್ಚರಣಪರಿಣತ ತಾಪಸಸಿಕಾಯದೊಳ್:--

ಕಂ|| ಉಟಜ ಕುಶ್ಯೆವಾಗ್ರಹ ಲಂ |
ಪಟನೊರ್ವಂ ತವಸಿ ಕೌಶಿಕಾಖ್ಯಂ ಮತ್ತಾ ||
ಜಟಿಧರ್ಮಪತ್ನಿ ಗುಣಗಣ |
ಪಟುಮಾಸಿತೆ ಪೆಸರೊಳವಳರುಂಧತಿಯೆಂಬಳ್ || ೪೩ ||

ವ|| ಇವರ್ಗಂ ಪುಟ್ಟಿದೊಂ ಮೃಗಶೃಂಗನೆಂಬೊಂ ತಾಪಸಕುಮಾರನಾತಂ ಬಾಲಕಾಲಪರಿಗೃಹೀತ ತಾಪಸಾಚರಣಂ ತಪೋರೂಪಮಾರ್ಗಮುಂ ಮೆಚ್ಚಿದ ಮಿಥ್ಯಾಂಧಕಾರಾವಕುಂಠಿತಸಮ್ಯಗ್ದರ್ಶನನಾಗೆ:—

ಕಂ|| ಹರಿಣಾಜಿನವಾಸಃಪರಿ |
ಕರನಾಗಿ ವಿಚಿತ್ರ ಮೌಂಜಮೇಖಳೆಯ ನವಂ ||
ಧರಿಯಿಸಿ ತೊಡರ್ದಂ ಭವವಾ |
ಗುರೆಯೊಳ್ ವಾಗುರೆಯ ಮೃಗದವೋಲ್ ಮೃಗಶೃಂಗಂ || ೪೪ ||

ವ|| ಅಂತು ಪಲಕಾಲಂ ತಪಂಗೆಯ್ದವಸಾನಕಾಲದೊಳ್ ನಿದಾನಪೂರ್ವಕಂ ಸತ್ತಶನಿಘೋಷನಾಗಿ ಪುಟ್ಟಿ ಸತ್ಯಭಾಮೆಯಪ್ಪ ಸುತಾರೆಯಂ ಕಂಡು, ತಾಂ ಮುನ್ನೆ:—

ಕಂ|| ನೆಱೆಯನುಭವಿಸಲ್ ಪಡೆಯದ |
ಮಱುಕದಿ ನುಯ್ದು ಸುತಾರೆಯಂ ನಿನ್ನೊಳ್ ತ ||
ಟ್ಟೆಱಿಯಲಣಮಾಱದಕ್ಕಟ |
ಪೊಱಮಾಱಿದ ನೀತನೋವದಿದು ಕರ್ಮಕೃತಂ || ೪೫ ||

ವ|| ಎಂದು ವಿಜಯಕೇವಲಿಗಳ್ ವಿನೇಯನಿಕಾಯಾಂಬುಜಭಾನುಗಯ್ವರ ಭವಾವಳಿವೆರಸು ಸುತಾರಾಹರಣಮಂ ಸವಿಸ್ತರಂ ಬೆಸಸುವುದುಮಶನಿಘೋಷನಲ್ಲಿಯೆ:—

ಕಂ|| ಆಗಳೆ ಮಳಿನಾತ್ಮಪದಾ |
ಭಾಗಮನಿರದಲಸದಲೆದು ಶಿಲೆಯೊಳ್ ಪೊಯ್ದು ||
ದ್ಯೋಗದಿನರ್ಹದ್ದೀಕ್ಷೆಗೆ |
ಪೋಗದೆ ಮೆಯ್ಪಂದನೇಕೆ ತಡೆಗುಮೊ ಭವ್ಯಂ || ೪೬ ||

ವ|| ಅನಂತರಂ:—

ಕಂ|| ಅದಿರದೆ ಮೋಹವಿರೋಧಿಯ |
ಪುದಿದೊದವಿದ ಬಳ್ಳಿವಳ್ಳಿಯಂ ಪಱಿದು ಮನೋ ||
ಮುದದಿಂ ಸ್ವಯಂಪ್ರಭಾದೇ |
ವಿ ದೀಕ್ಷೆಗೊಂಡಳ್ ಕವರ್ತೆಗೊಂಡಪೊಲಱೆವಂ || ೪೭ ||

ವ|| ಅಂತಾಗಳಾಶಾಂಬರರಾಜಹಂಸನುಂ ಶ್ರೀವಿಜಯನುಂ ಶ್ರಾವಕವ್ರತಪೂತಾಂತರಂಗನನಂಗವೈರಿ ಪಾದಪಯೋಜಂಗಳ್ಗೆಱಗಿ ಪೋಗಿ ರಥನೂಪುರಚಕ್ರವಾಳದೊಳಂ ಪೌದನಪುರದೊಳಂ ತತ್ವಭಾವಾನ್ವಿತ ದೇಹಾಂತರಂಗರ್ ಸುಖಮಿರೆ:—

ಕಂ|| ವಂದಾರು ಬಂದ ಫಾಲ್ಗುಣ |
ನಂದೀಶ್ವರದೊಳ್ ತ್ರಿಪೃಷ್ಟತನಯಂ ತನುವಂ ||
ತಂದುಪವಾಸಕ್ಕಾ ನಿಜ |
ನಂದನದ ಸಹಸ್ರಕೂಟ ಚೈತ್ಯಾಲಯದೊಳ್ || ೪೮ ||

ಇರೆ ದೇವಾಸುರಗುರು ನಾ |
ಮರಿರ್ವರಾಕಾಶಚಾರಣರ್ ವಂದರ್ಹ ||
ತ್ಪರಮೇಶ್ವರನಂ ಬಂದಿಸಿ |
ನಿರಸ್ತತಮರಾಜಿನೇಂದ್ರ ಗೃಹಮಂಟಪದೊಳ್ || ೪೯ ||

ಚಂ|| ಇರೆ ಗುರುಭಕ್ತಿಯಿಂ ನೃಪತಿ ಬಂದಿಸಿ ತನ್ಮುನಿಮುಖ್ಯರಂ ಮುನೀ |
ಶ್ವರ ಬೆಸಸಿಂ ಮದೀಯಜನಕಂಗಿನಿತುಂ ಭರತತ್ರಿಖಂಡದೊಂ ||
ದರಸಿನ ಚಕ್ರವರ್ತಿಪದದಾದ ನಿಮಿತ್ತಮ ನಿಂತುಟೆಂದು ವಿ |
ಸ್ತರವಿಧಿಯಿಂದ ಮುಂದು ಬೆಸಕೊಳ್ವುದು ಮಗ್ರಮುನೀಂದ್ರ ನಟ್ಟಿಯಿಂ || ೫೦ ||

ವ|| ಇಂತೆಂದು ಬೆಸಸಿದರೀಗಳ್ ಪೂರ್ವವಿದೇಹದೊಳ್ ಶ್ರೇಯಾಂಸರೆಂಬ ತೀರ್ಥಕರ ಪರಮದೇವರ ಗಣಧರದೇವರ್ ಭರತಕ್ಷೇತ್ರದ ತ್ರಿಷಷ್ಟಿಶಲಾಕಾಪುರುಷ ಪುರಾಣಪ್ರಸ್ತಾವದೊಳ್ ಬಂದ

ಪೊದಲರ್ಧಚಕ್ರವರ್ತಿಯಪ್ಪ **ತ್ರಿಪೃಷ್ಠ**ನ ಕಥೆಯಂ ಪೇೞೞ ಕೇಳ್ದಪುದೆಂತೆಂದೊಡೆ:— ಈ ಜಂಬೂದ್ವೀಪದ ಭರತಕ್ಷೇತ್ರದ ಮಗಧವಿಷಯದ ರಾಜಗೃಹಮನಾಳ್ವ **ವಿಶ್ವಭೂತಿಗಂ ಜೈನೆ**ಯೆಂಬರಸಿಗಂ **ವಿಶ್ವನಂದಿ**ಯೆಂಬೊಂ ಮಗನಾದೊಂ, **ವಿಶ್ವಭೂತಿ**ಯ ತಮ್ಮನಪ್ಪ **ವಿಶಾಖಭೂತಿ**ಗಂ **ಸುಲಕ್ಷಣೆ**ಗಂ **ವಿಶಾಖನಂದಿ**ಯೆಂಬೊಂ ಮಗನಾದೊಂ ಮತ್ತಾ ವಿಶ್ವಭೂತಿ ವಿಶ್ವಂಭರಾ ಭಾರಮುಂ:—

ಕಂ|| ಅಂಗದಮುಂ ಪಿರಿಚನೆಯಾ |
ಮುಂಗುರಮುಂ ತಾಳ್ದುವಂದದಿಂ ತಾಳ್ದಿದನು ||
ತುಂಗಭುಜಂ ದಕ್ಷಿಣಭುಜ |
ದಿಂ ಗೆಲ್ದು ವಿರೋಧಿ ಮಂಡಲಾಧೀಶ್ವರರಂ || ೫೧ ||

**ವ||** ಆತಂ ತನಗೆ ಸಂಸಾರ ನಿರ್ವೇಗಮುಂ ಪುಟ್ಟೆ ಪಿರಿಯಮಗಂ ವಿಶ್ವನಂದಿಯಿರ್ದಂತೆ ತಮ್ಮನೊಳಾದ ಸ್ನೇಹದಿಂ ವಿಶಾಖಭೂತಿಯುಮನಧಿರಾಜ ಪದವಿಯೊಳ್ ವಿಶ್ವನಂದಿಯಂ ಯುವರಾಜಪದವಿಯೊಳ್ ನಿಯೋಜಿಸಿ ಶ್ರೀಧರಗುರುಗೆ ಶಿಷ್ಯನಾಗಿ:—

ಕಂ|| ದ್ವಾದಶ ರಾಜಕಮುಂ ಗೆ |
ಲ್ದಾದುನ್ನತಿ ಪೆರ್ಚೆ ಕರ್ಮರಿಪುವಿಜಯದೊಳಾ ||
ಸಾದಿತಕೇವಳಲೋಚನ |
ನಾದೇವಂ ಮೋಕ್ಷಲಕ್ಷ್ಮಿಗಧಿಪತಿಯಾದಂ || ೫೨ ||

**ವ||** ಇತ್ತ ವಿಶಾಖಭೂತಿಯರಸುಗೆಯ್ಯುತ್ತಿರೆ ಪೂೞಲ ಪೂಜಿವಳಯದೊಳ್:

ಚಂ|| ಅಸುಗೆಯ ನಾಗಕೇಸರದ ಬಲ್ಮುಗುಳಂ ಬಿಱಯೊತ್ತಿ ತುಂಬಿ ಚುಂ |
ಬಿಸೆ ರಜದಿಂ ತೊವರ್ಚಿದ ಕೊರಲ್ ಸಪಿಯಂ ತರೆ ಪಾಡಿ ಕೂಡಿ ಯಂ ||
ಜಿಸುವುವು ಪೊಕ್ಕ ನಿಸ್ಪೃಹನನೆಂಬ ಪೊಗೞ್ತೆಗೆ ವಿಶ್ವನಂದಿ ಮಾ |
ಡಿಸಿದನದೊಂದು ನಂದನಮನಂಗಜಮಂಗಳಗೇಯ ಶೋಭೆಯಂ || ೫೩ ||

**ವ||** ಅಂತು ವಿಧೃತಭದ್ರಶಾಳವಿಶಾಳವಿಳಾಸಮನುದ್ಯಾನಮುಂ ಸಮೆಯಿಸಿ ವಿಶ್ವನಂದಿ ವನಕೇಳೀಲೀಲೆಯಿನಿರ್ಪುದುಂ ವಿಶಾಖಭೂತಿ ಮಂತ್ರಾಲೋಚನೆಯೊಳ್ ಯುವರಾಜಂಗೆ ಬೞಯನಟ್ಟಿ:—

ಮ|| ಪಗೆವರ್ ಪುರ್ವಿನ ಪೋಮದಂತಿರೆ ಮಿಗಲ್ ಮರ್ಯಾದೆಯುಂ ವಿಶ್ವಭೂ |
ತಿಗೆ ಚಂದ್ರೋದಯದಬ್ಧಿಯಂತೆ ನಮಗಿಂ ಮರ್ಯಾದೆಯುಂ ಮೆಲ್ಲನು ||
ಲ್ಲಗೆ ದಾಂಟಲ್ ಬಗೆವಪ್ಪರೀಪದವಿಯೊಳ್ ನೀ ಮಿರ್ಪುದಾಂ ಪೋಗಿ ಕೂ |
ರಗೆ ಪಿಂಡಂ ಗಜವೈರಿ ಪೊಕ್ಕಪೊಲಂಪ್ರಧ್ವಂಸನಂ ಮಾಡುವೆಂ || ೫೪ ||

**ವ||** ಎನೆ ವಿಶ್ವನಂದಿ ವಿನಯವಿನಮಿತ ಕಿರೀಟನಿಂತೆಂದಂ:—

ಮ|| ಕೃಪೆಯಿಂದಂ ಬೆಸಸಲ್ಕದಾವುದೆಡೆ ಪುಟ್ಟುಳ್ಳಿತೆ ಕಯ್ ಬೇಗುಮೇ |
ನೃಪ ಮತ್ತಾನಿರೆ ದೇವರೇವರಿಸಿತೇ ನೀಪೊೞ್ತು ಪೊೞ್ತಾಗೆ ಪೋ ||
ಗಿ ಪರಕ್ಷ್ಮಾಪರನಿಕ್ಕಿ ಕೆಯ್ಯ ಬೆಸಗೊಳ್ವಾರಂಭಿಗಂಬೋಲ್ ಪಯೋ |
ಧಿಪರೀತಾವನಿಯಂ ನಿಮಿರ್ಚಿ ನಿನಗಾಂ ನಿಷ್ಕಂಟಕಂ ಮಾಡುವೆಂ || ೫೫ ||

ವ|| ಎಂದು ಮಱುಮಾತಿಂಗೆಡೆಯಿಲ್ಲದಂತು ನುಡಿದು ಚತುರಂಗಬಲಸಮೇತಂ ವಿಶ್ವನಂದಿ ಪೋದ ಸನ್ನೆಗ ಮಿತ್ತಲ್;—

ಕಂ|| ಪರಚಕ್ರಮು ಕಯ್ಗೆವರಲ್ |
ಕರಚಕ್ರಂ ಪೂಣ್ದು ಪೋದ ಪಂಗದೊಳೆ ಪರಂ ||
ಪರಪೋದನಾತ ನಿನ್ನಂ |
ದಿರದಾನಂದಿತ ವಿಶಾಖನಂದಿ ದುರಾತ್ಮಂ || ೫೬ ||

ಆತನ ವನಪಾಲಕರಂ |
ಘಾತಿಸಿ ಕೆಯ್ಕೊಂಡು ಬನಮು ಸಿರೆಯಿರೆ ಶೌರ್ಯೋ |
ಪೇತಂ ರಿಪುನೃಪರಂ ಗೆ |
ಲ್ದಾ ತಕ್ಕಿನ ವಿಶ್ವನಂದಿ ತಡೆಯದೆ ಬಂದಂ || ೫೭ ||

ವ|| ಕಾಪಿನವರ ನಿಱಿದು ಬನಮಂ ಕೆಯ್ಕೊಂಡಿರ್ದ ವಿಶಾಖನಂದಿಯ ನೋಡಿಸಿ ತನ್ನ ಬನಮಂ ಕೆಯ್ಕೊಂಡುದನರಸಂ ಕೇಳ್ದು ವಿಶ್ವನಂದಿಗೆ ಬಱಿಯಟ್ಟೆ ಬಂಸಿ ವಿಶಾಖನಂದಿಯುಪ್ಪೊಡೆ ಮರುಳ್, ಎಮಗಱಪದೆ ನಿನ್ನ ಪರೋಕ್ಷದೊಳಿದಂ ನೆಗಟ್ದಿ ನಾದೊಡಮಾತಂಗೊರ್ಮೆಗೆ ಕ್ಷಮಿಯಿಸವೇಳ್ಕುದೆಂದು ವಿಶಾಖನಂದಿಯುಂ ತಂದು ವಿಶ್ವನಂದಿಯ ಕಾಲಂ ಪಿಡಿಯಿಸಿ ಮುನ್ನಿನಂದದೊಳ್ ಸುಖಮುರಸು ಗೆಯ್ಯುತ್ತುಂ ಪಲಕಾಲಂ ಸಲೆ ಸಂಸಾರನಿರ್ವೇಗಂ ದೊರೆಕೊಳೆ ವಿಶಾಖಭೂತಿ ವಿಶ್ವನಂದಿಯುಂ:—

ಕಂ|| ಮೇದಿನಿಯುಂ ಕೆಯ್ಕೊಳ್ ಪದ |
ನಾಮದು ಜಿನದೀಕ್ಷೆಗೆನಗೆ ಮಗನೇ ಎನೆ ನಿಂ ||
ಮಾಮದ ನಪ್ಪಂ ದುರ್ಜನ |
ನಾಮದ ನಪ್ಪಂತು ಕಲ್ತೆನೇ ಜಿನಮತಮಂ || ೫೮ ||

ವ|| ಎಂದು ವಿಶಾಖಭೂತಿಯೊಡನೆ ವಿಶ್ವನಂದಿಯುಂ ದಿಗಂಬರದೀಕ್ಷೆಯಂ ಕೆಯ್ಕೊಂಡಂ. ವಿಶಾಖನಂದಿಯು ಮಾಧಿರಾಜ್ಯಪದದೊಳ್ ನಿಂದು ರಾಜ್ಯಂಗೆಯ್ಯೆ:—

ಮ|| ಒಱಿಯಿಂದುರ್ಚಿದ ಬಾಳ್ವೊಲಾಗೆ ತಪದೊಳ್ ನಿಂದಿರ್ದರೇಱಲ್ಲದಿ |
ರ್ದೊಱಿಯಂ ಪೋಲೆ ವಿಶಾಖನಂದಿ ರಿಪುಭೂಪರ್ ಪಕ್ಕುವೆತ್ತಿತ್ತಿ ತ ||
ಟ್ಟಿಱಿದೆತ್ತಂ ಸೆಱಿಗೆಯ್ದುಕೊಂಡು ನೆಲನಂ ತಾಮಾಳ್ದು ಮತ್ತಿತ್ತರಂ |
ದುಱಿದಾತಂಗಿರದೋಲೆ ಯೊಯ್ವಬೆಸನಂ ಘೀರುತ್ವಮೇ ಗೆಯ್ಯದೋ || ೫೯ ||

ವ|| ಇತ್ತ ವಿಶಾಖಭೂತಿಯುಂ ಭೂರಿತಪೋಭಾರಮಂ ನಿರ್ವಹಿಸಿ ಶತಾರಕಲ್ಪದೊಳ್ ಸಾಮಾನಿಕ ದೇವನಾದೊಂ, ವಿಶ್ವನಂದಿಯುಂ ಗ್ರಾಮನಗರಖೇಡಖರ್ವಡತೀರ್ಥಪುಣ್ಯಾರಣ್ಯಂಗಳಂ ತೊಳಲ್ದು ವಿಹಾರಿಸುತ್ತುಮುತ್ತರಮಥುರೆಗೆ ವಂದು ಮಾಸೋಪವಾಸದ ಪಾರಣೆಯೊಳ್ ಚರಿಗೆವ್ವಗೆ ಕಟ್ಟಿದಿರೊಳ್ ನಿಟ್ಟಾಲಿಯಾಗಿ ಕೆಂಗಣ್ಮಸಗಿ ಬಂದೊಂದಿಂಪ ಪಸು ತನ್ನುಸಿಪತಿಯ ನಿಱುವುದು ಮದಱ ಬಿಸಿದು ಪೊಸಯಿಸಿದನ್ನವಪ್ಪ ಸೈಗೋಡುಗಳುರ್ಚೆ ಪೀಥೀಮಧ್ಯದೊಳ್ ಬಿಟ್ದಿರ್ದ ವಿಶ್ವನಂದಿ ಮುನಿಯಂ ಪೊಡ್ತುನೆಡೆಯಿಟ್ಟೋಲೆಯಡಕುವ ವಿಶಾಖನಂದಿ ಗಣಿಕಾವಾಟದೊಳ್ಸುಟಯುತ್ತಿರ್ದು ಪಂತಂಮ ನೋಡಿ ಕಂಡಱಿದು:—

ಮ|| ಮುನಿದೆಮ್ಮಂ ಕೊಲಲೊಡ್ಡಿದಂದಿನ ಶಿಲಾಸ್ತಂಭಕ್ಕೆ ಕೆಯ್ನೀಡಿದಂ |
ದಿನ ಕಿಟ್ಟಿಂದಿನ ಕಾದಿದಂದಿನ ಕಪಿತ್ಥೋರ್ವೀಜದಿಂ ಮೋದಿದಂ ||
ದಿನ ಗೆಲ್ಲಿಂದಿನ ಗೆಲ್ದು ಬಂದು ಬನಮುಂ ಕೊಂಡಂದಿನಾ ನಿನ್ನ ಗ |
ರ್ಜನೆಯುಂ ಬೀರಮು ಮಾಗಳಿಂತು ಪುಡಿಯೊಳ್ ಚೀಸೀ ಪೂರ್ವಿ ಪೂರ್ವದೇ || ೬೦ ||

ವ|| ಎಂದು ತನ್ನ ನೆಱಿಗೊಂಡ ಮುಳಿಸಿನೊಳ್ ನೆಱನಲ್ಲದುದಂ ನೆಱಂ ಮಾಡಿ ನೆಱನೆತ್ತಿ:—

ಕಂ|| ಕಱಯೇರ್ಪತ್ತಿಭ ವೈರಿಯ |
ನೆಟಕೆ ಶಿರಂ ಮಾಟ್ಪವೋಲವಂ ಮುಳಿಯಿಸ ಕೆ ||
ಯ್ಗಱಯೆ ಮುನಿಪತಿಯ ಕಣ್ಗಳೊ |
ಳಿಱವೋದುವು ತೀವಿ ಕೋಪರಸದ ಪೊನಲ್ಗಳ್ || ೬೧ ||

ವ|| ಅಂತುತ್ಕಂಠತನಾಗಿದುರ್ ಮಿನ್ನಲ್ಲ ಪುಟ್ಟಯುಂ ನಿನ್ನಂ ಕೊಲ್ಲದಿರೆನೆಂದು ರೌದ್ರಪರಿಣಾಮದಿಂ ವಿಗತಜೀವಿತನಾಗಿ ವಿಶಾಖಭೂತಿಯೆ ಪುಟ್ಟಿದಾ ಶತಾರಕಲ್ಪದೊಳ್ ಸಾಮಾನಿಕದೇವನಾಗಿ ಪುಟ್ಟಿ ತಮ್ಮ ಕಿಱಯಮ್ಮನುಂ ತಾನುಂ:—

ಮ|| ವಿತತಾಷ್ಟಾದಶ ಸಾಗರೋಪಮ ನಿಜಾಯುಷ್ಯಾಂತದಿಂದಂ ಪ್ರಜಾ |
ಪತಿ ಭೂಚಕ್ರಿಗೆ ಬಂದು ಪುಟ್ಟಿ ಬಲದೇವಂ ವಾಸುದೇವಂ ಜಯಾ ||
ವತಿಯುಂ ತನ್ಮೃಗಯಾವತೀಲಲನೆಯುಂ ತಾಯ್ಮಕ್ಕಳಾಗಾಳ್ದರು |
ನ್ನತಿಯಿಂ ಚಕ್ರಿಸಮೇತಮಿಾಭರತ ಭೂಶ್ರೀಯಂ ಮಹೀವಲ್ಲಭಾ || ೬೨ ||

ವ|| ಅಲ್ಲಿ ವಿಶಾಖಭೂತಿಚರಂ ವಿಜಯಂ ಬಲದೇವಂ, ವಿಶ್ವನಂದಿಚರಂ ತ್ರಿಪೃಷ್ಠಂ ವಾಸುದೇವನಿವರ ವೃತ್ತಕಂ, ವಿಶಾಖನಂದಿಯು ಮಾಯುರವಸಾನದೊಳ್ ಸತ್ತನೇಕಭವಗಹನಪರ್ಯಟನದಿಂ ಬಂದೈರಾವತ ತೀರದ:—

ಕಂ|| ಕಾನನದಾಶ್ರಮದೊಳ್ ವೈ |
ಖಾನಸಕುಲಪತಿ ಮಹಾಜಟಂ ತಂದೆ ಜಯಾ ||
ಮಾನಿನಿ ತಾಯ್ ತನ್ಮಿಥುನದ |
ಸೂನುತೆಗೆ ವಿಶಾಖನಂದಿ ಭಾಜನನಾದೊಂ || ೬೩ ||

ವ|| ಆಗಿ ಸುಜಟನೆಂಬ ಪೆಸರಂ ಪಡೆದು ಬಳೆದು:—

ಕಂ|| ಜಿನದೀಕ್ಷಿತನಂತ್ಯದೊಳಮ |
ರನಾಗಿ ಮುನ್ನಿನ ನಿದಾನದಿಂ ದಶ್ವಗ್ರೀ ||
ವನಭಶ್ಚರ ನಲ್ತೆ ಪುರಾ |
ತನವೈರದಿ ನಱಿದನಾ ತ್ರಿಪೃಷ್ಠನ ಕೆಯ್ಯೊಳ್ || ೬೪ ||

ವ|| ಎಂದು:—

ಕಂ|| ದೇವಗುರು ಬೆಸಸೆ ಜನಕ ಭ |
ವಾವಳಿಯಂ ಕೇಳ್ದು ವಿನಯ ವಿನಮಿತನಾದೊಂ ||
ಶ್ರೀವಿಜಯಂ ಮುದಮೊದವೆ ತ |
ಪೋವೃದ್ಧಂ ಧರ್ಮವೃದ್ಧಿಯೆಂದು ಮುನೀಂದ್ರಂ || ೬೫ ||

ಅಮರ ಗುರುವೆರಸು ಯತಿ ಜಲ |
ದ ಮಾರ್ಗ ಗತಿಯಾದ ನರಸ ನುಪವಾಸಪರಿ ||
ಶ್ರಮಮುನರ ಮನೆಗೆ ವಂದ |
ಶ್ರಮದೊಳ್ ಕಳೆದೆಯ್ದಿ ರಜತರಾಜಿತನಗಮಂ || ೬೬ ||

**ವ||** ರಥನೂಪುರ ಚಕ್ರವಾಳಮುಂ ಪೊಕ್ಕುರ್ವರಾಸ್ಯತಿಲಕನುಂ ತಾನುಂ ನಿದಾಘಸಮಯದೊಳುದ್ಯಾನಕೇಳೀರಸ[ಸ]ಕ್ತ ಚಿತ್ತರಿರೆ ತದ್ವನೈಕದೇಶದ ರಕ್ತಾಶೋಕಪಾದಪತಳದೊಳಿರ್ದ ವಿಪುಳರುಮಚಳರುಮೆಂಬ ಮುನಿಯುಗಳಮುಂ ಕಂಡುದ್ಯಾನ ಕ್ರೀಡೆಯೊಳಾದ ಪರಿಶ್ರಮಮುಂ ತನ್ಮುನಿಪಾದ ಕಲ್ಪಪಾದಪಚ್ಛಾಯೆಯೊಳ್ ಕಳೆಯಲ್ಬರ್ಪಂತೆ ಬಂದು ಬಂದಿಸಿ ನಿಜಮುಕುಟ ಮರೀಚಿ ನಿರ್ಮಲ ಸಲಿಲ ಧಾರೆಯಿಂ ತದೀಯ ಪಾದಪಂಕಜರಜಮುಂ ತೊಳೆದು ಕಳೆದು ವನಕುಸುಮಸ್ತಬಕಗಳಿನರ್ಚಿಸಿ ಕುಳ್ಳಿರ್ದು ಧರ್ಮಶ್ರವಣಾನಂತರ ಮಿಂತೆಂದು ಬಿನ್ನಪಂ ಗೆಯ್ದರ್:—

**ಮ||** ಪಟುವಪ್ಪಿಂದ್ರಿಯವರ್ಗದಿಂ ತನಗೆ ಮುಂ ಕಾಮಾರ್ಥಮೆಮ್ಮೊಳ್ ಪರಿ |
ಸ್ಫುಟಮಿನ್ನಿಂದ್ರಿಯ ಶಕ್ತಿಯಂ ಜರೆ ಭರಂಗೆಯ್ದೆಯ್ದೆ ಜಿನ್ನಟ್ಟೆ ವಿ ||
ಸ್ಫುಟಮಿಲ್ಲಿಚ್ಛೆಯ ಮಚ್ಚು ಮೋಹಧನಮುಂ ಮುಂದಿಟ್ಟು ವಲ್ ತೃಷ್ಣೆ ಲಂ |
ಪಟೆ ಜೆನ್ನಿಂ ಬಿಡದೊಲ್ಲೆ ಮೊಲ್ಲೆ ಮನೆಯುಂ ದೂದಟ್ಟೆ ದುರ್ಬುದ್ಧಿಯಂ || ೬೭ ||

**ಕಂ||** ಆಕೆ ಬಿಸುಡದೊಡ ಮಾಮಿಂ |
ತೇಕಿರ್ಪೆಮೊ ಬಿಸುಡದಾಕೆಯಂ ಬೆಸಸುವುದ ||
ವ್ಯಾಕುಳಮೆಮ್ಮಾಯುಷ್ಯ |
ಸ್ತೋಕ ಬಹುತ್ವಮ ನಗಾಧ ಬೋಧ ಪಯೋಧೀ || ೬೮ ||

**ವ||** ಎಂದು ಪಾಪೇಭ ಕಂಠೀರವನುಂ ಶ್ರೀವಿಜಯನುಂ ಬೆಸಕೊಳೆ ವಿಪುಳಾಮಳ ಮುನಿನಾಥರ್ ಧರ್ಮವಾತ್ಸಲ್ಯಕಲ್ಯಾಣಾಂತರಂಗರ್ಗಳಿಂ ನಿಮಗಿಪ್ಪತ್ತಾಱುದಿವಸ ಮಾಯುಷ್ಯಮೆಂದು ಬೆಸಸಿ ಬಿಜಯಂ ಗೆಯ್ವುದುಂ:—

**ಕಂ||** ಸೆರಗಂ ಪಾರದೆ ಮತಿ ಮಱೆ |
ದಿರದೆ ಮನಂ ಗೊಂಡೊಡಂಬಡಂ ಬಳಸಿದಾರ್ ||
ಸಿರಿವಂತಿಗೆಯಂ ತೊಱೆವಂ |
ತಿರೆ ಖಚರಶ್ರೀಯ ನುಱಿದನಾ ಜಿನಚಂದ್ರಂ || ೬೯ ||

ವಿಜಯಶ್ರೀಯುಂ ಶ್ರೀಯುಂ |
ನಿಜಮೆನೆ ನೆಗಟ್ದ ಮಿತತೇಜನೊಡನೆ ಜಿತಾತ್ಮಂ ||
ರುಜೆಯಂ ಬಿಸುಡುವವೋಲ್ ಶ್ರೀ |
ವಿಜಯಂ ಬಿಸುಟಂ ಧರಾಲತಾಂಗಿಯನಾಗಳ್ || ೭೦ ||

**ವ||** ಅಂತುಮುಯ್ದು ನಿರ್ವರುಮೋರೊರ್ವರೊಳ್ ತೆಕ್ಕೆ ತೆಕ್ಕೆಯಿಂ ಬಾಹ್ಯಾಭ್ಯಂತರ ಪರಿಗ್ರಹಂಗಳಂ ಪರಿಚ್ಛೇದದಿಂ ತೊಱೆದು ತಮ್ಮ ಮಕ್ಕಳಪ್ಪ ಸುತೇಜನುಮಂ ಶ್ರೀದತ್ತನುಮಂ ರಾಜ್ಯದೊಳ್ ನಿಱಿಸಿ ಬಱಿಯ ಮಿಪ್ಪತ್ತಾಱು ದಿವಸಂಬರಂ:—

· ಕಂ|| ಅಭಿನಂದನಮುನಿರವಿವಾ |
ಕ್ಪ್ರಭೆ ತಮಮಂ ಕಳೆಯೆ ಮಯ್ದುನಿರ್ವರು ಮುರೆ ನೋಂ ||
ತಭಯಮನರಾಗಿಯುಂ ದುರಿ |
ತಭೀತಿಯಿಂ ನಡುಗಿ ಬಡಬಡಾದಂತಾದರ್ || ೭೧ ||

**ವ||** ಅಂತುಪವಾಸಕೃಶೀಕೃತಾಂಗರಾಗಿ ಶರೀರಕರ್ಮಪರಮಾಣುಗಳನೊಡನೊಡನೆ ತವಿಸಿ ಕಾನನಮಧ್ಯಸ್ಥಿತರುಂದ್ರಗಿರೀಂದ್ರಶೃಂಗದೊಳ್ ಆತ್ಮಪರಪರ್ಯಸ್ತಿ ನಿರಾಪೇಕ್ಷರಾಗಿ ತಾಜಲಾ(ರ)ದ ಸ್ಥಳನಳಿನಿಗಳನೆ ಪೋಲ್ತುತ್ತರಾಶಾಭಿಮುಖರಾಗಿ ಪೋಗಿ ತದದ್ರಿಶಿಖರದೊಳೊಂದೆಡೆವೆತ್ತು:—

ಕಂ|| ಮೃಗರಾಜಂ ರಾಜತ್ವದ |
ಪಗೆಗಿಱಿಪಂತಿಱಿದು ನಖದಿ ನೋವದೆ ತಿನೆಯುಂ ||
ಬಗೆಯದೆ ವೀರಪ್ರಾಯೋ |
ಪಗಮನದಿಂ ದಮಿತತೇಜ ನೊಡಲಂ ಬಿಸುಟಂ || ೭೨ ||

**ವ||** ಶ್ರೀವಿಜಯನುಂ ನಿಜಜನಕಲಕ್ಷ್ಮೀಕಾಂಕ್ಷಿತ ಪ್ರಾಯೋಪಗಮನ ಮರಣ ಮಾರ್ಗದೊಳ್ ಶರೀರಪರಿತ್ಯಾಗಂಗೆಯ್ದು ನಮಿತತೇಜನುಂ ಪ್ರಾಣತಕಲ್ಪಜಂ:—

ಶಾ|| ಲಾವಣ್ಯಾಮೃತವಾರ್ಧಿಮಗ್ನದಿವಿಜ ಶ್ರೀರಮ್ಯದೊಳ್ ನಂದನಂ |
ದ್ಯಾವರ್ತಾಖ್ಯ ವಿಮಾನದೊಳ್ ಮಣಿಮಯಕ್ಷ್ಮಾಭಾಸಿಯೊಳ್ ಪುಟ್ಟಿ ತ ||
ದ್ದೇವಂ ದೇವನಿಷೇವಣೀಯ ನಣಿಮಾದ್ಯೈಶ್ವರ್ಯಯುಕ್ತಂ ತ್ರಿಶ |
ದ್ದೇವೇಂದ್ರಂ ಮಣಿಚೂಳನೆಂಬ ಪೆಸರಿಂ ಪೆತ್ತಂ ದಿವ್ಯೈಶ್ವರ್ಯಮಂ || ೭೩ ||

**ವ||** ಶ್ರೀವಿಜಯನುಂ ಸ್ವಸ್ತಿಕಾವರ್ತವಿಮಾನದೊಳ್ ಮಣಿಚೂಳನೆಂಬೊಂ ಸಾಮಾನಿಕ ದೇವ ನಾದೊಂ, ಮತ್ತಮಮಿತತೇಜನಭಶ್ಚರಚರಸುರೇಶ್ವರಂಗೆ:—

ಚಂ|| ಗಡಣದ ಸಂಗಡಂ ಪೊಗಟ್ವ ಪಪ್ಪವರುಂ ಬಗೆ ಮುಟ್ಟು ಮುಟ್ಟುವೊಂ |
ದೆಡೆಗೆಡೆಮಾಡದೆಯ್ದಿ ಸುವ ವಾಹನಮುಂ ಬಳಸಿರ್ದ ಸಬ್ಬವರ್ ||
ನುಡಿವರಸಾಳು ಮೋಲಗಿಪ ನಿರ್ಜಿಗಳುಂ ಮುದುಗಣ್ಣಳುಂ ಮೊದಲ್ |
ಪಡಿಯಱಿರುಂ ಮಹಾಮರರದೇಂ ಜಿನಚಂದ್ರನಗಣ್ಯಪುಣ್ಯನೋ || ೭೪ ||

**ವ||** ಅಂತುಮಲ್ಲದೆಯುಂ:—

ಚಂ|| ಪರಿವೆಸವೋಗಲಚ್ಚರಸಿಯರ್ ಶ್ರುತಿಯೊಳ್ ಸಮನಾಗೆ ಪಾಡಲ |
ಚ್ಚರಸಿಯರಟ್ಟಿಯಿಚ್ಚೆಯಱಿದುಂ ಪರಿವಾರಿಸಿ ಪಾಟಮೋದಲ ||
ಚ್ಚರಸಿಯ ರಾಡಲಚ್ಚರಸಿಯರ್ ಮನದಿಚ್ಚೆಯ ನಿಚ್ಚೆಗೆಯ್ಯಲ |
ಚ್ಚರಸಿಯ ರೆಂದೊಡೇವೊಗಟ್ವುದೋ ಜಿನಚಂದ್ರ ವಿಭೂತಿಲೀಲೆಯುಂ || ೭೫ ||

ಕಂ|| ರಮಿಯಿಪುದಮರಿಯರೊಳ್ ತೆಗ |
ಟಮರಿಯರೊಳ್ ತವದ ಮೇಳಮಮರಿಯರೊಳಲಂ ||
ಪಮರಿಯರೊ[ಳ್ನಗೆಸಬ್ಬವ] |
ಮಮರಿಯರೊಳ್ ನಡೆವುದಮರನೇಂ ಸುಖಮಯನೋ || ೭೬ ||

**ವ||** ಅಂತಪರಿಮಿತಾಮರಾಮರೀ ಲಲಿತಾಪ್ಸರಸ್ಸಂದೋಹಸುಂದರಾರವಿಂದಮಿತ್ರಂ ಮಣಿಚೂಳ ದಿವಿಜಂ ಮಿತ್ರಮಣಿಚೂಳಂ ಬೆರಸು ಕುಂದದೆ:—

ಮ|| ಬಗೆ ಧರ್ಮೋತ್ಸವಮೆಲ್ಲಿತಲ್ಲಿಗೆ ಜಿನಶ್ರೀಗೇಹದೊಳ್ಪೆಲ್ಲಿತ |
ಲ್ಲಿಗೆ ಯೋಗಿವ್ರಜಮೆಲ್ಲಿತಲ್ಲಿಗೆ ಮಹಾ ತೀರ್ಥೌಘದಿಂಪೆಲ್ಲಿತ ||
ಲ್ಲಿಗೆ ದೇವಾಗಮ ಮೆಲ್ಲಿತಲ್ಲಿಗೆ ಮಹಾ ಪೂಜಾಂಗದೊಳ್ಪೆಲ್ಲಿತ |
ಲ್ಲಿಗೆ ತನ್ನಂ ತಡವಿಲ್ಲದುಯ್ಯೆ ಪಲವುಂ ಕಾಲಂ ಸಲುತ್ತಿರ್ಪಿನಂ || ೭೭ ||

**ವ||** ದೋಷಧಾತುಮಲವಿಹೀನನುಂ ನಖರೋಮಶ್ಮಶ್ರುಕೇಶವಿರಹಿತನುಂ, ನಿದ್ರಾಲಸ್ಯಾಕ್ಷಿ ಪಕ್ಷ್ಮಪಾತೇತರನುಂ, ದಶಮಾಸಾವಧಿ ನಿರ್ಯತ್ಸುರಭಿ ನಿಶ್ವಾಸನುಂ, ವಿಂಶತಿ ಸಹಸ್ರವರ್ಷಪರ್ಯಂತ ಸ್ಮೃತಾಹಾರನುಂ, ವಿಂಶತಿಸಮುದ್ರೋಪಮಾಯುಷ್ಯನು, ಮಖಿಳಾಮಯವಿದೂರನುಂ, ನಿತ್ಯ ಯೌವನನುಮಾಗಿ ಮಣಿಚೂಳಾಮರೇಶ್ವರನಿರೆ ತದೀಯದಿವ್ಯಶರೀರಂ:—

**ಚಂ||** ಹಿಮರುಚಿ ಕುಂದೆ ಕುಂದೆ ನೆಱೆದೊಪ್ಪುವ ಚಂದ್ರಿಕೆ ಕುಂದುವಂತೆ ಬಂ |
ಹಿಮವದಪಾರಸಾಗರಮಿತಾಯುವ ಲೆಕ್ಕದ ಕುಂದೆಕುಂದೆ ದೈ ||
ನ್ಯಮನೊಳಕೊಂಡುದಂತಕನ ಸಾಮ್ಯಮ ನಂತಕವೈರಿಯಲ್ಲದುಂ |
ತಮರಮನುಷ್ಯರಾರ್ಪರೆ ನಿರಾಕರಿಸಲ್ ಭುವನತ್ರಯಂಗಳೊಳ್ || ೭೮ ||

ಉ|| ಇನ್ನಱುದಿಂಗಳುಂಟಿನೆ ನಿಜಾಯು ಸುರಪ್ರಕರಂ ಮೊಗಂಗಳಂ |
ಬಿನ್ನಗ ಮಾಡೆಯುಂ ತಮಗೆ ಶಂಕೆಯುಮಿಲ್ಲ ವಿಭೂಷಣಪ್ರಭಾ ||
ತ್ಯುನ್ನತಿ ಮಾಣೆಯುಂ ಮುಖರಸೋನ್ನತಿ ಮಾಣದೆ ಜೈನತತ್ವಸಂ |
ಪನ್ನರನಾಜವಂಜವಭಯಂ ಗೆಲಲಾರ್ಕುಮೊ ಮಾರಲಾರ್ಕುಮೋ || ೭೯ ||

**ವ||** ಅಂತು ಮಣಿಚೂಳದೇವಂ ತನ್ನ ಸಹಾಯಂ ಮಣಿಚೂಳನುಂ ತಾನುಂ:—

ಕಂ|| ಜಿನಚರಣದೊಳಿರೆ ನತಿ ಮತಿ |
ಜಿನಗುಣಸಂಪತ್ತಿಯೊಳ್ ಪೊದಟ್ದಿರೆ ತನು ತ ||
ಜ್ಜಿನಗೃಹದೊಳಿರೆ ಸುರೇಂದ್ರರ್ |
ಜಿನೇಂದ್ರ ಮಹಿಮೆಗೆ ಸಮಾಧಿಯೊಳ್ ಮೊದಲಿಟ್ಟರ್ || ೮೦ ||
ತಳಮುಳಗಾಗದ ತನು ಪೆ |
ಪ್ಪಳಿಸದ ನೆಲೆ ತೊಲಗದಱಿವು ಪೆಳರದ ಚೇಷ್ಟಾ ||
ವಳಿ ಪಂಚನಮಸ್ಕಾರದ |
ಕಳರುತಿ ತಮಗಮರೆ ಮಡಿಪಿದರ್ ಮಣಿಚೂಳರ್ || ೮೧ ||

**ವ||** ಅಂತು ಮಡಿಪಿ ಶರೀರ ಸಮೇತಂ ನಿರಾದಾನವಿದಾನದಿಂ ಗಾಳಿವೆಱಗಿನೊಳಿರ್ದಮಳದೀಪಿ ಕೆಯಂತಿರ್ವರುಮೊಡನದೃಶ್ಯರಾಗಿ ಬಂದು ಜಂಬೂದ್ವೀಪದ ಪೂರ್ವವಿದೇಹದ ವತ್ಸಕಾವತೀವಿಷಯದ **ಪ್ರಭಾಕರೀ**ಪುರಾಧಿಪಂ **ಸ್ತಿಮಿತ**ಸಾಗರಂಗಂ **ವಸುಂಧರೆ**ಗಂ ಮಣಿಚೂಳಚರ **ನಪರಾಜಿತ**ನೆಂಬ ಪೆಸರೊಳಾಂ ಬಲದೇವನಾದೆಂ ತದ್ಧರಾಧೀಶ್ವರಂಗಂ ವಸುಮತಿಗಂ ಮತ್ತಿನ ಮಣಿಚೂಳಚರನಯ್ ನೀನನಂತವೀರ್ಯನಾಮದಿಂ:—

ಕಂ|| ಅತಿಕಾಂಕ್ಷಿತನೈ ಬಗೆ ಗೆ ||
ಟ್ಟತೀತ ಭವಜನಕ ಲಕ್ಷ್ಮಿಯೊಳ್ ಮತಿ ನಿಲೆ ದು ||
ರ್ಗತಿಗೆಳಸಿ''ಯಾಮತಿಸ್ಸಾ |
ಗತಿ''ಯೆಂಬುದನಱಿಪಿ ವಾಸುದೇವನೆಯಾದಯ್ || ೮೨ ||

ವ|| ಅಂತು ನಾಮಿರ್ವರುಂ ಬಲದೇವ ವಾಸುದೇವರಾಗಿ ಬಳೆಯೆವಳೆಯೆ ನಮ್ಮ ತಂದೆ ಸ್ತಿಮಿತ ಸಾಗರ ಮಹೀನಾಥನುಂ ಜಿನೇಂದ್ರಪಾದಾಭ್ಯರ್ಚನದೊಳ್ ನಿರ್ಗ್ರಂಥರೂಪಧಾರಿಯಾಗಿ ವಂದನಾ ಭಕ್ತಿಗೆ ವಂದ ಧರಣೀಂದ್ರನಂ ಕಂಡು ತತ್ಸೌಂದರ್ಯಮಹಿಮೆಗೆ ನಿದಾನಂಗೆಯ್ದು ಭವನಾಮರಲೋಕ ದೊಳ್ ಧರಣೀಂದ್ರನಾಗಿ ಪುಟ್ಟಿದನಾನುಂ ನೀನುಂ ನಿಜಗುರುಪರೋಕ್ಷದೊಳಧಿರಾಜನುಂ ಯುವ ರಾಜನುಮಾದೆ ವಿನ್ನೆನ್ನ ನಿನ್ನ ತದ್ಭವಸಂಬಂಧದ ಬಂಧುರಲಂಬಪ್ರಾರಂಭಮಂ ಕೇಳ್ವೆಯಪ್ಪೊಡೆ:—

ಮ|| ಖಚರೇಂದ್ರಂ ತರವೇಟ್ಟ ಗಾಯಿಕೆಯರೊಂದಾಕಾರದಿಂ ಪೋಗಿ ಸ ||
ತ್ಕಚಿಯಂ ತತ್ಸುತೆಯಂ ಮರುಳ್ದು ಕನಕಶ್ರೀಯಂ ಭಯಭ್ರಾಂತಿಯಿಂ ||
ದಚಿರಂ ತಂದಿದಿರಾದ ಖೇಚರನನಾಂ ಬಿಲ್ವೊಯ್ದು ಕೊಂದಿಕ್ಕೆ ಚ |
ಕ್ರಚಿರಾಸ್ಥಾಯಿಯ ನರ್ಧಚಕ್ರಿಶಿರಮಂ ನೀಂ ಪಾಸುಲಂ ಮಾಡಿದೈ || ೮೩ ||

ವ|| ಅಂತು ದಮಿತಾರಿವಧಾನಂತರದೊಳರ್ಧಚಕ್ರವರ್ತಿಯಾಗಿ ನೀಂ ನಿಜಾಯುರವಸಾನದೊಳ್ ರತ್ನಪ್ರಭೆಯೆಂಬ ಮೊದಲ ನರಕದ ಪದಿಮೂಱುಮಿಂದ್ರಕಂಗಳೊಳಗೆ ಚಂದ್ರಕಮೆಂಬ ಮೊದಲಿಂದ್ರ ಕದೊಳ್ ನಾಲ್ವತ್ತಿರ್ಛಾಸಿರವರ್ಷಂ ಮಧ್ಯಮಾಯುಷ್ಯನಾಗಿ ಪುಟ್ಟಿದಯ್. ಆನುಂ ನಿನ್ನ ವಿಯೋಗದುಃಖದೊಳ್ ಜನೇಶ್ವರ ತಪಶ್ಚರಣಕ್ಕೆ ತಱಿಸಂದು ನೆಗಟ್ದು ಕಡೆಯೊಳ್ ಪ್ರಾಯೋ ಪಗಮನದಿಂ:—

ಕಂ|| ತೊಱೆದು ಪರೀಷಹತತಿಯಂ |
ಪಱಿವಱಿಯಾದೊಡಲ ನಾತ್ಮನಿರಪೇಕ್ಷತೆಯಿಂ ||
ನಿಱಿಸಿ ದುರಿತಾರಿಯೊಡಮಡಿ |
ದೆಱೆವಿಡಿದಘಹರನ ನಚ್ಯುತೇಂದ್ರನೆನಾದೆಂ || ೮೪ ||

ವ|| ನಿನ್ನುಮಂ ಸ್ತಿಮಿತಸಾಗರಚರಧರಣೀಂದ್ರಂ ತೀವ್ರದುಃಖಮನನುಭವಿಸುವುದನಱಿದು ಮೋಹದಿಂ ಸಮ್ಯಗ್ದರ್ಶನಮಂ ಕೆಯ್ಕೊಳಿಸಿದ ನಾನಾರಕಪಟಲಂಗಳೊಳೆಂತೆನೆ—ಮಂದರದಿಂ ಮೊದಲಿಂ ಕೆಳಗೆ ಲಕ್ಷಯೋಜನಾಂತರದೊಳೊಂದೊಂದೋರೊಂದುರಜ್ಜುಪ್ರಮಾಣಾಂತರಿತಂಗಳಕ್ಕು ಮವಾವೆಂ ದೊಡೆ ರತ್ನಪ್ರಭೆಯುಂ ಘರ್ಮೆಯುಮೆಂಬ ಪ್ರಥಮಭೂಮಿಯುಂ, ಶರ್ಕರಾಪ್ರಭೆಯುಂ ವಂಶೆಯು ಮೆಂಬೆರಡನೆಯ ಭೂಮಿಯುಂ, ವಾಳುಕಾಪ್ರಭೆಯುಂ ಶೈಲೆಯುಮೆಂಬ ತೃತೀಯ ಭೂಮಿಯುಂ, ಪಂಕಪ್ರಭೆಯುಮಂಜನೆಯುಮೆಂಬ ನಾಲ್ಕನೆಯ ಭೂಮಿಯುಂ, [ಧೂಮಪ್ರಭೆಯುಂ ಅರಿಷ್ಟೆಯು ಮೆಂಬಯ್ದನೆಯ ಭೂಮಿಯುಂ] ತಮಃಪ್ರಭೆಯುಂ ಮಘವಿಯುಮೆಂಬಾಱನೆಯ ಭೂಮಿಯುಂ, ಮಹಾ ತಮಃಪ್ರಭೆಯು ಮಾಘವಿಯುಮೆಂಬೇೞನೆಯ ಭೂಮಿಯುಮೊಂದೊಂದಕ್ಕೆರಡೆರಡು ಪೆಸರಕ್ಕು ಮವಱೊಳಗೆ:—

ಹರಿಣೀವೃತ್ತಂ|| ಅರಿವೆರಸು ನಾಲ್ಕುಕ್ಷ್ಣಂ ಮೇಗಿರ್ದ ಭೂಮಿಗಳತ್ತ ಮ |
ತ್ತಿರಡುವರೆ ಭೂಭಾಗಂ ಕೋಡುತ್ತುಮಿರ್ಪುವು ವಜ್ರಮುಂ ||
ಕರಗಿ ಪರಿಗುಂ ಸೋಷ್ಣಾ ಭೂಮಧ್ಯದೊಳ್ ಹಿಮವದ್ವಸುಂ |
ಧರೆಯೊಳಿರೆ ತಪ್ತಾಶ್ಮಂ ಶೀತಾಶ್ಮದಂತಿರೆ ಕೋಡುಗುಂ || ೮೫ ||

ಕಂ|| ಆ ಬಹುವಿಧ ದುಃಖ ಬಳ |
ಕ್ಷೀಬೋರ್ವೀಜಂಗಳುದ್ಭಯಂಕಾರಗುಹಾ ||
ಕ್ಷಾಬಹುಳಮಿಂದ್ರುಕಶ್ರೇ |
ಣೀಬದ್ಧ ಮಹಾಪ್ರಕೀರ್ಣಕಾಖ್ಯ ಬಿಲಂಗಳ್ || ೮೬ ||

ವ|| ಅವು ತಾಮನುಕ್ರಮದೊಳೆ ತ್ರಿಂಶತ್ಪಂಚವಿಂಶತಿ ಪಂಚದಶ[ದಶ]ತ್ರಿಲಕ್ಷ ಪಂಚೋನೈಕಲಕ್ಷ ಪಂಚಪ್ರಮಾಣಂಗಳವಱೊಳ್ ವಿರತಿಪ್ರಮಾದಕಷಾಯತರತಮಸ್ವೀಕಾರಮುಂ,ಹಿಂಸಾನೃತಸ್ತೇಯಾಬ್ರಹ್ಮಪರಿಗ್ರಹಮುಂ, ಕೃಷ್ಣನೀಲಕಪೋತ ಲೇಶ್ಯಾತ್ಮೀಭಾವಮುಂ, ಕಾರಣಮಾಗೆ ಪುಟ್ಟುವನಾರಕ ಶರೀರಾಯುಷ್ಯ ಪ್ರಮಾಣಂಗಳ್:—

ಕಂ|| ಮೊದಲಿಂದಂ ತುದಿವರ ಮಿಸಿ |
ತೆ ದಲೊಂದುಂ ಮೂಱು ಬೞಕಮೇೞುಂ ಪತ್ತುಂ ||
ಪದಿನೇೞುಮಿಪ್ಪತೆರಡುಂ |
ವಿದಿತಂ ಮೂವತ್ತುಮೂಱು ಮಂಭೋನಿಧಿಗಳ್ || ೮೭ ||

ಅಳವಿಯೊಳಾದಿಯ ನಾರಕ |
ರಳವಿ ತನುಸ್ಥಿತಿಯೊಳೇೞೆ ಬಿಲ್ಲುಂ ಮೂಱುಂ ||
ಮೊಳನರಗೇಣ್ ಸಪ್ತೋರ್ವೀ |
ವಳಯಂಬರಮತ್ತಮತ್ತಮಿರ್ಮಡಿಯಕ್ಕುಂ || ೮೮ ||

ವ|| ಮತ್ತಮಾಬಿಲಂಗಳ ಮೇಗಣಟ್ಟುಗಳೊಳ್ ತಲೆಕೆಳಗಾಗಿರ್ದ ಖರಕರಭಸೃಗಾಳಸಾರಮೇಯಾಕಾರಂಗಳಪ್ಪುತ್ಪತ್ತಿಸ್ಥಾನಂಗಳೊಳ್ ಪುಟ್ಟಿ ನಟ್ಟಿರ್ದ ಮೂವತ್ತೆರಡಾಯುಧಂಗಳ ಮೇಲೆ ಬಿಟ್ಟು ಸಿಡಿಲ್ದುಚ್ಚಳಿಸಿ:—

ಮ|| ನೆಲದೊಳ್ ಬಿಟ್ಟಡಗಿಂಡೆಯಾಗೆ ನೆಱನಂ ನಟ್ಟುರ್ಚಿದುಗ್ರಾಯುಧಾ |
ವಲಿಯಿಂದುರ್ವಿಸುವಿಂದ್ರಜಾಲಿಗನ ವೋಲ್ ಜೋಲ್ದುಂ ನೆಱಲ್ದುಂ ಸಮಾ ||
ಕುಲಿತರ್ ಮೋಹಿಸಿ ಮುಚ್ಚೆವೋಗೆ ಪರಿತಂದುತ್ತಪ್ತಲೋಹದ್ರವಂ |
ಜಲಮೆಂದಲ್ಲಿಯ ನಾರಕರ್ ತಳಿವುದುಂ ತಾತ್ಕಾಲಿಕರ್ ನಾರಕರ್ || ೮೯ ||

ಕಂ|| ಇಱಿವ ಬಲಿಗುಡುವ ಪೈರಂ |
ದಱಿವುರ್ದಂ ಸೀಳ್ವ ಪೋಳ್ವ ಪರಪುವ ಗೊಟ್ಟಂ ||
ಗೊಱೆವಗುಟ್ದು ನಟ್ಟು ಪರೆಪುವ |
ಪೆಱವುಮಗುರ್ವಪ್ಪ ಚಿತ್ರವಿಧವಧೆಯಿಂದಂ || ೯೦ ||

ಪಿಡಿಖಂಡಂಗೊಳೆ ಮನದೊಳ್ |
ಪೊಡರ್ವುಗೆಟ್ಟಿಗಿದು ಬೆಗಡುಗೊಂಡವಧಾನ ||
ಕ್ಕೊಡರಿಸೆ ಭಂಗಮದಂದವ |
ರೊಡವುಟ್ಟಿರೆ ಪುಟ್ಟುಗುಂ ವಿಭಂಗಜ್ಞಾನಂ || ೯೧ ||

**ವ||** ಅಂತು ಪುಟ್ಟಿದ ವಿಭಂಗಜ್ಞಾನದಿಂದ ಮವಗತನರಕಲೋಕಪ್ರಪಂಚನಾಗಿ ಕಿಱುವೇಂಟೆಯ ನಾಯ್ಗಳಿಂದ ಮಟ್ಟುಪಟ್ಟ ಪೆರ್ಮೊಲನಂತೆ ಭಯಮನೆಡಗಲಿಸಿ ಬೆಳ್ಪೋಟಹೋಡಿ ಜವಂಗೆಟ್ಟು ಕಾಲ್ ಪೆಡಂಗಲಸೆ ಬೀೞುತ್ತುಮೇೞುತ್ತುಮಂತಾನುಮೆಯ್ದಿ ಕೂಟಶಾಲ್ಮಲಿಯನಡರ್ವನನಡಿಯಿಂದಾ ಮಸ್ತಕಂಬರಂ ರೋಮರೋಮಂದಪ್ಪದೆ ಕೊಂಡುರ್ಚಿ ಸಿಲ್ಲದೆಲ್ವಂ ನಟ್ಟು ಕೀಲ್ಗೊಟ್ಟಂತಿರ್ದ ವಜ್ರಕಂಟಕಂಗಳ್ಪೆರಸಲ್ಲಿಯುಂ ನಿಲಲಾಱದೆ ಬೀಳುತ್ತುಂ ದೆಸೆದೆಸೆವಱಿದು ತಳಮಳಗಪ್ಪಿನಂ ಬಱಿಯ ನುಱಿಯದೆ ಕರುತ್ತು ನಟ್ಟು ಬೆನ್ನಟ್ಟುವ ಪುರಾಣನಾರಕರೆಟ್ಟಿರವಿಂಗೆ ಕೋಳ್ಗುದಿಗೊಂಡು ಜಳಾವ ಗಾಹಾಸೆಯಿಂ ವೈತರಣಿಯ ಪಿರಿಯ ದರಿಯಂ ಮೆಟ್ಟಿ ಸುಣ್ಣಣಲಂ ಮಣಲ್ದೀಂಟಿಗೆತ್ತದಱ ಪರಿತಪ್ತ ಲೋಹರಜಸ್ಸಿಕತಿಳತಳದೊಳ್ ಮೆಯ್ಯನೀಡಾಡುವುದುಂ:—

ಹರಿಣೀವೃತ್ತಂ|| ಹುರಿಗಡಲೆಯಂತಾನುಂ ಕಾಯ್ಪಾಱದೋಡಿನ ಜೋಳದೊ |
ಳ್ಮರಲಲರುವಂತಾನುಂ ಕಾರ್ಗೆಯ್ಯ ಮೇರೆಯೊಳಿಟ್ಟ ಕೆ ||
ಕ್ಕರಿಕೆ ಬಿರಿವಂತಾನುಂ ಮೆಯ್ ಬಿರ್ಕು ಬಿರ್ಕೆನೆ ಸಿಬ್ಬರಂ |
ಬಿರಿದೊಳಱುಗುಂ ಜೋಲ್ಗುಂ ವೈಚಿತ್ರ್ಯಜೀವರ ರೂಪದಿಂ || ೯೨ ||

**ವ||** ಅಂತಲ್ಲಿಯುಂ ಸ್ಥಿರಿಸದೆ ನದೀಹ್ರದಮಂ ಪುಗುವುದುಂ;—

ಕಂ|| ಮಕರಂ ನಾರಕ ನಪ್ಪಿ ನಾ |
ರಕಂ ಮಹಾನಕ್ರನಾರಕಂ ಕಮಠಂ ನಾ ||
ರಕ ನುಗ್ರಗ್ರಾಹಂ ನಾ |
ರಕ ನವು ತಿನೆ ಪೊಕ್ಕ ನಾರಕಂ ಬರ್ದುಕುವನೇ || ೯೩ ||

**ವ||** ಮತ್ತಮಲ್ಲಿಯುಂ ಮೆಯ್ಯಂ ನಿಲಿಸಲಾಱದೆ ವೈತರಣಿಯಂ ಪೋಱಮಟ್ಟು ಪರಿತಂದಸಿಪತ್ರ ವನಮಂ ಪುಗುವುದು ಮಲ್ಲಿ:—

ಉ|| ಮರ್ಮರಪತ್ರಮುಂಬು ತಳಮಂ ನಡುವಂತಿರೆ ನಟ್ಟೊಡೆತ್ತ ಬೀ |
ಟ್ವಿರ್ಮುಗುಟ್ಟಿತ್ತ ಪೂಮಿಡಿಯ ಪೂವಿನ ಕಾಯ್ಗಳ ಕಯ್ದುವುಳ್ಕುಗುಂ ||
ಮರ್ಮಮನಾರ್ ಶರಣ್ಯ ಮೆಮಗಾರ್ ನೆಱಮಾರ್ ಪೆಱಗಿಕ್ಕಿ ಕಾವರಾ |
ರಾರ್ಮಮೆನುತ್ತೊಱಲ್ದ ಱಲುತಿರ್ಪುದೆ ನಾರಕರ್ಗಲ್ಲಿ ತಲ್ಲಳಂ || ೯೪ ||

**ವ||** ಮತ್ತಂ ದೆಸೆಗಳ್ ಪಿಡಿಪಿಡಿದು ನುಂಗಿದಪುವು, ನೆಲನೆ ಬಾಯ್ದೆಱೆದಪ್ಪುದು, ಆಕಾಶಂ ಮೇಗೆ ಕವಿದಪುದು, ಗಾಳಿಯೆ ನಂಜಾದುದು, ಎಂಬ ಸಕಲ ಪ್ರಕ್ಷೋಭದೊಳ್ ವಿಹ್ವಳರಾಗಿರ್ದ ನಿರಯ ಜರನೆಯ್ದಿ ಸುತ್ತಿ ಮುತ್ತಿ ಪಿಡಿದುಗಿಬಗಿಮಾಡಿ:—

ಉ|| ಕರ್ಗಿನಗಾಣದೊಳ್ ಮಱುಗುವಾಣದೊಳೆಣ್ಣೆಯ ಕುಂಡದೊಳ್ ಕನ |
ಲ್ದುರ್ಗಿಸು ವಜ್ರಗೊಂಡದೊಳಗುರ್ಗಿಸೆ ಸೀಳಿಸಿ ಮಾಣದಿಕ್ಕೆ ಪೋ ||
ಟ್ದುರ್ಗಿ ಮಾಡಿ ತಾಳಿಸೆ ಸುರುಳ್ಚಿನೆಗಂ ನೆಱೆ.ಸಾಯನಂತಕಂ |
ಚರ್ಗಿತ ಚರ್ವಣಕ್ಕವನ ನೋವಿದ ನಾಗಳೆ ಸಾಯಲೀಗುಮೇ || ೯೫ ||

ವ|| ಅಂತು ಪಿಟ್ಟೆಯೆ ಕಕ್ಕಳಗಟಲ್ದು ಸೊಪ್ಪುಸೊಪ್ಪೆಲ್ಲಂ ಕುದಿಯಿಸೆ ತತ್ತಳಗುದಿದು ಕೋಟ್ಗುದಿಗೊಳ್ವ ಮೆಯ್ಗಂಡಮಂ ತಾಳಿಸೆ ಸುರುಂಟಿ ಬಗಿದಾಮೆಯ್ಯಂ ಸುಡೆ ಬಿಸಿಲ ಬೆಣ್ಣೆಯಂತೆ ಕರಗಿ ಕಱಂಪು ನಾಱುವ ಕೊಟಿಣ್ಣಿಣನುಮುಗುರ್ಗಂ ಪಡೆಯೆ ಜೀವನ್ಮೃತಾವಸ್ಥೆಯೊಳಲ್ಲಿಂದಂ ತೆಗೆದು ಬೇಱೆ ನಿಱಿಸಿ:—

ಕಂ|| ಬಲ್ಲಡಗಿಲ್ಲದೊಡುಣಿಸಣ |
ಮಿಲ್ಲೀ ಪ್ರಭುಗೆನುತು ಮವನ ತೊಡೆಯಡಗನೆ ತ ||
ಳ್ತಿಲ್ಲದವಂಗಿಕ್ಕುವರೇಂ |
ಪೊಲ್ಲದುದೋ ಮಾಂಸಸೇವನ ಪ್ರತಿಪಾಪಂ || ೯೬ ||

ನಾಯಕ ಸಾರವೊಲಿದು ಕಡು |
ಸೀಯೆನೆ ಕುಡಿಯೆಂದು ತಂದು ಕುಡಿಯಿಸುವರ್ ತ ||
ಪ್ತಾಯಸರಸಮಂ ಬಸನಿಗ |
ಪಾಯಂ ಭವಭವದೊಳೆಂದುಮೇಂ ಕುಂದುಗುಮೇ || ೯೭ ||

ಕಂ|| ಪರವಧುವನಲ್ಲದಂತಃ |
ಪುರವಧುವಂ ಮೆಚ್ಚೆಯೆಂದು ತಂದಪ್ಪಿಸುವರ್ ||
ಪರಿತಪ್ತಲೋಹಮಯ ಸುಂ |
ದರಿಯಂ ಸುಂದರಿಯರಲ್ಲಿ ಮೊರೆಯಿಲ್ಲಿದರೊಳ್ || ೯೮ ||

ವ|| ಅಂತು ಲೋಹಮಯಪುತ್ರಿಕೆಗಳ ನಪ್ಪಿಸಿದಾಗಳೆಲುವುಟ್ಟೆಯೆ ಮತ್ತಿನ ರಸಾದಿಧಾತುಗಳೆಲ್ಲಂ ಪತ್ತಿ ಮೆತ್ತಿದಂತಿರೆ ಪೆಣವೊಗೆಸುತ್ತಿ ನರಲೋಕಮೆಲ್ಲಮಂತಕಡಾಮರದೊಳೆ ಬೆಂದು ಧೂಮಮಯವಾದ ದಿಶಾಧೂಮಂ ಕವಿದಂತಾಖಿಳವಾಗೆ ಭೈರವಂ ಬೆರಸೊದಱೆ ಮೂದಲಿಸಿ ಕೊಲ್ವರುಂ ಕೊಲೆಯಿಂ ಕರಮಟ್ಟೆಯೆಯುಂ ನೊಂದು ಪ್ರಾಣಮನೆಂತಾನುಂ ಪರಮಾಯುಷ್ಯಂಬರಂ ನಿಱಿಸಿ:—

ಕಂ|| ತೆರ್ಪತ್ತು ಬಿಟ್ಟು ನಮೆಯು |
ತ್ತಿರ್ಪರ್ ನಾರಕರವಂದಿರೊಡಲುಂ ಮನಮುಂ ||
ಕರ್ಪಿಡಿದು ಕೃಷ್ಣಲೇಶ್ಯೆಯ |
ಡರ್ಪಿರ್ಪಂತಿರ್ಪುವನಿತಪುಣ್ಯರು ಮೊಳರೇ || ೯೯ ||

ಎನಿತೊಳವು ಕೊಳೆವ ಪಡುಕೆಗ |
ಳನಿತಱ ದುರ್ಗಂಧ ಮವರ ಮೆಯ್ಯ ನಿಸರ್ಗಾ ||
ತ್ಯನುಪಮ ಘಾತಿಯ ಪಟುಗಟ್ |
ದ ನಾತಮಂ ಪೋಲವವರದೇಂ ಕಿಸುಗುಳರೋ || ೧೦೦ ||

**ವ||** ಅಂತು ಹುಂಡ ಸಂಸ್ಥಾನರುಂ ನಪುಂಸಕರುಮಪ್ಪ ನಾರಕರ ಜನ್ಮಭೂಮಿಗಳಾದೇೞುಂ ನೆಲಸುವ ಜೀವಂಗಳ ಕರ್ಮತಾರತಮ್ಯ ಪರಮೋತ್ಕೃಷ್ಟಸ್ಥಿತಿ:—

ಕಂ|| ಕುಪಿತಮತಿ ಸಂಜಿಯುಂ ಸರಿ |
ಸೃಪಮುಂ ವಿಹಗಮುಮಹೀಂದ್ರಮುಂ ದ್ವಿಪರಿಪುವುಂ ||
ಚಪಲಾಂಗನೆಯುಂ ಮಿಂಬೆರ |
ಸು ಪುರುಷನುಂ ನೆಲಸನುಕ್ರಮಕ್ರಮದಿಂದಂ || ೧೧೧ ||
ಆಪತ್ತುವೆರಸು ಮೃಗಯಾ |
ವ್ಯಾಪಾರದೆ ಮುಱುಗುವವನಿಪತಿಯರ್ ಕುಂ ||
ಭೀಪಾಕಕ್ಕೆ ಕೃಷ್ಟಪಾಕ |
ವ್ಯಾಪನ್ನರ್ ಮುಱುಗುವರ್ ನಿರಂತರಮುವರೊಳ್ || ೧೧೨ ||
ಈಪೇಳ್ದ ನರಕ ದುಃಖದ |
ಪಾಪಂ ಕಡುವಿರಿದಿದರ್ಕೆ ರತ್ನಪ್ರಭೆಯಿಂ ||
ದಾಪತ್ತುವಟ್ಟು ಬಂದೀ |
ದ್ವೀಪದ ಭರತಪ್ರಸಿದ್ಧ ರಜತಾಚಳದೊಳ್ || ೧೧೩ ||

**ವ||** ಉತ್ತರಶ್ರೇಣಿಯ ಗಗನವಲ್ಲಭ ಪುರಮನಾಳ್ವ ಖಚರರಾಜಂ **ಸಿಂಹನಾದಂ**ಗಮಾತನ ಮನೋವೃತ್ತಿಜನ್ಮಭೂಮಿ **ಮೇಘಮಾಲಿನಿ**ಗಂ ಮಗನ್ನೈ, ನೀಂ **ಮೇಘನಾದ**ನಾಗಿ ನಿಜಜನಕ ಪರೋಕ್ಷದೊಳ್ ವಿಯಚ್ಚರಚಕ್ರವರ್ತಿತ್ವಮಂ ಪಡೆದು, ನಿನ್ನ ಚ್ಯೊತ್ತಿದನ್ನರುಂ ಪಱಿದುಪತ್ತಿಸಿದನ್ನರು ಮಪ್ಪೊರಯ್ಯೂರ್ವರ್ ಮಕ್ಕಳ್ವೆರಸಿನ್ನೆವರ ಮುರಸುಗೆಯ್ದು ನೀನಿಂದು ವಂದನಾಭಕ್ತಿಗೆ ವಂದುದ ಱಿಂದವೊಂದೊರ್ವರ ಕಂಡತಿಪ್ರೀತಿಯಾದುದು. ಪ್ರಥಮ ಭೂಮಿಯೊಳ್ ಧರಣೇಂದ್ರಂ ಕೆಯ್ಕೊಳಿಸೆ ನಿನ್ನ ಕೊಂಡ ಸಮ್ಯಗ್ದರ್ಶನ ದೀಪಿಕಾ ಪ್ರದ್ಯೋತಮ ನವಲಂಬಿಸಿ ಮೋಹಾಂಧ ತಮಸಾಧೀನ ಮಾನಸನಾಗದೆ:—

ಕಂ|| ಒಡಹುಟ್ಟಿಯು ಮೊಡವಳೆದುಂ |
ಕಡೆಯೊಳ್ ನೀನೆನ್ನಮಿಂತು ಕಂಡುಂ ಬಂದಿ ||
ರ್ದೊಡೆಯುಡಿದೀ ನಮ್ಮಿರ್ವರ |
ತೊಡರ್ಪಿಂದಂ ನೀಂ ಪುನರ್ಭವಂ ಮಾಡಿನ್ನುಂ || ೧೧೪ ||
ಅದು ನಿಸ್ಸಂಗತೆಯಿಂದ |
ಲ್ಲದಾಗದದು ಜಾತರೂಪ ದಿಂದಲ್ಲದೆ ತೀ ||
ರದದು ಶುಭದುದಯದಿಂದ |
ಲ್ಲದೆ ಬಾರದದಕ್ಕೆ ತಡೆಯದುದ್ಯತನಾಗಾ || ೧೧೫ ||
ಎಂದು ಪುನರ್ದರ್ಶನ ಮು |
ಕ್ಕೆಂದುಂ ಯಶಮಕ್ಕೆ ವಿಜಯಮಕ್ಕೆಂದೊಳ್ಪ ||
ಕ್ಕೆಂದಘ ವಿಘಾತಿ ಯಕ್ಕೆಂ |
ದಂದಚ್ಯುತ ಕಲ್ಪಕಚ್ಯುತೇಂದ್ರಂ ಪೋದಂ || ೧೧೬ ||

ಉ|| ಇತ್ತನಿಜಾಲಯಕ್ಕೆ ವಿಭು ಬಂದು ಮನಂಬಿಡೆ ಮೇಘನಾದನ |
ತ್ಯುತ್ತಮ ಮೋಕ್ಷಲಕ್ಷ್ಮಿಗಿರದಾಟಿಸಿ ನಿಶ್ಚಿತನಾಗಿ ನಂದನಂ ||
ಗಿತ್ತದನಂಬರೇಚರ ವಿಭೂತಿಯನಂದಭಿನಂದನಾಖ್ಯ ವ್ಯ |
ದ್ಧೋತ್ತಮ ಯೋಗಿಗಳ್ಗೆಱಗಿ ಕೊಂಡನಖಂಡಿತ ಜೈನದೀಕ್ಷೆಯಂ || ೧೦೮ ||

ವ|| ಅಂತು ಮೇಘನಾದಂ ತನ್ನ ಮಗಂ ಸಿಂಹನಾದಂಗೆ ರಾಜ್ಯಭಾರಮನಿತ್ತು ತಪೋಭಾರದೊಳ್ ತಾಂ ನಿಂದು ಶುಭಭಾವನಿತಾಂತಶುದ್ಧಾಂತರಂಗನನಶನಾದಿ ತಪೋವೃದ್ಧಿವರ್ತಿತಾದ್ಯಾವಸಾನನೊರ್ಮೆ ಗಿರಿನಂದನಗಿರಿಶಿಖರಾಯಮಾನಂ:—

ಉ|| ಕಲ್ನೆಲೆ ನಿಂದು ಯೋಗದ ನಿಯೋಗದಿ ನಿರ್ಪುದು ಮೊರ್ವನತ್ತಲಿ |
ತ್ತಲ್ ನಭದೊಳ್ ತಳರ್ವ ಸುರನಾಮುನಿರಾಜನ ಮೇಲೆ ಕೇಱಿ ಪಾ ||
ಱಲ್ ನಿಜಯಾನಮಾಱದದು ಕೀಲಿಸಿದಂತಿರೆ ನೋಡಿ ಕಂಡವಂ |
ದಲ್ ನೆನೆದಂ ವಿಭಂಗದಿ ನತೀತಭವಾಂತರಭೂರಿವೈರಮಂ || ೧೦೮ ||

ವ|| ಆತಂ ಮುನ್ನಿನ ಭವದೊಳ್ ದಮಿತಾರಿ ಪಕ್ಷವಾಗಿ ಬಂದಾಮುನೀಶ್ವರನ ನನಂತವೀರ್ಯನಪ್ಪ ಭವದೋಳಿದಿರ್ಚಿ ತನ್ನ ಸತ್ತಂದಿನ ವೈರವಂ ಬಗೆದು ಸುಕಂಠಂ ಮುಕ್ತಕಂಠನೊದಱಿ ಬಯ್ದು ಮೂದಲಿಸಿ ಮಹೋಪಸರ್ಗಂಗೆಯ್ವುದು ಮದಂ ಸೈರಿಸಿ ಚತುರ್ವಿಧಾಹಾರಶರೀರಪ್ರತ್ಯಾಖ್ಯಾನಪೂರ್ವಕಂ ಸನ್ಯಸನವಿಧಿಯೊಳ್ ಶುಭಪರಿಣಾಮ ನಿಕಾಯುಕಮುನೀಯಾಂತರಂಗಂ ತದುಪಸರ್ಗದೊಳ್ ಮಡಿಪಿ:—

ಕಂ|| ಸುರರಾಜಂ ಜಿನಚಂದ್ರಾ |
ಬರವಾವನು ಮಿಲ್ಲ ಕಲ್ಪದಚ್ಯುತಕಲ್ಪಂ ||
ಬರವಾವುದು ಮಿಲ್ಲಾ ದೊರೆ |
ದೊರೆವಿಡಿದಿರೆ ತತ್ಪ್ರತೀಂದ್ರಪದಮಂ ಪಡೆದಂ || ೧೦೯ ||

ಉ|| ತಂತ್ರನಿಯಂತ್ರಣಂ ಬಿನದ ವೋಲಗ ಮಕ್ಕರಗೊಟ್ಟೆ ಕಾರ್ಯಸ |
ನ್ಮಂತ್ರ ಮುದಾತ್ತವೃತ್ತಿ ಪರಮಾಗಮಭಾವನೆ ವೃದ್ಧಸೇವೆ ಯಾ ||
ನಂ ತ್ರಿಜದ್ಗುರು ಪ್ರಣತಿ ಯೆಂಬಿವನಾಗಳು ಮೊಂದೆ ಕೇಲೆ ದಲ್ |
ಜಂತ್ರದ ಪಾಪೆಯಂತೊಡನೊಡರ್ಚುವ ನಿಂದ್ರನು ಮಾಪ್ರತೀಂದ್ರನುಂ || ೧೧೦ ||

ಕಂ|| ಅತಿಮೋಹನಿಗಳ ನಿಯಮಿತ |
ನುತರೊಡನೊಡನಖಿಲ ಸುಖಮ ನುಂಡರ್ ದ್ವಾವಿಂ ||
ಶತಿಜಲಧಿವರೆಗಮಿಂದ್ರ |
ಪ್ರತೀಂದ್ರರಿದು ಕೆಳೆ ವಿಭಿನ್ನತರರುಚಿ ಕೆಳೆಯೇ || ೧೧೧ ||

ವ|| ಅಂತು ಕ್ರಮದಿಂದಿಪ್ಪತ್ತುಸಾಗರೋಪಮಮುಂ:—

ಕಂ|| ನೆಱೆವುದು ಮಂತಕನೊಳ್ ತ |
ಳ್ತಿಱಿಯಲ್ ಕಳವುಗುವವೋಲ್ ಜಿನಾಲಯಮಂ ಪೊ ||
ಕ್ಕಱಿವಂ ಮೆಱೆದೊಡಲಂ ತೊಱೆ |
ದಱಿಪಿದ ನಾಸನ್ನಭವ್ಯ ನಪ್ಪುದನಿಂದ್ರಂ || ೧೧೨ ||

ಅಭಿಷೇಕಂ ಪೊಸನನೆ.... |
....ಭಿಮಸೆನಿಕದ ನಂದ ದೀವಿಗೆ ಧೂಪಂ ||
ಶುಭಪರಿಣಾಮಯುತಂ ದ್ರ |
ವ್ಯಭಾವ ನಾಮಾರ್ಚನಂಗಳಾಗೆ ಸುರೇಂದ್ರಂ || ೧೧೩ ||

ಕೆಯ್ವಾರದಿಂದ ಮರ್ಚಿಸಿ |
ಮೆಯ್ವೆರಸಸು ಪೋಗೆ ಕೊಡದ ನೀರಂ ಕೊಡದೊಳ್ ||
ಪೊಯ್ವಂತೆ ತನ್ನ ಸಂಚಯ |
ಮುಯ್ವುದು ಮುತ್ತಮಮನುಷ್ಯಗತಿಗಮರೇಂದ್ರಂ || ೧೧೪ ||

ವ|| ಪೋಗಿ ಜಂಬೂದ್ವೀಪದ ಪೂರ್ವವಿದೇಹದ ಸೀತಾನದಿಯ ತೆಂಕಣ ತಡಿಯ ಮಂಗಳಾವತೀ ವಿಷಯದ ರತ್ನಸಂಚಯಪುರಮನಾಳ್ವ:—

ಕಂ|| ಕಿಂಕರ ಸರಾಮರಂ ಕ್ಷೇ |
ಮಂಕರ ತೀರ್ಥಕರ ನೃಪಕುಮಾರಂಗಂ ಧ ||
ನ್ಯಂ ಕನಕಚಿತ್ರೆಗಂ ವ |
ಜ್ರಾಂಕಿತ ತಳವಿಳಸಿತಂ ಪವಿತ್ರಂ ಪುತ್ರಂ || ೧೧೫ ||

ವ|| ವಜ್ರಾಂಕಿತಂ ಪುಟ್ಟಿ ತಾಯ ತಂದೆಯ ಪರಮಾನಂದಮೆ ತನಗಮಳಾಗೆ ಬಳೆಯುತ್ತುಂ:

ಬಾಲಕನಮೃತಮೆ ಕೆಯ್ಯುಂ |
ಕಾಲುಂ ಬಳೆವಂತೆ ಮಧುರ ಗಂಭೀರಂ ಪ ||
ದ್ಮಾಲಿಂಗಿತನಂತ ಶ್ರೀ |
ಲೋಲತೆಗಂ ದೂರಮೆನಿಸಿದಂ ಕಿಱಿಯಂದುಂ || ೧೧೬ ||

ವ|| ಆ ನಿತ್ಯೋದಯನ ತಂದೆ ತಾಂ ತೀರ್ಥಕರನಪ್ಪುದಱಿಂ ಮಗಂಗೆ ಕಿಱಿಯಂದೆ ರಾಜ್ಯಂಗಳಂ ಸಂಗತಂ ಮಾಡಿ ಸಾರವಸ್ತುಗಳೊಳ್ ನಿಸರ್ಗದಿಂದೆ ತಾಂ ನಿರಾದರನಾಗಿ ಶುಭಭಾವನೆಯೊಳ್ ರಾಜ್ಯಕಾಲಮಂ ಸಲಿಸುತ್ತುಮಿರೆ ಮಂತ್ರೌಷಧನುಂ ತ್ರಿಜದ್ಗುರುವುಮೆನಿಸಿದಾತ್ಮಗುರುಭಕ್ತಿಗಂ ಪರಮಭವಹತ್ಯಭಿನಯಾನುನಯಾಯತ್ತನಾಗಿ ನೆಗೞೆ:—

ಹರಿಣೀವೃತ್ತಂ|| ನೆಱಿಯದಿರೆಯುಂ ತೋಳ್ಗಂ ವಕ್ಷಸ್ಥಳಾಂತರಕಂ ಕರಂ |
ಕಿಱಿಯನೆನವೇಡೀತಂ ಪ್ರೌಢಾನುಭಾವದಿ ನಕ್ಕುಮೆಂ ||
ದಱಿದು ಧವಲಚ್ಛತ್ರಚ್ಛಾಯಾಸದಾತ್ಮತೆ ಸಂಜೆವೋಲ್ |
ಮಱಿಯೊಳೆ ಕುಲಶ್ರೀ ನಿಚ್ಚಂ ನಿಚ್ಚಮುಪ್ಪುಗು ಮಾತನಂ || ೧೧೭ ||

ವ|| ಮತ್ತಮಾತಂ ಪ್ರತಿದಿವಸ ಮುನ್ಮುಚ್ಯಮಾನ ಬಾಲಕೇಳೀಲೀಲನಾಗಿ:—

ಉ|| ಶೂರ್ಪಕವೈರಿ ಕಾಲುಗುರ್ಗೆವರ್ಪನೊ ಶೀತಮರೀಚಿ ಕಾಂತಿಗೇಂ |
ವರ್ಪನೊ ವಾಸವಂ ಸಿರಿಗೆ ವರ್ಪನೊ ವೃತ್ರಹಮಂತ್ರಿ ಜಾಣ್ಗೆ ನೇರ್ಪ ||
ವರ್ಪನೊ ಪೇೞಿಮೆಂಬ[ಬ]ಗೆ ಭಾವಿಸಿ ನೋಲ್ಪರ ಕಾಣ್ಕೆಗೆಯ್ದೆ ವಂ |
ದಿರ್ಪುದು ತತ್ಕುಮಾರತನು ಪುಣ್ಯದ ಪಿಂಡವೊ ಭಾಗ್ಯಭಾಂಡವೋ || ೧೧೮ ||

ಚಂ|| ಮಳಯಜಗಂಧಮೆಂತು ಹರಿಪೌರುಷಮೆಂತು ಹಿಮಾಂಶುಬಿಂಬ ನಿ |
ರ್ಮಳರುಚಿಯೆಂತು ಪುಷ್ಪಶರತೀವ್ರತೆಯೆಂತು ರವಿಪ್ರತಾಪಮೆಂ ||
ತಳಿಕುಳದಂಗನೀಳರುಚಿಯೆಂತು ನಿಜಂ ತನಗಂತು ಸದ್ಗುಣಾ |
ವಳಿ ಸಹಜಾತಮಾತನೊರೆಗಂ ದೊರೆಗಂ ಬರಲಾರ್ ನೃಪೋತ್ತಮರ್ || ೧೧೯ ||

ಕಂ|| ಆ ವಿಭು ಜಿನಚಂದ್ರಂ ಲ |
ಕ್ಷ್ಮೀವತಿಯಂ ಮದುವೆನಿಂದು ಪೊಸಮುದವಣೆಗಂ ||
ದೇವೇಂದ್ರನ ಶಚಿಯು ವಿಳಾ |
ಸಾವಿಷ್ಕೃತವಿವಿಧವಿಭವಮಂ ಮುಸುಳಿಸಿದಂ || ೧೨೦ ||

ವ|| ಅಂತು ದಿವ್ಯ ಮನುಷ್ಯೋದಯಾದಿತ್ಯಾಚಳನಾಗಿ:—

ಮ|| ಸುಖಮಿರ್ಪನ್ನೆವರಂ ಪ್ರತೀಂದ್ರದಿವಿಜಂ ವಜ್ರಾಯುಧಂಗಂ ಹಸ |
ನ್ಮುಖಿ ಲಕ್ಷ್ಮೀಮತಿಗಂ ಪುರಾತನ ಭವಸ್ನೇಹಕ್ಕೆ ಪುಣ್ಯಂ ಮಹಾ ||
ಸಖಮಾಗುತ್ತಿರೆ ಬಂದು ಪುಟ್ಟೆ ಗುರುವುಂ ತಾನುಂ ಮನಂಗೊಂಡರಾ |
ನಖಮಾಂಸ ಸ್ಥಿತಿಯಪ್ಪ ಪತ್ತುಗೆಗಳಿಂ ಕ್ಷೇಮಂಕರಾಧೀಶನಂ || ೧೨೧ ||

ವ|| ಅಂತು ಸೌಜನ್ಯಕಂದಾಂಕುರಂ ಮಹಾಮಹೀಪಾಲಕಂಗೆ ಸಹಸ್ರಾಯುಧಂ ಪುಟ್ಟುವುದುಂ:

ಕಂ|| ಉತ್ತಮ ನಿಮಿತ್ತಮಂ ನೈ |
ಮಿತ್ತಿಕಮುಂ ಪೋಲ್ಕುಮೆನಿಸಿ ಸೊಡರಿಂ ಸೊಡರಂ ||
ಪೊತ್ತಿಸಿ ತಂದುಪಮೆಯೊಳ |
ಚ್ಚೊತ್ತಿದುವವರಂತರಂಗ ಬಹಿರಂಗಂಗಳ್ || ೧೨೨ ||

ವ|| ಅಂತು ಯುವಕೇಸರಿಯುಂ ಕಿಶೋರಕೇಸರಿಯುಂ ಬಳೆವಂತೆ ಜಿನಚಂದ್ರನಪ್ಪ ವಜ್ರಾಯುಧ ಕಮಾರನುಂ ಸಹಸ್ರಾಯುಧ ಬಾಲಕನು ಮೊಡವಳೆಯೆ ವಳೆಯೆ:—

ಮ|| ಅಗದಂ ಶೀತಮಯೂಖ ಮಾಳಿಗಗದಕ್ಕಾರೋಗ್ಯದೊಳ್ಪಿಂತು ಪು |
ಟ್ಟುಗು ಮಂತಭ್ಯುದಯೈಕ ಭಾಗಿಗೆ ಮಗಂ ಕ್ಷೇಮಂಕರಂಗರ್ಚಿತಾಂ ||
ಘ್ರಿಗೆ ವಜ್ರಾಯುಧನಾ ಮಹೀಶತಿಲಕಂಗಾದಂ ಸಹಸ್ರಾಯುಧಂ |
ಮಗನುದ್ದಾಮತೆ ತಂದೆ ಮೂವಱೊಳಮೇಂ ಕಯ್ಗಣ್ಮೆ ಪೊಣ್ಮೆರ್ದುದೋ || ೧೨೩ ||

ವ|| ಎಂದು ಲೋಕಮೆಲ್ಲಂ ಪೊಗೞ್ವ ಪೊಗೞ್ತೆಗಂ ನಿಸರ್ಗತರಮಾಗೆ ರತ್ನತ್ರಯೋಪಮಾನರ ವರಭಿರಕ್ಷಿತ ವರ್ಣಾಶ್ರಮರವದ್ಯಮಾದ್ಯದ್ವಂದಶೂಕಭಯ ಜಾಗರೂಕರವನಿಪಾಶ್ರಮಗಳರಸುಗೆಯ್ಯುತ್ತುಮಿರೆ:—

ಚಂ|| ವಿರಹಿ ಮೃಗಂ ದಲೊಡ್ಡಿಸುವವಂ ಮಧು ದಲ್ ಬಲೆಗಳ್ ಲತಾಳಿ ದಲ್ |
ಕರಿಕು ಕನಲ್ದು ಕಾಯ್ದು ವಿರಹಾಗ್ನಿ ದಲಪ್ಪುವ ಕಯ್ಬನಂ ದಲೊ ||
ಳ್ಪರಿವ ವನಂ ದಲೆಂಬಿನ ಮನಂಗನ ಬೇಂಟೆಯ ಬಿಂದದಂದದಿಂ |
ಬರೆ ಪೊಸಸುಗ್ಗಿ ಕೆಯ್ಗಟಿಯೆ ಕಣ್ಗೆಸೆದಿರ್ದುವು ನಂದನಾಳಿಗಳ್ || ೧೨೪ ||

ವ|| ಅಂತು ಬಂದ ಬಸಂತಲಕ್ಷ್ಮೀಸಂಗೀತಕಪೂರ್ವರಂಗದೊಳ್:—

ಚಂ|| ನನೆಮೊನೆಯಾಗಿ ಬಂದುವೆಳಮಾವೆಳಮಾವಿನ ಮುಂಚಿ ಬಂದ ಪೂ |
ವಿನ ಪೊಸ ಗೊಂಚಲೊಪ್ಪಿದುವು ಗೊಂಚಲೊಳೋಳಿಯೆ ಪಾಯ್ದು ವಚ್ಚಗಂ ||
ಪಿನೊಳವಿನಾಣವಾಗೆ ಮದನಂ ಮಸಿಯೊಳ್ ಬರೆದಿಟ್ಟ ತನ್ನ ತ |
ಕ್ಕಿನ ಪೆಸರಕ್ಕರಂಗಳೆನಿಸಿರ್ದುವು ಮತ್ತಮಧುವ್ರತಾಳಿಗಳ್ || ೧೨೫ ||

ವ|| ತದನಂತರಂ:—

ಚಂ|| ಬಯಸಿ ಕುಬೇರ ರಕ್ಷಿತ ದಿಗಂ[ಗ]ನೆಯೊಳ್ ರವಿ ಪೋಗಿ ಕೂಡಲ |
ೞ್ತಿಯೊಳನುವಾಸರಂ ನೆಱೆಯೆ ಸೂೞ್ ಸಮನಾಗಿರೆ ಪೋಪ ಸಪ್ತಸ ||
ಪ್ತಿಯ ವಿರಹಕ್ಕಿದಲ್ತು ಬಿಸುಸುಯ್ ಪುಸಿಸುಯ್ಯೆನೆ ಸುಯ್ದು ದಕ್ಷಿಣಾ ||
ಶೆಯ ನಱುಸುಯ್ಯ ಗಾಳಿಯನೆ ಪೋಲ್ತುದು ಗಂಧವಹಂ ವಸಂತದೊಳ್ || ೧೨೬ ||

ವ|| ಅಲ್ಲಿಂ ಬೞಿಯಂ:—

ಮ|| ಕೊಳದಂಭೋಲವಮುಣ್ಮೆ ಪೊಣ್ಮೆ ವಿಲಸತ್ಸೋಪಾನಪರ್ವಂಕ ಪ |
ಲ್ವಳವಲ್ಲಾ ಛೆಗೆ ರಾಗವಾಗೆ ಕನಕಾಂಭೋಜಾತಮುದ್ದಂಡಕೋ ||
ಮಳನಾಳಂ ಸಿರಿ ಸತ್ತಿಗೆತ್ತಿಸಿದವೋಲಿಂಬಾಗೆ ನಾರೀ ಸಮು |
ಜ್ಜ್ವಳ ಶುಂಭಜ್ಜಘನಪ್ರಮಾಣಗತಿಯಾಯ್ತಾದಂ ಬಸಂತರ್ತುವೊಳ್ || ೧೨೭ ||

ವ|| ಮತ್ತಮಿರೆ ಯಿರೆ:—

ಮ|| ವನಸಾಯಂತನಮಲ್ಲಿಕಾಮುಕುಳಕೋಟ್ಯಗ್ರಂಗಳೊಳ್ ಕೂಡೆ ನೂ |
ತನ ಸದ್ಗಂಧಿಗಳೊಳ್ ಮದಾಂಧ ಮಧುಪಂ ಪ್ರತ್ಯೇಕ ಮಳ್ವಾೞು ವಾ ||
ಱು ನವಾದ್ರ್ರಧ್ವನಿ ಪಾಯ್ದು ಪಾಯ್ದು ಣಿಸುವಂತಾಯ್ತಾತ್ಮ ಸೌರಭ್ಯಭಾ |
ಜನಸರ್ವಸ್ವಮನೇಂ ಬಸಂತ ಸಮಯಂ ಸೌಖ್ಯೈಕಸರ್ವಸ್ವಮೋ || ೧೨೮ ||

ವ|| ಮತ್ತಂ ಮಧುಕರ ನಿಕರಮುಂ, ಪುಂಸ್ಕೋಕಿಳಕಳಾಪಮುಂ, ರಾಜಕೀರಕದಂಬಕಮುಂ ಮುಂದೆ ನಡೆಯುಱುದೋಲಗಿಸುತ್ತುಂ ಬರೆ ಬಂದು ಮನೋಜರಾಜನ ಪ್ರಪಂಚದೊಳನುಜೀವಿವೃತ್ತಾದಿ ನನುವರ್ತಿಸುವ ಸೇವಾವಿಚಕ್ಷಣ ಪ್ರೀಣನ ಕರಮಪ್ಪ ಜೀವಿಕಾಪ್ರಸ್ತಾವದೊಳ್:—

ಚಂ|| ಸಕಲಮಧುವ್ರತಪ್ರಚಯಮೆಂಬ ಪಿಕಾವಳಿಯೆಂಬ ಸದ್ವಚಃ |
ಶುಕಕುಳಮೆಂಬ ಮೆಚ್ಚಿಸಿದ ಗಾಯಕಸತ್ಕೃತಿಹಾರವೃತ್ತಪಾ ||
ಠಕತತಿಗಿತ್ತನಗ್ಗಳದ ಮಾವಿನ ಪೂವಿನ ಮಾವಿನಂಕುರ |
ಪ್ರಕರದ ಮಾವಿನೊಳ್ಮಿಡಿಯ ಜೀವಿತಮಂ ಮದನಂ ಬಸಂತದೊಳ್ || ೧೨೯ ||

ವ|| ಎನೆ ಸೊಗಯಿಸುವ ಸಹಕಾರ ಲಬ್ಧಪ್ರಸರಂಗಳಪ್ಪ ಪೆಣ್ದುಂಬಿಯ ಬೃಂದಮುಂ, ಗಂಡುಗೋಗಿಲೆಯ ತಂಡಮುಂ, ತೊಂಡುಗಿಳಿಯ ಪಿಂಡುಂ ಮುಂ ಪಯಣಮಾಗೆ:—

ಚಂ|| ಮನಸಿಜ ಚಕ್ರವರ್ತಿ ನಡೆಯುತ್ತಿರೆ ದಿಗ್ವಿಜಯಕ್ಕೆ ಮುಂದು ಮುಂ |
ದನೆ ಮಧು ಬಂದು ಮಚ್ಚಱಿದು ಕೂಡೆ ವಿನಿರ್ಮಿಸಿದೋಳವೀಡು ನಂ ||
ದನಚಯ ಮಲ್ಲಿ ರಾಜಿಪುವು ಬಳ್ಳಿಗವುಂಗಿನ ತಟ್ಟಿ ಬಳ್ಳಿಮಾ |
ಡಿನ ಮನೆ ಬಳ್ಳಿಮಲ್ಲಿಗೆಯ ಮಂಡಪಮೆಂಬಿನಿತುಂ ಬಸಂತದೊಳ್ || ೧೩೦ ||

ವ|| ಎಂಬಿನ ಮೊಫ್ಪುಗುಂ ಮತ್ತಂ ಕೆಲವೆಡೆಯೊಳ್:—

ಕಂ|| ಆಯತ ಸಹಕಾರಲತಾ |
ಜಾಯೆ ನವಾಶೋಕಯುವನ ನೆಡೆಗುಡದಡರ್ದ ||
ರ್ದಾಯಿರವೇಂ ಪೋಲ್ತುದೊ ಪುರು |
ಷಾಯತಮಂ ಮಧುಪರೀತ ವನ ವಿತತಿಗಳೊಳ್ || ೧೩೧ ||

ವ|| ಅಂತು ಮಲ್ಲದೋರೂಂದೆಡೆಯೊಳ್ ಮಧುಮದಮುದಿತ ಕೋಕಿಲಾಳೋಕನರಾಗರಕ್ತಂ
ಗಳಾದಂತೆ:—

ಉ|| ಭ್ರಾಜಿತ ಧೂಮವಾಳಿ ಮಧುಪಾವಳಿ ಕೇಸುರಿ ಕೆಂದಳಿರ್ ತದು |
ರ್ವೀಜ ಮುದಗ್ರವಹ್ನಿಯೆನೆ ಯಾತ್ರೆಯೊಳಂಗಜನಿಕ್ಷು ಚಾಪಮಂ ||
ಪೂಜಿಸಿ ಮೀನಕೇತನಮನರ್ಚಿಸಿ ವಾಜಿಯನಾಜಿಗಂದು ನೀ |
ರಾಜಿಸಲೆಂದು ಪೊತ್ತಿಸಿದ ದೀಪಮೆನಿಪ್ಪುವು ತಳ್ತಶೋಕೆಗಳ್ || ೧೩೨ ||

ವ|| ಅಂತುಮಲ್ಲದೆಯುಂ:—

ಕಂ|| ಪೂಸಮಕರಂದದ ಮಾಂದದ |
ರಸಕ್ಕೆ ವಂದಲರೊಳಿಱಗಿದಳಿ ರಚನೆಯ ಕ ||
ರ್ಪೆಸೆವಂತೆಸೆವಿನ ಮೇಂ ಸೊಗ |
ಯಿಸಿದುದೊ ವನಯುವತಿ ವದನ ತಿಲಕಂ ತಿಲಕಂ || ೧೩೩ ||

ವ|| ಅದಲ್ಲದೆಯುಂ:—

ಮ|| ಪಿಕನಾದಂ ಕಳನಾದಮಂ ಪರಿಪತನ್ಮಾಲಾಶುಕಂ ಪಚ್ಚೆಯಂ |
ಶುಕಮಂ ತಳ್ತಲರ್ದೋಲೆ ಪೋಲೆ ಸಖಿಯಂ ಮೆಯ್ವೆಟ್ಟು ಕೆಯ್ವೆಟ್ಟಶೋ ||
ಕೆ ಕರಂ ಪೋಲ್ತುದು ಮಿಂದು ನಿಂದು ಮುಡಿಯಂ ಬಿಟ್ಟಾಱಿಸುತ್ತಿರ್ದ ಕಾ |
ಮುಕಿಯಂ ಕಾಂತತಮಾಳಕಾಂತನಿದಿರೊಳ್ ಮೆಯ್ವೆತ್ತ ಸೌಂದರ್ಯದಿಂ || ೧೩೪ ||

ಕಂ|| ಮೃಗನಯನೆಯರೂದೆಯೆಯು ಮಾ |
ಕೆಗಳುದ್ಯನ್ಮದನ ಮದ್ಯಮಂ ಮುಕ್ಕುಳಿಸಿ ||
ರ್ದುಗುಳೆಯು ಮಶೋಕೆವಕುಳದ |
ಮುಗುಳಲರ್ದುವು ರಮಣವದನ ಮಲರ್ವಂತೆತ್ತಂ || ೧೩೫ ||

ವ|| ಎನಿಸಿದ ಮಧುಸಮಯದೊಳುದ್ಯಾನನಂದನ ಪುರೋಪವನಕಿಸಲಯಕುಸುಮಫಲ ಭರ
ವಿನಮ್ರಕಮ್ರಾಮ್ರವನಲಕ್ಷ್ಮಿಯಲ್ಲದೆ ಬೇಱೆಯುಂ:—

ಚ|| ಅಳಿವೃತಮಪ್ಪ ಕೊಂಬಳಿಯೆ ಸೆಂಬುಳಿಗೋಲ್ ವಸನಂ ಮಿಸುಪ್ಪ ಕೆಂ |
ದಳಿ ರತಿಪಕ್ವಬಂಧುರಫಲಂ ಸತಿ ಮುಟ್ಟಿದ ಪೊನ್ನ ಬಟ್ಟಲ ||
ಗ್ಗಳದ ವನೈಕದೇಶವಸನಂ ತೊಲಗಿರ್ಪಿರವಾಗೆ ಮುಟ್ಟಲಿ |
ರ್ದೆಳೆಯಳನೇನರಣ್ಯಸಹಕಾರಲತಾಂಗನೆ ಪೋಲ್ತು ನಿಲ್ತಳೋ || ೧೩೬ ||

ವ|| ಮತ್ತಮಿಂತನಿತ್ತುಮತಿಕತಿಪಯವಿಳಸಿತಮೆನಿಸಿದ ಮಧುಪ್ರಪಂಚದೊಳ್:—

ಮ|| ಪರಿರಾಜತ್ಸಹಕಾರಸಾಂದ್ರರಸಮುಂ ಸಪ್ತಚ್ಛದೋದ್ಗಂಧಿ ಬಂ |
ಧುರ ನಿರ್ಯಾಸಮುಮಾಸ್ರವತ್ಸರಳಸಾರಾಸಾರಮುಂ ಹೇಮತಾ ||
ಮರಸಾಂಭಃಕಣಮುಂ ನಿವರ್ತನೆ ವರಂ ತಾನಾಮದಂ ಸೀಧುಸೀ |
ಕರಮಾದುಗ್ರವಸಂತದಂತಿ ಬೆಣಱುತ್ತೊಲ್ದಿರ್ದಗಲ್ದಿರ್ದೊರಂ || ೧೩೭ ||

ವ|| ಮತ್ತಂ ವನಾಂತರಂಗಳೊಳ್:—

ಕಂ|| ಭಂಗಿಯೊಳಶೋಕಲತೆಯಿಂ |
ಬಂಗನೆ ತರತರದಿ ನಡದುರ್ ಮಲಯಜಮಂ ಬ ||
ಲ್ಲಂಗೆ ಲತಾವೇಷ್ಟಿತಕಾ |
ಲಿಂಗನಮನನಂಗಮತಮನೇನಱಿಪಿದಳೋ || ೧೩೮ ||

ವ||ಮತ್ತಮದಱ ಸಮೀಪದೊಳ್ ಬೀತು ಪಸುರೇಱಿರ್ದ:—

ಕಂ|| ಕುಂದಲತೆ ಪುಷ್ಪಮುಂ ನಿ |
ಷ್ಪಂದಿತೆ ಸೊಗಯಿಸಳೆ ಮಧುಪನಿಕರಕ್ಕೆ ಜರ ||
ತ್ಸುಂದರಿ ಸೊಗಯಿಸುಗುಮೆ ವಿಟ |
ಸಂದೋಹಕ್ಕೆನಿತು ನಯಮನಳವಡಿಸಿದೊಡಂ || ೧೩೯ ||

ವ|| ಅದಕ್ಕನತಿದೂರದೊಳ್:—

ಕಂ|| ಕುಸುಮಾಯುಧ ನೃಪನೆಟ್ಟಿರ |
ಬಸಂತಕಂ ಪೊನ್ನ ಪೂಗಳಿಂದಿರದಡಿಯ ||
ರ್ಚಿಸಿದನನೆ ಕೊಸಗುಗಳ್ ಸೊಗ |
ಯಿಸಿದುವು ಕಣ್ಗಂ ಮನಕ್ಕ ಮುಂದಿನ ದಿವಸಂ || ೧೪೦ ||

ವ|| ಅದಲ್ಲದೆಯುಂ ತದುಪಕಂಠದೊಳ್:—

ಕಂ|| ಅಳವಳವಿಗಳೆದ ನವಪರಿ |
ಮಳಕ್ಕೆ ಗೆಂಟಾಗಿ ಮದನಮಂಗಳದೀಪಂ ||
ಗಳಿವೆಂದು ಪೂತ ಸಂಪಗೆ |
ಗಳೊಳೆಳಸದೆ ನೋಱಿದು ತಿರಿವುವಳಿಗಳ ಬಳಗಂ || ೧೪೧ ||

ವ|| ಮತ್ತಮಪರಿಮಿತ ಪರಿಮಳಾತಿಶಯಿತ ಸರ್ವರ್ತುಸಂಭವ ಪ್ರಸವಪ್ರಸರಕ್ಕೆ ಲತಾಂತಾಧಿರಾಜ ಮಲ್ಲಿಕಾವಿದಲನ್ಮುಕುಳನಿಕರದುಗುಳ್ದ ಪೊಸಗಂಪು ದೆಸೆದೆಸೆಗೆ ಪಸರಿಸಿ ಮಗಮಗಿಸೆ ಕಂಪಿನ ಕಣಿಯೆನಿಸಿದುದ್ಯಾನೈಕದೇಶದೊಳ್ ಸೊಗಯಿಸೆ:—

ಚಂ|| ಕುಸುಮಕುಳಕ್ಕೆ ನಿನ್ನರಸೆ ನಿನ್ನ ವಿಳಾಸಮೆ ನಿನ್ನ ಚೆಲ್ವೆ ನಿ |
ನ್ನೆಸಕಮೆ ನಿನ್ನಸಲ್ಗೆ ಮಧುಲಕ್ಷ್ಮಿಯೊಳಾ ಮಳಯಾನಿಳೇಂದುಗಳ್ ||
ಪೊಸಯಿಸೆ ನಿನ್ನಸೌರಭಮನೆಂದಭಿಷೇಕಪುರಸ್ಸರಂ ಸ್ಮರಂ |
ನಸುಬಿರಿದಿರ್ದ ಮಲ್ಲಿಗೆಗೆ ಕಟ್ಟಿದ ನಂಕದ ರಾಜ್ಯಪಟ್ಟಮಂ || ೧೪೨ ||

ವ|| ಅದಲ್ಲದೆಯುಂ:—

ಚಂ|| ಪುದಿದೆೞಗಾಯ್ ಬಸಂತದ ಮೊದಲ್ ನೆರೆದೊಪ್ಪುವ ದೋರೆಗಾಯ್ ಬಸಂ |
ತದ ನಡು ಪಣ್ ಬಸಂತದ ಸೆರಂಗೆನೆ ತನ್ಮಯಮಪ್ಪಿನಂ ಬಸಂ ||
ತದ ನಿಮಿರ್ದಾದಿ ಮಧ್ಯ ಮವಸಾನ ಮೊಡಂಬಡೆ ತನ್ನೊಳಂ ಬಸಂ |
ತದೊ [ಳಮಿದೇಂ] ಬಸಂತದ ದಗುಂತಿಗೆ ಬಾೞ್ಮೊದಲಾಯ್ತೊ ಮಾಮರಂ || ೧೪೩ ||

ವ|| ಆ ಪೂತಚೂತಂ ಮೊದಲಾಗೆ ಬಸಂತರಾಜನ ಕೋಶಸಾರಸರ್ವಸ್ವಮುಂ, ಕಯ್ಪಿಡಿಯುಂ ನಿಕ್ಷೇಪಮುಂ ಆದ ಸಮಸ್ತಾತ್ಮೋತ್ತರವನಸ್ಪತಿಪರಿಚ್ಛದಾಯಮಾನಪಲ್ಲವೋಪಲಾಸಿತ ಗುಚ್ಛಾಚ್ಛಾದನಬಾಲಸಟಾಳುಸಮಾಟೋಪಾಳಿವಿವಿಧವಿಳಸನನತಿವಿತರಣಮಂದಮಾರುತಾಂದೋಳಿತಲತಾಂದೋಳಾರೂಢಕೇಳಿಕೀರಕೇಳಿಪಿಕಾಳಿಕೇಳಿಸಮ್ಮದಾಳಿಕುಳಾಂದೋಳಾರಾವಾವಿರ್ಭೂತವಸಂತೋತ್ಸವಂ ಪೊಂಪುೞಿವೋಪುದುಂ ಮತ್ತಂ:--

ಕಂ|| ಇರುೞಿನ ವಿಯೋಗದುಃಖದೊ |
ೞಿರೆ ಸತ್ತಂತಿರ್ಪ ಜಕ್ಕವಕ್ಕಿಗೆ ಮನದೊಳ್ ||
ಕರುಣಿಸಿ ಕುಂದುವ ತೆಱದಿಂ |
ದಿರುಳ್ ಕರಂ ಕಿಱಿಯವಾದುವಂದಿನ ದಿನದೊಳ್ || ೧೪೪ ||

ವ|| ಮತ್ತಮಾಮಧುಸಮಯದೊಳ್:—

ಕಂ|| ಕೊಸಗಿನ ತುಱುಂಬು ಮುೞ್ಪಿನ |
ವಸನಂ ಕುಂಕುಮನವಾಂಗರಾಗಂ ಪರಿರಂ ||
ಜಿಸೆ ರಾಗದಿಂದ ಮುತ್ತಾ |
ದಿಸಿದನಜಂ ಭುವನಜನಮನೆನಿಸಿದುದು ಜನಂ || ೧೪೫ ||

ಇನನರ್ಥಲೋಭದಿಂ ಧನ |
ದನ ದೆಸೆಗೆ ಮಹೋಷ್ಣಕಿರಣ ನೆಯ್ತುರ್ಪಿನೆಗಂ ||
ಘನಜಳಧಿವೇಳೆ ಯಿಚ್ಛೆಯ |
ತನಿಗಣ್ಬುವೊಲೊಯ್ಯನೊಯ್ಯನುಡುಗಿದುದು ಹಿಮಂ || ೧೪೬ ||

ನನೆಗಣೆ ಕಣೆ ತನುರಹಿತಂ |
ಮನೋಜನುಂತುಂ ಬಸಂತಬಲದಿಂ ಗೆಲ್ದಂ ||
ತನಗಂ ಪಿರಿಯರ ನಚಲಿತ |
ಮನಸ್ಕರಂ ಮಿತ್ರಬಲದಿ ನಾಗದುದುಂಟೇ || ೧೪೭ ||

ವ|| ಇಂತು:—

ಮ|| ಸಕಳೋರ್ವೀಧರನಂದನಾವಳಿಗಳಂ ಮೆಯ್ವಿಟ್ಟು ಕೆಯ್ವಿಟ್ಟು ಸೈ |
ನಿಕರಪ್ಪನ್ಯಭೃತಾಳಿ ಕೀರಸುಭಟರ್ ಕಯ್ಕೊಳ್ವಿನಂ ತದ್ವಸಂ ||
ತಕ ನೆಟ್ಟಿರ್ಪುದು ಮುರ್ವರಾಸ್ಯತಿಲಕಂ ವಜ್ರಾಯುಧಂ ಬೇಗಮು |
ತ್ಸುಕನಾದಂ ವನಕೇಳಿಲೀಲೆಗನಘಂ ಸೌಜನ್ಯಕಂದಾಂಕುರಂ || ೧೪೮ ||

**ಗದ್ಯ**

ಇದು

ಜಿನೇಂದ್ರ ಚರಣ ಸರಸೀರುಹ ಶಿಲೀಮುಖಾಯಮಾನ

**ಶ್ರೀಮದುಭಯಕವಿ ಚಕ್ರವರ್ತಿ**

ನಿರ್ವರ್ತಿತಮುಂ

**ಅಮ್ಮನಭಕ್ತಾಭಿಧಾನ ವಿದ್ಯಾನಿದಾನ ಮಲ್ಲಪಾರ್ಯ**

ತದನುಜಾತಾಭಿಜಾತ ಸಾರಸ್ವತ

ಪುನ್ನಮಾರ್ಯ ಕಾರಿತಮು ಮಪ್ಪ

**ಪುರಾಣಚೂಡಾಮಣಿಯೊಳ್**

ಸಪ್ತಮಾಶ್ವಾಸಂ.

---

|| ಶ್ರೀ ||

# ಶಾಂತಿಪುರಾಣಂ.

## ಅಷ್ಟಮಾಶ್ವಾಸಂ.

ಕಂ|| ಶ್ರೀಮಜ್ಜಿನಶಾಸನಚೂ |
ಡಾಮಣಿ ವಿಭು ವಿಬುಧವನಜವನಕಳಹಂಸಂ ||
ಭೂಮಂಡಳಪತಿ ಬುಧಚಿಂ |
ತಾಮಣಿ ಜಿನಚಂದ್ರನಿರೆ ಸಭಾಮಂಡಳದೊಳ್ || ೧ ||
ಜನಿತನೃಪಾನಂದಂ ನಂ |
ದನವನಿಗಂ ಬಂದು ಬಿನ್ನಪಂ ಗೆಯ್ಯೆ ಮನೋ ||
ಜನೊಳಿಕ್ಕತುಳಕೆ ಬರ್ಪಂ |
ತನಂತರಂ ನಂದನಕ್ಕೆ ವಿಭು ಜಿನಚಂದ್ರಂ || ೨ ||

ವ|| ಬಂದು ಸೌಜನ್ಯಕಂದಾಂಕುರಂ ಪುರಂದರಲೀಲೆಯಿಂ ದೇವರ ಮಹೋದ್ಯಾನಮನೆಯ್ದಿ ಮದಗಜಮನಿೞಿದು ಲಕ್ಷ್ಮೀಪತಿ ಮಹಾದೇವಿ ಮೊದಲಾಗಯ್ನೂರ್ವರರಸಿಯರ್ವೆರಸು ಬರ್ಪ ಯುವ ರಾಜನಂ:—

ಕಂ|| ನಂದನವನಪವನಂ ಬೞಿ |
ವಂದೊಡಗೊಂಡೊಯ್ದು ಪುಗಿಸೆ ಬನಮಂ ಪುಗಲೆಂ |
ಬೊಂದನ್ಯಭೃತಕ್ವಾಣತಿ |
ವಂದಂತಾಯ್ತನು ಬೆಸಸೆ ಕುಸುಮಾಮೋದಂ || ೩ ||

ವ|| ಅಂತು ಬಂದ ವನಕುಸುಮಪರಿಮಳಮಿಳದಳಿಕುಳಕಾಕಳೀಕಳಿತಕೋಮಳಕಳಿಕಾವಿಳಸಿತ ಕರ್ಣಪೂರನು ದ್ಯಾನಪಾಲಕನಿರ್ದಿಷ್ಟಮಾರ್ಗಂ ಬಂದು ತದ್ವನಮಧ್ಯದ:—

ಚಂ|| ಪೊಸತಲರ್ದಂಬುಜಾಕರದ ತಣ್ಬುಳಿಲೊಳ್ ತನಗೇಱಲಿಕ್ಕೆ ರಾ |
ಜಿಸುವ ನವಾಮ್ರಪಲ್ಲವಸುಖಾಸನದೊಳ್ ಸಖಿಮಿರ್ದು ನೆಮ್ಮಿ ನಿ ||
ರ್ಮಿಸಿದಲರೊಂದು ಬೊಂದರಿಗೆಯೊಳ್ ಕನಕಾಂಬುಜಪಾದಪೀಠದೊಳ್ |
ನಿಸದಮೆ ನೀಡಿ ಕಾಲನಿಡೆ ರಾಜಕುಮಾರನದೊಂದು ದೇಸೆಯಿಂ || ೪ ||

ಕಂ|| ಇರೆ ಲಕ್ಷ್ಮೀಮತಿಮೊದಲಾ |
ಗಿರೆ ತನ್ನಿಕ್ಕೆಲದೊಳಬ್ಜದೆಳೆಯೆಲೆಗಳ ಬಿ |
ತ್ತರಿಗಳೊಳರಸಿಯರ್ ನೆ |
ಮ್ಮಿ ರಾಗದಿಂ ಕನಕರಜತಸಿಕತಿಳತಳದೊಳ್ || ೫ ||

ವ|| ಅಂತು ಕುಮಾರೋದಾರಪರಿವಾರಪರಂಪರೆಯುಮಂತಃಪುರಚೇಟಿಕಾಗೃಹಚೇಟಿಕಾನಿಕರಮುಮವರೋಧವಧೂಪರಿಚಾರಿಕಾನಿಚಯಮುಂ ಕಿಕ್ಕಿರಿಗಿಱಿದಿರ:—

ಕಂ|| ಆವಿವಿಧಕಳಕಳಕ್ಕೆ ವ |
ನಾವಳಿಯಿಂ ಪಾಱಿ ಮೊಱೆವ ಮಧುಪಶ್ರೇಣೀ ||
ರಾವದ ಘೋಷಣೆ ಕಳೆದುದಿ |
ಳಾವಲ್ಲಭಸುತನ ಪಡೆಯ ಮಥನಶ್ರೀಯಂ || ೬ ||

ವ|| ಅಲ್ಲಿಂ ಬೞಿಯಂ:—

ಕಂ|| ವನದೇವತೆಗಳ್ ನೃಪನಂ |
ದನಂಗೆ ಸೇಸೆಗಳ ನಾಗಳಿಕ್ಕುವವೋಲ್ ನೂ ||
ತನಲತಿಕೆಗಳಿಂದಲ್ಲೊ |
ಕ್ಕು ನಿಂದ ಕುಸುಮೋತ್ಕರಂ ಕರಂ ಸೊಗಯಿಸುಗುಂ || ೭ ||

ವ|| ಮತ್ತಿನಿಸಾನುಂ ಬೇಗದಿ ನಕಳಂಕಾಚಾರಸಾರನಪ್ಪ ವಜ್ರಾಯುಧಾಧಿಷ್ಠಿತಮಾದಮಾಧವೀ ಮಂಟಪದೊಳ್:—

ಚಂ|| ಮಧುಪಮಹೇಂದ್ರನೀಲ ಮತಿಮುಕ್ತಕಮೌಕ್ತಿಕ ಮುತ್ಪ್ರವಾಳಸ |
ನ್ನಿಧಿ ದಳವಿಸ್ಫುರನ್ಮರಕತಂ ಕಳಿಕಾಕುಳಿಶಂ ರುವನ್ಮಧೂ ||
ನ್ಮಧುರಮದೊಂದು ಭೂಪನಿಧಿರಾದಿದ ಮೂರ್ತ್ತಿಯ ಕೊಂಬು ಪೋಲ್ತುದಾ |
ಮಧು ಮಧುಪರ್ಕಪೂರ್ವಕ ಮನರ್ಘಮನರ್ಘ್ಯಮನೆತ್ತುವಂದದಿಂ || ೮ ||

ವ|| ಆ ಮಧುಪರ್ಕಸಮಯಸಮುತ್ಪನ್ನಲಕ್ಷ್ಮೀವಿಭವಾನುಭವನಿರತಂ ವಿನೇಯನಿಕಾಯಾಂಬುಜ ಭಾನುವಪ್ಪ ಯುವರಾಜಂ ಕಿಱಿದು ಬೇಗಂ ಮದನಂ ನಿಜಮಹೋತ್ಸವವಂಶವರ್ಧನದೊಳಿರ್ಪಂತೊ ಡ್ಡೋಲಗಂಗೊಟ್ಟಿರ್ದು ವನಾವಲೋಕನಕುತೂಹಳಾಕುಳಿತಂ ಮಧ್ಯಂದಿನಸಮಯಸಂತಪ್ತ ತಪನ ಮಂಡಲಮಂ ನೋಡಿ ನಿಜಾಸನ್ನವರ್ತಿ ವೃದ್ಧಕಂಚುಕಿನಿಕಾಯಕ್ಕಂ ನರ್ಮಸಚಿವಸಂದೋಹಕ್ಕಂ ಪೊಲ್ತಿಂ ತೋಱಿ ನೋಡಿಮಿಾಗಳ್:—

ಮ|| ತಿಮಿವಿಕ್ಷೋಭಿತದೀರ್ಘಿಕಾಂಬು ಕುದಿವಂತಾಯ್ತುಷ್ಣದಿಂ ನೃತ್ಯವಿ |
ಭ್ರಮಹೀನಂ ನವಿಲಾತಪತ್ರಸದೃಶಂ ಮಾಡಿತ್ತು ಪಿಂಛಾಳಿಯಂ ||
ಶ್ರಮದಿಂ ಪೊರ್ದಿದುದಾಳವಾಳವತಿವೃಕ್ಷಚ್ಛಾಯೆಯಂ ಪುಲ್ಲೆ ಪಿಂ |
ಗಿ ಮದಸ್ಥಾನದ ಭೃಂಗಿಶಂಕುಳಿವರಂ ಪೊಕ್ಕತ್ತು ಮತ್ತೇಭದಾ || ೯ ||

ವ|| ಎಂದು ಮಧ್ಯಾಹ್ನೋಚಿತ ಭಗವದರ್ಹದ್ವಂದನಾವಸಾನದೊಳ್:—

ಮ|| ಅವತಂಸಂ ವಿದಳನ್ನಮೇರುಕುಸುಮಂ ಹಾರಂ ಮೃಣಾಳಂ ಮನೋ |
ಭವರಾಗಂ ಪೊಳೆವಂಗರಾಗಮಳಿನೀವೃಂದಸ್ವನಂ ಗೀತಮು ||
ಟ್ಟ ವಿಚಿತ್ರಾಂಬರ ಮಬ್ಜಸೂತ್ರವಸನಂ ಬಿಲ್ ಪುವ್ವು ಬಾಣಂ ನಿಜಾ |
ಕ್ಷಿ ವನಕ್ರೀಡೆಗೆ ಪುಷ್ಪಸಾಯಕನಿಭಂ ತನ್ನಾಯಕಂ ನಿಲ್ವುದುಂ || ೧೦ ||

ವ|| ಅಂತು ವನವಿಹಾರರಸಿಕನಪ್ಪುದುಮೊಡನೆ:—

ಕಂ|| ಒಡನಾಡಿಗಳೆನಿಬರ್ ಕಿಱು |
ವಡಿಗಾಲದ ಕೆಳೆಯರೆನಿಬರೂಡವರೆಯದ ತ ||
ನ್ನೆಡೆಗಳೆನಿಬರ್ ಪಸಾಯಂ |
ಬಡೆವರಸರ ಮಕ್ಕಳೆನಿಬರನಿಬರು ಮೆಟ್ಟಿರ್ || ೧೧ ||

ವ|| ಅಂತು ದೀನಜನತಾಕಲ್ಪಾಂಘ್ರಿಪನಪ್ಪ ವಜ್ರಾಯುಧನೊಳ್ ಸಹಪಾಂಸುಕ್ರೀಡಿತರಪ್ಪ ರಾಜಕುಮಾರರೆಲ್ಲರು ಮೊಡನೆ ವನಕ್ರೀಡಾಭಿಲಾಷದಿಂ ಬರೆ:—

ಕಂ|| ಕುಸುಮಾಯುಧನೆಸಕಮನೋ |
ಡಿಸಿ ಬರೆ ವಜ್ರಾಯುಧಂ ವಧೂನಿಕರಮದೇ ||
ನೆಸೆದುದೊ ಬಿದಿ ಕುಡುಮಿಂಚಂ ||
ಮುಸೆದಂತೊಡನೊಡನೆ ಬಂದಧೀಶನ ಮತದಿಂ || ೧೨ ||

ಅಂತು ವನಕ್ರೀಡೆಗೆ ವರೆ |
ಕಂತುವೆ ವಜ್ರಾಯುಧಂಗೆ ಬೀಡಂ ಮಾಡಿ ||
ಟ್ಟಂತೆ ಸೊಗಯಿಸಿದು ವುದ್ಯಾ |
ನಾಂತರದೊಳ್ ಸಂತತಂ ವಸಂತಗೃಹಂಗಳ್ || ೧೩ ||

ಹಾಳಿನೀ ವೃತ್ತಂ|| ತಳಿರ ತಳಿರ ಜೊಂಪಂ ಕೂಡೆ ಸೇಡಾಗಿರಲ್ ಕೆಯ್ |
ಕೂಳೆ ಕುಳಿರ್ವ ಬಂಬಲ್ಗಾವಣಂ ಮಾಗಿ ಬಂದ ||
ತ್ತೊಳಗುಟಿದೆನಿಕುಂ ಧಾರಾಗೃಹಂ ಚಂದ್ರಕಾಂತೋ |
ಪಳದೊಳೆ ಸಮೆದಿರ್ದಂತಾಲಿ ಕೋಡುತ್ತುಮಿರ್ಕುಂ || ೧೪ ||

ವ|| ಅಂತವಱೊಳಗೊಂದನೊಂದನೆ ಮುಚ್ಚಿ ನೋಡುತ್ತು ಮೊರ್ವೊರ್ಗೊರ್ವ:—

ಮ|| ಅವಱೊಳ್ ವಿಶ್ರಮಿಸುತ್ತು ಮೆಯ್ದೆ ಬನಮುಂ ನೋಡುತ್ತು ಮಾಡುತ್ತು ಮಿಂ |
ತು ವನಕ್ರೀಡೆಯೊಳಿರ್ಪುದುಂ ಮುಗುಳ್ಗಳಿಂ ಪೂವಿಂ ನವಾಶೋಕಪ ||
ಲ್ಲವದಿಂ ಕಾಯ್ಗಳಿನಾದ ಪೂದುಡುಗೆಯಿಂ ಚೆಲ್ವಾದರಾ ಕಾಮನು |
ತ್ಸವದಿಂ ತೆಲ್ಲಟದಂದ ಮಾಧವಪುರಶ್ರೀಲೀಲೆಯಂ ಬಾಲೆಯರ್ ||೧೫ ||

ವ|| ಅವರೊಳಗೊರ್ವಳ್:—

ಕಂ|| ಪೊಸಕೆಂದಳಿರ್ಗಳ ದಾಳಿಂ |
ಬ ಸಾರಮುಂ ಕಟ್ಟಿ ತನ್ನ ಬಣ್ಣದೊಳದು ರಂ ||
ಜಿಸೆ ದೂರ್ವಾಂಕುರರುಚಿ ಕ |
ಣ್ಗೆಸೆದಳ್ ಪರಭಾಗಮಿಂಬನೀವುದು ಪಿಱಿದೇ ||೧೬ ||

ವ|| ಮತ್ತಮೊರ್ವಳ್:—

ಕಂ|| ಪೊನ್ನೆಯ ಮುಗುಳೆಕ್ಕಾವಳಿ |
ತನ್ನ ಕೊರಲ್ಗೆಸೆಯೆ ಮಧುಪರುಚಿ ಮದನವಶಾ ||
ತ್ಯುನ್ನತಿ ಪೂವಿನ ಪೊರಜೆಯೊ |
ಳುನ್ನನ್ನಂ ಸೊಗಯಿಪಂತೆ ಕಣ್ಗೆಸೆದಿರ್ದಳ್ || ೧೭ ||

ವ|| ಮತ್ತಮೊರ್ವಳ್:—

ಕಂ|| ಎಳಮಾವಿನ ಮಿಡಿಯೊಳ್ ಕೋ |
ಮಳೆ ಸಮೆಯಿಸಿ ಪಚ್ಚೆಸಾರಮಂ ಕಟ್ಟೆ ಸಮು ||
ಜ್ಜ್ವಳಕನಕವರ್ಣೆ ಮಿಗೆ ಬಗೆ |
ಗೊಳಿಸಿದಳುದ್ಯಾನಕೇಳಿಲೀಲಾಕ್ಷಣದೊಳ್ ||೧೮ ||

ವ|| ಮತ್ತಮೊರ್ವಳ್:—

ಕಂ|| ಕನಕಾಂಬುಜನಾಳಂ ಸು |
ತ್ತನಂಬುಜಂ ಕೀರ್ತಿಮುಖಮನನುಕರಿಸೆ ನಿತಂ ||
ಬಿನಿ ಕೇಯೂರಂ ತನಗೊ |
ಪ್ಪೆ ನಾಡೆ ಸೊಗಯಿಸಿದಳೊರ್ವಳಾವ್ಯತಿಕರದೊಳ್ ||೧೯ ||

ವ|| ಪೆರದೊರ್ವಳ್:—

ಕಂ|| ಸುರಯಿಯ ಮುಗುಳ ಮುಗುಳ್ ಕಿಂ |
ಕಿರಾತ ಕುಟ್ಮಳದ ನೂಪುರಂ ಸಹಕಾರಾಂ ||
ಕುರದ ಪೊಸಗೆಜ್ಜೆಯಿಂ ಹೋ |
ಯಿರೆ ಯೆಂಬಿನ ಮೊಪ್ಪೆ ಮುದ್ದೊಡಂಬಡೆ ನಡೆದಳ್ ||೨೦ ||

ವ|| ಮತ್ತೊರ್ವಳ್:—

ಕಂ|| ರಕ್ತಾಶೋಕಲತಾಂತದ |
ಮುಕ್ತಕಮಂಜರಿಯ ಸೂಸಕಂ ತಿಲಕದ ಸ ||
ನ್ಮೌಕ್ತಿಲಕಮುಮುಱಿ ತನಗನು |
ರಕ್ತಂ ಮಾಡಿದಳನೇಕಕಾಮುಕ ಜನಮಂ ||೨೧ ||

ವ|| ಆಕೆಯಲ್ಲದ ಮತ್ತೊರ್ವಳ್:—

ಕಂ|| ಬರಗಲೆಯುಂ ಕೊಪ್ಪುಂ ನೂ |
ಪುರಮುಂ ಲಂಬಳಮುಮಲ್ಲಿ ಮಲ್ಲಿಗೆಯ ಮುಗುಳ್ ||
ಬಿರಿಮುಗುಳೆಂಬಿವು ತನಗಾ |
ಗಿರೆ ದೇಸೆಯ ಮಾಸರಿಕ್ಕೆಯಂ ಪೊಸಯಿಸಿದಳ್ || ೨೨ ||

ವ|| ಅಂತವರೋಧಪರಿಚಾರಿಕಾಚತುರವಿಳಾಸಿನೀಪ್ರತೀಯಮಾನಶೋಭಾವಿಭವನಕಳಂಕಾಚಾರ ಸಾರನಪ್ಪ ವಜ್ರಾಯುಧನೆರಡುಂ ಕೆಲದೊಳಂ ಮದನನ ಮಸೆದ ನನೆಗಣೆಗೆಣೆಯಾಗಿ:—

ಕಂ|| ದ್ವೇಷಂ ವಿರಹಿಗಳೊಳ್ ಪರಿ |
ತೋಷಂ ಮಧುಮತದೊಳಾಗೆ ಬಂದರ್ ಕೆಲರುಂ ||
ಯೋಷಿಜ್ಜನ ಮಲರಂಬಿನ |
ವೇಷಂ ಗೊಂಡಂತೆ ನೆಱೆದು ಪೂದುಡುಗೆಗಳಿಂ || ೨೩ ||

ವ|| ಅಂತವರ್ವೆರಸು ದೀನಜನತಾಕಲ್ಪಾಂಘ್ರಿಪನಪ್ಪ ವಜ್ರಾಯುಧಂ ಕ್ಷೇಮಂಕರಮಹೀಪಾಲನ ಕಟ್ಟಿದ ಕಂಠಿಗಮೆತ್ತಿದಯ್ಯಗೊಡೆಗಂ ದಯೆಗೆಯ್ದು ಯುವರಾಜಲಕ್ಷ್ಮಿಗಂ ಪ್ರತಿಬದ್ಧನಿಯೆನಿಸಿದ ಮಧುಮಹೀಪಾಲನ ವಕುಲಮುಕುಲದ ಕಂಠಿಕೆಯುಮೆತ್ತಿದ ಪೊಂಗೇದಗೆಯ ಸವಡಿಗೊಡೆಯುಮುತುಚ್ಛಪರಿಚ್ಛದಮಾಧವೀಲಕ್ಷ್ಮಿಯುಂ ತನಗಮುೞಿ ಪಿರಿದು ಪೊೞ್ತಿಂ ವನಪ್ರಚಾರದೊಳಲಸಿದ ನದೀಚರನಪ್ಪ ಯೂಥಪತಿಯಂತೆ ವನವಿಹಾರದೊಳಲಸಿ ಬಂದು ಕಾವಣಮಂ ಪುಗೆ:—

ಕಂ|| ನೆಱಿಯೆ ಪಟಚ್ಚರದೊದವಿದ |
ಸೆಱಂಗಿನೊಳ್ ತಂದು ತೀವಿ ಪವನಂ ಹಿಮಮಂ ||
ಸೆಱಿಯಿಟ್ಟಂತಿರೆ ಮೊಗದೊಳ್ |
ತುಱುಗಿದ ಕಿಱುಬೆಮರದೇಂ ಮನಂಗೊಳಿಸಿದುದೋ || ೨೪ ||

ವ|| ಅಂತು ವನವಿಹಾರಪರಿಶ್ರಮಂ ಪೋಗೆ ಮೂಱುಜಾವಂ ಪೋದುದೆಂದು ಗೞಿಗೆಯ ಭಟ್ಟಂ ಬಿನ್ನಪಂಗೆಯ್ವುದುಂ:—

ಮ|| ಯುವರಾಜಂ ಯುವರಾಜಪುತ್ರಿಯುವತೀಶ್ರೀ ತನ್ನವಾನಂಗವೈ |
ಭವಮುಂ ರಾಜಿತ ರಾಜಪುತ್ರಮಹಿಮಾವಷ್ಟಂಭಮುಂ ನೋಡಲೊ ||
ಪ್ಪುವಿನಂ ವಾರಿವಿಹಾರಕೇಳಿಗಿರದಾ ವಜ್ರಾಯುಧಂ ಬಂದನಂ |
ದವಗಾಹಕ್ಕೆ ಸಯೂಥಮಿಂದ್ರವನದಿಂ ದೈರಾವತಂ ಬರ್ಪ್ಪೋಲ್ || ೨೫ ||

ಕಂ|| ವನಿತೆಯರಾರಾಜಕುಮಾ |
ರನನುಯ್ದರ್ ದೀರ್ಘಿಕಾಂಬುಕೇಳಿಗೆ ಪಿಡಿಗಳ್ ||
ವನಕರಿಯ ನುಯ್ವವೋಲ್ ನೂ |
ತನ ಪುಷ್ಕರಹಸ್ತೆಯರ್ ಮನೋಹರಗತಿಗಳ್ || ೨೬ ||

ಒಡವುಗುವರಸಿಯರ ನೆೞಲ್ |
ಬೆಡಂಗುವೆತ್ತಿರ್ದುವೊಲಿದು ಜಲದೇವತೆಗಳ್ ||
ತಡೆಯದಿದಿರ್ವಂದು ನೃಪನೊಡ |
ನೊಡನೆ ಸರೋವರಮನೊಸೆದು ಪುಗುವಂತಾಗಳ್ || ೨೭ ||

ವ|| ಮತ್ತಮನುಪಮಲಾವಣ್ಯರೂಪಸೌಂದರ್ಯವಿಭ್ರಮ ಭ್ರಾಜಿತಾನೇಕಾವರೋಧಂ ಸಮಾಧಿವಿರೋಧಾವಿಧಿಯಿಂ ದೀರ್ಘಿಕಾಪ್ರಿಯದರ್ಶನೆಯೆಂಬನ್ವರ್ಥನಾಮಮಂ ತಾಳ್ದಿ:—

ಚಂ|| ಪುಗೆ ಕೊಳನಂ ಲತಾಲಲಿತೆಯರ್ ಜಘನಸ್ಥಳಮೊತ್ತೆ ಮೇರೆಯಂ |
ಮಿಗುವುದಭಾರ ಮಾಕೆಗಳ ಪೀವರತುಂಗ ನಿತಂಬಬಿಂಬ ದೊಂ ||
ದಗಲದ ವೃದ್ಧಿ ಪೆರ್ಚೆ ನೆಲೆವೆರ್ಚಿದುದೀಕೊಳನೆಂಬುದೆಂದು ಭಿ |
ತ್ತಿಗೆ ನೆಲೆಯಾದುದಂದು ಜಿನಚಂದ್ರನ ವಾರಿವಿಹಾರಲೀಲೆಯಿಂ || ೨೮ ||

ವ|| ಅಂತು ತನ್ನೋರಗಳ್ವೆರಸು ಮುಘುಮ್ಮಿಱಿದೋಲಾಡುವಲ್ಲಿ:—

ಚಂ|| ಅಡರೆ ಕವಲ್ತುದೊಂದೆಡೆ ಮೃಗೋದ್ಭವದಿಂ ಬೆಳರ್ವಟ್ಟು ನಿಂದುದೊಂ |
ದೆಡೆ ಮಲಯೋದ್ಭವಪ್ರಸರದಿಂ ಕದಡಿಂ ಕಡುಕೆಂಕವಾದುದೊಂ ||
ದೆಡೆ ನವಕುಂಕುಮ ದ್ರವದಿ ನರ್ವಿಪ ಕರ್ಪಿನದಿರ್ಪನಾಳ್ದುದೊಂ |
ದೆಡೆ ಪರಿಮಿಶ್ರಿತಾರ್ದ್ರ ಮಹಿಷೀರಸದಿಂ ಸರಸೀ ವಿಭಾಗದೊಳ್ || ೨೯ ||

ವ|| ಅಂತು ನಾನಾವಿಧವರ್ಣಜಳೌಘತರತ್ತರಂಗಭಂಗುರಸರಸೀಮಧ್ಯದೊಳ್ಮಾನಸಸರೋವರದೊಳೋಲಾಡುವಗಗನಚರಸುಂದರಿಯರಂತೆ ಸೌಜನ್ಯಕಂದಾಂಕುರನಪ್ಪವಜ್ರಾಯುಧನರಸಿಯರ್ ತಮ್ಮರವಮ ರವವಾಗೆ ಜಲಕ್ರೀಡೆಯ ನಾಡುವಾಗಳ್:—

ಕಂ|| ಸರಸಿಜದ ಸೌರಭಂ ಮುಖ |
ಸರಸಿಜ ಸೌರಭಕೆ ಪದ್ಮಶೋಭೆ ಮುಖಾಬ್ಜ ||
ಸ್ಥಿರಶೋಭೆಗೆ ಸೋಲ್ತುದು ಗೆ |
ಲ್ದರೆಂಬವೋಲ್ ಮೊಱೆದು ಪೊಡನೆ ಮಧುಪಕುಳಂಗಳ್ || ೩೦ ||

ವ|| ಅಂತು ಕುಟಿಳನೀಳಕುಂತಳಕಳಾಪೆಯರ ಚತುರಭಾವಕ್ಕೆ ತಾಮುಂ ಸೋಲ್ತು ಗಱಸೂಂಕದೋಡುವಂತೆ ಮೊಱೆದು ಪಾಱುವ ಶಿಳೀಮುಖಂಗಳನಂಗನ ಬಿಲ್ವಡೆಗೆ ಪಡಲ್ವಡುವ ವಿಯೋಗಿಗಳ ಪಾಱುವ ಶಿಳೀಮುಖಂಗಳನೆ ಪೋಲ್ತೊಪ್ಪಿ:—

ಮ|| ಸ್ರ|| ರವವತ್ಸ್ರೋತಃಪಥೋತ್ತೋಯಮನಿಭಪತಿ ನಾಗಾಂಗನಾಂಗಂಗಳೊಳ್ ಸೂ |
ಸುವವೋಲ್ ವಜ್ರಾಯುಧಂ ಜೀರ್ಕೊಳವಿಯಿನಮೃತಸ್ಯಂದಿ ಸಂಧಾನಿಯಪ್ಪಂ ||
ಬುವನಾಗಳ್ ಪೋಗದೊತ್ತುತ್ತರಸಿಯರತನುಶ್ಯಾಮಕಾಗ್ರಂಗಳೊಳ್ ಸ್ನೇ |
ಹವಶಾನಂಗಾಗ್ನಿಯಂ ನೀರ್ದಳಿದು ನದಿಪುವಂತಾದನಂಭೋದಲೀಲಂ || ೩೧ ||

ವ|| ಅಂತು ರಾಜಕುಮಾರನೆತ್ತಿದ ಜಲಯಂತ್ರಪಯೋಭಿಘಾತದಿಂದ ಮರಸಿಯರ ತೊಟ್ಟ ಪೂದುಡಿಗೆಗಳೆಲ್ಲಂ ಬಳಲ್ತು ಕಲ್ದು ಪುಣ್ಯಲಾವಣ್ಯವಿಳಾಸಿನೀಜನಕ್ಕೆ ಭೂಷಣಪರಂಪರೆ ದೊರೆಕೊಳ್ಗುಮೆಂಬಂತೆ:—

ಪೃಥ್ವೀವೃತ್ತಂ|| ಸಳೀಲವಿಶದೋದಬಿಂದು ನವಹಾರಮಂ ತಮ್ಮುರ |
ಸ್ಥಳಂಗಳೊಳುದಗ್ರಲೀಲೆ ಪೊಸಮುತ್ತಿನೆಕ್ಕಾವಳೀ ||
ವಿಳಾಸಮ ನಪೂರ್ವ ಮಂಬುಕಣರಾಜಿ ಕರ್ಣಾಂತಿಕೋ |
ಜ್ಜ್ವಲೀಕೃತ ವಸಂತಮಂಜರಿಯನೆಯ್ದೆ ಪೋಲ್ತಿರ್ಪಿನಂ || ೩೨ ||

ಕಂ|| ಜಗದಧಿಪನ ಕಣ್ಗೆ ಕರಂ |
ಸೊಗಯಿಸಿವಂದಂತೆ ಸುಭಗಮಧುರಾಕೃತಿಗೊ ||
ಪ್ಪುಗು ಮಾವ ಪರಿಚ್ಛದಮುಂ |
ಮೃಗಾಂಕಬಿಂಬಕ್ಕೆ ನೆಱೆದ ಕಱೆ ಸೊಗಯಿಪವೋಲ್ || ೩೩ ||

ಆ ರಮಣಿಯರೊಡನೊಸೆದ ಕು |
ಮಾರನ ಮೇಗಂದು ಪೊನ್ನ ಜೀರ್ಕೊಳವಿಗಳಿಂ ||
ನೀರನಿರದೊತ್ತಿದರ್ ಸಮ |
ರಾರಂಭಮ ನಂಗಜಂಗೆ ಕಲಿಸುವ ತೆಱದಿಂ || ೩೪ ||

ವ|| ಅಂತುಮಲ್ಲದೆಯುಂ:—

ಕಂ|| ಜಳಧರವಾಳಿ ಸುರೇಂದ್ರಾ |
ಚಳದೊಳ್ ಕಱಿವಂತೆ ನೀರನೊತ್ತಿದುದಬಳಾ ||
ವಳಿ ವಜ್ರಾಯುಧವಕ್ಷ |
ಸ್ಥಳದೊಳ್ ಮಲ್ಲಿಗೆಯ ಮಾಲೆ ಯೂಡಿದ ತೆಱದಿಂ || ೩೫ ||

ಅಂತಂತಃಪುರಕಾಂತಾ |
ಸಂತತಿ ಲತಾಪ್ರತಾನಮಂ ಜಲಧರ ಧಾ ||
ರಾಂತಾಭಿಷೇಕದಿಂ ತಳಿ |
ದಂ ತೋಂಟಿಗನಂತೆ ಸಂತತಂ ಯುವರಾಜಂ || ೩೬ ||

ವ|| ಅವರೊಳೊರ್ವಳ್:—

ಕಂ|| ವಸುಧೇಶನೊತ್ತಿದಂಬು |
ಪ್ರಸನ್ನಧಾರೆಗೆ ಮೃಗಾಕ್ಷಿ ವದನಮನಿರದೊ ||
ಡ್ಡಿಸೆ ಧಾರೆ ಚಿಕುರದೊಳ್ ಸಿಲೆ |
ಪೊಸತಲರ್ದ ಸನಾಳಕಮಳ ನೆನಿಸಿದುದು ಮೊಗಂ || ೩೭ ||

ವ|| ಆಜಲದ್ವಂದ್ವಯುದ್ಧಮಲ್ಲದೆಯುಂ:—

ಚಂ|| ಲಲಿತಲತಾಂಗಿಯರ್ ತುಮುಳಕೇಳಿಯ ವಾರಿವಿಹಾರದೊಳ್ ಪಳಂ |
ಚಲೆವವನೀಶನಂದನನ ನಾಱದೆ ಮಾಣ್ದಿಸದಾತ ನೊತ್ತಿದು ||
ಜ್ಜ್ವಲ[ಜಲ]ಧಾರೆ ತಮ್ಮ ಮೊಗಮಂ ಕೊಳೆಗೊಂಡಿರದೊಡ್ಡಿದರ್ ಪೂದ |
ಟ್ಟಲರ್ಗಣೆ ಗೊಡ್ಡಿದಡ್ಡಣಮಿದೆಂಬಿನಮಬ್ಜವಿಚಿತ್ರಪತ್ರಮಂ || ೩೮ ||

ವ|| ಅಂತವರ್ ಸೋಲ್ತು ಕೋಟಿಭಟಂಗೆ ಸೋಲ್ತ ಭಟಕೋಟಿಯಂತೆ ಕೊಳದೊಂದು ಭಾಗಕ್ಕೆ ನೀರಿಲ್ಲಮುಗುಂದಲೆವೋಗೆ ತೊಲಗಿ ಗಱಿಯಿಕ್ಕಿ ತೊಲಗಿದಂಕದಂತೆ ಪೆಱಮೆಟ್ಟಿ ನಿಲ್ವುದುಂ:

ಕಂ|| ಜನಪತಿ "ಖನತೀಸರ್ಪಂ |
ಖನತಿ"ಯೆನಲ್ ತಕ್ಕ ಪಂಡಿತೋಕ್ತಿಗೆ ದೊರೆಯ ||
ಪ್ಪಿನಮಾಡಲ್ಕಂತಃಪುರ |
ವನಿತೆಯರಂ ಸನ್ನೆಗೆಯ್ದು ಕೊಳನಂ ಪೊಕ್ಕಂ || ೩೯ ||

ವ|| ಪೊಕ್ಕು ಜಳಕ್ರೀಡಾವಿನೋದೈಕರಸರಸಿಕ ನಂತಃಪುರಜನಸಹಿತಂ ಮಗುೞ್ದು ಮಾಡು ವಾಗಳ್:—

ಚಂ|| ಬಿಳಿಯಲರ್ಗಣ್ಗೆ ಕೆಂಪನರುಣಾಧರಕೊಪ್ಪುವ ಬೆಳ್ಪನೆಯ್ದೆ ಪ |
ಜ್ಜಳಿಸುವ ದೇಹದೀಪ್ತಿಗೆ ಬೆಳರ್ತೆರವಂ ಪಡೆದುಂ ನಿಕಾಮಕೋ ||
ಮಳೆಯರುದಾತ್ತವೃತ್ತಿ ಕಿಡುಗುಂ ಜಳವಾಸದೊಳಂತು ಮೊಪ್ಪುವೊಂ |
ದಳವಿ ನಿಸರ್ಗ ಮಾಕೆಗಳೊಳೊಪ್ಪುವ ತೇಜಮದೆಂತು ಮೊಪ್ಪುದೇ || ೪೦ ||

ವ|| ಎಂಬಿನಂ ಸೊಗಯಿಸುವವರೋಧವಧೂನಿವಹದೊಳ್:—

ಚಂ|| ಬಯಸುವ ನಾಣ ಜಾಣನುಳಿದಂತೆ ದುಕೂಲದ ನಾಂವ ವಸ್ತ್ರಶೋ |
ಭೆಯೊಳಮುರ್ದುಟ್ಟಳೋ ನಿರುತಮೇನುಡಳೋ ಬಗೆ ಪೋಗದೆಂಬ ಸಂ ||
ದೆಯದೆ ಜನಕ್ಕೆ ಪೋಲೆ ಬರೆಗುಂ ಬರೆಯಂ ದೊರೆವೆತ್ತ ಚೀರಘ |
ಟ್ಟಯುಮೆನೆ ಭಿತ್ತಿವೆತ್ತ ತೆಱನೊಪ್ಪಿದುದೊರ್ವಳಪೂರ್ವರೂಪೆಯಾ || ೪೧ ||

ವ|| ಮತ್ತಮೊರ್ವಳ್:—

ಕಂ|| ಕೊಡಕೆಯುದಬಿಂದು ಕೊಪ್ಪಿನ |
ಬೆಡಂಗನವಗಯ್ಸೆ ಕುಟಿಲ ಕೇಶಾವಳಿಯೋ ||
ಗಡಿಸದೆ ಪನಿಗಳ್ ನಿಲೆ ತಲೆ |
ದುಡುಗೆಯ ಮುತ್ತಿನವೊಲೆಸೆಯೆ ಸತಿ ಸೊಗಯಿಸಿದಳ್ || ೪೨ ||

ವ|| ಮತ್ತಮೊರ್ವಳ್:—

ಕಂ|| ತೋಳ ನಖವ್ರಣಕೆಱಗಿದು |
ಬಾಳೆಗಳಂ ನೋಟ್ಪ ಬಾಳೆ ಕಣ್ಮೇನೆಂಬಾ ||
ಳೋಳಮು ನೊಡರಿಸೆ ಸಲೆ ನೃಪ |
ಮಾಳಿಗೆ ಪಡೆದಳ್ ಮೃಗಾಕ್ಷಿ ಪರಿಸಂಭ್ರಮಮಂ || ೪೩ ||

ವ|| ಆಕೆಯಲ್ಲದೆಯುಂ:—

ಕಂ|| ಉರದಡಕಿಲ್ವುಣ್ಣಂ ಕರ್ದು |
ಕಿರವಧರದ ಪುಣ್ಗೆ ವಾಯ್ದು ಮೀಂಗಗಿದು ತಳೋ ||
ದರಿ ದರಿಯನೆಯ್ದು ವಿನಮಾ |
ಸರೋವರಂ ಕದಡೆ ಬೆರ್ಚಿ ದೆಸೆದೆಸೆವರಿದಳ್ || ೪೪ ||

ವ|| ಪೆಱಳೊರ್ವಳ್:—

ಮ|| ಸ್ರ|| ಅಲರ್ವಚ್ಚಂ ಪಚ್ಚಮುಂ ಪೊಚ್ಚಮುಮೆನಿಸದೆ ಮೆಯ್ವೆತ್ತೊಡಂಬಟ್ಟು ತನ್ನೊಳ್ |
ನಿಲೆ ಹೇಮೋದ್ದಾಮಕುಂಭಂ ತಳದೊಳಮರೆ ಮತ್ತೊಂದು ಕೈಕುಂಭಕಂಠ ||
ಸ್ಥಲದೊಳ್ ಚೆಲ್ವಾಗೆ ವಜ್ರಾಯುಧ ವಿಭುಗಭಿಷೇಕಕ್ಕೆ ತಕ್ಕಂದು ಬಂದು |
ಜ್ಜ್ವಲೆ ಗಂಗಾದೇವಿ ಪೊಯ್ವಂತಿರೆ ವಿಮಳಜಲಕ್ಷೀರಮಂ ತಂದು ಪೊಯ್ದಳ್ || ೪೫ ||

ಕಂ|| ಅರಸಂ ಸುರಕರಿ ಕರನಿರ |
ದೆ ರಾಗದಿಂ ಕನಕಕಳಶಜಳದಿಂದಾ ಸುಂ ||
ದರಿಯಂ ಮಿಸಿಸಿದೊಡೆ ಸರೋ |
ವರದೊಳ್ ಕರಿ ಮಿಸಿಸೆ ಮಾವ ಸಿರಿಯಂ ಪೋಲ್ತಳ್ || ೪೬ ||

ವ|| ಮತ್ತಂ ತಿಮಿಕುಳಕ್ಷೋಭಿತ ಬಾಳಿಕಾನಿಕರಕ್ಕೆ ಬಱವೃತ್ತಿಧಾರೆವೆತ್ತಿರೆ ತಳಮುಳಗಪ್ಪಿನಂ ಕದರ್ಥಿಸುವ ಬಾಳೆಮೀಂಗಳ ಕೋಳಾಹಳಕಳಕಳದಿಂ:—

ಕಂ|| ನೀರೊಳಗಳ್ಕಿದ ನೆವದಿಂ |
ದಾರೂಪನಿದಾನನಂ ಮೃಗಾಕ್ಷಿಯರಪ್ಪರ್ ||
ಸಾರೆ ಬಿಡುತಂದು ಕೂಡಲ್ |
ನೀರಂತಿರೆ ಬೆರಸೆ ಮದನ ಜಲಮುಂ ಜಲಮಂ || ೪೭ ||

ವ|| ಅಂತು ಪುಷ್ಪಾಯುಧನ ಕೊಂದ ಕೊಳ್ಗೊಳನಂ ಪೋಲ್ತು ಪೂಗೊಳದೊಳ್ ಸೌಜನ್ಯ ಕಂದಾಂಕುರನುಮಪ್ಪ ವಜ್ರಾಯುಧಂ ಪ್ರಮತ್ತನು ಮೇಕರಸನುಮಾಗಿ ನೀಡುಂ ಪೊೞ್ತು ಜಳ ಕ್ರೀಡಾವಿನೋದದೊಳಿರೆ:—

ಶಾ|| ಉದ್ದಾಮಾಯುತಚಂದ್ರಶಾಲಮುಪಮಾತೀತಂ ವಿಧುಸ್ಪರ್ಧಿ ವಿ |
ದ್ಯುದ್ದಂಷ್ಟ್ರಾಸುರಯಾನ್ಮಮಭ್ರಪಥದೊಳ್ ಪಾಱುತ್ತುಮಿರ್ದಲ್ಲಿ ಚಂ ||
ಚದ್ದಂಡಾಗ್ರಪತಾಕೆ ಮಾಣೆ ನಿನಗೆಂಬಂತಿತ್ತಮುಂ ಪೋಗದು |
ದ್ಯದ್ವೈರ್ಯಂ ನಿಲೆ ತದ್ವಿರೋಧಿಗೆ ವಿಭಂಗಜ್ಞಾನ ಮಾದೇಗದೊಳ್ || ೪೮ ||

ಕಂ|| ಪುಟ್ಟಲೊಡಮಱಿದು ಮೊದಲೊಳ್ |
ಪುಟ್ಟಿದ ಭವಬದ್ಧವೈರದಿಂ ದಿತಿಸುತನ ||
ಣ್ಮುಟ್ಟಾಗೆ ಬಂದು ಕಡನಂ |
ಕೊಟ್ಟರ್ ಕೊಳ್ವಂತೆ ನಾಗಪಾಶದಿ ನಾಗಳ್ || ೪೯ ||

ವ|| ಊರುಂ ಮೂಳೆಯುಂ ತಿಂಬಗುರು ಪಯಗರಿಯ ತನಿಗೊಂಬಂ ಬಳಿಗೊಯ್ಯಲ್ ಪೂಣ್ದು ತುದಿಯೊಳೋಡಿಪೋಪ ಭೀರುವಪ್ಪ ಪಣಿದಕಾರನಂತೆ ವಜ್ರಾಯುಧನ ದಿಕ್ಕರಿಕರಾಕಾರ ಬಾಹು ಪರಿಘಯುಗಳಮುಂ ತಾಮರೆಯ ನೂಲೋಳಾನೆಗಟ್ಟುವಂತೆ ಕಟ್ಟಿ:—

ಕಂ|| ಕೇಳೀ ಲೋಲನನುಮತರ |
ಸಾಳಾಪನನಱಿಯಲೀಯದಾಕೊಳನನವಂ ||
ಬಾಳಮತಿ ಪುರುಷರತ್ನದ |
ಪೇಳಿಗೆಯಂ ಮುಚ್ಚುವಂತೆ ಮುಚ್ಚಿದನಗದಿಂ || ೫೦ ||

ವ|| ಆಗಳ್ ಕೊಳದೊಳಗೆ ಪುದಿದೊಗೆದ ತಮಮುಂ ಕಂಡು ಬೆಗಡುಗೊಂಡು ನಡುಗುವ ವಲ್ಲಭೆಯರ ನಂಜಲಿ ಮಂಜಲಿಮೆಂದು ಸಂತೈಸಿ ತೊಡರಂ ಪೊಸೆದು ಪಱಿವ ಮದಕರಿಯಂತೆ ಪೊಸೆದು ನೋಡಲೊಡಂ:—

ಕಂ|| ನೆಱೆದಿರೆ ಸಂಕಲೆಮಂದದ |
ತೆಱದಿಂ ಪೆಣೆದಿರ್ದ ನಾಗರಜ್ಜುಗಳೆಲ್ಲಂ ||
ಉಱೆಯಱೆಯೆ ಬಲದಕಂಡಂ |
ಪಱಿವಂತಿರೆ ಪಱಿದು ಕೆದಱಿ ಬಿೞ್ದುವು ಕೊಳದೊಳ್ || ೫೧ ||

ವ|| ಅಂತು ನಾಗಪಾಶಮುಮನಶ್ರಮದೊಳ್ ಪಱಿದು ಬಲದಕೆಯ್ಯೊಳ್ ನಿಜಪ್ರಾಣವಲ್ಲಭೆಯರಂ ಪುದುಂ ಗೊಳಿಸಿ ವಾಮಹಸ್ತದೊಳ್ ನೂಂಕೆ:—

ಕಂ|| ಗಿರಿ ಪಾಱೆ ಭಾಗಮಿಕ್ಕಿದ |
ನಿರಿಗೆ ಪೊಲಸುರೇಂದ್ರನಳ್ಕಿ ಬೆಳ್ಕುತ್ತಿರ್ದರದಂ ||
ಬರದ ನಿಱಿಮುಗಿಲ ತೆರೆಗಳ |
ಪೊರೆಯೊಳಗಣ ನಿಜವಿಮಾನದೊಳಗಂ ಪೊಕ್ಕಂ || ೫೨ ||

ವ|| ಅಂತತಿವರ್ತಿಯುಂ ಮಹಾಸತ್ವಮೂರ್ತಿಯುಮಪ್ಪ ಸೌಜನ್ಯಕಂದಾಂಕುರನಪ್ಪ ವಜ್ರಾಯುಧನಿದಿರೊಳ್ ನಿಲಲಣ್ಮದಸುರನಸುರಕ್ಷಣಾರ್ಥಮೋಡುವುದುಂ:—

ಕಂ|| ವಿವಿಧಾನಕಂಗಳಿರದೆಸೆ |
ದುವು ತುಂಬಿಗರಂಬಮುರಲ ಸರಿಯೆಱಗಿದುದು ||
ತ್ಸವ ಮಾಗಳಾದುದಬಳಾ |
ನಿವಹಕ್ಕೆಸಗಿದುದು ಮೆಲ್ಲಮೆಲ್ಲನೆ ಪವನಂ || ೫೩ ||

ಆ ನಾಗಪಾಶಮುಂ ಜಗ |
ತೀನಾಥಂ ಪೊಸೆಯೆ ಕಟ್ಟುಗಳ್ ಬಿಟ್ಟಿರೆ ಪೋ ||
ಲ್ತೇನೆಸೆದುದೊ ನೃಪಸುತನಪ |
ದಾನವ ಶಾಸನಕೆ ಲೆಕ್ಕ ಮಿಟ್ಟಕ್ಕರಮುಂ || ೫೪ ||

ವ|| ಆಗಳಪಗತವಿಷಾದರು ಮುಪಗತಪ್ರಮೋದರು ಮಾದಂತಃಪುರಾವರೋಧಜನಂಗಳೆಲ್ಲಂ ತನ್ನ ಮೇಗಿಲ್ಲದ ಬಲ್ಲಾಳ್ತನಮುಮಂ ದೈವಬಲಮುಮಂ ಮೆಱೆದು:—

ಕಂ|| ಕಮಲಾಕರ ತಟದೊಳ್ ವಿ |
ಭ್ರಮಿಸೆ ಪಯೋರಾಶಿ ತಟದೊಳಾತನ ಕೀರ್ತಿ ||
ಪ್ರಮದೆ ಪಥಿಶ್ರಮದಿಂ ವಿ |
ಶ್ರಮಿಸಿದಳೇಲಾಲವಂಗಲವಲೀ ವನದೊಳ್ || ೫೫ ||

ವ|| ತದನಂತರಂ:—

ಆಯತ ವಾಮಹಸ್ತತಳಲಕ್ಷಣವಜ್ರ[ವಿ]ಚೂರ್ಣಿತಾದ್ರಿ ವ |
ಜ್ರಾಯುಧನೆಂಬ ದೊಡ್ಡಿವೆಸರಂ ಕೊಳದೊಳ್ ತನಗರ್ಥಪೋಷ ಮಾ ||
ರ್ಮಾಯಮನೀಯೆ ಪೌರನಿಕರಂ ಪರಿವೇಷ್ಟಿಸೆ ವಂದಿಕೋಟಿ ಕ |
ಟ್ಟಾಯಮನಿಟ್ಟಳಂ ಪೊಗೞೆ ತದ್ವನದಿಂ ತಳರ್ದಂ ನೃಪಾತ್ಮಜಂ || ೫೬ ||

ವ|| ಅಂತು ದೀನಜನತಾಕಲ್ಪಾಂಘ್ರಿಪಂ ವನದಿಂ ಪೊಱಮಡೆ ಪೋಬಱಯನೆ ಕಣ್ಬೊಲಂಗ ೞವಿನ ಮಟ್ಟಿಱುರ್ಕೆಯಿಂ ನಿಂದು ನೋಡಿ:—

ಕಂ|| ವನದೇವತೆಯರ ನಯನಮ |
ನನುಕರಿಸುವುದಲ್ಲಿ ಬಳ್ಳಿಮಲ್ಲಿಗೆಯಲರೊಳ್ ||
ನನೆಯೊಳ್ ಮುಗುಳೊಳ್ ಪಾಯ್ದೊ |
ಯ್ಯನೊಯ್ಯನತ್ತಿತ್ತ ಪೊಳೆವ ಮಧುಕರ ನಿಕರಂ || ೫೭ ||

ವ|| ಅಂತುದ್ಯಾನಪ್ರತೋಳೀ ದ್ವಾರದಿಂ ಪೊಱಮಟ್ಟು ಸೌಜನ್ಯಕಂದಾಂಕುರಂ ರಾಜ ಮುಖನಪ್ಪುದುಂ:—

ಕಂ|| ತವದ ಬಸಂತದ ಸಿರಿ ಬರೆ |
ಯುವರಾಜನ ಬೆನ್ನನಿತ್ತ ತೀವಿದ ಚಿತ್ತೋ ||
ದ್ಭವ ನರಮನೆ ನೃಪಸುತರಿಂ |
ಕವರ್ತೆ ಪೋದಂತೆ ಬಿನ್ನನಾಯ್ತು [illegible] ನ್ಯನೆಂ || ೫[illegible]

ಆಗಳ್ ವಜ್ರಾಯುಧನನು |
ರಾಗನೆ ತನಗಂಗರಾಗಮಾದುದು ನಿರುತಂ ||
ಪೋಗೆನೆ ಗಗನದ ಪಡುವಣ |
ಭಾಗದೊಳವಲಂಬಿಬಿಂಬನಾದಂ ದಿನಪಂ || ೫೯ ||

ವ|| ಅಂತುಮಲ್ಲದೆ:—

ಮ|| ಅಮಿತಾಬ್ಜಾಕರಕೇಳಿಯೊಳ್ ನೃಪಸುತಂಗಾದೊಂದನಂಗೈಕವಿ |
ಭ್ರಮಮೆನ್ನಂ ಕಳಿದತ್ತಿರುಳ್ ಸಫಲಮಕ್ಕಾನುಂ ಪ್ರತೀಚೀಸಮಾ ||
ಗಮಸಂತುಷ್ಟನೆ ನಪ್ಪೆನೆಂದು ದಿನಪಂ ರಕ್ತತ್ವದಿಂ ಪೋಗೆ ರಾ |
ಗಮೆ ತತ್ಕುಂಕುಮರಾಗಮಾದುದಪರಾಲಂಕಾರವಿಸ್ತಾರದೊಳ್ || ೬೦ ||

ವ|| ಅದಲ್ಲದೆಯುಂ:—

ಕಂ|| ನಿಜಕುಪಿತಾಂಬುಜ ಮಧುರಂ |
ರಜೋಪಮಾಮೂರ್ತಿ ಮತ್ತಮದನಂತಿರೆ ನೀ ||
ರಜಬಂಧು ಗುಱುಮ್ಮನೆ ರಸೆ |
ಗಜಾಂಡದಿಂ ದಿಱಿದನಾರನಱಿಯದೊ ರಾಗಂ || ೬೧ ||

ವ|| ಮತ್ತಮಾಪ್ರಸ್ತಾವದೊಳ್:—

ಕಂ|| ಒಡನಿರೆಯುಂ ಕೊಱಗಿ ಮನಂ |
ಗಿಡುಗುಂ ದಿನಪಾಸ್ತ ಸಮಯದೊಳ್ ದಿನಪನ ಪಿಂ ||
ಬಡಿನೊಳ್ ಕೋಮಳೆಯ ಮೊಗಂ |
ಗಿಡುವಂತಿರೆ ಕಿಡುವುದರಿದೆ ಕಮಳವಿಕಾಸಂ || ೬೨ ||

ಆಗಳ್ ಕಿಸುಸಂಜೆಯ ನವ |
ರಾಗದ ರುಚಿ ಮುಸುಳೆ ಮುಸುಳನಾಗಿ ತಮಂ ಮೇ ||
ಲಾಗೆ ಕವಿತಂದುದಿನನೊಡ |
ವೋಗದ ನವವಧುಗೆ ಪಿರಿದೆ ಕಂದುಂ ಕುಂದುಂ || ೬೩ ||

ವ|| ಅಂತು ಕವಿದ ಕತ್ತಲೆಯೊಳರಸಿಯರುಂ ತಾನುಂ ಕತಿಪಯ ಪರಿಚಿತಾಂಗರಕ್ಷಕ ಪರಿವೃ
ಗಜವಶಾರೂಢನಾಗಿ ಬರೆ:—

ಕಂ|| ಬಱಿಯಂ ಪೋಗುತ್ತುಂ ಪೆಱ |
ಗುಱುವಿನನನುಚರರ ತೆಱದೆ ಕೆಯ್ದೀವಿಗೆಗಳ್ ||
ಪಟಪಟ ನೆಸೆದಿರೆ ಬರವವ |
ಗಱಿಯೆನೆ ಕಣ್ಗೆವರೆ ಬರ್ಪ ವಜ್ರಾಯುಧನಾ || ೬೪ ||

ಾಗೊಂಡು:—

ಗಂ ಕ್ಷಿತಿನಾಥನಂ ಪೊಣರ್ದು ಗೆಲ್ವಂತಾತನುಂ ದಲ್ ಗುಣ |
ನೃಪಪುತ್ರನಿಂದಸುರನಂ ತಾನಾಸುರಂ ಗೊಲ್ದೊ ನಿ ||
ಕಾದಿ ಸೋಲನಹಿತಂಗೀ ಚಾಗಮಿಾ ಬೀರದು |
ಪೊಗೞ್ತವಡೆದತ್ತಂಭೋಧಿತೀರಂಬರಂ || ೬೫ ||

ಗಂ ಪ...

ಾಯುಧನೊ.

ವ|| ಎಂದರಸರ ಪಕ್ಕದೊಳ್ ಸುತ್ತುಗೊಂಡು ಬೆಚ್ಚಿರ್ ಬಿಚ್ಚಳಿಸುತ್ತುಂ ಬರೆ ಕಿಂಚಿದವನತಾನನಂ ತದಾವ್ರೀಡನಾಗಿ:—

ಕಂ|| ಪೊಗೞ್ದು ನೃಪಕೋಟಿ ತನ್ನಂ |
ಪೊಗೞದೆ ಗುಣಲವದ ತವದ ಗಣನೆಯ ನೆವದಿಂ ||
ಪೊಗೞ್ದಿಪುದೆಂಬಂತಿರೆ ಕಿವಿ |
ವುಗದೆ ದಲಾತ್ಮಪ್ರಶಂಸೆ ವಜ್ರಾಯುಧನಾ || ೬೬ ||

ವ|| ಅಂತು ರಾಜಮಾರ್ಗದಿಂ ಬಂದು ನೃಪಭವನಮಂ ಪೊಕ್ಕಾಸ್ಥಾನಮಂಡಪೋಪಗತಚಾಮೀಕರಪೀಠಾಧ್ಯಾಸಿತನಂ ತ್ರಿವಿಷ್ಟಪಗುರುವಂ ಕಂಡತ್ಯಂತದೂರಾವನತಮಣಿಕಿರೀಟನಾಸನ್ನಗತನಾಗಿ:—

ಕಂ|| ಕ್ಷೇಮಂಕರ ಪದಯುಗನವ |
ತಾಮರಸರಜಂ ನೊಸಲ್ಗೆ ತಿಲಕವಿಭೂಷೋ ||
ದ್ದಾಮತೆಯಂ ಕುಡೆ ಪೊಡೆವ |
ಟ್ಟಾಮಹಿಮಂ ಪರಸೆ ಕನಕಮಯವಿಷ್ಟರದೊಳ್ || ೬೭ ||

ವ|| ಕುಳ್ಳಿರ್ಪುದುಂ ಕ್ಷೇಮಂಕರಮಹಾರಾಜಂ ಪರಿತೋಷಪ್ರಾದುರ್ಭಾವಚಿಹ್ನಭೂತಪರಮಪ್ರಸಾದಸ್ಮೇರಮುಖಂ ಪ್ರಿಯಾತ್ಮಜಾನನಾರವಿಂದನಿರೀಕ್ಷಣಾನಂತರಂ ಸಭಾಸದರ್ಗೆ:—

ಕಂ|| ಈ ರಾಜಹಂಸನಂ ಸರ |
ಸೀರತಲಂಪಟನನಸುರನೊರ್ವಂ ಗಡ ಕೊ ||
ಲ್ವಾರವೊಲುದ್ಯತನಾದ ನ |
ಪಾರಬಲಂ ತಗುಳೆ ತಗುಳೆ ಗಾಟಂಗಾಡಲ್ || ೬೮ ||

ದೇವೋಪಘಾತಮಂ ಶೌ |
ರ್ಯಾವಷ್ಟಂಭದಿನದೆಂತು ಗೆಲ್ದಿಯೊ ಪೇೞಿಂ ||
ದಾವಿಭು ಬೆಸಗೊಳೆ ಗುರುಲ |
ಜ್ಜಾವನತಮುಖಂ ಕುಮಾರನಿರೆ ಕೆಲದವರ್ಗಳ್ || ೬೯ ||

ವ|| ತತ್ಪ್ರಪಂಚಮನಱಿಯೆ ಬಿನ್ನಪಂಗೆಯ್ದರ್, ಕ್ಷೇಮಂಕರ ಮಹೀಪಾಲನುಂ ಮಗನಂ ಬೀಡಿಂಗೆ ಪೋಗಲ್ವೇೞ್ವುದುಮಕಳಂಕಾಚಾರಸಾರನಪ್ಪ ವಜ್ರಾಯುಧಂ ನಿಜನಿವಾಸಕ್ಕೆ ವಂದಿರೆ:—

ಕಂ|| ಕಮನೀಯಾಕಾಶಗಜ |
ಕ್ಕೆ ಮಾಡಿದವದಾತಕರ್ಣ ಚಮರರುಹಸಮಂ ||
ಹಿಮಕರ ಕರಮೆನೆ ನಕ್ಷ |
ತ್ರಮಾಲೆ[ನಕ್ಷತ್ರಮಾಲೆ]ಯೆನಿಸಿದುವಾಗಳ್ || ೭೦ ||

ಮ|| ಸ್ರ|| ಉದಯಕ್ಷ್ಮಾಭೃತ್ತಟಂ ರಂಗಮ ನುಡುತತಿ ಪುಷ್ಪಾಂಜಲಿಕ್ಷೇಪಮಂ ಪ |
ರ್ವಿದಗುರ್ವಪ್ಪಂಧಕಾರಂ ನವಜವನಿಕೆಯಂ ನಾಲ್ಕು ಜಾವಂಗಳುಂ ತ ||
ಪ್ಪದೆ ನಾಲ್ಕಂಕಂಗಳಂ ಪೋಲ್ತಮರ್ದಿರೆ ಹಿಮಕೃನ್ನಾಟಿಕಾಸೂತ್ರಧಾರಾ |
ಭ್ಯುದಯಪ್ರಾರಂಭಮಿಂದ್ರಾಶೆಯೊಳೆನೆಯೆಸೆ ಚೆಲ್ವಾಯ್ತು ಶೀತಾಂಶುಬಿಂಬಂ || ೭೧ ||

ವ|| ಮತ್ತಂ ಕಿಱಿದು ಬೇಗದಿಂ:—

ಕಂ|| ಹಿಮರಶ್ಮಿ ರೋಹಿಣೀಕುಂ |
ಕುಮಮಸೃಣೋಲ್ಬಣರಸಂ ನಿಜಾಕೃತಿಯೊಳ್ ಸಂ ||
ಕ್ರಮಿಸಿದೊಡದನಮರಾಪಗೆ |
ಯ ಮಡುವಿನೊಳ್ ಕರ್ಚಿದಂತೆ ಕೆಂಪಂ ಬೆಸುಟಂ || ೭೨ ||

ವ|| ಅಂತು ಪಗಲೊಳ್ ತಡವಮಾಡಿದಂತೆ ಜಲಕ್ಕನಾದಚ್ಚಬೆಳ್ದಿಂಗಳೊಳ್ ದೀನಜನತಾ ಕಲ್ಪಾಂಘ್ರಿಪಂ ನಾಗರಕ ವಿಟ ವಿದೂಷಕ ಪೀಠಮರ್ದಕರ್ಕಳ್ವೆರಸು ಮಕರಧ್ವಜನೋಲಗಂ ಪೊಱ ಮಡುವಂತೆ ಪೊಱಲೊಳಗಣ ಬಸಂತೋತ್ಸವದ ಕೌಮುದೀಮಹೋತ್ಸವಮಂ ನೋಡುವಟ್ಟಿಯೊಳ್ ಅಕೃತಕಾರಾಮಸಂವರಣ ನನುಪಲಕ್ಷಿತಭಾಷಾಸಂಕೇತಜನಂಗಳ್ವಿಡಿದು ಬರ್ಪೊನಲ್ಲಿ ಫುಲ್ಲಶರನುಮಂ ಚಲ್ಲದೊಳ್ ಪದವಡಿಸಲುಂ, ವಾತ್ಸ್ಯಾಯನನುಮಂ ಮತ್ಸರದೊಳ್ ಗೆಲಲುಂ, ದತ್ತಕನವಾ ಜತ್ತಕದೊಳ್ ಸುತ್ತಲುಂ, ಪಾಂಚಾಳನುಮಂ ಪಂಚಾವಸ್ಥೆಗೆದಱಲುಂ, ಕರಂ ಚೆನ್ನೆಯರಾಗಿಯುಂ ಖಿನ್ನೆಯರಲ್ಲದೆ ನುಣ್ಪೋಱುಗೆಯ್ತದಿಂ ಮಧುವಂ ಸುಡಲುಂ ತ್ರಿಪುರಮನುರಿಪಲುಂ, ಕೀಕೆಲೊಳ್ ಕಿಚ್ಚಿಡಲುಂ, ಕಣ್ಣಪಾಪೆಗಳೆಣ್ಣೆಮಾಱಿಪೂಮಾಱಲುಂ ಬಲ್ಲವರಾಗಿ ಮದನನ ಪರಿಚಾರಿಕೆಯರಂಬೆತ್ತ ವಂತೆ ಪೂವನೆತ್ತುವ ಪುಷ್ಪಲಾವಿಕಾಚತುಷ್ಪಥದೊಳ್:—

ಚಂ|| ವಯಸದೊಳೇಱಿ ಜವ್ವನಕೆ ಕಾಂತಿಯೊಳುಜ್ಜ್ವಳಕಾಂತಿಯಿರ್ಪ ಭಂ |
ಗಿಯೊಳಿರ್ದೆಗೊಳ್ವಭಂಗಿಗೆ ನಿರಂತರವಾಗಿರೆ ನೋಂತು ಮಾಲೆಗಾ ||
ರ್ತಿಯರೆಸೆದೊಪ್ಪೆ ಪುಂಜಿಸಿದ ಕಾಮನ ಕೆಯ್ದುಗಳಿರ್ಪ ಜೇನಸಾ |
ಲೆಯ ನವಸಾಲಭಂಜಿಕೆಗಳೆಂದವರಂ ವಿಭು ನಿಂದು ನೋಡಿದಂ || ೭೩ ||

ಕಂ|| ಅಮರೋರಗಾಂಗನಾ ವಿ |
ಭ್ರಮ ಭಾಜನವಾದ ವಾರವನಿತಾಜನದೊ ||
ಳ್ಪಮರ್ದಿರೆ ಮದನನ ನಚ್ಚಿನ |
....ವಶ್ಯಮೆನೆ ನೆಗೆದ್ದಸೂಳೆಗೇರಿಯನರಸಂ || ೭೪ ||

ವ|| ಎಯ್ದೆ ವಂದೆರಡೋಳಿಯ ನೆಲೆಯ ಸುಧಾಗೃಹಂಗಳ ವಿಶಾಳಾಂಗಣದೊಳ್ ನಿಂದು ನೋಡು ತ್ತುಮಿರೆ:—

ಮ|| ತಳಿರುಯ್ಯಲ್ ಶ್ರುತಿಯಿಂದ ಮೊಂದೆ ಕೊರಲೊಳ್ ಜೀಯೆಂಬಿನಂ ಪಾಡುವಿಂ |
ದೊಳಮುಟ್ಟಿಕ್ಕಳವಟ್ಟದಿಂದಱಿಯೆ ಬರ್ಪರ್ ಪೋಪರಾರ್ಗಂ ಮನಂ ||
ಗೊಳಿಸಲ್ ಕಪ್ಪುರದೀವವಿಟ್ಟವಿಡಿ ಜಾಗಂ ವಾರನಾರೀಜನಂ |
ಗಳೊಳಂದೊಪ್ಪೆ ನೃಪಂಗಲಂಪುವಡೆದತ್ತೆತ್ತಂ ಬಸಂತೋತ್ಸವಂ || ೭೫ ||

ವ|| ಅಂತು ನೋಟ್ಪರ ಮನದೊಳ್ ತಡಂಮಾಡಿಯು ಮುಯ್ಯಲಾಡಿಯುಂ ಚದುರರಪ್ಪಾ ರ್ಯರ್ ಮನಂಗೊಳೆ ಪಾಡಿಯುಂ ಶೃಂಗಾರಸಾರ ಸರ್ವಸ್ವಭೂತೆಯರಪ್ಪ ವಿಳಾಸವತಿಯರಿಂದೋಳಕೇ ಳೀವಿಲಾಸಮನುಯ್ಯಲ ಮರನಂ ಮಱಿಗೊಂಡಾಳಿಗೆವಂದದಿಂದೊಳಗೆ ವಡ್ಡಂಬರಂ ನೋಡಿ ಪೆಂಡ ವಾಸಗೇರಿಯೊಳಗನೆ ಬರವರೆ ತೊಟ್ಟನೆ ಕಟ್ಟದಿರೊಳ್:—

ಮ|| ನೊರೆವಿಂಡುಟ್ಟ ದುಕೂಲಮಾಗೆ ಸಲಿಲಂ ಮೆಯ್ಯಾಗೆ ಹಂಸಾವಳೀ |
ವಿರುತಂ ನೂಪುರನಾದಮಾಗೆ ತೆರೆಗಳ್ ತೋಳಾಗೆ ನಿರ್ಭಿನ್ನ ತಾ ||
ಮರಸಂ ಶ್ರೀಮೊಗಮಾಗೆ ಮೀರ್ನ ನಯನಮಾಗೊರ್ವಳ್ ಮನೋಜಾಂಬುಜಾ |
ಕರದಂತಾನ್ನೃಪನಂದನಂಗೆ ಪಡೆದಳ್ ಬೇಱೊಂದತಿಪ್ರೀತಿಯಂ || ೭೬||

ವ|| ಆಕೆಯಂ ನೋಡಿ ಹೊಟ್ಟಚತುರಕನೆಂಬ ನಾಗರಕನರಸಂಗೆತೋರಿ:—

ಉ|| ಆಯತಭದ್ರಲಕ್ಷಣಗಣಪ್ರಕೃತಿಸ್ಥಿತಿ ಧಾತುಸತ್ವಮಂ |
ದೀಯೆಡೆ ಸಾಂಪ್ರಯೋಗದ ತವರ್ಮನೆ ಮತ್ತವು ನಿನ್ನ ತನ್ನಭಿ ||
ಪ್ರಾಯದೊಳೊಂದಿ ತೋಱದಪುದೆನ್ನ ಮನಕ್ಕದಱಂ ಕುಮಾರ ನೀಂ |
ನಾಯಕನಪ್ಪ [ದಾ] ಸುದತಿ ನಾಯಿಕೆಯಪ್ಪುದು ನಾಡೆ ಕೂಡುಗುಂ || ೭೭ ||

ವ|| ಎಂದಪಹಾಸಪೇಶಲಂ ನುಡಿಯೆ ಸೌಜನ್ಯಕಂದಾಂಕುರನಪ್ಪ ವಜ್ರಾಯುಧಂ ನಾವಪ್ಪೊಡೆ ನಿಯತೇಂದ್ರಿಯವರ್ತಿಗಳೆಮುತನೇಗಯ್ದು ಮುಂತೆ "ದ್ರಷ್ಟವ್ಯ ದರ್ಶನಫಲಂ ಲೋಚನ" ಮೆಂಬಂತೆ ನೋಡುವುದೆ ಬಾೞ್ತೆಯೆಂದಾಕೆಯಂ ನೋಡುತ್ತುಂ ಬರೆ ಮತ್ತೊಂದೆಡೆಯೊಳ್ ಒರ್ವಳ್ ಮೇಳದ ಕೆಳದಿಯುಂ ತಾನುಂ ಪೆಱಗಣ ಮತ್ತವಾರಣದೊಳ್ ಕುಳ್ಳಿರ್ದು ಪಲದಿವಸಂ ಸೂಳ್ಪಡೆಯದೆ ಕರವು ದರ್ಕಾಸೆವಟ್ಟು ಮಾತಟ್ಟದ ಕೆಳೆಯನನೆಮ್ಮಬ್ಬೆಯನೊಡಂಬಡಿಸಲಣ್ಮೆನೆಂದು ಪೋಗಲ್ವೇೞ್ದು (ತನ್ನ ನಲ್ಲನ ನಲ್ಮೆಯಂ):—

ಚಂ|| ಸಮುದನನೇಕರಕ್ಷಿತನನಾನೆಯನಾಳ್ವುದು ಮೆನ್ನನಾಳ್ವುದುಂ |
ನಮಗೆ ದಲೇಕೆ ನೀನಱಿಯ ನಲ್ಲನ ನಲ್ಮೆಯುಮೆನ್ನ ನಲ್ಮೆಯುಂ ||
ಸಮರಸಮೋಪನಂ ಬಿಸುಟು ತನ್ನ ಮನಂಗೊಳೆಯುಂ ಕನಲ್ವಳಿಂ |
ತಮೃತದೊಳೆನ್ನುಮಂ ವಿಷದೊಳಬ್ಬೆಯುಮಂ ಪಡೆದಂ ಪಿತಾಮಹಂ || ೭೮ ||

ವ|| ಎಂದು ತನ್ನ ಮನದನ್ನಳಪ್ಪ ಕೆಳದಿಗೆ "ನಿವೇದ್ಯ ದುಃಖಂ ಸುಖೀ ಭವತು" ಎಂಬಂತು ಸಿರ್ದುಸಿರದಿರೆ ನಗರನಾಗರಕಾದಿಗಳದಂ ಕೇಳುತ್ತುಂ ಬಂದು ಮತ್ತೊಂದು ವಿಟಜನಚತುಷ್ಪಥದೊಳ್ ಪಾಲುಂ ನೀರು ಬೆರಸಿದಂತಪ್ಪ ಕೆಳೆಯರಿರ್ದು ವಿಸ್ರಂಭದೋಷಪ್ರಸಕ್ತರಾದೆಡೆಯೊಳೊರ್ವನೊರ್ವಂಗೆ ಕೋಳ್ಗಗ್ಗಳಮಾದ ಮನೆಗಂ ತೋಳ್ಗಗ್ಗಳಮಾದ ಬದ್ದೆಗಂ ಬೇಸತ್ತು ಗೆಂಟಪ್ಪ ತಕ್ಕು ಮಿಕ್ಕಿರೆ ತನಗ ತ್ಯಂತಾನುರಕ್ತೆಯಲ್ಲದಿರೆಯು ಮಾಕೆಯ ಸಾಧಾರಣಗುಣಂ ಚದುರೆಂಬಿವಂ ಬಿಸುಡಲಾಱದೆ:—

ಚಂ|| ಮನಮನಗಲ್ಚಲೊಂದೆಡೆಯ ಪೊಲ್ಲಮೆಗಾಣೆನ ಬೇಱದೊಂದು ರೂ |
ಪಿನ ನಿಧಿ ಬೇಱದೊಂದು ಕಡುಗಾಡಿಯ ಸನ್ನಿಧಿ ಬೇಱದೊಂದು ನು ||
ಣ್ಪಿನ ಕಣಿ ಬೇಱದೊಂದು ಪೊಸಗಂಪಿನ ಪೊಂಪುೞ ಬೇಱದೊಂದು ಬ |
ರ್ದಿನ ನೆಲೆ ಬೇಱದೊಂದು ರಸಭಾವದ ಕಾಟ್ಪುರ ಮೆನ್ನ ನಲ್ಲಳಾ || ೭೯ ||

ವ|| ಎಂದು ತದೀಯ ವಯಸ್ಯನಾತನೆಗ್ಗಂ ಮಾಕೊರ್ಂಡು ದೋಷಾನ್ವೇಷಣಮಂ ಬಾರಿಸಿ:—

ಚಂ|| ಒಡಮೆಯ ನೀಯದಿತ್ತೆನೆನಿಸಲ್ ಕಿಱಿದಂ ಪಿಱಿದಾಗೆ ಕೊಟ್ಟು ಮೆ |
ಟ್ಪಿಡಿಸಲೊಡಂಬಡಂ ಬಿಸುಟೊಡಂಬಡಿಸಲ್ ಬಗೆದಪ್ಪುದೆಲ್ಲಿಯುಂ ||
ಪಡೆಯದ ಬೇಟಮಂ ಪಡೆದುದಂ ಕಿಡಿಸಲ್ ತೊಱೆಯೊಳ್ ಪೊದಟ್ಟಿ ಮು |
ಳ್ಗಿಡುಗಡಿಸಟ್ಟುಗಕ್ಕೊನಲಿಗಂ ದೊರೆಯಪ್ಪರೆ ಕೇಳರಪ್ಪವರ್ || ೮೦ ||

**ವ||** ಎಂದು ಸಂತೈಸಿ ಬುದ್ಧಿವೇಳ್ದೊಡಂಬಡಿಸಿದಂ, ಮತ್ತೊಂದೆಡೆಯೊಳ್ ಕೆಯ್ಗೆಯ್ದು ಬಿನ್ನನಾಗಿರ್ದಳನನುಮಾನದಿಂದಮಱಿದಮೃತಪರಿಹಾಸಕನೆಂಬ ವಿದೂಷಕನರಸಂಗಿಂತೆಂದಂ:—

ಚಂ|| ಮನೆಯನಿವಕ್ಕೆ ಮರ್ಚಿಸಿದ ಮರ್ಚಿಸಿ ಕೂರಿಸಿದೆಯ್ದೆ ಕೂರ್ತು ನ |
ಚ್ಚಿನ ರುಚಿ ಬೆರ್ಚು ಬಿಚ್ಚತಿಕೆಯಂ ಬಗೆ ಕೂಡಿದ ಕೆಯ್ಗೆ ಮಾಡಿದೋ ||
ಪನನುಱದೊತ್ತಿಗಿರ್ದೆಡೆಯೊಳೊಂದೆನಗಿತ್ತಪುದೋ ವಸಂತಕಂ |
ಮನಸಿಜಮಾರ್ಗಣಕ್ಕೆ ಗುಱಿಯೊಡ್ಡಿದನೆಂಬ ಮನಃಪ್ರವೃತ್ತಿಯಂ || ೮೧ ||

**ವ||** ಎನೆ ಕುಮಾರನಿಂತೆಂಪನಾಸು ಮದನೆ ಬಗೆದಪ್ಪೆನೆಂದಲ್ಲಿಂದಂ ತಳರ್ದು ಪೆಱತೊಂದೆಡೆಯೊಳಾಗಳಾಗಳೆ ತನಗಟ್ಟಿದ ಪೂವಿಂಗೆ ಮಧುಕರಿ ಸಂಪಿಗೆಯ ಪೂವಿಂಗೇವಯ್ಸುವಂತೇವಯ್ಸಿ ತನಗಂ ಮನೆಗಂ ಕೆಳದಿಯಿಂದಮೆ ಪಚ್ಚುಗುಡಲೆವೇಟ್ಟು ತನಗೆ ನೀಡುವ ಪೂವಂ ತಂದಣ್ಣಂಗೆ ಕುಡಾಂ ಕೆಯ್ಮಾಸಿದೆನೆಂದಳಂ ಲಂಜಿಕಾಭಂಜನನೆಂಬ ವಿಟಂ ಕೇಳ್ದು ವರ್ರಾಸ್ಯತಿಳಕಂಗೆ ಬೆರಂಟ ತೋಱ:—

ಕಂ|| ಸ್ಮರಶರ ಸಂಧಾನಕ್ಕಂ |
ಬುರುಹೇಕ್ಷಣೆ ಲಕ್ಷ್ಯಮಾಗೆ ನಲ್ಲನನುಱದಾ ||
ಪರವಶೆ ತನ್ನೊಲ್ಲದನಂ |
ಕರದಲ್ ಬೆಟ್ಟೇಱ ಮಿಟ್ಟು ಗರವಂತೀಗಳ್ || ೮೨ ||

**ವ||** ಎನೆ ಕುಮಾರಂ ಪುಷ್ಪದರ್ಶನದಿಂ ಕೆಯ್ಮಾಸಿದನೆಂಬುದೀಕೆಗೆ ಪಾಱಯೆ ವಲಮೆಂದು ವಕ್ರೋಕ್ತಿಯಂ ನುಡಿಗಲ್ಲಿಂ ತಳರ್ದು ಮತ್ತೊಂದನಂಗಮಂಗಳಗೃಹಾನುಕಾರಿಲಂಜಿಕಾನಿಕೇತನಾಜಿರದೇಶದೊಳ್:—

ಉ|| ಪೂವಿನ ಬಿಲ್ಗೆ ಪುರ್ವು ಕುಸುಮೇಷುಗೆ ಕಣ್ ಝಷಕೇತನಕ್ಕೆ ಚೆ |
ಲ್ವಾವಗ ಮಾದ ಸೋರ್ಮುಡಿ ರತಿಪ್ರಿಯಗಾಗೆ ಹಯಾನನಂಗೆ ಸ ||
ದ್ಭಾಮವನಾಳ್ದ ಗುಜ್ಜು ಪಮೆಗಪ್ಪಿನಮೊರ್ವಳನಂಗರಾಜ್ಯಲ |
ಕ್ಷ್ಮೀವಿಭವಂ ಗೃಹಾಂಗಣದ ಮುಂದೆಸೆದಿರ್ಪವೊಲೊಪ್ಪಿ ತೋಱದಳ್ || ೮೩ ||

**ವ||** ಅಂತು ಪ್ರಧಾನಪ್ರಕೃತಿಯಪ್ಪ ಕಾಮದೇವ ನಿಲ್ಲದೆ ತದೀಯಪರಿಪೂರ್ಣಪರಿಚ್ಛದಮಂ ಪೊತ್ತುನಿಂದಳಂ ನೋಡಿ ನಾಗರಕಂ ಈಮದನಲಕ್ಷ್ಮಿ ವಿಬುಧವನವನಜಕಳಹಂಸನಪ್ಪವಜ್ರಾಯುಧಂ ನಿನ್ನಿಂದೆ ಸನಾಥಮಕ್ಕುಮೆಂಬುದು ಮವನವನತಾನನನಪಾಂಗಾವಳೋಕನದೊಳಾಕೆಯಂ ತಪ್ಪ ನೋಡುತ್ತುಂ ಪೋಗಿಪೆಱತೊಂದುತಾಣದೊಳುಚಿತಮತ್ತವಾರಣಸಮೀಪಚಂಚತ್ಕಾಂಚನಮಂಚೋಪಶೋಭಿತದೇವಾಂಗವಸನಪ್ರಚ್ಛದಾಚ್ಛಾದಿತಶಯ್ಯಾತಳದೊಳ್ ಸ್ವೇದಾಪನೋದಿತಪಟಚ್ಚರಪರಿವೀಜ್ಯಮಾನೆ ಮನೆಯ ಮುಂದೆ ಮೆಯ್ಯನಾಗಳಾಱಸಲೆಂದು ಪಟ್ಟಿರ್ದ ಗರ್ಭೇಶ್ವರಿಯಲ್ಲಿಗೆ ದೂತನನಟ್ಟಿ ಪಸರಂಬಡೆಯದೆ ವೈನತೇಯನ ಚಿತ್ತವೃತಿಯಂತೆ ಭುಜಗದ್ವೇಷಿಯಾಗಿರ್ದು (ದ) ನಱದುರಗವನಿತೆಯಂತೆ ಕೋಳ್ದಪ್ಪಿ ಮುಳಿದಿರ್ದಳಂ ಪಱಗೆ ಮುಳಿದಳೆಂದು ವಿಟವೃಷಭನಾಕೆಯಂ ತಿಳಿಪಲಡಿಗೆಱಗಿ:—

ಉ|| ಎನ್ನ ಮನಕ್ಕೊಡಂಬಡನೊಡಂಬಡುವೈ ಪಱಗೆಯ್ದ ದೇವಮಂ |
ನೀನ್ನೆಗಟ್ಟೈದಲೆಂದು ಮುಳಿಕೆಯ್ದಗಿದೊಪ್ಪದು ಸಮ್ಮತಾವಸಾ ||
ನನ್ನಳಿನಾನನೇ ಮುಳಿದದಂ ಬಿಸುಡೈ ಪೊಡವಟ್ಟೊಡಂ ಕುಚಾ |
ಸನ್ನತೆ ನಿನ್ನಮೆಲ್ಲದೆಗೆ ಕರ್ಕಶವೃತ್ತಿಯನಿತ್ತುದಾಗದೇ || ೮೪ ||

ವ|| ಎಂದೊದನೆ ಪಿಡಿಯಚ್ಚುವಿಡಿದುಂಟುಮಾಡಿ ದಂಡಂಗೊಂಡು ತಿಳಿದೊಳಂ ಕಂಡು ಯುವ ರಾಜಪ್ರಭೃತಿಗ "ಳಿತ್ತಮೆಟ್ಟಿತ್ತ ಚಪ್ಪಟಿ" ಯೆಂದು ನಗುತಂ ಪೋಗಿ ಪೆಱತೊಂದೆಡೆಯೊಳ್:—

ಚಂ|| ಪರಿವಿಡಿಗೆಯ್ಯೆ ಸೊಂದಿಗಿಳಿ ತಂದೆಯ ತಾಯ ಸಮೀಪದೊಳ್ ತನೂ |
ದರಿಯ ರತೋಪಯುಕ್ತರುತಮಂ ವಿನತಾನನೆ ನಾಣ್ಚಿ ತಾಳತ ||
ತ್ವರ ಶಿಶುನರ್ತನ ಪ್ರಹತಕಂಕಣ ಝಂಕೃತ ಹಸ್ತತೂರ್ಯ ಸಂ |
ದರರವದಿಂದದಂ ಮಱಸಿದಳ್ ಗಡ ಮುಗ್ಧೆ ಕರಂ ವಿದಗ್ಧೆವೋಲ್ || ೮೫ ||

ವ|| ಎಂದಾಕೆಯ ಪ್ರತ್ಯುತ್ಪನ್ನಮತಿಯುಂ ಮನಂಗೊಂಡು ಪೊಗೞುತ್ತುಂ ಮತ್ತೊಂದು ತಾಣ ದೊಳ್ ಮನೆಯ ಮುಂದಣ ಮತ್ತವಾರಣದೊಳ್ ನಿಂದಿರ್ದು:—

ಉ|| ಕಯ್ದುವಮಿಲ್ಲ ದೊಲ್ದೊಲಿಸಿದೋಪನುಮೋಪಳುಮೆಯ್ದೆ ತಟ್ಟಿ ತ |
ಳ್ಪೊಯ್ದಿರೆ ಪೋಪ ಬರ್ಪ ಜನಮಂ ಮುರಿದೀಕ್ಷಿಸೆ ಕಾಂತೆ ಬೀದಿಯಂ ||
ತೆಯ್ದುವಿನಂ ಪೊದೞ್ದೆಸೆದನಂಗರಸಾಬ್ಧಿಯೊಳುಯ್ದು ತೊಯ್ದು ಕ |
ರ್ನೆಯ್ದಿಲ ಬಾಸಿಗಂ ನಿಮಿರ್ವವೋಲ್ ನಿಮಿರ್ದತ್ತು ಕಟಾಕ್ಷವೀಕ್ಷಣಂ || ೮೬ ||

ವ|| ಅಂತು ದಂಪತಿಯಲಂಪಿನ ಪೆಂಪುಮಂ ಸೌಂದರ್ಯದ ಪೊಂಪುೞಯುಮಂ ಬಂದೊಂದು ವಿಚಿತ್ರಚಿತ್ರಭಿತ್ತಿತಂತನ್ಯಮಾನವಾತಾಯನಪರೀತಮತ್ತವಾರಣಕ್ರೋಡೀಕೃತ ಚಂದ್ರಕಾಂತ ಕಾಂತ ಸುಧಾವೇದಿಕಾ ಮಧ್ಯಭೂಮ್ಯಂತರಾಳದೊಳ್ ಒರ್ವಳ್ ಮುಖಪರಿಮಳನಿಪತದ್ಭ್ರಮರವಾತಾಯಾಸಿತೆಯಾದಳಂ ಕೆಳದಿ:—

ಉ|| ಅಂಬುಜಸೌರಭಂ ತನಗೆ ಗಾವಣ ಜೀವಣ ಮತ್ಯಪೂರ್ವ ಮಾ |
ಸ್ಯಾಂಬುಜ ಗಂಧಮೆಂದೆಱಗಿ ಬಗ್ಗಿಸೆ ಬಗ್ಗಿಸೆ ಸೋಯೆ ಸೋಯೆ ನಿ ||
ನ್ನಂ ಬಲವರ್ಪುವಿನ್ನದಱ ಮೇಲೆ ಭಯಾಕುಳಲೋಲನೇತ್ರನೀ |
ಲಾಂಬುಜ ಲಕ್ಷ್ಮಿಯಂ ಕೆದಱ ಮಾಣವು ಕಾಣಗೆ ಮಾಯ್ದ ತುಂಬಿಗಳ್ || ೮೭ ||

ವ|| ಎಂದಾಕೆಯ ಮುಖಾಂಬುಜಾಮೋದಮುಮಂ ಸ್ವಭಾವಭೀರುತೆಯುಮಂ ಭ್ರಮರವ್ಯಾಜ ದೊಳೆ ಮೆಱೆವ ಕೆಳದಿಯ ಮಾತುಮಂ ಮನದೆಗೊಂಡು ಪೋಗಿ ಮತ್ತಮೊಂದು ಪ್ರದೇಶದೊಳ್ ಮೇಗಣ ನೆಲೆಯ ಮತ್ತವಾರಣದ ಪೆಱಗಣ ಕೆಲನಂ ನೆಮ್ಮಿ ಕುಂದಲತಾಲೀಲೆಯಿಂ:—

ಚಂ|| ಪೊಸಬಿಸುಸುಯ್ಯ ಪಾಡೞದ ಮೆಯ್ಯ ಕದಂಪಿನ ಕೆಯ್ಯ ಭಂಗಿ ಕ |
ಣ್ಗೆಸೆಯೆ ಪೊದಟ್ಟ ಕಣ್ಬನಿಯ ಬಾನಲ ತಣ್ಣಸದೊಳ್ ಪಗಿಲ್ತು ಪಾ ||
ವಸೆಗೊಳೆ ಕಾರ ತಂದಲೊಳಗುಂದಲೆಯಾಗಿರೆ ನಟ್ಟು ಸೋರ್ವ ಪಾ |
ಳ್ಬಸದಿಯ ಪೆಣ್ಣ ಜೋಹದವೊಲೊಪ್ಪಿದಳೊರ್ವಳನಂಗರಾಗದಿಂ || ೮೮ ||

ವ|| ಆಕೆಯಂ ನೋಡಿ ಹೇಮಂತದೊಳ್ ಮದಮಂ ತಗುಳ್ದು ಶಿಶಿರದೊಳುೞದು ಮತ್ತಂ ಬಸಂತದೊಳ್ ಬಂಬಲ್ದಗುಳ್ದ ಮದನಮದಾನೇಕಪಕ್ಕೆ ಪಕ್ಕಾದಳೀಕೆಯೆಂದು ಋತುಪ್ರತಾನಾವಯವಂಗಳನೆ ವಿದೂಷಕಂ ಮದೋಪಕ್ರಮದನುಕ್ರಮಂ ಮಾಡಿ:—

ಮ|| ಸ್ರ|| ಮದನೇಭಕ್ಕಾಮ್ರಮೊಂದಂಬುಜ ಮೆರಡು ಕೊಳಂ ಮೂಱು ತೆಂಗಾಳಿ ನಾಲ್ಕ |
ಭ್ಯುದಿತಂ ಹಿಂದೋಳನುಯ್ದುದ್ಧತಪಿಕಕುಳಮಾಱುಂನ್ನತಾಶೋಕಮೇೞು ||
ನ್ಮದ ಕೀರವ್ರಾತಮೆಂಟುಚ್ಚಳಿತವಕುಳ ಮೊಂಭತ್ತಲರ್ ಪತ್ತು ತತ್ಕಾ |
ಮುದಿ ಪನ್ನೊಂದುತ್ಪಳಂ ಪನ್ನೆರಡಳಿ ಪದಿಮೂಱಲ್ತೆ ಮತ್ತೋಪಚಾರಂ || ೮೯ ||

ವ|| ಅದಱಿಂದಂ ವಿರಹಿಯೆಂಬ ಱಿೋಡಗಂಗಮುಗುರ್ವಿನಮುಗುರ್ವಪ್ಪನಂಗಮಾತಂಗದ ದೆವಸಮಿದೆಂದಪೂರ್ವೋಕ್ತಿಯಂ ನುಡಿವುತ್ತುಂ ಪೋಗಿ ಮತ್ತೊಂದು ಸುಧಾಭವನದೊಳನವರತ ದಹ್ಯಮಾನಕಾಳಾಗುರು ಧೂಪಧೂಮದ ಪರಿಮಳಮುಯಮಪ್ಪ ನೆಲೆಮನೆಯ ಮೇಗೇಕಾಗ್ರಮನಃಪರಿ ಗ್ರಹೆಯಾಗಿ:—

ಚಂ|| ಬಕುಳದ ಪೂವಿನಕ್ಷವಳಯಕ್ಕೆ ದುಕೂಲದ ಚೆಲ್ವನಪ್ಪ ಸಾ |
ಳಿಗೆಗೆ ಪಯೋಜಸೂತ್ರನವಮುಂಜಿಗೆ ನೇತ್ರದ ಕೋವಣಕ್ಕೆ ಮಿ ||
ಕ್ಕಗುರುವ ಬೂದಿಗೊಡ್ಡೆ ತನುವಂ ನಿಜನಾಥನ ಮೆಟ್ಟೆ ಮಿಾವ ಪಾ |
ವುಗೆ ಪರಮಾತ್ಮನಾಗೆ ವಿರಹೋತ್ತಮ ದೀಕ್ಷೆಗೆ ನಿಂದಳೊರ್ವಳಂ || ೯೦ ||

ವ|| ಕಂಡು ಮದನಾದ್ವೈತವಾದ ಸ್ಥಾನದ ಸಭಾಭವನಮಿರ್ಪಂತಿರ್ದ ತದ್ಗಣಿಕಾಭವನಮುಮಂ ತೋಱಿ ನಾಯಕಂ ನಾಗರಕಾದಿಗಳ್ಗೆ ತತ್ಸ್ವರೂಪಕಥನವಿತತನಾಗಿ ಪೋಗಿ ತದ್ವಾರಾವಸಾನದೊಳ್ ನಿಂದುಮಿಥ್ಯಾಚ[ತು]ಷ್ಟಯಾಲಂಕಾರಮಾಗಿರ್ದ ಚತುಃಪಥಸಭಾಮಂಟಪದೊಳಿರ್ದವಿಟಕೋಟಿಯಂ ಕಂಡೇನಾನು ಮಿಲ್ಲಿ ಚತುರಸುಭಾಷಿತಮುಂ ಕೇಳಲಕ್ಕುಮೆಂದುರಾಜಕುಮಾರಪ್ರಮುಖರ್ ಮೆಯ್ಗಱಿ ದಿರ್ಪುದುಂ ಕಾಮಶಾಸ್ತ್ರಾಭಿಪ್ರಾಯದಿಂ ನುಡಿವ ವಿದಗ್ಧರ ಮಾತಂ ಕೇಳುತ್ತುಂ ಮತ್ತೊರ್ವ ನಿಂತೆಂದಂ:—

ಚಂ|| ಮಸೆವುದು ಮಾಸಲಿರ್ದ ಪಟವೇಟಮನಿಚ್ಚೆಯ ಬಿಚ್ಚತಿಕ್ಕೆಯಂ |
ಪೊಸಯಿಪುದೊಳ್ಕಮಂ ನಡಪುತಿರ್ಪುದು ಧಾತುವ ನೊಳ್ಪಿತೆಯ್ದೆ ಸಾ ||
ಟಿಸುವುದು ಕೂಟದೊಳ್ ಕುಶಲನಪ್ಪುದು ಕೇಳಿ ಮಿದಿಂತುಟೆಂದು ಚ |
ರ್ಚಿಸಿ ನುಡಿವಂತು ಬೇಱಿ ಪೆಱತಾವುದು ಕೇಳಿಕೆಯುಂ ವಿಟತ್ವಮುಂ || ೯೧ ||

ವ|| ಎನೆ ಮತ್ತೊರ್ವಂ ಪೆಂಡಿರೊಲವಂ ನಿರಾಕರಿಸಿ ನುಡಿದೊಡೊಲಿಸಿಯು ಮೊಲ್ದು ಮಱುವ ಚದುರನಾತ್ಮಾನುಭೂತಮನಿಂತೆಂದಂ:—

ಚಂ|| ಪಗಲೆರ್ದೆಗೊಂಡ ತನ್ನ ಸಮುಕಟ್ಟ ನಿರುಳ್ ಮಱಿದಂತೆಗೆಯ್ದು ಮೆ |
ಲ್ಲಗೆ ಮಱಿದೊಂದಿದಂತುಸಿರದಾಗಿರೆ ಕೂಟದ ಚಿತ್ತವೃತ್ತಿಯಂ ||
ಬಗೆಯನೆನುತ್ತಬಿಲ್ದಳೆ ಕುಚಾಂತರದೊಳ್ ಕೊಳಗೊಂಡು ಮೋಹವ |
ಲ್ಲಿಗೆ ಬಿದಿ ತಿರ್ದಿ ಸುತ್ತಿಸಿದ ನೀರ್ಗಣೆಯಾದುದು ಬಾಷ್ಪಮೋಪಳಾ || ೯೨ ||

ವ|| ಎನೆ ಒರ್ವನುಮಾತ್ಮಪ್ರತ್ಯಕ್ಷಮ ನಿಂತೆಂದು ನುಡಿದಂ:—

ಉ|| ಚಂಪಕಗಂಧಿ ಮಂದಮನದೊಳ್ ಕಟುಪಲ್ ಬರೆ ಮಾಣ್ದು ಮಾರುತೋ |
ತ್ಕಂಪಿತ ಚೂತನಂದನದೊಳಿನ್ನಿರು ನೀನೆನೆ ಮಾವಿನಳ್ಳಿಗೊಂ ||
ಬಂ ಪಿಡಿದೊಂದು ಕೆಯ್ಯೊರಸು ಮೆಯ್ಗಱಿದಳ್ ನಿಲೆ ಮುಚ್ಚಿವೋಗಿ ಬೇ |
ಗಂ ಪಯಣಕ್ಕೆ ಮಾಡಿದಳದೊಂದಳವಲ್ಲದ ದುರ್ನಿಮಿತ್ತಮಂ || ೯೩ ||

ವ|| ಎಂದು ಪೆಂಡಿರೊಲವನೆ ಸಮರ್ಥಿಸಿ ನುಡಿದಂ, ಮತ್ತೊರ್ವನೆನ್ನಿಯಳೊರ್ವಳ್:—

ಚಂ|| ಮುನಿಯಿಸೆ ಮಾಣದಾಂ ಮುನಿದು ತೊಟ್ಟನೆ ಮಂಚದಿನೆಟ್ಟಿ ಪೋಗೆ ನಾ |
ಣೆನೆಗಳವಟ್ಟ ಬರ್ದೆನಗೆ ಪೆಂಪೆನಗಣ್ಮೆನಗಾಗಳಾಯದೊ ||
ಳ್ಪೆನಗೆ ಮಹಾಪ್ರಸಿದ್ಧಿಯೆನಗುರ್ಕೆನಗೊಡ್ಡಿನಗೆನ್ನ[ಬೆನ್ನ] ಬೆ |
ನ್ನನೆ ಪರಿತಂದ ದೈನ್ಯ ಮರಿದಾದುದು ಮಾಜಿಲತಕರ್ತೃರೂಪೆಯಾ || ೯೪ ||

ವ|| ಎಂಬುದುಂ ಮತ್ತಮಲ್ಲಿ ಬೇಟದ ತೆತ್ತಿಗನುಂ ಮೊತ್ತಮೊದಲಿಗನುಮಪ್ಪೊನೊರ್ವಂ ತನ್ನ ಜತ್ತಮಲ್ಲದೊಲ್ದೋಪಳ ವೃತ್ತಕಮನಿಂತೆಂದಂ:—

ಚಂ|| ಉಗುರ್ವಿಸಿಯಪ್ಪೂರ್ವಳ್ ಪುಗೆ ವಾರಿರುಹಾಕರವಾರಿ ಸುಯ್ಯ ಬೆಂ |
ಕೆಗಳೊಳೆ ಪೊಕ್ಕ ನಂದನವನಂ ಕೊಱಗಿರ್ಪುವು ಪೊಕ್ಕ ಜೊಂಪಮಾ ||
ವಗೆಯಪೊಲಿರ್ಪುವುಷ್ಣಜಲಮಕ್ಷಿಗಳೊಳ್ ಕಱಗಣ್ಮೆ ಕಣ್ಣಪಾ |
ಪೆಗಳವಗಾಹಮಿರ್ಪುವು ಮದೀಯವಿಯೋಗದೊಳೆನ್ನ ನಲ್ಲಳಾ || ೯೫ ||

ವ|| ಎಂಬುದು ಮದರ್ಕೆ ಪಾರಯ್ಸಿ ಸೌಭಾಗ್ಯಶಾಳಿ ವಿಟನಿಂತೆಂದಂ:—

ಚಂ|| ಅಕುಟಿಲಚಿತ್ತೆಯೆಂದಱದು ಮಿಲ್ಲದ ದೋಷಮನಿಟ್ಟು ಕೋಪರೂ |
ಪಕಮೆಡೆಯಾಗದಾನಿರೆ ಪೊದಱಿದ್ದರ್ಯುಚಿರದ ನಲ್ಮೆಯೊಂದು ಭಾ ||
ವಕಮಱಯಲ್ಕೆವಂದುದೆನಗಿಂದುಕರಶ್ಚುತಚಂದ್ರಕಾಂತಪು |
ತ್ರಿಕೆಯೊಸರ್ವಂತೆ ಝುಮ್ಮಗೆ ಬೆಮರ್ತರವಿಂ ತರಳಾಯತಾಕ್ಷಿಯಾ || ೯೬ ||

ವ|| ಎಂದು ಪೆಂಡಿರ ಬೇಟಮನೇಱದಿಟಂ ಮಾಡದೆ ನುಡಿಯೆ ನಿರಾಕರಿಸಿ ಮತ್ತೊರ್ವಂ ಕೇಣಿಕಾರವಿಟನಪ್ಪ ವಣಿಗ್ವಿಟನಿಂತೆಂದಂ:—

ಚಂ|| ಮದನರಸಪ್ಲವಂ ಕವಿಯೆ ತಣ್ಣಸನಾಗದೆ ತೃಷ್ಣೆಗಿಂಬುಕೆ |
ಯ್ಯದೆ ಪಗೆಗೊಂಡು ಪೋಪುದು ಸಮುದ್ರದ ಮಧ್ಯದ ಬಾಳೆ ಕೆಯ್ಗೆ ವ ||
ರ್ಪುದುಮನಗಾಧಮನ್ಮಥಸಮುದ್ರದ ಮಧ್ಯದ ಬಾಳೆ ಕೆಯ್ಗೆ ವ |
ರ್ಪುದುಮನಮೋಘಮಿಚ್ಚೆಯಿಪನಿಚ್ಚೆಯಿಪೊಂ ಹಯಶೃಂಗಚಾಪಮಂ || ೯೭ ||

ಇನಿತೆನಗಿಂಬುಕೆಯ್ದಿನಿತು ಬೆಳ್ಪಿನಿತೊಳ್ದಿಳಿದೆನ್ನ ನಿನ್ನುಮೊ |
ರ್ವನೊಳಿವಳಿಂದೊಡಂಬಡುವಳೆಲ್ಲಯ ಬಾಟಿನಗೆಂಬ ಪಂಬಲಿಂ ||
ಮನದೊಳಟಿಲ್ದು ಚಿಂತಿಸಿ ಕಟಿಲ್ದು ಬಟಿಲ್ದು ಕನಲ್ದೊನಲ್ದು ಬೆ |
ಳ್ಪೆನಿಸುವ ಬೆಳ್ಳಬೇರ ನಗುಲ್ದಾಗಸಗೆತ್ತದೆ ಸೂಳೆ ಮಾಣ್ಗುಮೇ || ೯೮ ||

ಮನಸಿಜಮಂತ್ರದೇವತೆಯರಂಗನೆಯರ್ ತದುದಾರಸಾರಸಾ |
ಧನೆಗನುಸಾರಿಯಪ್ಪ ಸಕಲೀಕರಣಂಗಳವಾವುವೆನ್ನ ನ ||
ಚ್ಚಿನ ಸೊಬಗೆಂತುಮಾಗೆ ತನಗೆನ್ನದ ನಿಶ್ಚಯಮಪ್ಪ ದಾನಮುಂ |
ಬಿನಿತನಿತಿಲ್ಲದೊಂದೆ ಗಣಿಕಾಜನಸಾಧನಸಿದ್ಧಿಯಕ್ಕುಮೇ || ೯೯ ||

ವ|| ಎಂದು ನುಡಿವ ಪೂರ್ವಪರಪಕ್ಷಂಗಳೊಳ್ ಪಕ್ಷನಿರ್ಣಯಮಪ್ಪಿನಂ ಪೊಗಟ್ಟು ಪಾಪೇಭಕಂಠೀರವನಪ್ಪ ವಜ್ರಾಯುಧಂ ನಾಗರಕಾದಿಗಳ್ಪೆರಸು ಪೆರತೊಂದು ವಿಳಾಸಿನೀವಾಟದೊಳಗನೆ ಬರ್ಪವರ ಮತ್ತೊಂದೆಡೆಯೊಳ್:—

ಉ|| ಕೂಡಿದ ಕೂಟದಿಂದೊಲಿಸಿದಿರ್ವರುಮಂ ಸಮಪಾತವಾರಿಯಿಂ |
ಕೋಡೆ ಸರಾಗದೊಳ್ ಮುಟುಗಿ ಮೂಡಿ ಮೃಗಾಂಕಕರಂ ಪಯೋರಸಂ ||
ತೀಡುವ ತೆಂಬೆಲರ್ ಮನದೊಳುರ್ಕೆಗಳಂ ಸುರತಾವಸಾನದೊಳ್ |
ಮಾಡೆ ರತಕ್ಕೆ ಮತ್ತೆ ಬಗೆದಂದುದು ದಂಪತಿ ಸೌಧಕೂಟದೊಳ್ || ೧೦೦ ||

ಚಂ|| ಶಕುನಿರವಕ್ಕೆ ಕಂಠರುತಿ ಕೂಟದೊಡಂಬಡಿನೊಳ್ ನಿಮಿರ್ಚೆ ಗಾ |
ಯಕತೆಯನಾಡೆ ತಾಳದ ಲಯಕ್ಕಲಕಾಳಿ ತಗುಳ್ದು ತಾಡನಾ ||
ನಕ ಮನುವಾದಿಯಾಗಿ ಮೊಱಗುತ್ತಿರೆ ಮನ್ಮಥಸೂತ್ರಧಾರ ನಾ |
ಟಕರವ ಮುಣ್ಮುವಂತೆ ಸುರತಾರವಮುಣ್ಮಿದುದೊಂದುಗೇಹದೊಳ್ || ೧೦೧ ||

ವ|| ಮತ್ತಮಾಸೂಳೆಗೇಱುಯೆರಡೋಳಿಯೊಳ್:—

ಮ|| ಲಸದಾಸ್ಯೋದಯ ಮಿಂದುಬಿಂಬದುದಯಂ ತಾನಾಗೆ ಖೇದಶ್ರಮ |
ಶ್ವಸಿತಂ ಮಾರುತಮಾಗೆ ತೋಳ್ ತೆರೆಗಳಾಗಕ್ಷಿಭ್ರಮಂ ಮೀನವೃಂ ||
ದಸಮುದ್ವರ್ತನಮಾಗೆ ನಿರ್ಭರರತೋದೀರ್ಣಾರ್ಣವಂ ಘೂರ್ಣಿಸಲ್ |
ಮಸಗಿತ್ತಂದು ವಿಚಿತ್ರಚಿತ್ರಿತಸುಧಾಶ್ರೀರಮ್ಯಹರ್ಮ್ಯಂಗಳೊಳ್ || ೧೦೨ ||

ವ|| ಅಂತು ಶೃಂಗಾರರಸಪೂರ ಪ್ರವಾಹಮಂ ದಾಂಟಿ ಬರೆವರ ಮುಂದೊಂದೆಡೆಯೊಳ್:—

ಚಂ|| ಬೆಸವರಿಗೆಯ್ವ ಬೇಸರಿಸುವಿತ್ತುದ ನೆತ್ತುವ ಮೇಗುದೋರ್ಪ ಕಂ |
ಟಿಸುವ ಕನಲ್ವ ಕಡ್ಡಯಿಸುವೇಱದನಂ ತಿಳಿಪಲ್ ಮನಂಗೊಳಲ್ ||
ಬಸಯಿಸಲಿಂಬುಕೆಯ್ಸಲೊಳಪೊಯ್ಸಲೊಡಂಬಡಿಸಲ್ ಪ್ರಮೋದಮಂ |
ಪೊಸಯಿಸಲಾಱಸಲ್ ನೆರೆದುಮೊಲ್ಲದೆ ಚಿತ್ತಮುದಾತ್ತ ಚಿತ್ರೆಯಾ || ೧೦೩ ||

ವ|| ಮತ್ತೊಂದೆಡೆಯೊಳ್:—

ಉ|| ಕೂರ್ಮೆಯ ಪೆರ್ಮೆ ಸಕ್ಕಸಮನಾಗೆ ಸುಖಾಮೃತಮೊರ್ವರೊರ್ವರೊಳ್ |
ನೂರ್ಮಡಿ ಕೂಡೆ ಕೂಡಿ ಪೊಱಮಟ್ಟೆಲರ್ಗೊಡ್ಡಿ ನಿಜಾಂಗಮಂ ಸ್ರವ ||
ದ್ಘರ್ಮಜಲಾರ್ದ್ರೆ ಕೆಯ್ಗುಱಯೆ ಕಣ್ಗೆ ಸದೊಪ್ಪಿದಳೊರ್ವಳೋಪನಂ |
ನೆರ್ಮಿದ ಬಾಳೆ ಕತ್ತುರಿಯ ನೀರ್ದಳಿದುತ್ಪಳವಾಳೆಯುಂದಮಂ || ೧೦೪ ||

ವ|| ಪೆಱತೊಂದು ತಾಣದೊಳವಚಱವಾದ ಪಟವೇಟದಿ ನಿಲ್ಲದ ದೋಷಮನಿ (ಲ್ಲ) ಟ್ಟಲ್ಲಣಿಗೆ ಮುಳಿಸಂ ಮುಳಿದೊಲ್ಲದೆ ಪೋಪನನೆರಡಿಲ್ಲದೆ ನಲ್ಲಳ್ ಪಿಡಿದು ನಿಂದು:—

ಚಂ|| ಅನುವಿಪ ತಾಯ ಬಾರಿಸುವ ತಂದೆಯ ಕಾಯ್ಪಿನೊಳೆಕ್ಕೆಗುಟ್ಟುವ |
ಕ್ಕನ ಪಡಪೆತ್ತಿ ಬಯ್ವ ಕಿಱುದಂಗೆಯ ಕಣ್ಣೊಳೆ ಕೀಱ ಕಲ್ಪಿಪ ||
ಣ್ಣನ ಬಿಯಕಿಲ್ಲದವ್ವಳಿಪ ತಮ್ಮನ ತೀನಿಗೆ ಮೆಯ್ಯನೊಡ್ಡಿ ನಿ |
ನ್ನನೆ ಪಿಡಿದೆನ್ನ ನಲ್ಮೆಗಿದೆ ತಕ್ಕುದೆ ನಲ್ಮೆಗೆ ದೋಷಮಾಗದೇ || ೧೦೫ ||

ವ|| ಎಂದು ತನ್ನ ಸದ್ಭಾವಮನೆ ನುಡಿದು ಕಣ್ಣ ನೀರ ಕಾಟ್ಪುರದಿನೊಳಗುಮಾಡಿ ನಿಱಸಿದಳ್, ಬೇಱೊಂದೆಡೆಯೊಳ್ ಅನೇಕವಿಧ ನಿಧುವನಾವಸಾನದೊಳ್ ಬೆಮರನಾಱಸಲ್ ಪೊಱಮಟ್ಟು:—

ಉ|| ಭಂಗುರಕೇಶಪಾಶೆ ತನುಮಧ್ಯೆ ಮೃಗಾಕ್ಷಿ ವಿಟಂ ನಿಜಾಂಘ್ರಿಪ |
ದ್ಮಂಗಳ ಮೇಲೆ ಪೊಯ್ಯೆ ಕರಕಾಂಬುವನಂಗಣದೊಳ್ ವಿಲಾಸಮ ||
ದ್ಭಂಗಿಯ ನಾಳ [ವಾಳ] ಪರಿವಾರಿತ ಮೂಳತಳೋಪಮಾನದಿಂ |
ದಾಂಗುಡಿವಿಟ್ಟ ಜಂಗಮ ಮನೋಜಲತಾಕೃತಿ ಯೊಪ್ಪೆ ತೋಱಿದಳ್ || ೧೦೬ ||

ವ|| ಅದನುತ್ಪ್ರೇಕ್ಷಿಸಿ ನೋಡುತ್ತುಂ ಪೋಗಿ .ಮತ್ತೊಂದೆಡೆಯೊಳ್ ತನಗೆರಡಿಲ್ಲದೋಪನ ವಿಯೋಗದೊಳ್ ಚಿಂತಾಕ್ರಾಂತೆಯಾಗಿರ್ದ ಕೆಳದಿಗಿಂತೆಂದಳ್:—

ಚಂ|| ಇನಿಯನಗಲ್ದು ತಾನೆನಿತು ದೂರದೊಳಿರ್ದೊಡಮೆನ್ನ ಚಿತ್ತಮಾ |
ತನೊಳಿಸೆದಿರ್ದುದಾತನ ಮನಂ ದಲದೆನ್ನೊಡನಿರ್ದುದಿರ್ವರುಂ ||
ನೆನೆವುದದೇಕೆ ಚಿಂತಿಸುವುದೇಕೆ ಪಲುಂಬುವುದೇಕೆ ನೋವುದೇ |
ಕೆನಗಿದು ವಿಸ್ಮಯಂ ಕೆಳದಿ ನೀಂ ತಿಳಿವಂತಿರೆ ಪೇೞಲಾಗದೇ || ೧೦೭ ||

ವ|| ಎಂದು ತನ್ನ ಕೆಳದಿಗೆ ಪೇೞ್ದು ಮನಮಂ ಬಲಿದು ತನ್ನಂ ತಾನೆ ಸಂತಯಿಸಿದಳ್. ಮತ್ತೊಂದೆಡೆಯೊಳಗಲ್ದು ಪರದೇಶಕ್ಕೆ ಪೋದ ನಲ್ಲಂ ಬಂದು ತನ್ನ ವಿಯೋಗದೊಳ್ ಬಡವಾದ ನಲ್ಲಳ ಬಡವಾದಂದಮಂ ಬೆಸಗೊಳಲಾಕೆಯಿಂತೆಂದಳ್:—

ಚಂ|| ಮನಸಿಜ ನೋವದೆನ್ನ ಮನಮಂ ಮೊನೆಯಂಬುಗಳಿಂದ ಮೆಚ್ಚೊಡಾಂ |
ಮನದೊಳಗಿರ್ದ ನಿನ್ನನವು ಕೊಳ್ಗು ಮೆಗೆತ್ತು ದಲಂಜಿ ನೋಡ ನ ||
ಲ್ಲನೆ ಬಡವಾದೆ ನುಂತು ಬಡವಪ್ಪೆನೆ ಪೂವಿನ ಬಾಣಮುರ್ಚೆ ನೊ |
ವೆನೆ ಸಲೆ ಪೂವಿನಂಬು ಕೊಳೆ ನೋವವರಾರ್ ಜಗದೊಳ್ ಮನಃಪ್ರಿಯಾ || ೧೦೮ ||

ವ|| ಎಂದು ತನ್ನೆರಡಿಲ್ಲದ ನಲ್ಮೆಯಮಂ ಪೇೞೆ ನಾಗರಕಾದಿಗಳಾಕೆಯ ಮಾತಂ ಕೇಳ್ದು ಮೆಚ್ಚುತ್ತುಂ ಪೋಗಿ:—

ಚಂ|| ಬಳೆದು ಪೊದಟ್ಟಿ ಮನ್ಮಥರಸಾಸವದಿಂ ಸಮಸಂದ ಸೊರ್ಕುಗಳ್ |
ತಿಳಿವಿನ ಮಗ್ಗಳಂ ಪ್ರಣಯಮಗ್ಗಳ ಮಿರ್ವರ ಮೆಚ್ಚಿದಂದಮ ||
ಗ್ಗಳ ಮಳವಗ್ಗಳಂ ಮುಸಕಮಗ್ಗಳ ಮಟ್ಕಱಳುರ್ಕೆ ಪೆರ್ಚು ಕ |
ಣ್ಗೊಳಿ ಬೆಳಗಾಯ್ತು ದಂಪತಿಗೆ ಪೆಂಪಿನಲಂಪಿನ ಸಾಂಪ್ರಯೋಗದೊಳ್ || ೧೦೯ ||

ವ|| ಅಂತು ಬೆಳಗಪ್ಪುದಂ ದೀನಜನತಾಕಲ್ಪಾಂಘ್ರಿಕನಪ್ಪ ವಜ್ರಾಯುಧಯುವರಾಜಂ ತನ್ನೊಡನೆಯ ನಾಗರಕಾದಿಗಳ್ವೆರಸು ರಾಜಮಂದಿರಮಂ ಪೊಕ್ಕು ತಾಂಬೂಲಮಾಲ್ಯಾನುಲೇಪನಫಲಾವಳಿ ಪುರಸ್ಸರಂ ವಯಸ್ಯರಂ ವಿಸರ್ಜಿಸಿ ಯಾಮಿನೀಚರಮಯಾಮಮುರ್ಧಾನಶೇಷಮುಂಟೆನೆ ಮುಂಸೂಟಿಗ್ಗ ವಂದಿರ್ದ ಪ್ರಾಣೇಶ್ವರಿಯುಂ ತಾನುಂ ಮಂಜುಳಶ್ರೀ ಮಂಚದೊೞಿರೆ:—

ಚಂ|| ರಜನಿವಿನೋದನಕ್ಕೆ ಮುಳಿದಿರ್ದ ಲತಾಂಗಿಯನಪ್ಪುಕೆಯ್ದು ಸಾ |
ಮಜಪತಿ ಪೊಕ್ಕು ಪಕ್ಕುವಿಡಿಯಂ ನಡೆ ಸೋಂಕುವವೋಲುರೋಜ ಪಂ ||
ಕಜಮುಕುಳಕ್ಕೆ ವಕ್ಷಮುಮದೊರ್ಪ್ಪಿರೆ ತಟ್ಟಿಮದಪ್ಪೆ ಕೋಪಮುಂ |
ಗಜರಸಪೂರದೊಳ್ ತೊಡೆದವೋಲ್ ತಳರ್ದತ್ತು ನೃಪೇಂದ್ರಕಾಂತೆಯಾ || ೧೧೦ ||

**ವ||** ಅಂತೋಪಳ ಕೋಪಮಂ ಕಳೆದು ಕಳಮಧುರತರಮನೋಹರಸಂಭೋಗಾವಸಾನದೊಳೆರಡು ಗಱಿಗೆಯುಂಟೆನೆ ಪೆಱರ ಸೂಟಿಗೊಳಮಿರಿರಲೀಯದನುಭವಿಸಲ್ ಬಂದ ನಿದ್ರಾಂಗನೆಗಭಿಮುಖನಾಗಿ ನೆಗಟ್ದುರ್ವರಾಸ್ಯತಿಲಕನಪ್ಪ ವಜ್ರಾಯುಧಂ ಪವಡಿಸೆ:—

**ಚಂ||** ಉಗುಳ್ವ ಕಷಾಯ ಸೌರಭಮ ನಾರ್ದಳಿ ಪೀರ್ದುವು ಪಂಕಜಂಗಳೊ |
ಳ್ಮುಗುಳ್ಗಳೊಳಂ ವಿಯೋಗದುಪವಾಸದ ಪಾರಣೆಗೆಂದು ಚಕ್ರವಾ ||
ಕಿಗೆ ರಮಣಂ ಮೃಣಾಳಕಬಳಂಗಳ ನಾಗಳೆ ಬಂದು ನೀಡಿ ಸಾ |
ವಗಿಸಿದ ನಂಜಿ ಸಂಜೆಯೊಳಗುಳ್ಳ ಖಳರ್ ಪರೆದರ್ ಪ್ರಭಾತದೊಳ್ || ೧೧೧ ||

**ವ||** ಅಲ್ಲಿಂ ಬಱಿಯಂ:—

**ಕಂ||** ಪನಿಪುಲ್ ಪಚ್ಚೆಯ ನೆಲಗ |
ಟ್ಟಿನ ಮುತ್ತಿನ ರಂಗವಲಿಯ ತೆಱನಂ ಮನದೊಳ್ ||
ಜನಯಿಸೆ ಶಶಿ ಮಸುಳೆ ವಿನೂ |
ತನ ರವಿರಥಪಾಂಸುಪರಿಗತಂಬೋಲ್ ನಭದೊಳ್ || ೧೧೨ ||

**ವ||** ಮುತ್ತಿನಿಸಾನುಂ ಬೇಗದಿಂ:—

**ಕಂ||** ದೆಸೆಗಳ್ ಮೃಗಮದ ಕರ್ದಮ |
ದೆಸಕದಿ ನಣ್ಪಿಕ್ಕಿ ಪಾಲೊಳೋಲಾಡಿದ ವೋ ||
ಲೆಸೆದಿರ್ದುವೊಯ್ಯನೊಯ್ಯನೆ |
ಮುಸುಳ್ದುವು ತಾರಗೆಗಳೊಣಗಿದಗೆಗಳ ತೆಱದಿಂ || ೧೧೩ ||

**ವ||** ತನದಂತರ ಮುದಯದೊಳ್:—

**ಕಂ||** ಕರಮೊಪ್ಪಿದುದಂದು ಪುರಂ |
ದರ ನೀಯೆ ಪುಳೋಮಸುತೆಯ ಕಟ್ಟಿದ ಕಂಠಾ ||
ಭರಣಕ್ಕೆ ತಗುಳ್ಚಿದ ಪ |
ದ್ಮರಾಗ ನಾಯಕಮಿದೆಂಬಿನಂ ರವಿಬಿಂಬಂ || ೧೧೪ ||

**ವ||** ಅಂತು ನೇಸಱ್ ಮೂಡುವುದುಂ ಪಟುಪುಣ್ಯಪಾಠಕಸಮುಚ್ಚಾರ್ಯಮಾಣ ಮಂಗಳವಚನ ರಚನಾಸಮುತ್ಕೃಷ್ಟಶ್ಲಥಬಾಹು ನಿದ್ರಾಲಿಂಗನವಿಮುಖನಾಗಿ ಸೆಜ್ಜೆಯಿಂದೆಟ್ದು ಪತ್ಯೂಷಕೃತ್ಯಮಂ ನಿರ್ವರ್ತಿಸಿ ಜಿನೇಂದ್ರಪಾದಾರವಿಂದಕೋಮಳದಳಾಯಮಾನಾಂಗುಳಿನಖದರ್ಪಣಾರ್ಪಿತಾನನೇಂದು ಪ್ರತಿಬಿಂಬಂ ತ್ರಿಲೋಕಶಿಖರಶೇಖರಂಗಷ್ಟಾಂಗಮೆಱಗಿ ಪೊಡಮಟ್ಟಷ್ಟವಿಧಾರ್ಚನೆಗಳಿನರ್ಚಿಸಿ ಲೋಕಗುರುವುಂ ನಿಜಗುರುವುಮಪ್ಪ ಕ್ಷೇಮಂಕರಾವನೀಶ್ವರಂಗವನತೋತ್ತಮಾಂಗನಾಗಿ ಕಂಡು ನಿತ್ಯನಿಯಮದಿನೋಲಗಿಸುತ್ತುಮಿರ್ದೀಸ್ಥಿತಿಯೊಳ್ ಕಾಲಂ ಸಲೆ ಮತ್ತೊಂದುಶುಭದಿನದೊಳ್:—

**ಉ||** ಆಯುಧಮಂ ಜಯಾಂಗನೆಯೊಳಾವಗಮೋತೊಡಗೂಡುವಂತೆ ವ |
ಜ್ರಾಯುಧನರ್ಘದಿಂ ತಣಿಪಿ ವಂದಿಗಳಂ ನಿಜಪುತ್ರನಂ ಸಹ ||
ಸ್ರಾಯುಧನಂ ಮನೋಹರಿಯೊಳೋತೊಡಗೂಡಿ ನಿಜಾನ್ವವಾಯ ಪಾ |
ರಾಯಣ ನಿಂತು ಸಂತತಿಗಡರ್ಪನೊಡರ್ಚಿದ ನುತ್ತರೋತ್ತರಂ|| ೧೧೫ ||

ವ|| ಅಂತುರ್ವರಾಸ್ಯತಿಲಕನಪ್ಪ ವಜ್ರಾಯುಧಂ ಸಹಸ್ರಾಯುಧಂಗಂ ಮನೋಹರಿಗಂ ಮನೋಹರಮಾಗಿ ಮದುವೆಮಾಡೆ ತತ್ಪುಣ್ಯದಂಪತಿಗೆ:—

ಚಂ|| ಮಗನಗರಾಜಧೈರ್ಯ ನಿಭರಾಜಮನಂ ಮೃಗರಾಜಸತ್ವ ನ |
ರ್ಥಿಗೆ ಭಯಮಿಲ್ಲ ಬಾೞ್ತೆಗೆ ವೃಥೋಕ್ತಿಗಳಿಲ್ಲ ನೆಗೞ್ತೆಗಂ ಪೊಗ ||
ೞ್ತೆಗ ಮೆಣೆಯಿಲ್ಲಿಭೇಂದ್ರರಿಪುವುಂ ಮೃಗಮೆಂಬವೊಲಾಕುಮಾರನೊಳ್ |
ಮೃಗನೊನೆಯೆಂಬಿನಂ ಕನಕಶಾಂತಿ ಕುಲೋನ್ನತಿ ಪುಟ್ಟೆ ಪುಟ್ಟಿದಂ || ೧೧೬ ||

ವ|| ಅಂತು ಕನಕಶಾಂತಿ ಪರಮೋಪಶಾಂತಿಯೆ ರೂಪುಗೊಂಡಂತೆಯುಮಱಿವಡಱಿಗೊಂಡಂತೆಯುಂ...................ಪುಟ್ಟಿ ಬಳಿಯೆ ಮತ್ತೊಂದು ದೆವಸಂ ಪವಿತ್ರರಾತ್ರಿ ಸಮಯಾವಸಾನದೊಳ್:-

ಮ|| ಪರಮಶ್ರೀಪತಿ ದೇವವಂದ್ಯ ನಮಿತಕ್ಷೇಮಂಕರಂ ಘೋರಸಂ |
ಸರಣಾಂಭೋಧಿಯ ನೀಸುವೞ್ತ ಮನದೊಳ್ ಕೆಯ್ಗಣ್ಮಿ ಭಾವಕ್ಕೆ ಬಂ ||
ದಿರೆ ಬಯ್ತಿಟ್ಟ ವಿಶೋಧಿದುರ್ದಮತೆಯಿಂ ಮೋಹಾಧಿರಾಜಂಗನಾ |
ದರನಾದಂ ದೊರೆಯಲ್ಲರೆಂದು ಮುಳಿದಕ್ಕೋಪಕ್ಕಘಧ್ವಂಸಿಯಾ || ೧೧೭ ||

ವ|| ಅಂತು ಕ್ಷೇಮಂಕರಂ ದುರಿತಾರಿಸೈನ್ಯಮಂ ಬೆಂಕೊಳಲ್ ಬಗೆವಂತೆ ಪರಮದೀಕ್ಷೆಯಂ ಕೆಯ್ಕೊಳಲ್ ಬಗೆದು ಪರಿನಿಷ್ಕ್ರಮಣೋದ್ಯುಕ್ತನಾದುದಂ ಬ್ರಹ್ಮಕಲ್ಪ ನಿಳಯರಾದಿತ್ಯಾದಿಗಳಪ್ಪ ಲೋಕಾಂತಿಕರವಧಿಜ್ಞಾನದಿಂದ ಮಱಿದು ಬಂದು ಪರಮೇಶ್ವರನ ಮನೋಗತಮಂ ವಚೋಗತಂ ಮಾಡಿ ನಿಜಾಧಿಕಾರ ವಶದಿಂ:—

ಕಂ|| ಪಾರಾವಾರಕ್ಕೆ ಜಡರ್ |
ನೀರಡುಕುವ ತೆಱದೆ ಬಿನ್ನಪಂ ಗೆಯ್ದೆಂ ಸಂ ||
ಸಾರದ ಮೋಕ್ಷದ ಪಕ್ಷದ |
ಸಾರೇತರಸುಖಮನೀಶ ನಿನಗಾರ್ ಪೇೞ್ವರ್ || ೧೧೮ ||

ಈ ಬಗೆ ಸಂಸಾರ ಮತಿ |
ಕ್ಲೀಬಂಗೇತಕ್ಕು ಮಪ್ಪೊಡಕ್ಕುಂ ನಿನಗ ||
ಕ್ಲೀಬಂಗೆ ಚರಾಚರಗುರು |
ಗೀ ಬಗೆ ಬಗೆದಂತೆ ಬಗೆಗೆ ವರ್ಪುದು ಪಿಱಿದೇ || ೧೧೯ ||

ವ|| ಎಂದು ಪರಮನಂತಃಕರಣಜಾತಮ ನನುವಡಿಸಿ ಪೋಣ್ದರನ್ನೆಗಂ ಸೌಧರ್ಮೇಂದ್ರ ಸಮೇತಂ ಚತುರ್ವಿಧವಿಬುಧನಿಕಾಯಂ ತೃತೀಯಕಲ್ಯಾಣಕರಣೋತ್ಸುಕತ್ವದಿಂ ಬಂದು ಭಗವತ್ಪಾದ ಪಯೋರುಹಕ್ಕೆಱಗೆ ತದನಂತರಂ ಕ್ಷೇಮಂಕರಾಧೀಶ್ವರಂ ವಜ್ರಾಯುಧನುಮಂಸಹಸ್ರಾಯುಧನುಮಂ ಬರವೇೞ್ದು :—

ಕಂ|| ಈ ರತ್ನಸಂಚಯಂ ನಿನ |
ಗೀರಾಜಿತ ರತ್ನಸಂಚಯಂ ತನಗೆಂದು ||
ರ್ವೀರಕ್ಷಕನಾಗಳ್ ಬಗೆ |
ದಾರಯ್ದಾ ಪುರುಷ ರತ್ನಯುಗಳಕ್ಕಿತ್ತಂ || ೧೨೦ ||

**ವ||** ಅಂತು ನಿಜಾನ್ವಯರಾಜಧಾನಿಯಪ್ಪ ರತ್ನಸಂಚಯಮುಮಂ ಕುಲಧನಸಾರಮಪ್ಪ ರತ್ನಸಂಚಯಮುಮಂಮಗಂಗಂ ಮುಮ್ಮಗಂಗಮಧಿರಾಜಯುವರಾಜಪದವಿವೆರಸುದಯಿಗೆಯ್ದು ಬಟಿಯಂ ಸುದರ್ಶನಮೆಂಬ ಸಿವಿಗೆಯಂ ಕ್ಷೇಮಂಕರಾಧೀಶನೇಱುವುದುಂ:—

ಸ್ರ|| ಜ್ಯೋತಿಷ್ಕರ್ ಮುನ್ನಮಲ್ಲಿಂಬಟಿಯಮಮರರತ್ತಿಂದ್ರ ನಭ್ರಂಕಷೋದ್ಯ ||
ತ್ಕೇತುವ್ರಾತಂಗಳಿಂದೊಪ್ಪುವ ಸಿವಿಗೆಯ ನಂದಱ್ಕಿಱಂ ಪೊತ್ತು ಭಕ್ತಿ ||
ಪ್ರೀತಂ ದೇವಾಸಕಂಗಳ್ ಮೊಟಗೆ ಪಲವುಮಾಕಾಲದೊಳ್ ದೇವಚಾಪಂ |
ಜ್ಯೋತಿರ್ಲೋಕಾಧಿಪಾಲಾಭರಣಕಿರಣದಿಂ ದುರ್ವಿಯಂ ಪರ್ವೆ ಬಂದರ್ || ೧೨೧ ||

ಕಂ|| ದೇವಾರಣ್ಯಂ ದೇವರ |
ದೇವನ ಮನಕಿಂಬನೀಯೆ ತನ್ನಂದನದೊಳ್ ||
ದೇವರ್ ಸಿವಿಗೆಯ ನಾಪ್ರ |
ಸ್ತಾವನೆಯಂ ಕಟಿಪದಿಟಿಪೆ ಪುಳಿನಸ್ಥಳದೊಳ್ || ೧೨೨ ||

**ವ||** ತತ್ಸಮೀಪಸ್ಥಿತರಕ್ತಾಶೋಕಮಹೀರುಹತಳವಿಶಾಳಶಿಳಾಪಟ್ಟಕದೊಳ್ ಉತ್ತರಾಭಿಮುಖನಾಗಿ ಕುಳ್ಳಿರ್ದು ಸಮುತ್ಸಾರಿತ ವಸ್ತ್ರಾಭರಣನಾಗಿ ಪರ್ಯಂಕಾಸನ ಪರಿಗ್ರಹದಿಂ:—

ಮ|| ಸಕಳೋರ್ವೀಶ್ವರ ನಾಕಿನಾಯಕಚಮೂಪರ್ಯಸ್ತಿಪಾತ್ರಂ ತ್ರಿಸಾ |
ಕ್ಷಿಕನಾಗಳ್ ಬಲಗೆಯ್ ನೊಸಲ್ಗೆಡದ ಕೆಯ್ ಪರ್ಯಂಕಮಪ್ಪಂತು ಸಾ ||
ರ್ಚಿ ಕಳಾಳಾಪದಿ ನಾಜಗತ್ಪತಿ "ನಮಸ್ಸಿದ್ಧೇಭ್ಯ" ಎಂದಾತ್ಮ ಕೇ |
ಶಕಳಾಪಂ ಬರೆ ಪಂಚಮುಷ್ಟಿಗೆ ಜಿನಶ್ರೀದೀಕ್ಷೆಯಂ ತಾಳ್ದಿದಂ || ೧೨೩ ||

**ವ||** ಅಂತಾಪರಮೇಶ್ವರನ ಪಱಿದು ಬಿಸುಟ ಮಧುಪಕಳಭಕುಳಮಸೃಣಕುಟಿಳಸಹಸ್ರಕುಂತಳಂಗಳನುತ್ತರ ದಕ್ಷಿಣೇಂದ್ರರ್ ಪಂಚರತ್ನದ ಪಡಲಿಗೆಗಳೊಳಾಂತು ಪಂಚಮಾಬ್ಧಿಯೊಳಿಕ್ಕಿದರಂತು ಪರಿನಿಷ್ಕ್ರಮಣ ಕಲ್ಯಾಣಾವಸಾನದೊಳ್ ನರೇಂದ್ರದೇವೇಂದ್ರರ್ ತಂತಮ್ಮಾವಾಸಂಗಳ್ಗೆ ಪರೆದು ಪೋದರಿತ್ತ ವಜ್ರಾಯುಧನರಸುಗೆಯ್ಯುತ್ತಿರ್ದು:—

ಕಂ|| ಉಪಶಮಮುಂ ತೀವ್ರತೆಯುಂ |
ವಿಪಕ್ಷಮಿತರೇತರೋಕ್ತಿಯಿಂದವನಾ ಭೂ ||
ಮಿಪನಾಂತು ಮಧ್ಯಮಂ ಲೋ |
ಕಪಾಲನಾದಂ ಗಡಂ ಮಹೀಮಂಡಳದೊಳ್ || ೧೨೪ ||

**ವ||** ಮತ್ತಮಾಮಹಾನುಭಾವಂ ತನ್ನ ರಾಜ್ಯಾಭಿವೃದ್ಧಿಯೊಳ್:—

ಕಂ|| ಕಸವರದೊಳ್ ಜಸಮಂ ಮಾ |
ನಸವಾಟಿಯೊಳ್ ಧರ್ಮಮಂ ಶರೀರದೊಳಱಿವಂ ||
ಸಸಿಯೊಳ್ ಬೆಳಸಂ ಕೊಳ್ವವೊ |
ಲಸಾರದೊಳ್ ಸಾರಮಂ ಮಹೀಪತಿ ಕೊಂಡಂ || ೧೨೫ ||

ವ|| ಅಂತರಸುಗೆಯ್ಯುತ್ತಿರೆ ಮತ್ತೊಂದು ದಿವಸಂ:—

ಕಂ|| ವಟುವೇಷಧಾರಿಯಾ[ದಂ] |
ಪಟುಮತಿ ಬಳ್ಳಿಸಿದ ಕಯ್ಯ ಕವಳಿಗೆಯುಂ ಕ ||
ರ್ಪಟಮುಂ ಬೆರಸಜ್ಞಾನೋ |
ತ್ಕಟಮುದ ನರಮನೆಯ ಬಾಗಿಲೊಳ್ ಬಂದಿರ್ದಂ || ೧೨೬ ||

ವ|| ಇರ್ದು ದೌವಾರಿಕನಿವೇದಿತನಿಜಾಗಮನನವನಿಪಾಲಮತದಿ ನೊಡ್ಡೋಲಗಂಬೊಕ್ಕು ಮದೋದ್ಧತವೃತ್ತಿಯಾಗಿಯುಮಳಿಕಳಭಮುತ್ಫುಲ್ಲಮಲ್ಲಿಕಾಮುಕುಳಕ್ಕೆಱಗುವಂತೆ ಪಾಪೇಭಕಂಠೀರವನಪ್ಪ ವಜ್ರಾಯುಧಂಗೆಱಗುವುದುಮರಸನಾತನ ಮನುಷ್ಯಾತೀತಮಪ್ಪ ಪ್ರಕೃತಿಯಂ ಕಂಡಾಸನೋಚಿತದಿಂ ದೇಱಲಿಕ್ಕಿದ ಭದ್ರಾಸನದೊಳ್ ಕುಳ್ಳಿರ್ದು ಸ್ವಾಗತವಚನಪುರಸ್ಸರಂ ಸಂಭಾಷಣಪ್ರಸ್ತಾವದೊಳ್ ವಸ್ತುವಿಚಾರಂ ಪುಟ್ಟಿ ಜೀವತತ್ವವಿಷಯದೊಳ್ ಕೃತಕದ್ವಿಜಂ ಚಾರ್ವಾಕಮತಾವಲಂಬಿಯಾಗಿ ಸೌಜನ್ಯಕಂದಾಂಕುರನಪ್ಪ ವಜ್ರಾಯುಧಮಹೀಪಾಲನೊಳ್ ಸಹಸ್ರಜಿಹ್ವನಪ್ಪ ನಾಗರಾಜನನೆ ಪೋಲ್ತು ನುಡಿಯೆ:—

ಕಂ|| ಕರಡಿಯ ತೋಲಂ ಕಜ್ಜಲ |
ಪರಾಗದಿಂ ಪೊರೆದು ಪಿಱಿದು ಜೀನೆಯ್ಯೊಳ್ ತಂ ||
ದಿರಿಸಿದಪೊಲರಸನಂ ವಚ |
ನ ರಚನೆ ಬಳಸಿದುದತೀವ ತಮಮೊದವುವಿನಂ || ೧೨೭ ||

ಎಂಬಿನಿತೇಟಿಗೆ ವಿವಾದಾ |
ಡಂಬರದೊಳಳುಂಬಮೊದವಿ ನಿಲೆ ಪಾಸುಂ ಪೊ ||
ಕ್ಕುಂ ಬರಿದು ನಿಚಿತವಚನಕ |
ದಂಬಕಮೆರ್ದೆಗೊಳಿಸೆ ಸಭೆಯ ವಿಬುಧಾವಳಿಯಂ || ೧೨೮ ||

ವ|| ಪೂರ್ವಪಕ್ಷಮನಿಂತೆಂದನೀಲೋಕದ ಪ್ರಾಣಿಗಳುಂ ಜೈತನ್ಯಪರಲೋಕನಿಮಿತ್ತಂ ತಪೋದಾನಶೀಲವ್ರತೋಪವಾಸಾದಿಗಳನೆಲ್ಲಂ ತೊಗಲುಮಾಗಿರ್ಪರದು ಜಡತ್ವಮೆಂತೆನೆ:—ಪರಲೋಕಿಯ ಮುನ್ನಮಿಲ್ಲನೆ ಪರಲೋಕಮೆತ್ತಣಿಂ ಬಂಮುದೀ ನಿಮ್ಮ ಜಿನಮತದ ಜೀವಸಂಭಾವನೆಯೊಳ್ ಪೃಥಿವ್ಯಪ್ತೇಜೋವಾತಾಭಿಧಾನಭೂತಚತುಷ್ಟಯದಿಂದಂ ಪೇಱಿ ಜೀವತ್ವಗ್ರಾಹಕಪ್ರಮಾಣಮಿಲ್ಲಂ ಭೂತಚತುಷ್ಟಯಸಂಭೂತಚೈತನ್ಯಂ ಪಿಷ್ಟೋದಕಗುಡಧಾತಕ್ಯಾದಿಯತ್ತಣಿಂ ಮದಶಕ್ತಿ ಪುಟ್ಟುವಂತೆ ಪುಟ್ಟುಗುಮಾಭೂತಂಗಳುಂ ಕಾಯಾಕಾರಪರಿಣತಂಗಳಕ್ಕು ಮಿದು ಪ್ರತ್ಯಕ್ಷ ಪ್ರಮಾಣಸಿದ್ಧಂ, ಅನುಮಾನಪ್ರಮಾಣಮವಸ್ಥಾ ದೇಶಕಾಲಾದಿಗಳ್ ಭಿನ್ನವಪ್ಪುದಱಿಂ ದ್ರವ್ಯಶಕ್ತಿಯಿಂ ಭಿನ್ನಮೆಂತೆನೆ:—ಮೂಲಕಂ ಬಾಲಂ ದೋಷಹರಮು ಬಾಲಂ ದೋಷಕರ ಮದಱಿಂ ಪ್ರತ್ಯಕ್ಷಪರಿಚ್ಛೇದ್ಯಂ ವಸ್ತುತತ್ವಮನುಮಾನದಿಂ ವ್ಯಭಿಚರಿಸುಗುಂ ಎಂದು ನುಡಿದು ಮದನೇ (ಮುದಂತ) ಪಕ್ಷನಿರ್ಣಯ ನಿಮಿತ್ತ ಮಿಂತೆಂದಂ:—

ಉ|| ಜೀವವಿವಾದಮೆತ್ತ ಪರಲೋಕ ಫಲೋದಯಮೆತ್ತದರ್ಕೆ ಮ |
ಯ್ಯೋವದೆ ಪೂಣ್ದು ಕೊಳ್ವ ತಪಮೆತ್ತಡದುಣ್ಣದ ವಿಾಯದಂಗಸಿ ||
ರ್ಜೀವತೆವೆತ್ತುದೆತ್ತ ವಿಫಲದ್ವಯದಾನವಿಧಾನಮೆತ್ತ ನಾ |
ನಾವಿಧದಿಂದ ಮೇಂ ನಮೆದು ನಾರುಗದಿರ್ಪರೂ ಜೈನದೀಕ್ಷಿತರ್ || ೧೨೯ ||

ಕಂ|| ಇಂತಿರೆ ಬೆದಬೆದ ಬೇಯು |
ತ್ತುಂ ತಪದೊಳ್ ನವೆದು ತಮ್ಮ ಶಿಷ್ಯರ್ಕಳುಮಂ ||
"ತಾಂ ತಿರಿವ ಗೊರವಿ ಬೆನಕನು |
ಮಂ ತಿರಿಯಿಪ"ಳೆಂಬ ತೆಱದೆ ನೆಱೆ ನವೆಯಿಸುವರ್ || ೧೩೦ ||
ಆ ನೆವದಿಂದಂ ಶ್ರಾವಕ |
ಮಾನಿಗಳನನೇಕವಿಧದಿನುಪಜೀವಿಪರ ||
ಜ್ಞಾನಿಗಳ ಬುದ್ಧಿಪೌರುಷ |
ಹೀನಮುಜೀವಿಕೃತಂ ಬೃಹಸ್ಪತಿಮತದೊಳ್ || ೧೩೧ ||

ಚಂ|| ಸಮಯವಿಚಾರಮೆಂಬುದು ಮಹಾಗಹನಂ ಕಪಟಕ್ಕೆ ಪೊತ್ತ ಕುಂ |
ಚಮು ಮಱೆಶೌಚಮುಂ ಮೆಱೆವ ಗುಂಡಿಗೆಯುಂ ವಿಕೃತಕ್ಕೆ ಸಂದ ನಾ ||
ಗ್ನ್ಯಮುಮುಪಹಿಂಸೆಯೆಂಬ ಜನವಾದಮುಮಲ್ಲದೆ ಪೇಟಿ ಜೀವತ |
ತ್ವಮುಮ ನಜೀವತತ್ವ[ಮು]ಮನೆತ್ತಱಿವರ್ ಜಿನತತ್ವ ತಾತ್ವಿಕರ್ || ೧೩೨ ||

**ವ||** ಅದಲ್ಲದೆಯುಂ ಭೂತಚತುಷ್ಟಯಸಂನಿಪಾತಮಂ ಶರೀರಮೆಂಬುದು ಮದರ್ಕೆತ್ತಲುಂ ಬೇಱಿಲ್ಲದ ಚೈತನ್ಯಮುಂ ಜೀವಮೆಂಬುದು ಮುಂಬರಕುಸುಮ ಸಮಾನಮುಂ, ಪರಲೋಕಮೆಂಬುದು ಖರವಿಷಾಣನಿರ್ವಿಶೇಷಂಗಳುಂ, ಪುಣ್ಯಪಾಪಮೆಂಬುದು ಗಂಧರ್ವನಗರವಿಳಾಸಮುಂ, ಧರ್ಮಾಸ್ತಿಕಾಯಮೆಂಬುದು ಮರುಮರೀಚಿಕಾನಿಕಾಯಂಗಳುಂ, ಸುಖದುಃಖಂಗಳೆಂಬುದು ಸ್ವಪ್ನೇಂದ್ರಜಾಲಸನ್ನಿಭಂಗಳುಂ, ಜೀವಿತಮರಣಂಗಳೆಂಬಿವಱಿಟ್ಟಳಮುಂ ಪುಸಿಯ ಪೊಟ್ಟಳಮುಮಕ್ಕುಮದಕನ್ನ್ಯಹೃದಯನುಮನೇಡಮೂಕನುಂ ತತ್ವಾಂಧನುಂ ವಸ್ತುಬಾಹ್ಯನುಂ ನಂಬುಗುಂ:—

ಕಂ|| ನಿನ್ನನ್ನಂ ಪ್ರತಿಭಾಸಂ |
ಪನ್ನಂ ನಂಬುಗುಮೆ ಮೆಯ್ಗೆ ಮಚ್ಚಿದ ತೆಱದಿಂ ||
ದನ್ನಂಬಿ ವಿಷಯ ಸುಖದೊಳ್ |
ತನ್ನಿಷ್ಟನೆಯಾಗಿ ಮರುಳೆ ನಿರ್ವೃತನಾಗಾ || ೧೩೩ ||

**ವ||** ಅದಲ್ಲದೆಯುಂ:—

ಕಂ|| ಪುಟ್ಟಂ ಸತ್ತೊಂ [ಕೆಟ್ಟಂ] |
ಕೊಟ್ಟೊಂ ಬಾಟ್ವನ್ನಮಿಂದ್ರಿಯಾಳಿಗೆ ಪಸರಂ ||
ಗೊಟ್ಟುಂ ಮೆಯ್ಮೆಚ್ಚಿದವೋ |
ಲುಟ್ಟುಂಡುಂ ಸಿದ್ದೆಗೆಯ್ದು ಸುಖಮಂ ಪಡೆಯಾ || ೧೩೪ ||

**ವ||** ಎಂದು ಪೂರ್ವಪಕ್ಷಸ್ವರೂಪ[ನಿರೂಪ]ಣಾಪ್ರತಿಜ್ಞಾನಂತರಮನೇಕಕುನಯೋಪಪತ್ತಿಗಳಿಂ ಪಕ್ಷಪ್ರತಿಷ್ಠಾಪನೆಗೆಯ್ದು ಕವಳಿಗೆಯ ಭಟ್ಟಂ ನುಡಿಯೆ ರತ್ನತ್ರಯಪರೀಕ್ಷೆಗೆ ಮಾಣಿಕಚೆಟ್ಟನಪ್ಪ ವಜ್ರಾಯುಧನಾತನ ನುಡಿದುದೆಲ್ಲಮ ನನುವದಿಸಿ:—

ಕಂ|| ಲೋಕಾಯತವೆನಿಸಿದ ಚಾ |
ರ್ವಾಕೋಕ್ತಿಯ ನಹಿತಶಕ್ತಿಯಂ ಭೇದಿಸುವಂ ||
ತೇಕಕ್ಷಣದೊಳೆ ವಿಗತಾ |
ನೇಕಂ ಜಿನಚಂದ್ರಭೂಭುಜಂ ಭೇದಿಸಿದಂ || ೧೩೫ ||

**ವ||** ಅಂತದಂ ಭೇದಿಸೆ:—

ಕಂ|| ಪೊಸವೆಳ್ದಿಂಗಳ್ ಪಗಲೊಳ |
ಮೆಸೆವಂತಿರೆ ದಂತಕಾಂತಿಗಳ್ ವಿಭು ನುಡಿವಂ ||
ಪಸರಿಸೆ ಸಾರೋದಾರ |
ಪ್ರಸನ್ನಗಂಭೀರವಚನರಚನಾನಿಚಯಂ || ೧೩೬ ||

ಅಮರಗುರುವಾಣಿ ಮದಿರಾ |
ಪ್ರಮತ್ತವಾಣೀಸಮಾನಮುನ್ಮತ್ತವಚಃ ||
ಸಮಮುಂತಲ್ಲದೊಡೆಂತೀ |
ಪ್ರಮಾದಿ ಚಾರ್ವಾಕನೆಂಬ ಪೆಸರಂ ಪಡೆಗುಂ || ೧೩೭ ||

ವ|| ಅಮ್ಮಾ ಕೇಳ್ ನಿಮ್ಮ ಸಮ್ಮತಮಪ್ಪ ಪೃಥಿವ್ಯಾದಿತತ್ವಚತುಷ್ಟಯಸನ್ನಿಪಾತಮೆ ಚೈತನ್ಯಮಂ ಪುಟ್ಟಿಸುಗುಮಪ್ಪೊಡೊಲೆಯ ಕಿಚ್ಚಿನ ಮೃದ್ಭಾಜನದೆಸಱ ನೀರ ಬಾಣಸಿಗರುರಿಪುವ ಗಾಳಿಯ ಸಂಯೋಗದೊಳ್ ಚೈತನ್ಯಮುದೇಕೆ ಪುಟ್ಟದು ಅಂತಲ್ತು ಕಾಯಾಕಾರಪರಿಣತಭೂತಸನ್ನಿಪಾತಂ ಚೈತನ್ಯಜನಕಮೆಂಬೆಯಪ್ಪೊಡೆ ಸಂಸ್ಕಾರನಿಮಿತ್ತದಿಂದಿಟ್ಟಪಿದ ಶಬದ ನೆಲದ ಪೊತ್ತಿಸಿದ ಕಿಚ್ಚಿನ ತಳಿದ ನೀರ ತೀಡುವ ಗಾಳಿಯ ಸಂಯೋಗದೊಳ್ ಚೈತನ್ಯೋತ್ಪತ್ತಿಯಾಗಲೆವೇಳ್ಕುಂ, ಈ ಮಾತ ಮೋಘಂ ಮಂದರಾಚಳನಿಶ್ಚಳಮಿದಂ ಚಳಿಯಿಸಲ್ ನಿಮ್ಮ ನಚ್ಚಿನ ವಾಚಸ್ಪತಿಗನುಶಕ್ಯಮದಱಿಂದಂ ಪೃಥಿವ್ಯಾದಿಸಂಬಂಧಮಲ್ಲದೆ ಪೆಱತು ದರ್ಶನಜ್ಞಾನಲಕ್ಷಣಂ ಜೀವಾಭಿಧಾನಂ ತತ್ವಾಂತರ ಮೆಲ್ಲಾಕಾಲಮುಂಟೆಂಬುದರ್ಕುಪಪತ್ತಿಯಾವುದೆನೆ:— ಜಾತಿಸ್ಮರರನೇಕರಾಮುಂ ನೀಮುಮಱಿಯೆ ತಮ್ಮ ಭವಾಂತರಂಗಳಂ ಪೇಳ್ವುದುಂ, ಗ್ರಹಗ್ರಸ್ತಂ ಮಂತ್ರದಿನಾವೇಶಂಗೊಂಡು ತನ್ನ ಮುನ್ನಿನ ಭವದ ಪೆಸರಂ ನೆಗಟ್ತಿಯುಮಂ ಪೇಳ್ವುದುಮಾಬಾಲಗೋಪಾಲವೃದ್ಧಪ್ರಸಿದ್ಧಂ, ಮತ್ತಂ ಸಾರ್ವಭೌಮರಪ್ಪ ಸಕಳಚಕ್ರವರ್ತಿಗಳಂ ಕಂಡು ಜಡಜನಂಗಳ್ ಮೊದಲಾಗಿದು ಮುನ್ನಿನ ಭವದೊಳ್ ನೆರಪಿದ ಪುಣ್ಯದ ಫಲಮೆಂಬರ್:—

ಕಂ|| ಅದಱಿಂದಂ ಜೀವಾಭಾ |
ವದ ವಾದಂ ದರಿಯ ಮರನ ನೇಱಿದ ತೆಱನಂ ||
ತದನವಲಂಬಿಸ ಬೇವುಗು |
ಮುದಯ್ಯ ಬುಧನಿಕರಕರ್ಣಶೂಲೋಪಮಮಂ || ೧೩೮ ||

**ವ||** ಅದಲ್ಲದೆಯುಂ ಜೀವನಿಲ್ಲೆಂಬ ನಿನ್ನ ಪ್ರತಿಷೇಧೋಕ್ತಿಯಿಂದಮೆ ಜೀವಸಿದ್ಧಿ ಹೇಳ್ಗಾಸಾಧ್ಯ ಮೆಂತೆನೆ—ಉಳ್ಳುದನಲ್ಲದಾರ್ಗಮಿಲ್ಲೆನಲ್ ಬಾರದುಳ್ಳುದುಂ ಪರದ್ರವ್ಯಪರಕ್ಷೇತ್ರಪರಕಾಲ ಪರಭಾವ ದಿಂದ ಮಿಲ್ಲದಿರ್ಕುಂ, ಸ್ವದ್ರವ್ಯ ಸ್ವಕ್ಷೇತ್ರಸ್ವಕಾಲಸ್ವಭಾವದಿಂದಮವಶ್ಯಮುಂಟಾಗದಿರದು. ಮತ್ತ ಮೆತ್ತಾನುಮುಳ್ಳುದನಲ್ಲದಿಲ್ಲೆನಲ್ಬಾರದು ಎಂಬ ನಿಷೇಧವಚನಮನೆ ಪಿಡಿದು ಜೀವಸಿದ್ಧಿಗೆಯ್ವೊಡೆ ಗಗನಕುಸುಮಮನತ್ಯಂತಾಭಾವಮಂ ನಿಷೇಧಮಾತ್ರದಿಂದ ಮುಂಟುಮಾಡಲಕ್ಕುಮೆ ಪೇಱಿಮೆಂಬ ಯಪ್ಪೊಡೆ ಅದು ಮುನ್ನಿನ ಸ್ವದ್ರವ್ಯಪರದ್ರವ್ಯಾದಿ ಚತುಷ್ಟಯದೊಳಡಂಗಿದುದು ಎಂತೆನೆ ಗಗನ ಕುಸುಮಂ ಕುಸುಮಕ್ಕೆ ಗಗನಮಿಲ್ಲದಲ್ಲದೆ ನಿಜಾಧಾರಾಧೇಯ ಸ್ಥಿತಿಯೊಳಲ್ಲದಿರ್ಕುಮೆ ಮತ್ತಂ

ಪ್ರಸಿದ್ಧಾನಮಂ ಪಡೆದ ಪರಾರ್ಥಮಂ ಶಾಶ್ವತಮೆಂಬುದನುಕ್ತಸಿದ್ಧಮಲ್ಲದಂದಭಿಧಾನಂ ನಿರರ್ಥಕರಮುಮಾಧಾರರಹಿತಮುಮಕ್ಕುಮೆಂದುಮಿಲ್ಲದ ಪದಾರ್ಥಕ್ಕಭಿಧಾನಮನಿಡುವ ಮರುಳಾವೊಂ ವಸ್ತುಹೀನಮಭಿಧಾನ ಮುಂಟಕ್ಕುಮಪ್ಪೊಡೆ ಶಬ್ದಾರ್ಥಸಂಬಂಧಂ ಪಾರಿಪ್ಲವಪರಿಪ್ಲವಮಕ್ಕುಂ:—

ಮ|| ಅದಱಿಂ ಜೀವಪದಾರ್ಥಮಿಲ್ಲದಿರದಾ ಜೀವಕ್ಕ ಮಿಾಜನ್ಮಮೆಂ |
ಬುದುಮಾಮತ್ತಿನ ಜನ್ಮಮೆಂಬುದುಮನೇಕಂ ಜೀವತತ್ವಕ್ಕೆ ಪಾ ||
ಪದೊಳಂ ಪುಣ್ಯದೊಳಂ ವಿಮಿಶ್ರಣದೊಳಂ ಜನ್ಮಾಳಿ ಸಲ್ಗುಂ ಸುಖ |
ಕ್ಕದೆ ದುಃಖಕ್ಕದೆ ಮಿಶ್ರಣಕ್ಕದೆ ಪದಂ ಸಂಸಾರಿಸಂಸಾರದೊಳ್ || ೧೩೯ ||

ಕಂ|| ಸಮಕೊಂಡ ಪುಣ್ಯಮುಂ ಪಾ |
ಪಮು ಮಿಲ್ಲದೊಡಾಳ್ದನಾಳ್ ಸರೋಗ ನರೋಗಂ ||
ಶ್ರಮರಹಿತಂ ಕ್ಲೇಶಕೃತ |
ಶ್ರಮನೆಂಬೀಲೋಕಯಾತ್ರೆ ಕಿಡದೆ ಮಹಾತ್ಮಾ || ೧೪೦ ||

ಆರಂಭಿಗನಾತ್ಮಂ ಸಂ |
ಸಾರಂ ಕೆಯ್ ಬಿತ್ತಿಯುಣ್ಬ ಫಲಮುಭಯಭವೋ ||
ದಾರಂ ಬಿತ್ತು ಶುಭಾಶುಭ |
ಮೋರಂತಿರ ಬೆಳಪ ಬೆಳಸು ಸುಖದುಃಖಂಗಳ್ || ೧೪೧ ||

ವ|| ಅದಱಿಂದ ಮಾತ್ಮವಚನಂ ಪ್ರಮಾಣಸಿದ್ಧಂಗಳಾಗಿ ಪದಾರ್ಥಂಗಳೆಲ್ಲಂ ಪ್ರತ್ಯಕ್ಷಂಗಳಲ್ಲದುವಿಲ್ಲ. ಮಾಂಸನಯನಾವಿಷಯಮೆಲ್ಲಮಪ್ರತ್ಯಕ್ಷಮೆಂಬೀ ಜಡವಾದಮಂ ಕಂಡು "ಕಂಡಲ್ಲದಱಿಯೆನೆಂಬರ್" ಎಂಬ ನಾಣ್ಣುಡಿಯಂ ಪೋಲ್ಕುಮೆಂಬುದುಂ, ಪ್ರತಿವಾದಿ ನಿರುತ್ತರನಾಗಿ ಪಕ್ಷಪರಿತ್ಯಾಗಂ ನಿಗ್ರಹಸ್ಥಾನಮೆಂಬುದಱಿಂ ನಿಗ್ರಹಸ್ಥಾನಮನೆಯ್ದಿಯು ಮಿರದೆ:—

ಕಂ|| ಆಗಳವನೇಕಪಕ್ಷ |
ತ್ಯಾಗಂ ಕೆಯ್ವರಿಯೆ ಸುರಿಗೆವಿಸುಟಳಲಂಕಂ ||
ಪೋಗದೆ ಕಟ್ಟಿದ ಸುರಿಗೆಯು |
ನಾಗಳ್ ಕಿಟ್ಟಿಂತೆ ಸುಗತಮತಮಂ ಪಿಡಿದಂ || ೧೪೨ ||

ವ|| ಪಿಡಿದು ನಿಮ್ಮಾಗ್ರಹದಿಂದಂ ನಿಱಿಸಿದ ಪದಾರ್ಥಂ ಸುಖದುಃಖಹರ್ಷವಿಷಾದಂಗಳೊಳಾದುದೊಂದು ವಿಜ್ಞಾನಸಂತಾನಮಾದುದಲ್ಲದೆ ತದ್ವ್ಯತಿರಿಕ್ತಂ ಜೀವನೆಂಬುದಿಲ್ಲ. ತದ್ಗ್ರಾಹಕ ಪ್ರಮಾಣಮಿಲ್ಲದುದಱಿಂದೆ ಪೂರ್ವಕಾಲಭಾವಿವಿಜ್ಞಾನಮುತ್ತರಕಾಲಾದಿಗಳೊಳ್ ನೆಗೆದು ಕ್ಷಣಿಕತ್ವದಿಂದ ಮಾಗಳಾವಿಜ್ಞಾನಂ ನಿಲ್ಲದಪ್ಪುದಱಿಂದ ಮಿನ್ನುತ್ತರಕಾಲತಾಭಾವವಿಜ್ಞಾನಮುಂ ಪೂರ್ವಕಾಲತಾಭಾವವಿಜ್ಞಾನದೊಳ್ ಸಂಗತಮಲ್ಲದಱಿಂ ಪೂರ್ವೋತ್ತರಕಾಲವ್ಯಾಪ್ತಿ ಜೀವತತ್ವಮೊಂದುಂಟೆಂಬರದೊಂದುಮಿಲ್ಲ. ಪ್ರತಿಕ್ಷಣಂ ವಿಶರಾರುಗಳ್ ಚಿತ್ತಕ್ಷಣಂಗಳ್ ಪೂರ್ವಾಪೂರ್ವಚಿತ್ತವಿಶೇಷಪ್ರಭವಂಗಳ್ ಪ್ರಬಂಧದಿಂದಂ ಪ್ರವರ್ತಿಸುವುವವನಱಿಯದ ಲೋಕಕ್ಕಾತ್ಮಾಭಿಮಾನಂ ಪುಟ್ಟುಗುಂ ಅದಱಿಂದಮಿನ್ನಪ್ಪೊಡಂ ಜೀವಸದ್ಭಾವಾಭಿಮಾನಮಂ ಬಿಸುಡುವುದು,ರೂಪವೇದನಾವಿಜ್ಞಾನಸಂಜ್ಞಾನಸಂಸ್ಕಾ(ಸಾ)ರಂಗಳೆಂಬಯ್ದುಂ ಸ್ಕಂಧಂಗಳ್ ದೀಪ ಶಿಖಾರೂಪದಿಂ ಕ್ಷಣವಿಳಂಬಿಗಳದಱಿಂ ವಿಜ್ಞಾ

ನಾಶ್ರಿತಂಗಳಪ್ಪ ಶರೀರೇಂದ್ರಿಯಬುದ್ಧಿಗಳೇಕಕ್ಷಣಾಂತರಾಳವರ್ತಿಗಳುತ್ತರಕ್ಷಣವ್ಯಪಾಯಿಗಳದರ್ಕೇ
ಕಾತ್ಮಜಂ ಜೀವಮೆಂಬುದಾದುದೆನೆ ವರಹಸಿತವದನಾರವಿಂದನಾಗಿ ಸಮ್ಯಕ್ತ್ವಖಡ್ಗನಪ್ಪ ವಜ್ರಾ
ಯುಧಂ:—

ಕಂ|| ಕವಳಂಗೊಂಡೊಡಮ ಪ |
ತ್ತುವಿಡಿಸಿ ಪಕ್ಕಾದ ರೂಪನಡಸುವ ಕಱಿಯಂ ||
ತವನಸವನೀಶ ನಿರದೆ |
ತ್ತಪೋಪೆಯೆಂಬಂತೆ ತಕ್ಕುಗಿಡೆ ಕಡುಗೆಯ್ದಂ || ೧೪೩ ||
ಕ್ಷಣಿಕಪ್ರತಿಜ್ಞೆ ಜೀವನೊ |
ಳೊಣರದು ವಂಧ್ಯಾಸ್ತನಂಧಯಪ್ರತಿಮಮದಂ ||
ಗುಣಿ ದೂಷಿಸೆ ಯುಕ್ತಿಗಳಿಂ |
ಕ್ಷಣಾರ್ಧಮುಂ ನಿಲ್ಲದಲ್ಲದಕ್ಕನುಮಾನಂ || ೧೪೪ ||

ವ|| ಅದೆಂತೆಂದೊಡೆ ವಿಜ್ಞಾನಕ್ಷಣಿಕವಾದಂ ಬಾಲಲೋಲಭಾಷಿತದಂತೆ ಪರಿಹಾಸಾಸ್ಪದ
ಮಾದಪ್ಪುದೊಂದು ಕ್ಷಣಮಾತ್ರದಿಂದತ್ತ ಪರಮಾಣುಮಾತ್ರದಿಂ ನಿಲ್ಲದು, ವಿಜ್ಞಾನವಾದದೊಳ್:—

ಮ|| ಸ್ಮರಬಾಣಾರ್ತವಿಟೀವಿಟಾಳಿಗೆ ವಿಯೋಗಂ ಪೂರ್ವಸಂಭೋಗಸಂ |
ಸ್ಮರಣಂ ದೂತನ ಕೆಯ್ಯೊಳಟ್ಟುವವಿನಾಣಂ ಕೂಟದುದ್ಯೋಗದಾ ||
ದರಮೀಯಲ್ ಪೆಸರ್ವೋದುದಂ ಕುಡುವ ಕೋಡೆಂದೀ ಸ್ವಸಂವಿತ್ಸರಂ |
ಪರೆ ಪೋಕುಂ ಪ್ರಳಯಕ್ಕೆ ತತ್ಕ್ಷಣಿಕಮಿಥ್ಯಾವಾದಿವಾದೀಂದ್ರರಿಂ|| ೧೪೫ ||

ವ|| ಅದಲ್ಲದೆಯುಂ ಸುಗತಮತಾನುಸಾರಿಗಳ:—

ಮ|| ಮನಮೊಲ್ದಾತನ ನೆಯ್ದೆ ಜಾನಿಸುವುದುಂ ಮೆಲ್ಪಂ ಶಿರಸ್ತುಂಡಮುಂ |
ಡನಮುಂ ಪಾತ್ರಕಷಾಯಚೀವರತಪೋನುಷ್ಠಾನಮುಂ ತತ್ವಭಾ ||
ವನೆಯುಂ ಧ್ಯಾನಮುಮೆಂದು ಮೊಂದುವವರಾ ರಾದ್ಧಾಂತಮುಂ ತತ್ತಪೋ |
ರ್ಜನಮುಂ ತುಪ್ಪದ ಕಾದ ಪಾಲಪೊಲದೇಂ ಸಂಭಿನ್ನಸಂಯೋಗಮೋ || ೧೪೬ ||

ಕಂ|| ಸಮಯಿಗಳೊಳ್ ಜೀವಾಭಾ |
ವಮಿತ್ತ ಸೌಗತನೊಳತ್ತ ಚಾರ್ವಾಕನೊಳೀ ||
ಕ್ರಮದಿಂದಮವರ ಸಿದ್ಧಾಂ |
ತಮುಮವರ ಚರಿತ್ರಮುಂ ಸ್ವವಚನ ವಿರೋಧಂ || ೧೪೭ ||

ವ|| ಎಂದು ತಥಾಗತಮತಮಂ ತಿರಸ್ಕರಿಸಿ ತನ್ನೊಳಶಕ್ಯಾನುಷ್ಠಾನಕ್ಕೆ ಪೊಣರ್ದ ಲೋಕಾ
ಯತಶಾಕ್ಯಮತಾವಲಂಬಿಯನವಿಲಂಬಿತಂ ಗೆಲ್ದು ಮತ್ತಮನೇಕೋಪಪತ್ತಿಗಳಿಂ ಚಾರ್ವಾಕಕಾರುಣಿಕ
ವಾವದೂಕನಂ ಕರುಣರಸಾಸ್ಪದಂ ಮಾಡಿ:—

ಕಂ|| ಕಪಟವಟು[ಪಟು] ಮನೋಗ |
ರ್ವಪರ್ವತಂ ನುಗ್ಗಿನುರ್ಚುನೂಱಾದುದು ಭೂ ||
ಮಿಪವಜ್ರಾಯುಧವಾಗ್ವ |
ಜ್ರಪಾತದಿಂ ನೆರೆದ ವಿದ್ವದಾಸ್ಥಾಯಿಕೆಯೊಳ್ || ೧೪೮ ||

ವ|| ಅಂತಿನಿಪಿರಿಯನುಂ, ಚತುರಶ್ರಮುನುಮಪ್ಪ:—

ಕಂ|| ಪಂಡಿತನೊಡನಮೃತಾಕ್ಷರ |
ಗಂಡೂಷಮನುಗುಳ್ವ ತೆಱದನುಗ್ರಾಹಿಸೆ ಭೂ ||
ಮಂಡಳಪತಿ ತಾರ್ಕಿಕರೆರ್ದೆ |
ಗೊಂಡುದುಪನ್ಯಾಸ ಮಾಸಭಾಮಂಡಳದೊಳ್ || ೧೪೯ ||

ವ|| ಅಂತು ನಿರುತ್ತರನಾಗಿ ಪ್ರತಿವಾದೀಂದ್ರಂ ವನಪ್ರವಿಷ್ಟಕರೀಂದ್ರ ವಿಚ್ಛನ್ನಮದಸಲಿಲಪ್ರವಾಹ ನಾಗಿರ್ದೊಡಂಬಟ್ಟು ಕುಡಿಸೆ:—

ಕಂ|| ಜಯವಾದಮ ನಖಿಳಜಗ |
ಜ್ಜಯಪತ್ರಮ ನಪಕ್ಷಪತಿತರ್ ಕುಡೆ ಕೊಂ ||
ಡಯನಯ ವಿನ[ಯ]ಪರಂ ಮಾ |
ಣಿಯ ನವಮನ್ನಿಸದೆ ವಿಭು ಕರಂ ಮನ್ನಿಸಿದಂ || ೧೫೦ ||

ವ|| ಅಂತಾತನ ಸಿಗ್ಗಂ ಕಳೆವುದುಂ ವಿಪ್ರಂ "ಕಿಱುಕುಳನೊಳ್ ಪಡೆ[ದ ಗೆಲ್ಲದಿಂದಂ] ಪಿರಿಯ ನೊಳ್ ಪಡೆವ ಸೋಲಮುತ್ತಮ"ಮೆಂದು ಸಂತಸಂಬಟ್ಟು:—

ಕಂ|| ಉಪಸಂಹಾರಿಸಿ ಮಾನವ |
ವಪುವಂ ರವಿಗಡ್ಡಮಿರ್ದ ಮುಗಿಲ ನೆಟಿಲ್ ಬಂ ||
ದಪಹರಿಸುವಂತೆ ಕಣ್ಣೊ |
ಳ್ಕೆ ಪರಂಜ್ಯೋತಿಃಸ್ವರೂಪಮಂ ಕೆಯ್ಕೊಂಡಂ || ೧೫೧ ||

ವ|| ಅಂತು ಪೂರ್ವದಲೆ ಭೂಮಿದೇವಂ ದೇವನಾಗಿ ಜೈನಶಾಸನಚೂಡಾಮಣಿಯಪ್ಪ ವಜ್ರಾಯುಧನಂ ಪೂಜಿಸಿ ಪೊಡೆವಟ್ಟು ಪೋಪುದು ಮೋಲಗದ ಸಭಾಸದರೀದಿವ್ಯನೇನೆಂಬನೇಕೆ ನಿಜಾಕೃತಿಸಂವೃತಿಯಿಂ ಬಂದು ನಿಮ್ಮೊಳ್ ನುಡಿದು ಸೋಲ್ತು ಪೋದನೆಂದು ತನ್ನಂ ಬೆಸಕೊಳೆ ವಜ್ರಾಯುಧಂ ಲಬ್ಧಾವಧಿ(ಬೋಧ)ಲೋಚನಂ, ತಾನಪರಾಜಿತನೆನಾದಂದು ದಮಿತಾರಿಯ ಪಕ್ಷ ಮಾಗಿ ಬಂದೆನ್ನೊಳ್ ಕಾದಿ ಸತ್ತಸೀತಂ ಮಹಾಬಲನೆಂಬೊಂ ವಿದ್ಯಾಧರನನೇಕಭವಪರಿಭ್ರಮಣದಿಂ ಬಂದೀಶಾನಕಲ್ಪದೊಳ್ ದೇವನಾಗಿ ಸಭೆಯೊಳೀಶಾನೇಂದ್ರನೆಂಮ ಸಮ್ಯಗ್ದರ್ಶನಮಂ ಪೊಗೞ್ದುದಕೇ ದರ್ಕಂ ನುಂಗಿದಂತುದ್ಗ್ರೀವನಾಗಿ ಮತ್ಸರಪ್ರೇರಿತನೆಮ್ಮಂ ಸೋಲಿಸಲ್ ಬಂದು ತಾನೆ ಸೋಲ್ತು ಪೋದನೆನೆ ವಿಪಶ್ಚಿಜ್ಜನಮೊಂದ ಕೊರಲೊಳ್:—

ಕಂ|| ಮೊದಲೊಳ್ ಮುಳ್ ಮೇಗೆ ವಿಚಿ |
ತ್ರದಳಿತರಕ್ತಪ್ರಸೂನಮೆಂಬಿನಿತಱಿಕೊಳಾ ||
ಗದು ಶಾಲ್ಮಲಿ ವನರುಹ ಮಾ |
ವುದಂತರಂ ನಿನಗಮಿದಿರ ವಾದಿಗಮಧಿಪಾ || ೧೫೨ ||

ವ|| ಎಂದು ಪೊಗೞೆ ಜೀವಸಿದ್ಧಿಪುರಸ್ಸರಂ ಸ್ವರ್ಗಾಪವರ್ಗಮಾರ್ಗಪ್ರಕಟನದಿ ನರ್ಹನ್ಮಾರ್ಗ ಪ್ರಭಾವನೆಯಂ ಮಾಡಿ ಪಾಪೇಭಕಂಠೀರವನಪ್ಪ ವಜ್ರಾಯುಧಂ ಸುಖದಿ ನರಸುಗೆಯ್ಯುತ್ತಿರ್ಪುದು ಮೊಂದುದವಸಮೋಲಗದೊಳಾಯುಧಾಧ್ಯಕ್ಷಂ ಬಂದು ಮರಸನಿದಿರೊಳ್ ನಿಂದು:—

ಉ|| ಆಯುಧಶಾಲೆಯೊಳ್ ಶತಸಹಸ್ರರವಿಪ್ರವಿಭಾಸಿ ದೇವ ಚ |
ಕ್ರಾಯುಧಮಿಂದು ಬಂದು ನೆಲಸಿರ್ದುದು ಯಕ್ಷಸಹಸ್ರರಕ್ಷಿತ ||
ನ್ಯಾಯಮಿದಂ ವಿಧಿಕ್ರಮದಿ ನರ್ಚಿಸಿ ದಿಗ್ವಿಜಯಕ್ಕೆ ಪೋಪುದ |
ತ್ಯಾಯತಪುಣ್ಯಮುಂನಮಧಿರಾಜನೆಯಿಂ ಸಲೆ ಚಕ್ರವರ್ತಿಯ್ಕೆ || ೧೫೩ ||

ವ|| ಎಂದು ಬಿನ್ನಪಂಗೆಯ್ದು ಮಾಣ್ದ ಬೇಗದೊಳಾನಂದನೆಂಬೊಂ ಋಷಿನಿವೇದಕನಿಂತೆಂದು ಬಿನ್ನಪಂಗೆಯ್ದಂ, ಶ್ರೀಸಿಲಯೋದ್ಯಾನದೊಳ್:—

ಕಂ|| ಸುರಪೂಜ್ಯಂಗಾಕ್ಷೇಮಂ |
ಕರಂಗೆ ಪುಟ್ಟಿದುದು ತನ್ಮನಃಪರ್ಯಯದಿಂ ||
ದೆರಡನೆಯ ಸಮಯದೊಳ್ ಕ್ರಮ |
ಕರಣವ್ಯವಧಾನರಹಿತಕೇವಳಬೋಧಂ || ೧೫೪ ||

ವ|| ಎಂದು ಬಿನ್ನವಿಸುವುದು ಮಿಭೇಂದ್ರಾರಾತಿ ಪೀಠದಿಂದ ಮೆರ್ದೇಳಡಿಯಂ ನಡೆದು ಚರಾಚರಗುರುವಿರ್ದ ದೆಸೆಗೇಳಡಿಯಂ ನಡೆದೆರಗಿ ಪೊಡೆವಟ್ಟೆರಡೊಸಗೆಯೊಳಂ ಮುಖ್ಯಂ ಗರುವೆಂಬುದಂ ಬಗೆದು ಆನಂದಭೇರಿಯಂ ಪೊಯ್ಸಲ್ವೇಟ್ಟು ಋಷಿನಿವೇದಕನ ಮೊಗಮಂ ನೋಡಿ:—

ಕಂ|| ರಾಗದ ಪೊಱೆಯಿರೆ ಪೊತ್ತಿರ |
ಲಾಗದ ಪೋಲ್ ತನ್ನ ತೊಟ್ಟ ತುಡುಗೆಯನಾತಂ ||
ಗಾಗಳೆ ಕಳೆದಿತ್ತಂ ಕುಡು |
ಮೀಗುಣಮೊಪ್ಪುವಪೊಲೊಪ್ಪವಾಭರಣಂಗಳ್ || ೧೫೫ ||

ವ||ಅಂತಾತಂಗೆ ಮಚ್ಚುಗೊಟ್ಟು ವಂದನಾಭಕ್ತಿಗೆ ಪುರಾಂತಃಪುರಪರಿವಾರ ಜನಸಮೇತ ಮಷ್ಟವಿಧಾರ್ಚನಾಪುರಸ್ಸರಂ ಜೈನಶಾಸನಚೂಡಾಮಣಿಯಪ್ಪ ವಜ್ರಾಯುಧಂ ಪೋಗಿ ಸಮವಸರಣಭೂಮಿಯನೆಯ್ದಿ ಪಟ್ಟವರ್ಧನದಿಂದಮಿೞಿಯೆ:—

ಕಂ|| ಮಾನಸ್ತಂಭದಿನಭವಾ |
ಸೀನಶ್ರೀಮಂಡಪಂಬರಂ ಕ್ರಮದಿಂದಂ ||
ಭೂನಾಥಂ ಪೊಕ್ಕಂ ಭ |
ವ್ಯಾನಂದನಸಮವಸರಣಭೂಮಂಡಳಮಂ || ೧೫೬ ||

ಜಿತವಿಶ್ವಕರ್ಮಪರಿಸಿ |
ರ್ಮಿತಕೃತಿಯಂ ತ್ರಿಃಪ್ರದಕ್ಷಿಣಂಗೆಯ್ದು ಮಹೀ ||
ಪತಿ ಗಂಧಕುಟಿಯನಾಜಿನ |
ಪತಿಯಿದಿರೊಳ್ ನಿಂದು ವಿನಯವಿನಮಿತಮುಕುಟಂ ||೧೫೭ ||

ಮ|| ಪಗೆವಂಗಂ ಕೆಳೆಯಂಗ ಮಾರ್ದ್ರಮತಿಯಂ ತ್ವನ್ಮೂರ್ತಿ ತೀರ್ಥೇಶ ಮಾ |
ಡುಗುಮಾಳೋಚಿಸ ನಿನ್ನ ತತ್ವಮ[ವಿ]ಸಂವಾದಂ ದುರಾಪಂ ಗುಣಾ ||
ಬ್ಧಿ ಗಭೀರಂ ಭವದೀಯಮೆಂದವಿತಥಾಳಾಪೋತ್ಕರಂ ರೂಪವ |
ಸ್ತುಗುಣಸ್ತೋತ್ರದಿ ನಂದು ಬಂದಿಸಿದನಾಪಾಪೇಭಕಂಠೀರವಂ ||೧೫೮ ||

## ಗದ್ಯ

ಇದು

ಜಿನೇಂದ್ರ ಚರಣ ಸರಸೀರುಹ ಶಿಲೀಮುಖಾಯಮಾನ

**ಶ್ರೀಮದುಭಯಕವಿ ಚಕ್ರವರ್ತಿ**

ನಿರ್ವರ್ತಿತಮುಂ

**ಅಮ್ಮನಭಕ್ತಾಭಿಧಾನ ವಿದ್ಯಾನಿಧಾನ ಮಲ್ಲಪಾರ್ಯ**

ತದನುಜಾತಾಭಿಜಾತ ಸಾರಸ್ವತ

**ಪುನ್ನಮಾರ್ಯ**

ಕಾರಿತಮುಮಪ್ಪ

**ಪುರಾಣಚೂಡಾಮಣಿಯೊಳ್**

ಅಷ್ಟಮಾಶ್ವಾಸಂ.

|| ಶ್ರೀ ||

# ಶಾಂತಿಪುರಾಣಂ.

## ನವಮಾಶ್ವಾಸಂ.

ಕಂ|| ಶ್ರೀನಾರೀಪತಿ ಬಂದಿಸಿ |
ಮಾನಿತಗಣಧರಯತೀಂದ್ರರಂ ಪರಮುದಯಾ ||
[ಧೀನ] ಜಿನಧರ್ಮರಂ ಮ|
ತ್ತಾನೃಪತಿ ವಿದಿಷ್ಟಕೋಷ್ಠ ವಿಷ್ಟರದಿಂದಂ || ೧ ||

ವ|| ಎಬ್ಬಿ ಭಗವದರ್ಹತ್ಪಾದಾರವಿಂದವಂದನಾನಂತರಂ ಗಣಧರದೇವರಂ ಬಂದಿಸಿ ಸಮವಸರಣಮಂ ಪೊಱಮಟ್ಟು ಪಟ್ಟವರ್ಧನಮನೇಱಿ ಬಂದು ರತ್ನಸಂಚಯಪುರಮಂ ಪೊಕ್ಕು ಚಕ್ರರತ್ನಮಂ ಪೂಜಿಸಿ ತದನಂತರಂ ಪುರಾತನಚಕ್ರವರ್ತಿಗಳ ನಿಯಮದಿಂ ದಿಗ್ವಿಜಯಕ್ಕೆ ಪೊಱಮಟ್ಟನೇಕ ವ್ಯಂತರಾಮರರುಮಂ ರಜತಾಚಳದುಭಯ ಶ್ರೇಣೀನಿವಾಸಿಗಳಪ್ಪ ಗಗನಚರರುಮಂ ಬಾಯ್ಕೇಳಿಸಿ ಮಗುಟ್ಟಿ ಬಂದು:—

ಮ|| ಸ್ಮಯವದ್ಭೂಮಿಪರಿತ್ತ ವಿತ್ತನಿಕರಂ ಬೆನ್ನಿತ್ತ ಗೆಲ್ಲಂ ನಿಜಾ |
ಜ್ಞಯನಾಂತೊಂದಱಯೋಲೆಗೇದೊರೆಯರುಂ ಮೂವಿಟ್ಟಗಂ ಪೂಣ್ದು ತೊ ||
ರ್ಮೆಯ ಮೆಯ್ ದಿಗ್ವಿಜಯಕ್ಕೆ ನೇರ್ಪಡುವಿನಂ ವಜ್ರಾಯುಧಂ ರತ್ನಸಂ |
ಚಯಮಂ ಹಾರದ ನಾಯಕಂ ಪುಗುವವೋಲ್ ಪೊಕ್ಕಂ ಸ್ಫುರತ್ತೇಜದಿಂ || ೨ ||

ವ|| ಅಂತು ಸಕಳಚಕ್ರವರ್ತಿ ಷಟ್ಖಂಡಾವನಿಯಂ ಬಾಯ್ಕೇಳಿಸಿ ಪೊಟಲಂ ಪೊಕ್ಕಿರ್ದೊಂದು ದಿವಸಂ ವಿಚಿತ್ರಚಿತ್ರಶಾಲ್ಯಾಭ್ಯಂತರ(ವ್ಯ)ವಸ್ಥಿತಮೃಗೇಂದ್ರಾಸನದೊಳಿರೆ:—

ಕಂ|| ಗಗನಚರನೊರ್ವನಮರಾ |
ಪಗೆ ಬೆನ್ನೊಳ್ ಬರೆ ಭಗೀರಥಂ ಬರ್ಪವೊಲ ||
ಭ್ರಗಮನೆ ಭಾಮಿನಿ ಬೆಂಕೊಳೆ |
ಪುಗುತಂದಂ ಸಕಳಚಕ್ರವರ್ತಿಯ ಸಭೆಯಂ || ೩ ||

ವ|| ಅಂತು ಕಿಟ್ಟಿ ಬಾಳುಮತ್ತಪರಮುಂ ಬೆರಸು ಮಿಟ್ಟಿ ದೇವತೆಯಂತೆ ಬೆನ್ನಟ್ಟಿ ಮುಟ್ಟುವ ಖೇಚರಿಯಮುಂತೆ ನಿಮಿಱಲಾಱದೆ ಚರಣಂ ಶರಣಮೆಂದು ಸಕಳಚಕ್ರವರ್ತಿಯ ಮುಂದೆ ಕುಳ್ಳಿರ್ದು ಮಾವಿಯಚ್ಚರ ಕಾಂತೆಯುಂ ಚತುರಂತ ಕ್ಷಿತೀಶ್ವರಂಗೆ ಪೊಡೆವಟ್ಟು:—

ಕಂ|| ಕಾಯಲ್ತಕ್ಕುದೆ ದೋಷಿಗೆ |
ಕಾಯಲ್ತಕ್ಕುದೆ ದಲಿವನ ನವನೀಶ್ವರ ನೀಂ ||
ಕಾಯದಿರನೆಯೆನೆ ನಭದಿಂ |
ದಾಯೆಡೆಗೆ ಜರನ್ನಭಶ್ಚರಂ ಮತ್ತೊರ್ವಂ || ೪ ||

**ವ||** ಮುದ್ಗರಸನಾಥಹಸ್ತಂ ಬಂದು ಮಹೀವಲ್ಲಭಂಗವನತನಾಗಿ ಬಱಿಯಮುವರಿರ್ವರ **ಕೋಪ** ಸಂಬಂಧಮಂ ಬಿನ್ನಪಂಗೆಯ್ದಂ, ವಿಜಯಾರ್ಧ ದಕ್ಷಿಣಶ್ರೇಣಿಯ ಶುಕ್ಲಪ್ರಭಮೆಂಬ ಪೊಲಿಲ ನಾಳ್ವಿ ನಾಂ **ಪ್ರಭಂಜನ**ನೆಂಬೆನೆನಗಮೆನ್ನಯ ಪೆಂಡತಿ **ಶುಭಕಾಂತಿ**ಗಂ ಪುಟ್ಟಿದಳೀಕೆ **ಶಾಂತಿಮತಿ** ಯೆಂಬೊಳ್:—

ಕಂ|| ಮುನಿಸಾಗರಗಿರಿಯೊಳ್ ಮ |
ತ್ತನುಜೆಯ ನಿರವದ್ಯವಿದ್ಯೆಯಂ ಸಾಧಿಸೆ ಯೌ ||
ವನರೂಪವಿಭ್ರಮಂಗಳ್ |
ಮನಕ್ಕೆವರೆ ಗೆಯ್ದನಂತರಾಯಮನೀತಂ || ೫ ||

**ವ||** ಅಂತು ಪ್ರಜ್ಞಪ್ತಿವಿದ್ಯಾಲಾಭಾಂತರಾಯಮಂ ಮಾಡಲೀತನೆತ್ತಿಕೊಂಡುಪಸರ್ಗಮಂ ಸಂಸಾರನಿಸರ್ಗಮೆಂದು ನಿಶ್ಚಳಿತೆ ಸೈರಿಸಿ ವಿದ್ಯಾರಾಧನದೊಳ್ ಚಿತ್ತಮಂ ನಿಱಿಸಿ:—

ಉ|| ಸಾಧಿಸಿ ವಿದ್ಯೆಯಂ ತನಗೆ ಮಾಡಿ ಸದೋಷನಿವಂ ದಲಸ್ಮದಾ |
ರಾಧನವಿಘ್ನಕಾರಿ ರಿಪುವೆಂದಸಿಖೇಟಕಹಸ್ತೆ ತೂಳ್ದಿದಳ್ ||
ಚೋದಿತತತ್ವ ನಿನ್ನ ಮಱಿಯಂ ಪುಗೆ ನಿನ್ನಯ ರೂಪು ವಿಶ್ವವಿ |
ದ್ಯಾಧರಭೂಮಿಗೋಚರ ಕಿರೀಟ ಶಿಖಾಮಣಿಚುಂಬಿತಕ್ರಮಾ || || ೬ ||

**ವ||** ಆನುಂ ಮದೀಯಪುರದೊಳಿರ್ದೆನ್ನ ಮಗಳಂ ನೋಡಲವಳೋಕಿನೀವಿದ್ಯೆಯನಟ್ಟಿದೊಡದು ನೋಡಿ ಬಂದೀವ್ಯತಿಕರಮನೆನಗೆ ಪೇೞ್ವುದುಂ ಬೆನ್ನನೆ ಬಂದೆನೆಂಬುದಂ ಪ್ರಯುಕ್ತಾವಧಿಬೋಧಂ ಚಕ್ರವರ್ತಿಯುಂ ಮುಗುಳ್ನಗೆ ನಕ್ಕು:—

ಮ|| ಭವವಾರ್ಧಿಪ್ರತಿಮಗ್ನಜೀವನಿವಹಂ ಪ್ರೇಮಾನುಬಂಧಂ ಮನೋ |
ಭವರಾಗಾಶಯಮಂ ನಿಮಿರ್ವ ಭವಸಂತಾನಂಗಳೊಳ್ ಕೂರ್ಪ ಕೂ ||
ಡುವ ತಟ್ಟಿರ್ಪ ಬಯಕ್ಕೆಯಂ ಬಯಸುಗುಂ ನಿಷ್ಕಾಮರೇಗೆಯ್ದುಮೊ |
ಲ್ದವರೇನಿತ್ತೊಡಮೊಲ್ಲರಿಂತು ವಿಪರೀತಂ ದೇಹಿಮೋಹೋದಯಂ || ೭ ||

**ವ||** ಎಂಬುದುಂ:—

ಕಂ|| ಅವಧಿಜ್ಞಾನಾಸ್ತಿತ್ವಮ |
ನವಧಾರಿಸಿ ಸಕಲ ಚಕ್ರವರ್ತಿಯ ಸಚಿವ ||
ಪ್ರವರಂ ಬೆಸಗೊಳೆ ಖೇಚರ |
ಭವಮಾಲೆಯನೋಳಿಯಿಂ ಜಗತ್ಪತಿ ಪೇೞ್ಗುಂ || ೮ ||

**ವ||** ಈ ಜಂಬೂದ್ವೀಪದೈರಾವತಕ್ಷೇತ್ರದ ಗಾಂಧಾರವಿಷಯದ ವಿಂಧ್ಯಪುರಮನಾಳ್ವ **ವಿಂಧ್ಯ ಸೇನಂಗಂ ಸುಲಕ್ಷಣೆಗಂ ನಳಿನಕೇತು**ವೆಂಬೊಂ ಮಗನಾದೊಂ. ಮತ್ತಾಪುರದೊಳ್ **ಧರ್ಮ ಪ್ರಿಯ**ನೆಂಬೊಂ ಪರದಂಗಂ **ಶ್ರೀದತ್ತೆ**ಗಂ ಪುಟ್ಟಿದ **ದತ್ತ**ನೆಂಬೊಂ ಮಗನಾತನ ಜನಕಂ:—

ಕಂ|| ಪ್ರಿಯಕಾರಿಣಿಯೆಂಬೊಳನ |
ನ್ವಯವೃದ್ಧಿಗೆ ಮದುವೆಮಾಡೆ ವನಕೇಳಿಗೆ ತ ||
ತ್ಪ್ರಿಯೆವೆರಸು ದತ್ತನಿರೆ ಶೋ |
ಭೆಯನೊಳಕೊಂಡುದು ಮನೋಹರೋದ್ಯಾನವನಂ || ೯ ||

**ವ||** ಆ ಮನೋಹರೋದ್ಯಾನಕ್ಕೆ ವಂದು:—

ಕಂ|| ಪ್ರಕಟಿತ ವಿಳಾಸನಧಿರಾ |
ಜಕುಮಾರಂ ನಳಿನಕೇತು ಕಂಡವರಂ ತ ||
ತ್ಸುಕುಮಾರಾಂಗಿಗೆ ಸೋಲ್ತಿಟಿ |
ದುಕೊಂಡನನ್ಯಾಯವೃತ್ತಿಯಿಂ ಕೋಮುಳಿಯಂ || ೧೦ ||
ಪ್ರಿಯಕಾರಿಣಿಯಂ ಕೊಳೆ ತ |
ತ್ಪ್ರಿಯಂಗೆ ದತ್ತಂಗೆ ಜೈನದೀಕ್ಷಾಂಗನೆ ತ ||
ತ್ಪ್ರಿಯೆಯಾದಳ್ ತತ್ವವಿನಿ |
ಶ್ಚಯಮೆ ಮನಂಬುಗೆ ಮುದಂ ಮನಂಬೊಕ್ಕಪುದೇ || ೧೧ ||

**ವ||** ಅಂತು ಪರಿಚ್ಛೇದಿಸಿ ಸುಭದ್ರಸೂರಿಸನ್ನಿಧಾನದೊಳ್ ನಿರ್ಗ್ರಂಥರೂಪಮಂ ತಾಳ್ದಿ ಮುನಿ ಪದಾಭರಣಪರಿಣತನಾಗಿ ನೆಗೞ್ದಾಯುರವಸಾನದೊಳ್ ವಿದ್ಯಾಧರಲೀಲೆಗೆ ನಿದಾನಂಗೆಯ್ದು ಮುಡುಪಿ ಜಂಬೂದ್ವೀಪದ ಪೂರ್ವವಿದೇಹದ ಸಕಲ್ಸವಿಷಯದ ವಿಜಯಾರ್ಧದುತ್ತರಶ್ರೇಣಿಯ ಕಾಂಚನಪುರ ಮೆಂಬ ಪೊಳಲರಸಂ **ಮಹೇಂದ್ರ**ನೆಂಬೊ ನುಭಯಶ್ರೇಣಿಗಳ ನಾಳ್ದೊಂ:—

ಕಂ|| ವಿದ್ಯಾಧರರಾಜಂ ತ |
ದ್ವಿದ್ಯಾಧರಿ ಪವನವೇಗೆ ತತ್ಪ್ರಿಯಸುತ[ನುಂ] ||
ವಿದ್ಯಾಧರ ನದು ಪೋಯ್ತಾ |
ವಿದ್ಯಾಧರರಾಜಸುತೆಯ ಕತೆಯಂ ಕೇಳಿಂ || ೧೨ ||

**ವ||** ಈ ವಿಯಚ್ಚರಿಯುಂ ಪ್ರಿಯಕಾರಿಣಿಯಾದಂದು ನಳಿನಕೇತುವುಂ ತಾನುಂ ಪ್ರಾಸಾದ ದುಪರಿಮಭೂಮಿಯೊಳ್ ಇರ್ದು ದಿಶಾವಲೋಕನಂ ಗೆಯ್ಯುತ್ತಿರೆ ಯೊಂದು ಮಣಿಕಕ್ಕೆ:—

ಕಂ|| ಎರಡುಂ ವೃಷಭಂಗಳ್ ಮು |
ಚ್ಚರದಿಂ ಪೋರ್ದಧಿಕನೂನನಂ ಕೊಲೆ ಕಂಡಾ ||
ನರಪತಿಗೆ ನಳಿನಕೇತುಗೆ |
ದೊರಕೊಂಡುದು ಚಿತ್ತವೃತ್ತಿಯೊಳ್ ನಿರ್ವೇಗಂ || ೧೩ ||

**ವ||** ಪ್ರಿಯಕಾರಿಣಿ ಯೆನ್ನಾಣ್ಮನುಂ ಬಲ್ಲದನಾದೊಡೆನ್ನುಮನಿಂತೆ ಕೊಂದಿಕ್ಕಿಯುನಿನ್ನು ಮನಿಂತೆ ಕೊಲ್ವನಕ್ಕುಂ, ತಿರ್ಯಗ್ಜಾತಿಗೆಲ್ಲ ಮಿನಿವಿರಿದು ಸ್ತ್ರೀಪ್ರತಿಬದ್ಧಂ ಮುಳಿಸೆಂದೊಡೆ ಮಾನಿಸರ್ ಸಾಮರ್ಥ್ಯಮುಳ್ಳೊಡೆ ಕಿಱಿದಱೊಳ್ ಮಾಣರದೇ ಕಾರಣದಿಂ:—

ಮ|| ಸ್ರ|| ದಯಿತಾಸಂಬಂಧಬಂಧಂ ಭವಪರಿಣತಿ ತನ್ಮೂಲಮಿಾಜೀವಸಂ ನಿ |
ಶ್ಚಯಮೆಂದಾತಂ ತೊಡರ್ಪಂ ಬಿಡಿಸಿ ಕಿಡಿಸಿ ದುರ್ಮೋಹಮಂ ಪೋಗಿ ಧರ್ಮ ||
ಪ್ರಿಯರಂಬಾಚಾರ್ಯರಂ ಬಂದಿಸಿ ಗಳಿತಮದಂ ದೀಕ್ಷೆಗೊಂಡೆಯ್ದಿ ಘಾತಿ |
ಕ್ಷಯಮುಂ ಕೈವಲ್ಯಬೋಧಾಸ್ಪದಮನನಘಮುಂ ಗೆಲ್ದು ನಿರ್ಮೋಹನಾದಂ || ೧೪ ||

**ವ||** ಪ್ರಿಯಕಾರಿಣಿಯು ಮಾತನ ವಿಯೋಗದುಃಖದಿಂ **ಸುಸ್ಥಿತಾ**ಭಿಧಾನಾರ್ಯಿಕಾಸಮಕ್ಷ ದೊಳ್ ದೀಕ್ಷೆಯಂ ಕೆಯ್ಕೊಂಡು ಚಾಂದ್ರಾಯಣಮಂ ನೋಂತು ಮುಡುಪಿ ಬಂದೀ **ಪ್ರಭಂಜನ** ವಿಯಚ್ಚರಂಗೆ ಮಗಳ್ **ಶಾಂತಿಮತಿ**ಯಾದಳ್, ಇನ್ನೀಭವದೊಳ್ ತಪಂಬಟ್ಟು ಮುಕ್ತಾವಳೀ

ತಪಸ್ತಪನತಾಪದಿಂ ಸಮಾಧಿಮರಣದಿಂದೀಶಾನಕಲ್ಪದೊಳ್ **ಕನಕಪ್ರಭನೆಂಬೊಂ** ದೇವನಾಗಿ ಬಂದಿಲ್ಲಿ ಪುಟ್ಟಿ ಮುಕ್ತನಕ್ಕುಮೆಂದು ಚಕ್ರವರ್ತಿ ಪೇೞ್ದುದುಂ ಮೂವರುಮತ್ಯಂತಸಂವೇಗಪರರಾಗಿ ಕ್ಷೇಮಂಕರತೀರ್ಥಕರಪಾದಪಾರ್ಶ್ವದೊಳ್ ಜೈನದೀಕ್ಷಿತರಾದರಿಂತು:—

ಕಂ|| ಆ ನೆಱವಿಗಂ ಮಹಿಪತಿ[ಗ] |
ತಾನಾಗತ ವರ್ತಮಾನ ವಿಷಯಾವಧಿ ವಿ ||
ಜ್ಞಾನಮನವಯವದಿಂ ಮೆಱೆ |
ದಾನಂದಾಮೃತಕರೋದಯಾಚಲನಾದಂ || ೧೫ ||

**ವ||** ಆಗಿ ಸಾಮ್ರಾಜ್ಯಶ್ರೀಯನನುಭವಿಸುತ್ತುಮಿರೆ ವಿಜಯಾರ್ಧಾಂದ್ರೀಂದ್ರದಕ್ಷಿಣಶ್ರೇಣಿಯ ಶಿವಮಂದಿರ ಪುರಮನಾಳ್ವೊಂ **ಮೇರುಮಾಳಿಗಂ** ತದ್ವಲ್ಲಭೆ**ಯಮಿತಮಾಳಿ**ಗಂ ಪುಟ್ಟಿದ **ಕನಕ ಮಾಳಿಯ** ನವರಮ್ಮಂ (ನವ) ಯೌವನಪ್ರಾಪ್ತಿಯಂ ನೋಡಿ:—

**ಚಂ||** ಅಭಿನವಮಾಳತೀಮುಕುಳಮಾಲೆಪೊಲುತ್ತಮ ಸೌರಭೋತ್ತಮ |
ಪ್ರಭೆ ನರಲೋಕದೊಳ್ ಕನಕಮಾಳಿ ಪೆಱಂಗೆಣೆಯಲ್ಲದೀ ಜಗ ||
ತ್ಪ್ರಭುವಿನ ಚಕ್ರವರ್ತಿಯ ನೆಗೞ್ತೆಯಿನಮ್ಮನುಮಂಗಜನ್ಮಸ |
ನ್ನಿಭನು ಮುದಾತ್ತನುಂ ಕನಕಶಾಂತಿ ದಲಾವಿಭುಗೀವುದೀಕೆಯಂ || ೧೬ ||

ವ|| ಎಂದು ನಿಶ್ಚಿತಮನಸ್ಕರಾಗಿ ಬಯಸಿ ಬಂದು ಕೂಸಂ ಕುಡೆ ಕನಕಶಾಂತಿ ಕನಕಮಾಳಿಯಂ ಮದುವೆನಿಂದ ಕೆಲವು ದಿವಸದಿಂ ರಜತಾದ್ರೀಂದ್ರದಕ್ಷಿಣಶ್ರೇಣಿಯ ವೃಷತ್ಕಾಸಾರಪುರಮನಾಳ್ವೊಂ **ಜಯಸೇನಂಗಂ ಜಯೊಂಗ**ನೆಗಂ ಪುಟ್ಟಿದ **ವಸಂತಸೇನೆಯಂ** ಸೋದರಳಿಯಂ **ಹಿಮಚೂಳಂಗೆ ಕುಡಲೆಂದಿರ್ಪು**ದುಂ:—

**ಶಾ||** ಎಂತೆಂತೇೞ್ಗೆಯ ಜವ್ವನಂ ನೆಱೆಗು ಮಂತಂತೊಪ್ಪ ಲಾವಣ್ಯ ಮೆಂ |
ತೆಂತುದ್ದಾನಿಯ ಹಾವಭಾವರಸಮಂತಂತೆಯ್ದೆ ಶೃಂಗಾರ ಮೆಂ ||
ತೆಂತಾಲೋಲವಿಲೋಚನಪ್ರಸರಮಂತಂತಾಗೆ ಸೌಂದರ್ಯಮೋ |
ರಂತಾಕಾಂತೆಗನಂತರಂ ನೆಱೆಯೆ ತಾಯುಂ ತಂದೆಯುಂ ನಿಚ್ಚಲುಂ || ೧೭ ||

**ವ||** ಗುಜಿಗುಜಿಗೊಂಡು |ಪರ್ಯಾಲೋಚಿಸಿ ಮನಂ ಮಗುೞ್ದೀಕೆಗೀತನನುಸಾರಿಯಲ್ಲನೆಳ ಲತಿಕೆಯ ತಣ್ಪಿಂಗೆಳಮಾವೆ ದೊರೆ ಯೆಂಬಂತೆ ಬಸಂತಸೇನೆಗೆ ಚಕ್ರವರ್ತಿಯ **ಕೊಂಡಾಟದಾಮಮ್ಮಂ ಕನಕಶಾಂತಿಯೆ** ತಕ್ಕನೆಂದದೞ್ತಿಯೊಳಾಕನ್ನೆಯಂ ಕನಕಶಾಂತಿಯೊಳ್ ನೆರಪಿದನಂತು **ಕನಕಶಾಂತಿ** ಕುಮಾರನಾ ಯಿರ್ವರರಸಿಯರೊಳಂ ವಿಷಯಸುಖಮನನುಭವಿಸುತ್ತು ಮಿರ್ದೊಂದುದಿವಸಂ ಕ್ರೀಡಾ ನಿಮಿತ್ತಂ ತುಹಿನಮಹೀಧರಕ್ಕೆ ಪೋಗಿ ತದದ್ರೀಂದ್ರೋಪತ್ಯಕಾಶೋಕತರುತಳಶಿಲಾಪಟ್ಟಕದೊಳಿರ್ದ ವಿಪುಳಮತಿ ಮುನೀದ್ರರಂ ಕಂಡೆಱಗಿ ಪೊಡೆವಟ್ಟು ಧರ್ಮಮಂ ಕೇಳ್ದು ಸಂಸಾರ(ಶರೀರ) ಭೋಗ ಶರೀರ ವೈರಾಗ್ಯಭಾವನೆ ಚೇತೋಗತಮಾಗೆ ಕನಕಶಾಂತಿ:—

ಕಂ|| ಮೆಱೆಯದೆ ವಿಭವಮನಱವಂ |
ಮೆಱೆದುಂ ಧೀರತೆಯ ನಪ್ಪುಕೆಯ್ದುಂ ಮತಿ ಕ ||
ಣ್ದೆಱೆದಿರೆ ಜಿನೇಂದ್ರದೀಕ್ಷೆಯ |
ಮಱೆವೊಕ್ಕಂ ಬೇಗಮಾಜವಂಜವಭಯದಿಂ || ೧೮ ||

**ವ||** ಅಂತು ಕನಕಶಾಂತಿ ಪಾಪೋಪಶಾಂತಿಗೆಂದು ತ್ರೈಲೋಕ್ಯೇಶ್ವರರೂಪಮಂ ಧರಿಯಿಸುವುದು ಮಾತನಿರ್ವರರಸಿಯರುಂ ರತ್ನಸಂಚಯಕ್ಕೆ ಬಂದು ರತ್ನತ್ರಯಭೂಷಿತರಾಗಿ **ವಿಮಳಮತಿ**ಮುನಿ ಸನ್ನಿಧಾನದೊಳ್ **ಸುಮತ್ಯರ್ಜಿಕಾ**ನುಗ್ರಹಪರಿಗೃಹೀತ ಪರಮತಪೋವೃತ್ತಿಯಾದರಂತೆ:—

ಕಂ|| ಪ್ರಮದೋತ್ತಮೆಗಾಣ್ಮನ ದೆ |
ಯ್ವಮೆ ದೆಯ್ವಂ ಪತಿಯ ಮತಿಯೆ ಮತಿ ಗಂಡನ ಧ ||
ರ್ಮಮೆ ಧರ್ಮಂ ಭರ್ತೃವ ತ |
ತ್ವಮೆ ತತ್ವಂ ಕುಮತನಿರತೆಯೇಂ ಕುಲವಧುವೇ || ೧೯ ||

**ವ||** ಇತ್ತ ಕನಕಶಾಂತಿ ತಪೋಧನನುಂ ಧ್ಯಾನಾನಲಸಂಧುಕ್ಷ್ಯಮಾಣದಾರುಣದುರಿತಾರಣ್ಯನಾಗಿ ಯೋಗದೊಳಿರೆ ತತ್ತಪೋಗ್ರಹಣಮನಱಿದು ಹೇಮಚೂಳಂ ಮುನ್ನಿನ ಸ್ತ್ರೀಲೋಲತೆಯ ಮುಳಿಸು ಕಾರಣಮಾಗುಪಸರ್ಗಂಗೆಯ್ಯಲ್ ಪ್ರಾರಂಭಿಸುವುದುಂ:—

ಕಂ|| ಉಪಸರ್ಗಮಿದು ವಿಶೇಷಣ |
ದುಪಸರ್ಗಂ ಮತ್ಪ್ರಶಂಸೆ ಗೆನುತುಗ್ರತಪೋ ||
ಧಿಪ[ನುಱಿ]ಸೈರಿಸಿದಂ ಶುಭ |
ವಿಪಾಕಕೃತಶಾಂತಿ ಕನಕಶಾಂತಿಮುನೀಶಂ || ೨೦ ||
ಧರಣೀಂದ್ರಂ ಪದ್ಮಾವತಿ |
ವೆರಸು ವಿಹಾರಿಸುವೊನೆಯ್ದಿ ಕಂಡುಪಸರ್ಗ ||
ಸ್ಥಿರಯೋಗಿಗೆಱಗಿ ಖಚರನ |
ನುರಗಾಕೃತಿಯಿಂದಮುಣಲೊಳಡಸುವ ಪದದೊಳ್ || ೨೧ ||

**ವ|| ಹಿಮಚೂಳಂ** ಕುರುಳ್ಗರಿಯೋಡಿದನಿತ್ತ ಶಾಂತಾಂತರಂಗಂಗೆ ಕನಕಶಾಂತಿಮುನಿ ಮುಖ್ಯಂಗೆ ಪೊಡೆವಟ್ಟು ಧರಣೀಂದ್ರಂ ಪೋಗೆ ತನ್ಮುನೀಂದ್ರಂ ಪರ್ಯಾಪ್ತಯೋಗಂ **ಕೆಯ್ಯನೆತ್ತಿಕೊಂಡು** ಯಥೋಕ್ತವಿಹಾರದಿಂ ಮಾಸೋಪವಾಸದ ಪಾರಣೆಯೊಳ್ ರತ್ನಪುರಮಂ **ಚರಿಗೆವುಗೆ** ತತ್ಪುರಾಧೀಶಂ ದೃಢ(ಧೃತ)ಸೇನಂ ನಿಲಿಸಿ(ನಿಱಿಸಿ) ಭಕ್ತಿಪೂರ್ವಕದಿಂದಮಾಹಾರಂಗುಡೆ **ಕೊಂಡು** ಭಟ್ಟಾರಕನುಮಾತನಂ ಪರಸಿ ಬಿಜಯಂಗೆಯ್ವುದುಮಾತನ ಮನೆಯೊಳ್:—

ಕಂ|| ಪಂಚಾಶ್ಚರ್ಯಂಗಳ್ ಸುರ |
ರಿಂಚರದೊಡನೆ[ಯೆ]ನೆಗಟ್ದು[ದು]ತ್ತಮದಾನಂ ||
ಸಂಚಿತಸುಕೃತಂಗಲ್ಲದ |
ಸಂಚಿತಸುಕೃತಂಗೆ ಬಯಸೆ ಸಮನಿಸಿದಪುದೇ ||೨೨ ||

**ವ||** ಆಮುನಿನಾಥನುಂ ತತ್ಪುರಪೂರ್ವದಿಗ್ಭಾಗದ ಸುರಸಂಪಾತಮೆಂಬುದ್ಯಾನದೊಳಿರುಳ್ ಪ್ರತಿಮಾಯೋಗದೊಳಿರೆ ಬಂದು:—

ಮ|| ಹಿಮಚೂಳಂ ಯಮಕೋಪಲೀಲನುಪಸರ್ಗಂಗೆಯ್ಯೆ ಬಾಹ್ಯಪ್ರಪಂ |
ಚಮನಾತ್ಮಾಶ್ರಿತಮಂ ಬಿಸುಟ್ಟಿರೆ ಜಿನೇಂದ್ರೋಕ್ತಂ ವಿಶುದ್ಧಾಂತರಂ ||
ಗಮನೇಕಾತ್ಮಕಮುರ್ಚಿ ಸುತ್ತಱಿಯೆ ಕರ್ಮಧ್ಯಾನಬಂಧಂ ಕ್ರಮ |
ಕ್ರಮದಿಂದಾದುದು ಕೇವಲಾವಗಮದಿಂ ತ್ರೈಲೋಕ್ಯವಿಕ್ಷೋಭಣಂ ||೨೩ ||

ವ|| ಅಂತು ಕನಕಶಾಂತಿಮುನಿರಾಜಂ ಕೇವಲಬೋಧಪ್ರದ್ಯೋತಕ್ಕಾದಿತ್ಯನಾಗೆ ಚತುರ್ನಿಕಾಯಾಮರಕೋಟಿ ವಂದನಾಭಕ್ತಿಗೆ ವರೆ ಹಿಮಚೂಳಂ ಕಳದೊಳೆತ್ತುಂಗೋಲ್ಲೋದ ರಕ್ತಚೂಳನಂತೆಱಂಕೆವಿಸುಟ್ಟು ಕನಕಶಾಂತಿಮುನೀಂದ್ರಕೇವಳಿಗಳ ಪೂಜಿಅಡಿಗಳೊಳಂ ಮಣಿಮಯಮಕುಟಮಲೆಯೆ ಮೊಟ್ಟಿ ಪೊಡೆವಟ್ಟು ಭವ್ಯತಾಪ್ರತೀತ್ವನಿಶ್ಚಯಮನೀಯೆ ದೀಕ್ಷೆಯಂ ಕೆಯ್ಕೊಂಡು ಯುಕ್ತಾಚರಣದಿನಂತ್ಯದೊಳ್ ಸಮಾಧಿವಡೆದು ಮುಡುಪಿ ಶತಾರಕಲ್ಪದೊಳ್ ಸಾಮಾನಿಕದೇವನಾದೊಂ ಇತ್ತ ಋಷಿನಿವೇದಕಂ ಸುರಸಂಪಾತದೊಳ್ ಕನಕಶಾಂತಿಮುನೀಂದ್ರಂ ಕೇವಲಜ್ಞಾನಭಾನೂದಯಾಚಲನೆಂದು ಬಿನ್ನವಿಸುವುದುಂ ಚಕ್ರವರ್ತಿ:—

ಕಂ|| ಮತ್ಪೌತ್ರನಾದನಖಿಳಜ |
ಗತ್ಪತಿ ಮರದಾವಗೊಂಬು ಪಣ್ತೊಡಮೇನಂ ||
ಮುತ್ಪನ್ನಾನಂದಂ ತ್ರಿಜ |
ಗತ್ಪೂಜ್ಯಂಗಿಱಿದು ಪೀಠದಿಂ ಪೊಡೆವಟ್ಟಂ || ೨೪ ||

ವ|| ಋಷಿನಿವೇದಕಂಗೆ ತುಷ್ಟಿದಾನಂಗೊಟ್ಟು ಭೇರಿಯಂ ಪೊಯ್ಸಿ ಪಲವುತೆಱದರ್ಚನೆಗಳ್ವೆರಸು ವಂದನಾಭಕ್ತಿಗೆ ಪೋಗಿ ಕನಕಶಾಂತಿಕೇವಳಿಗಳ ಪಾದಪಯೋಜಾತಂಗಳ್ಗೆಱಗಿ ಪೊಡೆವಟ್ಟು ತ್ರಿಕರಣಶುದ್ಧಿಯಿಂದಮರ್ಚಿಸಿ ಧರ್ಮಶ್ರವಣಾನಂತರಂ ತ್ರಿಃಪ್ರದಕ್ಷಿಣಂಗೆಯ್ದು:—

ಕಂ|| ಸುತನ ಸುತನಾಗಿಯುಂ ಮ |
ತ್ಸುತಂಗಮೆನಗಂ ಚರಾಚರಕ್ಕಂ ಗುರುವಾ ||
ದತಿಶಯಪುಣ್ಯದ ಬೆಳಸ |
ದ್ವಿತೀಯಮೇಂ ಪೆಂಪೊ ಕನಕಶಾಂತೀಶ್ವರನಾ || ೨೫ ||

ವ|| ಎಂದು ಬಗೆಯುತ್ತುಂ ತನ್ನ ಭೋಗಕಾಂಕ್ಷೆಗೆ ತಾನೆ ಕೊಕ್ಕರಿಸುತ್ತುಂ ಬಂದು ರಾಜಧಾನಿಯಂ ಪೊಕ್ಕಹರ್ನಿಶಮುದುವೆ ನಿರ್ವೇಗಕಾರಣಮಾಗೆ ಸಂಸಾರಕಾರಣಪರಿತ್ಯಾಗನಿಮಿತ್ತಂ:—

ಕಂ|| ನಿಧಿ ದುಸ್ತರಜನ್ಮಾಂಭೋ |
ನಿಧಿ ಕರ್ಮಕ್ಷಯ ವಿರೋಧಮವರೋಧಂ ಶ್ರೀ ||
ವಧು ಕುಲಟಾವಧುವೆಂಬೊಂ |
ದಧಮತೆ ತಳ್ತತ್ತು ಚಕ್ರವರ್ತಿಯ ಬಗೆಯೊಳ್ || ೨೬ ||

ವ|| ಅಂತಸಾರಸಂಸಾರಸ್ವರೂಪಮನಱಿದು ತಱಿಸಂದು ಪಾಪೇಭಕಂಠೀರವನಪ್ಪ ವಜ್ರಾಯುಧಂ ನಿಜಪ್ರಿಯಸುತಂಗೆ ಪಟ್ಟಂಗಟ್ಟಿ ಕ್ಷೇಮಂಕರತೀರ್ಥಕರಪರಮದೇವರ್ ಗುರಗಳಾಗೆ:—

ಕಂ|| ಮಹಿಪತಿಭೋಗಪ್ರಕರಮು |
ನಹಿಪತಿಭೋಗೋಪಮಾನಮೆಂದಱಿದಂತ ||
ರ್ಬಹಿರರ್ಥನಿಚಯಮುಮಂ ತೊಱೆ |
ದಹೀನಜೈನೇಂದ್ರರೂಪಮಂ ಕೆಯ್ಕೊಂಡಂ || ೨೭ ||

ವ|| ಅಂತು ಮೂಸಾಸಿರ್ವರ್ ಮಹೀನಾಥರೊಡನೆ ಜಿನ (ನಾಥ) ರೂಪಮಂ ತಾಳ್ದಿ ತಪಕ್ಕುಪಯೋಗ್ಯಮಪ್ಪ ಕ್ರಿಯಾಕ್ರಮಮೆಲ್ಲಮನಾತ್ಮೀಯಂಮಾಡಿ ಗಣಪೋಷಣಾನಂತರಂ ಏಕವಿಹಾರಿಯಾಗಿ ವಿಹಾರಿಸುತ್ತುಂ ಸಿದ್ಧಾಚಳದ ಮೇಗೆ ಸಂವತ್ಸರಾವಧಿಯಪ್ಪುತ್ಕೃಷ್ಟಪ್ರತಿಮಾಯೋಗದೊಳ್ ತ್ರಿಪೃಷ್ಠನ

**ಕೆಯ್ಯೊಳ್** ಸತ್ತ್ರಶ್ವಗ್ರೀವನ ಮಕ್ಕಳಮಿತತೇಜಂಗಿದಿರ್ಚಿ ಸತ್ತಂಬರಚರರ್ ಭವನವಾಸಿಗಳೊಳ ನಂತವೀರ್ಯನುಂ ಮಹಾಬಲನುಮೆಂಬ ಪೆಸರೊಳಸುರರಾಗಿ ಪುಟ್ಟಿ ಭೌಮವಿಹಾರಾರ್ಥಂ ಪೋಗಿ ವಜ್ರಾಯುಧಮುನೀಂದ್ರನ ಮೇಗೆ ವಿಮಾನಂ ಪಾಱದಿರೆ ವಿಭಂಗಜ್ಞಾನದಿನಱಿದು ಮುನಿದು:—

ಚಂ|| ಇಱಿದು ವಿಮಾನದಿಂ ಪರಮಯೋಗಿಗೆ ಯೋಗನಿಯೋಗಘಾತಮಂ |
ಘಟಿಯಿಸೆ ರಂಭೆಯೆಂಬಳ ತಿಲೋತ್ತಮೆಯೆಂಬಳ ಬರ್ಪುದರ್ಕೆ ತ ||
ಲ್ಲಟಿಸಿ ಭಯಾಕುಳರ್ ಪೆಱಱಿ ದೇವವಿಳಾಸಿನಿಯರ್ ವಿಶೋಧಿ ಪೊಂ |
ಪುಟಿಯೆನೆ ತನ್ಮುನೀಶ್ವರನ ನರ್ಚಿಸಿ ಪೂಜಿಸಿ ಪೋದರನ್ನೆಗಂ || ೨೮ ||

ವ|| ಇತ್ತ ಸಹಸ್ರಾಯುಧಂಗೆ ವಜ್ರಾಯುಧ ಮುನೀಂದ್ರತಪಃಪ್ರಭಾವಮನರಣ್ಯಾನೀಚರರಱಿಪೆ ಹರ್ಷಾಶ್ರುವಿಮಿಶ್ರವಿಲೋಚನಂ ಬಂದು ಬಂದಿಸಿ:—

ಕಂ|| ಸತಿ ವಿಸುಟಳಲೊಳವೆ ಲತಾ |
ಕೃತಿಯಿಂದಡರ್ವಂತೆ ಮೆಯ್ಯನಡರ್ದುವು ಪಲವುಂ ||
ವ್ರತತಿಗಳಪ್ಪಿದವೊಲಿಳಾ |
ಸತಿ ಮೆಯ್ಯಂ ಪುತ್ತು ಪತ್ತಿ ಮೆತ್ತಿದುವೆಸಿತುಂ || ೨೯ ||

ವ|| ತದ್ರೂಪಾದರ್ಶನಮೆ ತನಗೆ ವೈರಾಗ್ಯನಿಮಿತ್ತಮಾಗಿ **ಪ್ರಿತಿಂಕರ**ನೆಂಬ ನಿಜತನೂಜಂಗೆ ರಾಜ್ಯಭಾರಮನಿತ್ತು **ಪಿಹಿತಾಸ್ರವ**ಗುರುಗಳ ಪಾದಪದ್ಮಸಮೀಪದೊಳನೇಕ ರಾಜಸಮಾಜಂಬೆರಸು ಸಹಸ್ರಾಯುಧಂ ಜಿನೇಶ್ವರರೂಪಮಂ ತಾಳ್ದಿ ದುಶ್ಚರತಪಶ್ಚರಣಪರಿಣತನಿಹಿತವಿಹಾರನಾಗಿ ಮುನಿವೃಂದಕ್ಕೆ ಪಡಿಚಂದಮಾಗಿ ನೆಗಱುತ್ತಿರೆ ಮತ್ತಿತ್ತ ಸಿದ್ಧಾದ್ರೀಂದ್ರದೊಳ್:—

ಕಂ|| ಪ್ರಾಯೋಪಗಮನದಿಂ ವ |
ಜ್ರಾಯುಧಮುನಿ ತೊಱೆದು ಮುಡುಪಿ ಬಂದುಪರಿಗ್ರೈ ||
ವೇಯಕಪರಾರ್ಧ್ಯಮಣಿಕಿರ |
ಣಾಯತದೀಪಪ್ರದೀಪಕಬಳಿತತಮದೊಳ್ || ೩೦ ||

ವ|| ಪ್ರೀತಿಂಕರವಿಮಾನದೊಳ್ ಮೂವತ್ತೊಂದು ಸಾಗರೋಪಮಮುಮಮಿತವಿಕ್ರಮಾಭಿಧಾನಮುಮಹಮಿಂದ್ರಪರಮೈಶ್ವರ್ಯಮುಂ ದೊರೆಕೊಳೆ ಸುಖಾತ್ಮನಿರೆ:—

ಕಂ|| ನೆಗಱ್ದೀಷತ್ಪ್ರಾಗ್ಭಾರಾ |
ಖ್ಯಗಿರೀಂದ್ರದ ಶಿರದೊಳಾಸಹಸ್ರಾಯುಧ ಯೋ ||
ಗಿಗಳುಂ ಬಿಸುಟರ್ ಪ್ರಾಯೋ |
ಪಗಮನದಿಂ ತಮ್ಮ ಪೊತ್ತ ತನುವಿನ ಪೊಱೆಯಂ || ೩೧ ||

ವ|| ಅಂತು ಶರೀರಭಾರಮನಿೞಿಪಿ ನೀರೊಳ್ ಮಣ್ಣಪೆಟ್ಟೆಯಂ ಪತ್ತುವಿಟ್ಟ ಕಳಮಕಣಿಶದಂತೂರ್ಧ್ವಗತಿಸ್ವಭಾವನಿರತನಾಗಿ ಸಹಸ್ರಾಯುಧನುಂ ವಜ್ರಾಯುಧನುಂ ಪುಟ್ಟಿದ ವಿಮಾನದೊಳ್ **ಕಾಂತಿಪ್ರಭ**ನೆಂಬೊನಹಮಿಂದ್ರನಾದನಿಂತು:—

ಕಂ|| ಬಱಿವಱಿಯನೆ ಪೋಗದೊಡೆಳೆ |
ಪಱಿಗುಂ ಸುರಕೋಟಿ ನಗುಗು ಮೆಂದಾತನ ಪೊಂ ||
ಪುಱಿ ಪೋದಲಂಪುಣಲ್‌ಬಂ |
ದುಱಿಯೆನೆ ಜೆಂಬೆಸ್ನನಿಂತು ಕೂರ್ತರುವೊಳರೇ || ೩೨ ||

ವ|| ಅಂತು ಸಾರ್ಧ ಪಂಚದಶಮಾಸನಿಶ್ವಾಸನುಮೇಕತ್ರಿಂಶದಂಭೋನಿಧಿಮಿತಜೀವಿತನುಮಾಗಿ ಸಹಾಯೋತ್ತಮನಮಿತವಿಕ್ರಮನುಂ ತಾನುಂ ಅಗಲದಿರೆ ನಿರಂತರಮಮಿತವಿಕ್ರಮದೇವಂ ಭಗವದರ್ಹದ್ದೇವನಪ್ಪ:—

ಉ|| ದೇವರ ದೇವನೊಳ್ ಭವಭವಾಳಿಯೊಳ್ ಬಗೆಯಾಗೆ ತತ್ವಮುಂ |
ಭಾವಿಸಿಯುಂ ತಗುಳ್ದಱಿತು ಸೇವಿಸದೊಯ್ಯನೆ ದೇವಸೌಖ್ಯಮುಂ ||
ಸೇವಿಸಿಯುಂ ಕಷಾಯಮೊಗೆಯುತ್ತಿರೆ ಪೋದ ಪರಾರ್ಥ್ಯವಸ್ತ್ರದಂ |
ತಾವಿಭುಗಾದುದಂದು ವಿಶದಂ ಬಹಿರಂಗಮು ಮಂತರಂಗಮುಂ || ೩೩ ||

ವ|| ಅಂದು ಪೊಱಗಣೊಳಗಣೆರಡುಂ ಲೇಶ್ಯಾಶುದ್ಧಿಯುಂ ತಾಳ್ದಿ ತಟತಟಿಸಿ ಶೀತಳತಳದೊಳಗೆ ಬಳ್ವಳ ಬೆಳೆದು ಪೊಳೆವೆಳನೇಸಱಂ ಸೆಱಗೆಯ್ವ ಮಣಿಕುಟ್ಟಿಮಭೂಮಿಭಾಗದೊಳಮಮಿತವಿಕ್ರಮದೇವನ ದಿವ್ಯಚ್ಛಾಯೆ ಪ್ರತಿಬಿಂಬಿಸೆ ಬಿಸಿಲುಗೊಂಡು ಸೊಂಕಿಱಿವ ಕಣ್ಣಳ್ವಂತುಳ್ಕೆ ಪ್ರೀತಿಂಕರವಿಮಾನದೊಳಿಂತು ಕಲ್ಪೋತ್ತರಾಮರರ್:—

ಚಂ|| ಸಹಜವಿಭೂಷಣಪ್ರತತಿಪಲ್ಲವಮಿಲ್ಲದ ದಿವ್ಯದೇಹ ಸ |
ನ್ನಿಹಿತಪಹಾಸ್ಯಮೆಂಬ ಪೆಸರಿಲ್ಲದೆಯಾಡುವ ಕೋಟಯಿಲ್ಲದು ||
ಸ್ಸಹತರ ಕಾರ್ಯಪರ್ಯವಸಿತಾಂತರ ಮಿಲ್ಲಿಲಿಸಿಲ್ಲ ಚಿಂತೆ ದು |
ರ್ವಹಮಹಮಿಂದ್ರರೇಂ ಸುಖದ ಲೆಪ್ಪವೊ ಪುಣ್ಯದ ಚಿತ್ರಕರ್ಮವೋ || ೩೪ ||

ಕಂ|| ಕೊಳೆ ನೋಡುವ ಕಣ್ಗೆಸಮಂ |
ಗೊಳೆ ದಿವ್ಯಶರೀರಮಂತುಮಲ್ಲದೆಯುಂ ತಾಂ ||
ತೊಳ [ತೊಳತೊಳಗೆ] ನಿಶಾಕರ |
ವಿಳಂಬಿಯಾಯ್ತಮಿತ ವಿಕ್ರಮಪ್ರಭೆ ದಿವದೊಳ್ || ೩೫ ||

ವ|| ಅಂತಪರಿಮಿತವಿಕ್ರಮದೇವಂ ಸುಖೈಕಾಂತವೇದಿಯಪ್ಪುದಱನಱಯಲಾಗದಂತಿಱ:—

ಚಂ|| ಸೊಗಯಿಪ ಜವ್ವನಂ ನೆಱದ ರೂಪು ನಿಸರ್ಗಮನೋಹರಂ ಮುಗ |
ಳ್ನಗೆ ಸವಿಳಾಸ ಮೋದಮೊಡವುಟ್ಟಿದುವಿನ್ನಿವು ನಿಟ್ಟೆಯೆಂಬದಂ ||
ದುಗಮೆರ್ದೆಯುರ್ಚೆ ಮಾಗಿಯ ಪಗಲ್ ತವುವಂತಿರೆ ನೋಡೆ ನೋಡದ |
ನ್ನೆಗ ಮಹಮಿಂದ್ರರಾಯು ತವುತಂದುವು ನಿಂದುವೆ ಕಾಲಸಂಖ್ಯೆಯೊಳ್ || ೩೬ ||

ವ|| ಅನಂತರಂ ನಿಜಜೀವಿತಾವಧಿಯನಱದರ್ಹತ್ತತ್ವನಿಷ್ಠರಾಗಿ:—

ಕಂ|| ಮುಳಿಸಿಲ್ಲದೆ ಮುಳಿಸಿಂಗೆರ್ದೆ |
ಗೊಳೆ ವಿಬುಧರ್ ಧ್ಯಾನನಿಶಿತಖಡ್ಗದಿನಘಸಂ ||
ಕುಳಮೆಯ್ದೆ ಬೆದಱ ನೆಲೆಯಿಂ |
ಪೊಳರ್ದಿಂಬಾಗಿಱದರಿರ್ವರುಂ ಸುರಭಟರುಂ || ೩೭ ||

ಕೊರಗಿದರೆ ಮೆಯ್ಯನಿನಿಸಗಿ |
ದರೆ ಅವರ್ಗಳ್ ದೇವಲೋಕ ಸುಖದೊಳ್ ಮನಮಿ ||
ಟ್ಟರೆ ಮಱುಭವಕ್ಕೆ ಕಣ್ಣಿ |
ಟ್ಟರೆ ಮುಡುಪಿದರಮರರಿರ್ವರುಂ ನಿರಪೇಕ್ಷರ್ || ೩೮ ||

ವ|| ಅಂತಲ್ಲಿಂ ಪರಿಚ್ಯುತರಾಗಿ ಬಂದೀ ಜಂಬೂದ್ವೀಪದ ಪೂರ್ವವಿದೇಹದ ಸೀತಾನದಿಯ ಬಡಗಣ ತಡಿಯ ಪುಷ್ಕಲಾವತೀವಿಷಯದ ಪುಂಡರೀಕಿಣೀಪುರಮನಾಳ್ವೊಂ:—

ಕಂ|| ಅತಿಶಯಪುಣ್ಯಾಂ ಗರ್ಭಾ |
ವತರಣ ಜನ್ಮಾಭಿಷೇಕನುತಕಲ್ಯಾಣ ||
ದ್ವಿತಯಮನೆಯ್ದಿರ್ದ ಜಗ |
ತ್ಪತಿ ಘನರಥನಭಿಮುಖಂ ವಿಮೋಹಾಂತರಥಂ || ೩೯ ||

ವ|| ಆ ಪುಣ್ಯಾಂಕುರಪಾಕಪ್ರರೋಹಾಯಮಾಣನುಮಪ್ಪ:—

ಕಂ|| ಪರಮೇಶ್ವರಂಗೆ ಬಗೆಗೊಂ |
ಡರಸಿಯರವರಿರ್ವರತ್ಯಪೂರ್ವಾಕೃತಿ ಭಾ ||
ಸುರೆಯರ್ ಪಿರಿಯರಸಿ **ಮನೋ** |
**ಹರೆ** ಕಿಱಯಳ್ **ಪ್ರೀತಿಮತಿ** ಪತಿವ್ರತೆ ಧರೆಯೊಳ್ || ೪೦ ||

ಅಪ್ರಮಿತಪುಣ್ಯರಮರರ |
ತಿಪ್ರಿಯರಂದಗಲದಮಿತವಿಕ್ರಮನುಂ ಕಾಂ ||
ತಪ್ರಭನುಂ ಘನರಥ ತೀ |
ರ್ಥಪ್ರಭುಗಂ ತತ್ಪ್ರಿಯಾದ್ವಯಕ್ಕ ಮುದಾತ್ತರ್ || ೪೧ ||

ಕ್ರಮದೆ ಮನೋಹರೆಗಂ ಪ್ರೀ |
ತಿಮತಿಗ ಮಱವೊಡನೆ ಪುಟ್ಟಿ ಪುಟ್ಟಿದರಮರೋ ||
ತ್ತಮರಗ್ರತನೂಭವರಾ |
ಗಿ ಮೇಘರಥ ದೃಢರಥಾಭಿಧಾನಾಸೂನರ್ || ೪೨ ||

ವ|| ಅಂತು ಘನರಥತೀರ್ಥಕರರಾಜ್ಯಕಾಲಕಲ್ಪಭೂರುಹಕ್ಕೆ ಪುಟ್ಟಿ ತಂದೆಯ ಪರಮೌದಾರಿಕ ಶರೀರ ಬಾಹುಯುಗಳದಂತೆ ಜವ್ವನಂ ನೆಱದಿರೆ ಪಿರಿಯ ಮಗನಂ:—

ಚಂ|| ಘನರಥನಂದು **ಮೇಘರಥನಂ** ಪ್ರಿಯಮಿತ್ರೆಯೊಳಂ ಮನೋಹರಾ |
ವನಿತೆಯೊಳಂ ವಿವಾಹವಿಧಿಯಿಂದೊಡಗೂಡಿ ಸುರೇಶ್ವರಂ ವಿಲೋ ||
ಕನದಿನಹೀಶ್ವರೇ ವಿಭವವರ್ಣನೆಯಿಂದೆ ಧನೇಶ್ವರಂ ವಿನೂ |
ತನ ಧನದಾನದಿಂ ನೆರೆದರೇಂ ಸಲೆ ಮೇಘರಥಂ ಸಪುಣ್ಯನೋ || ೪೩ ||

ವ|| ಅಲ್ಲಿಂ ಬಱಯಂ:—

ಕಂ|| ಸುಮತಿಗತಿ ಸುಮತಿ ಪುನರು |
ಕ್ತಮೆನ್ನದರೆ ಸುಮತಿಯೆನಿಪ ದೃಢರಥನುಮನಾ ||
ಸುಮತಿಯೊಡನೆರಪಿದಂ ಗುರು |
ಸುಮತಿಯು ಮತಿ ದೃಢರಥಂಗ ಮಿರ್ಪುಡಿಸುವಿನಂ || ೪೪ ||

**ವ||** ಅಂತು ಪಿರಿಯಮಗಂಗೆ ಪ್ರಿಯಮಿತ್ರೆಯುಂ ಕಿಱಿಯ ಮಗಂಗೆ ಸುಮತಿಯು ಮಗ್ರ ಮಹಿಷೀಪದದೊಳ್ ನಿಲೆ ಮೇಘರಥಕುಮಾರಂ ಬೆರಸೊಂದುದಿವಸಂ ಘನರಥಮಹಾಮಹೀಪಾಲ ನೊಡ್ಡೋಲಗಮಂ ಪೊಱಮಟ್ಟೊಂದು ರಥ್ಯಾಶೋಭಾವಬದ್ಧವಂದನಮಾಲಾಲಂಕೃತ ಪ್ರದೇಶದೊಳ್:

ಕಂ|| ಕಿಡಿಗುಟ್ಟಿದ ತೆಱದಿಂ ಕಡು |
ಗಡಿಯಾಗಿರೆ ಪೋರ್ಪುವೆರಡು ಕೋೞಿಗಳಂ ಕಂ ||
ಡೆಡೆಯಿಂ ಭವಮಂ ಭೂಪತಿ |
ನಡೆ ನೋಡಿ ತದೀಯ ಕೋಪಹೇತುವನಱಿದುಂ || ೪೫ ||

**ವ||** ಅಂತು ತನ್ನ ಪೆರ್ಮಗಂ ಮೇಘರಥನವಧಿಜ್ಞಾನಮನಾಸನ್ನವರ್ತಿಗಳಱಿಯಲೆಂದಾ ತಾಮ್ರಚೂಳಂಗಳನಿಂದು ನೀಡುಂ ಪೋರ್ವ ಮುಳಿಸುಮನೆನಿತುಪೊೞ್ತು ಪೋರ್ದುಂ ಸರಗುವಾರ್ದು ವಿಶ್ರಮಿಸದ ಜಿತಶ್ರಮತೆಯುಮಂ ಬೆಸಗೊಳೆ ವಿನಯವಿನಮಿತೋತ್ತಮಾಂಗಂ ಮೇಘರಥನಿಂತೆಂದು ಪೇೞಲ್ ತಗುಳ್ದಂ:—

ಕಂ|| ಈ ಜಂಬೂದ್ವೀಪಮಹಿ |
ಭ್ರಾಜಿತ ಭರತಕ್ಕೆ ರತ್ನಪುರಮಾಸ್ಯಂ ತ ||
ದ್ರಾಜಂ **ವಿಜಯುಂಧರ**ನಧಿ |
ರಾಜಮನೋನಳಿನನಿಳಯೆ **ವಸುಮತಿ**ಯೆಂಬಳ್ || ೪೬ ||

**ವ||** ಆ ಪೊೞಲೊಳ್ ಕಾಷ್ಠಭಾರಂಗಳಂ ತಂದು ಮಾಱಿ ಬಾೞ್ವ ದಾನ್ಯನುಂ ಭದ್ರನು ಮೆಂಬೊರಿರ್ವರ್ ಕುಡಿಯರರೊರ್ಮೆ ನಡೆವ ಭಂಡಿಗಳ್ ಶ್ರೀನದೀತೀರದಿಟ್ಟೆಡೆಯೊಳೊಂದೊಂದಂ ಸೋಂಕಿ ಮುಱಿಯೆ ಮುನಿದಿರ್ವರು ಮೊಂದೋರ್ವರ ನಿಱಿದು ಸತ್ತು ವಿಂಧ್ಯಾಟವೀನಿಕಟದ ಜಂಬೂನದಮೆಂಬ ನದಿಯ ತಡಿಯೊಳ್ ಮದಾಂಧಗಂಧಸಿಂಧುರಂಗಳಾಗಿ:—

ಕಂ|| ಕರಿಣಿಯ ಕಾರಣದಿಂ ಮದ |
ಕರಿಗಳ್ ವೈಭಾವದಿಂದೆ ತಮ್ಮೊಳಗತ್ಯಾ ||
ಸುರಮಾಗೆ ಪೋರ್ದು ಸತ್ತು |
ತ್ತರ ಕೌಸಲವಿಷಯಮಾದಯೋಧ್ಯಾಪುರದೊಳ್ || ೪೭ ||

**ವ|| ಶತ್ರುಂಜಯು**ಮಹೀಪಾಲಗೋಮಂಡಳಿಗಂ **ನಂದಿಮಿತ್ರನ ಗೋಮಂಡಳದೊಳೊರ್ಮೆ** ಪೋೞಿಗಳಾಗಿ ರಾಜಮಂದಿರದ ಸಿಂಹಬಾರದೊಳ್ ಪೊಣರ್ದು :—

ಕಂ|| ಮಿಳಿಯಿಕ್ಕಿ ತೆಗೆಯೆಯುಂ ಕರ |
ಮೊಳಸೋರದೆ ಖಂಡಖಂಡಮಾಗಿಱಿದು ಕುಳಾ ||
ಚಳಮು ಕುಲಾಚಳದೊಳಸುಂ |
ಗೊಳೆ ಪೋರ್ವಪೊಲಣ್ಮೆ ಪೋರ್ದು **ಕೊಂದೊಂದೊಂದಂ** || ೪೮ ||

ಆಪುರದೊಳ್ ತಗರಾಗಿ ಮ |
ಹೀಪಾಳನ ಮುಂದೆ ಪೋರ್ದು ಸತ್ತಲ್ಲಿಂ ಬಂ ||
ದೀಪೊಟಲೊಳ್ **ಕೋೞಿ**ಗಳಾ |
ಗೀಪೋಪ್ಪಿ ವಿದಿತವೇದ್ಯ ವಿದ್ಯಾತಿಶಯಾ || ೪೯ ||

**ವ||** ಇನ್ನಿವಱ ಪೋರ್ದು ಜವಂಗಿಡದೆ ಸಪ್ಪುಕವಾದಂದಮುಮಂ **ಕೇಳ್**ಜಂಬೂದ್ವೀಪದ ಭರತಕ್ಷೇತ್ರದ ವಿಜಯಾರ್ಧಪರ್ವತದ ದಕ್ಷಿಣಶ್ರೇಣಿಯ ಹಿರಣ್ಯಪುರಮನಾಳ್ವ **ಗರುಡವೇಗಂ**ಗಂ ತದೀಯಪ್ರೀತಿಭೂಮಿ **ಪ್ರೀತಿಷೇಣೆ**ಗಂ ಮಕ್ಕಳಿಂ**ದ್ರತಿಲಕ**ನುಂ **ನಭಸ್ತಿಲಕ**ನುಮೆಂಬಿರ್ವರೊರ್ಮೆ:-

ಮ|| ಸುರವತ್ಸುಂದರಕಂದರೋದರದವಳನ್ಮಂದಾರಭೂಜ**ಕ್ಕೆ** ಮಂ |
ದರಶೈಲ**ಕ್ಕೆ** ಜಿನೇಂದ್ರಪೂಜೆಗೆ ಜಿತಾತ್ಮರ್ ಪೋಗಿ ಕಂಡಲ್ಲಿ **ಸಾ** ||
**ಗರಚಂದ್ರಾ**ಖ್ಯಮುನೀಂದ್ರರಂ ವಿನಯದಿಂದಂ ಬಂದಿಸಿರ್ದಂಬರೇ |
ಚರಪುತ್ರರ್ ಬೆಸಗೊಂಡರಾತ್ಮಭವಮಂ ಧರ್ಮಶ್ರವಾನಂತರಂ || ೫೦ ||

**ವ||** ಬೆಸಗೊಂಡೊಡವರ್ ಬೆಸಸಿದರ್, ಧಾತಕೀಷಂಡದ ಮೂಡಣಮಂದರೈರಾವತದ ಪೃಥಿವೀತಿಲಕ ಪುರಮನಾಳ್ವ**ಅಭಯಘೋಷಂಗಂ** ತನ್ಮನೋಹರಲತಾಕೃತಿ**ಕನಕಲತೆ**ಗಂ ಮಕ್ಕಳ್ **ಜಯಂತ**ನುಂ **ವಿಜಯ**ನುಮೆಂಬರಾಗೆ ಮತ್ತಮಾವಿಷಯದ ಸುಭೌಮನಗರಮನಾಳ್ವೊಂ **ಶಂಖ**ಂಗಂ ತತ್ಸುಂದರಿ **ಚಂದ್ರಮತಿಗಂ** ಮಗಳ್ **ಪೃಥ್ವೀಷೇಣೆ** ಯೆಂಬಳನಭಯಘೋಷಂಗೆ ಕುಡುವುದುಮಸಿಲತೆಗೆ ಬೆಳ್ಳಿ ಪೃಥಿವಿಯಂ ಮಚ್ಚದುದಂ ಪೃಥ್ವೀಷೇಣೆಯುಂ ಮುಚ್ಚಿ ವಿಷಯಸುಖಮನನುಭಸೆ ಕನಕಲತೆಯು ಮಾಕೆಗಮರಸಂಗಂ ಕ್ಷಣಮಾತ್ರವಿದ್ವೇಷಕಾರಿಯಪ್ಪ ಪುಷ್ಪಮಾಲೆಯಂ ಮಂತ್ರವಿದರುಪದೇಶದಿಂ ಮದ್ಯರಸನಿವೇದನವ್ಯಾಜದಿಂ ಪರಿಚಾರಿಕೆಯರ ಕೆಯ್ಯೊಳಟ್ಟುವುದುಂ ಮರವಟ್ಟದಂ ನೋಡಿ ನೋಂಕಿರ್ದು:—

ಕಂ|| ವಲ್ಲಭೆಯ ವಚನಮಂ ಮನ |
ವಲ್ಲದ ಮನದೊಳ್ ತದೀಯ ಸಂಗಮುಮಂ ಮೆ ||
ಯ್ಯಲ್ಲದ ಮೆಯ್ಯೊಳ್ ಸೈರಿಸೆ |
ಮೆಲ್ಲನೆ ಮೆಯ್ದ್ದೆಗೆದು ಬೇವುದರಸಿಯು ಮಾಗಳ್ || ೫೧ ||

**ವ||** ವನಸೌರಭಭರವಿಭಗ್ನದಳವಿಳಸಿತಮಲ್ಲಿಕಾಮಾಲಾಲಿಸಕ್ತ**ಕಾಂಚನಚಂಚರೀಕಾಯಮಾನಂ** ಗಳಾದರಸನ ಕಣ್ಣಱಿದು ತನ್ನ ಮನೆಗೆ ಪೃಥ್ವೀಷೇಣೆ ಪೋದೊಡಂ ಮಱುದೆವಸಂ ತಿಳಿಸಲಾಕೆಯ **ಮಾಡಕ್ಕೆ** ವಂದಭಯಘೋಷನರೇಂದ್ರಂಗಿಂತೆಂದಳ್:—

ಕಂ|| ಪಿರಿಯರಸಿಯ ಪಟಿವೇಟದ |
ಪರಿವಿಡಿ ಮಗುಟ್ದುಂ ಕೊನರ್ತುದಾಸತಿಯೊಡನಿಂ ||
ನರಪತಿ ನಿನ್ನಂಗಾಲೊಳ್ |
ನರೆ ಬರ್ಪಿನ ಮುತ್ತರೋತ್ತರಂ ಪುದುವಾೞಾ || ೫೨ ||

**ವ||** ಇನ್ನೆನಗೆ ಮೊರೆಯಲ್ಲೆಯೆಂದು ಬಿಡಿಸಿಯುಮುದುಪೆ ಮುಹೂರ್ತಮಾಗೆ **ದತ್ತ**ಮುನಿನಾಥ ಸನ್ನಿಧಾನದೊಳ್ ಸುಲೋಚನಾನಾಮಗಣಿನೀಸಮೀಪದೊಳ್ ಮೋಕ್ಷಲಕ್ಷಣೋಪೇತ ದೀಕ್ಷಾ ಪರಾಯಣೆಯಾದ ಪೃಥಿವೀಷೇಣೆಯೆ ನಿರ್ವೇಗಕ್ಕೆ ಕಾರಣಮಾಗೆ ಜಯಂತವಿಜಯರನಧಿರಾಜ ಯುವರಾಜಪದವಿಯೊಳ್ ನಿಱಿಸೆ ಬೞಿಯಮವರಿರ್ವರುಂ:—

ಕಂ|| ನಿಲಲೊಲ್ಲದೆ ವೈರಾಗ್ಯಮೆ |
ಕುಲವೞಿ ಯೆಂಬಂತೆ ತಂದೆಯಿಂ ಮುನ್ನಂ ನಿ ||
ರ್ಮಲಜಿನದೀಕ್ಷೆಗವರ್ ಪೂ |
ಣ್ದಲಂಘ್ಯದಮಮಂ ಧರಿತ್ರಿಯಿಂ ಪೊಗೞಿಸಿದರ್ || ೫೩ ||

**ವ||** ಬೞಿಯಮಭಯಘೋಷಂ ಮಂಮಂಗೆ ಸಂಜಯಂತಂಗೆ ರಾಜ್ಯಭಾರಮನಿತ್ತು ತಂದೆ ಮಕ್ಕಳ್ ಮೂವರು**ಮನಂತಜಿನ**ರೆಂಬ ಮುನಿಪತಿಗಳ್ ಗುರುಗಳಾಗೆ ತಪಶ್ಚ[ರಣನಿರ] ತರಾದ ರವರೊಳಭಯ ಘೋಷಮುನೀಂದ್ರಂ:—

**ಚಂ||** ಪರಮಪದಾರ್ಥತೀರ್ಥಕರಭಾವನೆಗಳ್ ಪದಿನಾಱನುತ್ತರೋ |
ತ್ತರಗುಣನೆಯ್ದೆ ಭಾವಿಸಿ ದಮಂ ನಿಯಮಂ ಯಮಮೆಂಬಿರ್ಕೆ ನಿ ||
ರ್ದೊರೆಯೆನೆ ಪನ್ನೆರಟ್ಟಿಪದೊಳುತ್ತಮನಾರ್ತು ಸಮಾಧಿವೆತ್ತು ಬಂ |
ಧುರಸುಖ ನಚ್ಯುತೇಂದ್ರಪದಮಂ ಪಡೆದಂ ಸುರರಾಜಪೂಜ್ಯಮಂ || ೫೪ ||

**ವ||** ಅಂತಮಲಮಪ್ಪಚ್ಯುತ ಕಲ್ಪದೊಳ್:—

ಕಂ|| ಸುರಗುಣಪರಿವೃತ ನಿಪ್ಪ |
ತ್ತೆರಡಂಭೋನಿಧಿ ಸಮಾಯುರವಸಾನದೊಳಾ ||
ಪರಮಂ ಬಂದಿಲ್ಲಿ ಚರಾ |
ಚರಗುರು ಗರ್ಭಾವತರಣಮಂಗಳವಿಧಿಯಿಂ || ೫೫ ||

**ವ||** ಜಂಬೂದ್ವೀಪದ ಪೂರ್ವವಿದೇಹದ ಸೀತಾನದಿಯ ಬಡಗಣತಡಿಯ ಪುಷ್ಕಳಾವತೀ ವಿಷಯದ ಪುಂಡರೀಕಿಣೀಪುರಮನಾಳ್ವ **ಹೇಮರಥ**ಮಹೀಪಾಲಂಗಂ **ಹೇಮಮಾಲಾ**ದೇವಿಗಂ **ಘನ ರಥ**ನರೇಂದ್ರನಾಗಿ ಪುಟ್ಟಿ ಕಲ್ಯಾಣದ್ವಯಮನೆಯ್ದಿ ತತ್ಸ್ವಕೀಯ ರಾಜ್ಯದೊಳ್ ನಿಂದನಾಜಯಂತ ವಿಜಯರ್ಕಳಿರ್ವರುಂ ದುರ್ವಾರತಪೋಭಾರನಿರ್ವಾಣದಿಂ ತದಚ್ಯುತಕಲ್ಪದೊಳ್ ಸಾಮಾನಿಕ ದೇವರಾಗಿ ಪುಟ್ಟಿ ವಿಜಯಾರ್ಧಪರ್ವತದ ದಕ್ಷಿಣಶ್ರೇಣಿಯ ಹಿರಣ್ಯನಾಭಪುರಮನಾಳ್ವಂ ಗರುಡ ವೇಗಂಗಂ ಪ್ರೀತಿಷೇಣೆಗಂ ಚಂದ್ರತಿಲಕನುಂ ನಭಸ್ತಿಲಕನು ಮೆಂಬೊರಾಗಿ ಪುಟ್ಟಿದಿರೆಂದು ಭಟ್ಟಾರಕರ್ ಬೆಸಸುವುದುಂ ತಮ್ಮ ಮೂಱನೆಯ ಭವದ ಜನ್ಯಜನಕಮೋಹಂ ಕಾರಣಮಾಗಿ ನಿಮ್ಮಡಿಯಂ ಕಾಣಲ್ ಬಂದು ಲೋಕಜ್ಞರುಂ ಸೇವಾವಿಚಕ್ಷಣರುಮಪ್ಪುದಱಿಂದಮಿಾಕುಕ್ಕುಟಯುದ್ಧನಿರೀಕ್ಷಣರಸಕ್ಕೆ

ಭಂಗಂಮಾಡದೆ ವಿದ್ಯಾಸಾಮರ್ಥ್ಯದಿನಿವರ್ಕೆ ಬಲಂಬೊಯ್ತು ತಾಮು ವಿಮಾನೆರವಿಯೊಳದೃಶ್ಯರಾಗಿ ನೋಡುತ್ತುಮಿರ್ದರವಱಿಂದ ವಿಮಾತಾಮ್ರಚೂಳಂಗಳೆನಿತು ಪೋದೊಡಮಿವರ್ಕೆ ಶ್ರಮವಾಗದೆಂದು ಪಾಪೇಭಕಂಠೀರವನಪ್ಪ ಮೇಘರಥಂ ಪೇೞುತ್ತುಮಿರ್ದ:—

ಕಂ|| ಪ್ರಸ್ತಾವದೊಳ್ ಕೃತಾಕೃತಿ |
ವಿಸ್ತಾರರ್ ಘನರಥಂಗೆ ಪೊಡೆವಡೆ ವಿನ[ಮ] ||
ಸ್ಮಸ್ತಕರ ಚಂದ್ರತಿಲಕನ |
ಭಸ್ತಿಲಕರ ಮಕುಟಮೆರಡುಮೆಱಗಿದುವಾಗಳ್ || ೫೬ ||

ವ|| ಅಂತೆಱಗಿದ ವಿದ್ಯಾಧರರಂ ಮೇಘರಥನರೇಂದ್ರಂ ಪರಸಿ ಪೆಱಗನೇಱಿಸಿಕೊಂಡು ಪೋಗಿ ರಾಜಮಂದಿರಮಂ ಪೊಕ್ಕು ದಾನಸನ್ಮಾನಾದಿಗಳಿಂ ಸಂತಸಂಬಡಿಸಿ ತದ್ವಿದ್ಯಾಧರಕುಮಾರರಂ ಪೋಗಲ್ವೇೞ್ದು ಸುಖದಿ ನಿರ್ಪನ್ನೆಗಂ:—

ಕಂ|| ನೆಗೞ್ದ ಪಯೋಂಬುಧಿಗಂ ಗಂ |
ಗೆಗ ಮಮೃತಂ ಪುಟ್ಟುವಂತೆ ಮೇಘರಥಂಗಂ ||
ಮೃಗಲೋಚನೆ ತತ್ಪ್ರಿಯಮಿ |
ತ್ರೆಗಂ ಮಗಂ ನಂದಿವರ್ಧನಂ ಪುಟ್ಟುವುದುಂ || ೫೭ ||

ಮತ್ತಾದೃಢರಥನ ಸುತ |
ತ್ತೋತ್ತಮನಾತನ ಮನೋಜ್ಞೆ ಸುಮತಿಯು ಮಱಿವಂ ||
ಪೊತ್ತುವಪೊಲನ್ವಯಂ ದೊರೆ |
ವೆತ್ತಿರೆ ವರಸೇನನೆಂಬ ಮಗನಂ ಪೆತ್ತಳ್ || ೫೮ ||

ಉ|| ಚಂದನವೃಕ್ಷಮಂ ಪುದಿದ ಕರ್ಪುರವಳ್ಳಿ ವೊಲಾಕುಮಾರರಂ |
ಸುಂದರಿಯರ್ ನಯಂಬೆರಸು ಸೋಂಕಿರೆ ತನ್ನೊಡನಿಂದ್ರ ನಾಜ್ಞೆಯಿಂ ||
ದಂ ದಿವಿಜಾಂಗರಕ್ಷರಿರೆ ಮಾಸರಮಾರದನೆಯ್ದೆ ಬಣ್ಣಿಪರ್ |
ದುಂದುಮೆಗಾಲಮಂ ಘನರಥಾವನಿಪಾಲನ ರಾಜ್ಯಕಾಲಮಂ || ೫೯ ||

ವ|| ಅಂತವರ್ಗೆ ಧರ್ಮಾರ್ಥಕಾಮಂಗಳ್ ಸಲೆ:—

ಉ|| ಆಸಕಳಾಮರೋರಗ ನರಾವನತಂ ಖಳಕರ್ಮಸೈನ್ಯ ಸಂ|
ತ್ರಾಸಿ ಮನೋರಥಂ ಘನರಥಂ ಘನಘಾತಿವಿಘಾತ ನಾತ್ಮಮು ||
ಗ್ರಾಸಿ ಸಮಾನಬೋಧಿ ಪದದೊಳ್ ನಿಲಲೆಂದಪವರ್ಗಮಾರ್ಗದ |
ಗ್ರೇಸರನಾಗಲೆಂದು ಬಗೆದಾತ್ಮಗತಂ ಬೆಳಗಪ್ಪ ಜಾವದೊಳ್ || ೬೦ ||

ವ|| ಪರಿನಿಷ್ಕ್ರಮಣ ಕಲ್ಯಾಣಮನನಾಗಿ ನಿಶ್ಚಯಿಸಲೊಡಂ ಲೋಕಾಂತಿಕದೇವರ್ ಬಂದೆಱಗಿ

ಕಂ|| ಪ್ರತಿಬೋಧಿಸರೆಂಬುದು ಬೋ |
ಧಿತ ಬುದ್ಧರ ನಭವ ನೀಂ ಸ್ವಯಂಬುದ್ಧನೆ ಆರ್ ||
ಪ್ರತಿಬೋಧಿಸುವರ್ ನಿನ್ನಂ |
ಗತಸೂಕ್ಷ್ಮಾಂತರಿತದೂರವಸ್ತುನಿಧಾನಾ || ೬೧ ||

ವ|| ಎಂದು ಭಗವದ್ವೈರಾಗ್ಯಾನುಮೋದನಾಮಾತ್ರಂ ಕೃತಾರ್ಥಾಧಿಕಾರರಾಗಿ ಪೋದರಿತ್ತ ಘನರಥಂ ನೇಸಱ್ ಮೂಡೆ:—

ಕಂ|| ಅಭಿಷೇಕಪೂರ್ವಕಂ ಭೂ |
ತಭವಿಷ್ಯದ್ವರ್ತಮಾನ ಜಗತೀ ತಳಮಂ ||
ಪ್ರಭು ಮೇಘರಥಂಗಿತ್ತಂ |
ವಿಭೂತಿವೆರಸಖಿಳ ರಾಜ್ಯಮಂ ದಯೆಯಿಂದಂ || ೬೨ ||

ವ|| ತದನಂತರಂ ದಿವಿಜೇಂದ್ರಾನೀತ ಸುದರ್ಶನಾಭಿಧಾನಶಿಬಿಕಾರೂಢನಪ್ಪುದುಂ:—

ಕಂ|| ಅತಿವಿನಯದಿಂದ ಮವನೀ |
ಪತಿಗಳ್ ಮುಂ ಬೞಿಕೆ ಕಲ್ಪವಾಸಿಗರತ್ಯಾ ||
ನತರುಯ್ದರಾಗ[ಳಾಕುಸು |
ಮಿತವರ] ನಂದನವನಕ್ಕೆ ಪೊತ್ತುತ್ಸವದಿಂ || ೬೩ ||

ವ|| ಅಲ್ಲ ದೇಂದ್ರರಿೞಿಪೆ ಘನರಥ (ಭೂ) ನಾಥಂ:—

ಕಂ|| ಆವನದಶೋಕತರುನುತ |
ಪಾವನಸಿಕತಿಳತಳಪ್ರದೇಶಪವಿತ್ರ ||
ಗ್ರಾವದೊಳಂತರ್ಮುಖಚಿಂ |
ತಾವಿಷ್ಕೃತತತ್ವ ನುಲ್ಲಸ ತ್ಪರ್ಯಂಕಂ || ೬೪ ||

ವ|| ವಸ್ತ್ರಾಭರಣಂಗಳಂ ಕಳೆದು "ನಮಸ್ಸಿದ್ಧೇಭ್ಯ" ಎಂದು ಪಂಚಮುಷ್ಟಿಯಿಂದಂ:—

ಕಂ|| ಅಪವರ್ಗಪ್ರಿಯೆಯುಂ ವಿ |
ಷ್ಟಪಲಕ್ಷ್ಮಿಯ ಮೋಹದಿಂದ ಮೆಯ್ದುವುದೞಿದಂ ||
ದಪಗತದುರಿತಂ ತನ್ಮೋ |
ಹಪಾಶಮುಂ ಪಱಿದ ತೆಱದೆ ತಲೆಯುಂ ಪಱಿದಂ || ೬೫ ||

ವ|| ಅಂತಭವನ ಕೇಶೋತ್ಪಾಟಿತಕೋಮಳಾಳಿಮಾಳಾಳಂಕೃತಂಗಳನಮರೇಂದ್ರರ್ ಮಣಿಪಡಿಗಂಗಳೊಳಾಂತು ಕೊಂಡು:—

ಕಂ|| ಕ್ಷೀರಾಂಬುಧಿಲಹರೀ ವಿ |
ಸ್ತಾರಾಂತರ ಶೈವಳಾಳಿಯೊಳ್ ಮಳವಿಾಕ ||
ರ್ಮಾರಾತಿ ಜಿನಂಗಿಂದೀ |
ಪಾರಾವಾರದೊಳಪಾರದೊಳ್ ನಲಸಿದುದೋ || ೬೬ ||

ಎನಿಪುತ್ಪ್ರೇಕ್ಷೆಗೆ ನೆಲಸಿ |
ರ್ದನೆಗಂ ಪಂಚಮಸಮುದ್ರದೊಳ್ ಕೂಡೆ ಮುನೀಂ ||
ದ್ರನನಭಿವಂದಿಸಿ ಬಲಗೊಂ |
ಡು ನಾಕಪತಿಗಳ್ ದಿವಕ್ಕೆ ತಳರ್ವುದು ಮಾಗಳ್ || ೬೭ ||

**ವ||** ಅಂತುರ್ವರಾಸ್ಯತಿಲಕನಪ್ಪ ಮೇಘರಥನುಂ ದೃಢರಥಾದಿಗಳ್ವೆರಸು ತನ್ಮುನೀಂದ್ರ ಪಾದಂಗಳ್ಗೆಱಗಿ ಬಂದು ಪುಂಡರೀಕಿಣಿಯಂ ಪೊಕ್ಕರಸುಗೆಯ್ಯುತ್ತಿರೆ, ಮತ್ತತ್ತ ಘನರಥನಾಥಂಗೆ:—

ಕಂ|| ಪುಟ್ಟಿ ಮನಃಪರ್ಯಯ ಮೊಡ |
ವುಟ್ಟಿಯು ಮಮಳಲ್ತು ತನ್ನ ಮಳಮಂ ಕಿಡಿಸಲ್ ||
ಪುಟ್ಟಿದುದೆನೆ ಶುಭದಿನದೊಳ್ |
ಪುಟ್ಟಿದುದಖಿಳಾವಬೋಧಿ ಕೇವಳಬೋಧಂ || ೬೮ ||

**ವ||** ತದನಂತರಂ:—

ಕಂ|| ಧಾತ್ರಿಪಫಣಿಪರ್ ಖೇಚರ |
ಪತ್ರಿದಶಪರೆಯ್ದೆ ವಿಶ್ವಕರ್ಮಂ ಬರೆದಂ ||
ಚಿತ್ರಪಟಮಂ ವಲೆನೆ ಭುವ |
ನ ತ್ರಿತಯಂ ಕಾಣಲಾದುದಭವನ ಸಭೆಯೊಳ್ || ೬೯ ||

**ವ||** ಜೈನಶಾಸನಚೂಡಾಮಣಿಯಪ್ಪ ಮೇಘರಥಧರಾಧೀಶ್ವರನುಂ ವಂದನಾಭಕ್ತಿಗೆ ಪೋಗಿ ಭವಭಯಹರಣಪ್ರದಾಯಮಾನ ವಿನೇಯಜನೈಕಶರಣಮಂ ಸಮವಸರಣಮಂ ಪೊಕ್ಕು ಪ್ರಥಮ ದ್ವಿತೀಯತೃತೀಯಪೀಠಂಗಳುಮನನುಕ್ರಮದಿನರ್ಚಿಸಿಗಂಧಕುಟೀಮಧ್ಯಾಧ್ಯಾಸಿತಸಿಂಹಾಸನಾಸೀನಂ ದ್ವಾದಶಗಣಸರಸ್ಸರೋಜವಿದಳನಶೋಭಾಪ್ರಭಾವಪ್ರಸವಪಾರೀಣದಿವ್ಯವಚನ ಮರೀಚಿಮಾಲಿರೋಚಿರ್ನಿಚಯತ್ರಿಜಗಚ್ಚೂಡಾಮಣಿಯಂ ಕರಣತ್ರಯಶುದ್ಧಿಯಿಂದೆಱಗಿ ಪೊಡೆವಟ್ಟನಿತಾನುಂ ಸ್ತುತಿಗಳಿಂ ಸ್ತುತಿಯಿಸಿ ಬಂದು ಗಣಧರದೇವರ ಗುರುಭಕ್ತಿಪೂರ್ವಕಂ ತನಗೆಡೆಮಾಡಿದ ಕೋಷ್ಠಾಸನದೊಳ್ ಕುಳ್ಳಿರ್ದರ್:—

ಕಂ|| ಜಿನವಚನರಸಾಯನಮಂ |
ಜನಾಧಿಪಂ ಶ್ರೋತ್ರಪಾತ್ರದೊಳ್ ತೀವಿ ಚಿರಂ ||
ವಿನಮಿತಮಕುಟಂ ಬಂದಿಸಿ |
ಜಿನೇಂದ್ರಗಣಧರರನೆಸೆದನುಕ್ರಮದಿಂದಂ || ೭೦ ||

**ವ||** ಸಮವಸರಣದಿಂದಂ ಪೊಱಮಟ್ಟು ಬಂದರಮನೆಯಂ ಪೊಕ್ಕು ರಾಜಲೀಲಾವಿಲಾಸ ವಿನೋದಂ ನಾನಾನೂನವಿಭವಸಂಭವಸುಖಾನುಭವನಿರತಂ ಸೌಜನ್ಯಕಂದಾಂಕುರನಪ್ಪ ಮೇಘರಥ ನರೇಂದ್ರನಾಸ್ಥಾನದೊಳೊಡ್ಡೋಲಗಂ ಗೊಟ್ಟಿರೆ:—

ಕಂ|| ಬಂದಮರರಿರ್ವರವನತ |
ರೆಂದರ್ ಭೂಪೇಂದ್ರ ಬೆಸಸು ಬೆಸಸೆಮ್ಮಂ ನೀ ||
ನೆಂದುದನೆ ಬಯಸಿ ತೀರ್ಚಲ್ |
ಬಂದೆವು ಜಾತೋಪಕಾರವಿಕ್ರಿಯಮತಿಯಿಂ || ೭೧ ||

**ವ||** ಘನರಥನರನಾಥನ ಬವಣಿಯೊಳ್ ತಾಮ್ರಚೂಳಂಗಳಾಗಿ ಪೋಗುತ್ತು ಮಾಮಿರ ಭುವನಜನಕಂ ಬೆಸಗೊಳೆ ನೀಂ ಪೇೞೆ ಕೇಳ್ದು ಜಾತಿಸ್ಮರರಮಾಗಿ ಪರಸ್ಪರವೈರಮಂ ಬಿಸುಟ್ಟಾಹಾರ

ಶರೀರಪ್ರತ್ಯಾಖ್ಯಾನಪೂರ್ವಕಂ ಸನ್ಯಸನವಿಧಿಯಿಂದಸುವಂ ವಿಸರ್ಜಿಸಿ ಜಂಬೂದ್ವೀಪದಪರವಿದೇಹದ ಭೂತಾರಣ್ಯದೊಳ್ ವ್ಯಂತರಾಂತಃಪಾತಿಗಳಾಗಿ ಭೂತನಿಕಾಯದೊಳ್ ಕಾಳಮಹಾಕಾಳರೆಂಬಿಂದ್ರ ಪ್ರತೀಂದ್ರರೆಮಾಗಿಪುಟ್ಟಿ ನಿನ್ನ ಪರೋಪಕಾರಮಂ ನೆನೆದು ಬೆಸಕೆಯ್ಯಲ್ ಬಂದೆವೆಂಬುದುಂ ಜಿನಚಂದ್ರದೇವಂ ದರಹಸಿತವದನನಾಗಿ:—

ಕಂ|| ಕರಮೊಳ್ಪಿತವ್ಮ ಬೆಸಕೆ |
ಯ್ವಿರಪ್ಪೊಡೆನಗಟ್ಟಿ ವಂದನಾಭಕ್ತಿಯಿ ನೀ ||
ಮೆರಡುವರೆ ದ್ವೀಪದ ಚೈ |
ತ್ಯರಾಜಿಗೊಯ್ವುದೆ ಬೆಸಂ ಬೆಸಂ ಪೆಱತುಂಟೇ || ೭೨ ||

ಕಂ|| ಎಂಬುದು ಮಭ್ರಮನಿರದೆ ತ |
ಱಂಬುವ ತೆಱದಿಂದಮೆತ್ತಿ ಪೊತ್ತಂಸದೊಳ ||
ಭ್ರಂ ಬರೆಗನೊಗೆಯೆ ನೋಟ |
ಕ್ಕಿಂಬಾದುದು ಮೇಘರಥವಿಯತ್ಪಥಗಮನಂ || ೭೩ ||

ಸಮನಾಗೆ ಮೇಘದೊಳ್ ಕಾ |
ಳಮಹಾಕಾಳರ್ಕಳವರ ಪೆಗಲೇಱಿದ ವಿ ||
ಭ್ರಮದಿಂ ನೋಡುವರ್ಗನ್ವ |
ರ್ಥಮಾದುದಾಮೇಘರಥನ ಪೆಸರಂಬರದೊಳ್ || ೭೪ ||

**ವ||** ಅಂತು ಪೋಗಿ ಬೇಗಮರ್ಧಕ್ಕತಿಯ ದ್ವೀಪದ ಜಿನಮಂದಿರಂಗಳಂ ಬಂದಿಸಿ ಮಗುಟ್ದು ಪುಂಡರೀಕಿಣಿಯಂ ಪೊಕ್ಕು ರಾಜ್ಯಂಗೆಯ್ಯುತ್ತಿರೆ ಮನೋ [ಜ] ರಾಜನಧಿರಾಜಂಗೆ ದಂಡೋಪನತನಾಗಿ ತನ್ನ ಸರ್ವಸ್ವಮುಮನಟ್ಟಿದಂತೆ ಮುಂಚಿ ಬಂದ ವಸಂತೋತ್ಸವದೊಳ್:—

ಚಂ|| ಮದನಧನುರ್ಧರಂಗೆ ದೊಣೆಯಾದ ತಳಿರ್ ಸರಲಾದ ಪೂ ಬಸಂ |
ತದ ಮೊದಲಂಗಜಂಗೆ ದಳಮಾದೆಲೆ ಮುದ್ಗರಮಾದ ಕೆಯ್ ಬಸಂ ||
ತದ ನಡು ಮನ್ಮಥಂಗೆ ನೆಱಮಾದರೆವಣ್ಣಮಳಾದ ಪಣ್ ಬಸಂ |
ತದ ಕಡೆಯಾಗೆ ಸುಗ್ಗಿಯಿ ಮನೋಜನ ಕೆಯ್ಪಿಡಿಯಲ್ತೆ ಮಾಮರಂ || ೭೫ ||

ಕಂ|| ಇಂತಿರೆ ಸೊಗಯಿಸಿ ಬಂದ ಬ|
ಸಂತದೊಳಧಿರಾಜ ನನುಜಸಹಿತಂ ತಾಂ ತ ||
ನ್ನಂತಃಪುರಸಹಿತಂ ಶ್ರೀ |
ಕಾಂತಂ ವನಕೇಳಿ ಲೀಲೆಗುದ್ಯತನಾದಂ || ೭೬ ||

**ವ||** ಆಗಿ ದೇವಾರಣ್ಯಮೆಂಬುದ್ಯಾನಮಂ ಪೊಕ್ಕಕಲಂಕಾಚಾರಸಾರನಪ್ಪ ಮೇಘರಥಂ ವನವಿಹಾರದೊಳಿರೆ ತದೀಯಾಂತಃಪುರಾವರೋಧಜನಂ ಪುಷ್ಪಾಪಚಯಾಸಕ್ತಿಯಿಂ ವನಮಂ ತೊಳಲುತ್ತಂ:—

ಕಂ|| ಆವ ನನೆಗಾವ ಬಿರಿಮುಗು |
ಳ್ಗಾವಲರ್ಗವಚತ್ತರುಂತವೆಲ್ಲಂ ತವೆ ಪು ||
ಷ್ಪಾವಚಯದಿಂ ತಳಿರ್ಗಳ |
ಕಾವಣದೊಳ್ ಕಂಡೆಗೊಳ್ವ ನಂದಿನ ದಿವಸಂ || ೭೭ ||

ವ|| ಅಂತಾಪಾಪೇಭಕಂಠೀರವನಪ್ಪ ಮೇಘರಥನುದ್ಯಾನಕೇಳೀಲೀಲಾಕ್ರಾಂತಂ ವಿಶ್ರಮಿಸಲೆಂದು ಬಂದಲ್ಲಿಯ ಕೃತಕಾಚಳದ ಮೇಗಣ:—

ಕಂ|| ಗಣನಾತೀತಕನನ್ಮಣಿ |
ಗಣಸಂಗತ ತುಂಗ ಶೃಂಗ ದುತ್ಸಂಗದ ತಿಂ ||
ತಿಣಿಯಾಗಿ ಪೆಣೆದ ಲತೆಗಾ |
ವಣಗಳ ನುಣ್ಮಳಲ ಜಗತಿ ಯೆರಡುಂ ಕೆಲದೊಳ್ || ೭೮ ||

ಪರಿವ ಪರಿವೊನಲ ಹಿಮಶೀ |
ಕರಂಗಳೊಳ್ ಪುದಿದ ಮಂದಮರುತಂ ಮಲಯೋ ||
ಚ್ಚರಪವನಂ ಸೊಗಯಿಪ ಚಮ |
ರರುಹಾನಿಲನೊಗೆದ ಬೆಮರ ನಳವಡಿಸುವಿನಂ || ೭೯ ||

ವ|| ಅತಿ ಮನೋಹರತರ ಸೈತಕೋದ್ದೇಶದೊಳರಸಿಯರುಂ ತಾನುಂ ಕುಳ್ಳಿರ್ದನಿಸಾನುಂ ಬೇಗದಿಂ ಕಾಳಮಾಕಾಳರಂ ನೆನೆವುದುಂ:—

ಹರಿಣೀವೃತ್ತಂ || ನೆನೆದಮನದಿಂ ಮುನ್ನಂ ಭೂತಾಮರರ್ ಬರೆ ತೋರ್ಪುದಿ |
ನ್ನೆನಗವಿತತ ಕ್ರೀಡಾಕ್ರೀಡಾವಿನೋದವನೆಂಬುದುಂ ||
ಜನಪನಿದಿರೊಳ್ ಭೂತಂ ಭೂತಾಟವಾಡೆ ಮನೋರಥಂ |
ಘನರಥಸುತಂಗಾಗಳ್ ಮೆಯ್ಯಿಂದದೇಂ ಪೊಱಪೊಣ್ಮಿತೋ || ೮೦ ||

ವ|| ಅಂತುವೊರುವಾಯ್ದುಂ, ಕುಂಬಕಂಬಾಯ್ದು, ಮೇಡಿಸಿಯುಂ, ಜೋಡಿಸಿಯುಂ, ಏಱಿಸಿಯುಂ, ಬಂದಾಡಿಯುಂ, ಮಿಡುಕಾಡಿಯುಂ, ಪಾಱುಗೆಡೆವ ಕಾಳ ಮಹಾಕಾಳರ ಗೆಡೆವೊಕ್ಕಿರೆ—

ಕಂ|| ನೆರವಿಯುಮರಸನು ಮಂತಃ |
ಪುರಮುಂ ಕಳಕಳಿಸಿ ನಕ್ಕು ನೋಡೆ ತದುರ್ವೀ ||
ಧರಮುಂ ಜಗಲಿಯುಮಿರ್ದಂ |
ತಿರೆ ನಡನಡನಡುಗೆ ಮಹಿಪನಱಿದಲ್ಲಿಂದಂ || ೮೧ ||

ಇಱಿಯದೆಯುಂ ಮಲ್ಲಂ ತೆಗೆ |
ಯಱಿಯದೆಯುಂ ಕಾಲೊಳೊತ್ತಿ ಮಾರ್ದನಿವೆರಸಂ ||
ದಱಿಪಿಂ ಕರುಣಾಧ್ವನಿ ಪೊಂ |
ಪುಱಿಯಾದುದು ಗಿರಿಯ ಪಿರಿಯ ತಾಱಲೊಗಳ್ || ೮೨ ||

ವ|| ಅದಂ ಕೇಳ್ದು ಗಗನಚರಿಯೊರ್ವಳ್ ಬಂದರಸಂಗೆಱಗಿ ಪೊಡೆವಟ್ಟೆನಗೆ ಭರ್ತೃಭಿಕ್ಷಮಂ ದೇವರಿಕ್ಕಲೆವೇಱ್ಕುಮೆಂಬುದುಮರಸಂ ಕಾಲನುಡುಗೆ ಯೊಡದುಮೂಡಿ:—

ಕಂ|| ಬೇಗಮುಸಿರ್ ಮುಟ್ಟಿಗೆವರೆ |
ಮೇಗುಸಿರ್ಗೊಂಡೊಮ್ಮೆಗೊಮ್ಮೆಗಗಿಮೊಟ್ಟಿದೆ ಬಂ ||
ದಾಗಳೆಱಗಿರ್ದನಂದು ನ |
ಭೋಗತಿಯೊರ್ವಂ ನೃಪೇಂದ್ರಪದಸರಸಿಜದೊಳ್ || ೮೩ ||

ವ|| ಅಂತೆಱಗಿರ್ದನ ಮೇಲುಮೆನೆ ಕುಳ್ಳಿರ್ದು ಮುಕುಳಿತ ಕರಕಮಳನೆಂದಂ ಇನಿವಿರಿದು ವಿಭೂತಿಯುಂ, ಮಾನಸಮಾಟುಮೆನಗೆ ದೇವರಿಂದಮಾದುದೆಂದಾಗಳ್ ವಿನೀತನಾಗಿಯುಂ, ತಾಗಿ ಭಾಗಿಯುಂ,, ನೋಡಿದೊಡರಸಂ ಕರುಣಿಸಿ ಸಂಭಾಷಿಸಿರೆ ಪ್ರಿಯಮಿತ್ರೆಯುಕಳಂಕಾಚಾರಸಾರನಪ್ಪ ಮೇಘರಥನರೇಂದ್ರಂಗೀತನಾರ್ಗೆನೆಂಬೊಂ ಭದ್ರಾಕಾರನುಂ, ಕಾಂತಿಮಂತನು ಮಭಿರೂಪನುಮಾದ ನೀತಂಗಿನಿತು ವಿಭವಮುಮೆಂತಾದುದು ? ನಿಮ್ಮಡಿಗಂ ಕೈಯ್ಯನೊಡ್ಡಿ ಪುರುಷಭೃಕ್ಷೆಯಂ ಬೇಡಿ ದೀಕೆಯುಮಂ ನಿಸರ್ಗಸ್ನೇಹಿತೆಯಾದ ಕಾರಣಮುಮನಿದನಱಿಯೆ ಬೆಸಸುವುದೆನೆ ಮೇಘನಿನಾದದಿಂ ಮೇಘರಥಾವನೀನಾಥನಿಂತೆಂದು ಪೇಟ್ದಂ:-ಪುಷ್ಕರವರದ್ವೀಪದ ಮೂಡಣಮಂದರದ ಭರತಕ್ಷೇತ್ರದ ಶಂಖಪುರಮನಾಳ್ವ ನನ್ಯದಾರವಿದೂರಂ **ಉದಾರ**ನೆಂಬೊಂ ಆತನ[ಪತ್ನಿ]ಪದ್ಮಸದ್ಮೆ ಪದ್ಮೆಯೆಂಬಳ್ ತದೀಯಾನೇಕಪಮಹಾಮಾತ್ರಂ**ರಾಜಗುಪ್ತ**ನೆಂಬೊನಾತನಧೀತಸಕಳಶಾಸ್ತ್ರನಾಗಿಯುಂ ವಿತ್ತಹೀನಂ ತತ್ಕಳತ್ರಂ ಶಂಖಿಕೆಯೆಂಬೊಳಿಂತವರ್ಗಳ್ ದರಿದ್ರತಾಪಹತರೊಂದುದಿವಸಂ ಶಂಖಾಚಳಕ್ಕೆ ಪೋಗಿ ಭವದೀಯಾಥಿತ್ಯಕಾವಾಸದೊಳಿರ್ದ ಸರ್ವಗುಪ್ತಮುನಿಗಳಂ ಕಂಡು ಬಂದಿಸಿ ಧರ್ಮಮಂ ಕೇಳ್ದು ಸಂಸಾರ ಶರೀರಭೋಗನಿರ್ವೇಗಮಂ ಬೋಧಿಸೆ ಸಮ್ಯಗ್ದರ್ಶನಸಮೇತಂ ಸಕಳಶ್ರಾವಕವ್ರತಂಗಳಂ ಕೆಯ್ಕೊಂಡು ಮನೆಗೆ ವಂದು ದ್ವಾತ್ರಿಂಶದೇಕಕಲ್ಯಾಣಂಗಳಂ ನೋನುತಿರ್ಪನ್ನೆಗಮನಗಾರವೇಳೆಯೊಳ್ ಮಾಸೋಪವಾಸದೊಳಿರ್ದು ಪಾರಣೆಯೊಳ್ ಚರಿಗೆಗೆ ವಂದ **ಧೃತಿಕರಣ**ಮುನೀಂದ್ರರಂ ನಿಱಿಸಿ ಪರಿಣಾಮಶುದ್ಧಿಯಿಂದಮಾಹಾರದಾನಮನಿತ್ತು ಕೆಲವುದಿವಸದಿಂ ತನ್ನ ನಿಸ್ಪತಿ ಕಾರಣಮಾಗೆ ಸಮಾಧಿಗುಪ್ತಮುನೀಂದ್ರಪಾದಪದ್ಮೋಪಕಂಠದೊಳ್ ಪರಮದೀಕ್ಷಾವಿಲಕ್ಷಿತಾಕ್ಷೂಣಪ್ರಮೋದನಾಗಿ ಶಂಖಿಕೆಯುಂ ಸುಶೀಲಾರ್ಯಿಕಾಸಮಕ್ಷದೊಳಾರ್ಯಿಕೆಯಾದಳಾತ್ರಿಗುಪ್ತನಪ್ಪ ರಾಜಗುಪ್ತನೆಂಬಂ:—

ಮ|| ಮುನಿರಾಜಂ ದಿವರಾಜಲಕ್ಷ್ಮಿಗೆ ಮನಂದಂದಳ್ಕದಾಚಾಮ್ಲ ವ |
ರ್ಧನಮಂ ತಪ್ಪದೆ ನೋಂತು ತಪ್ಪ ತನುವಂ ಪ್ರಾಯೋಪವೇಶಕ್ಕೆ ತಂ ||
ದು ನರಸ್ತ್ರೋತ್ರಮಮೂರ್ತಿಪಂಚಮುಕನತ್ಕಲ್ಪಾಗ್ರದೊಳ್ ಪುಟ್ಟಿ ಕಾಂ |
ತಿನಿಧಾನಂ ದಶಸಾಗರೋಪಮ ಸಮುದ್ರಾಯುಷ್ಯಮಂ ತಾಳ್ದಿದಂ || ೮೪ ||

ವ|| ಅಲ್ಲಿಂ ಸೂರ್ಯಪ್ರಭಾಭಿಧಾನನಾಗಿರೆ ಶಂಖಿಕಾರ್ಯೆಯುಂ ಸೌಧರ್ಮಕಲ್ಪದೊಳ್ ಪಂಚ ವಿಂಶ ಪಲ್ಯೋಪಮಾಯುಷ್ಯದಿಂ ಪುಟ್ಟಿ ಸೂರ್ಯಪ್ರಭನುಮಾಯುರವಸಾನದೊಳ್ ಜಂಬೂದ್ವೀಪದ ಪೂರ್ವವಿದೇಹದ ಪುಷ್ಕಳಾವತೀವಿಷಯದ ವಿಜಯಾರ್ಧಪರ್ವತದುತ್ತರಶ್ರೇಣಿಯ ಗಗನವಲ್ಲಭ ಪುರಮ ನಾಳ್ವೊಂ ವಿದ್ಯುತ್ಪ್ರಭಂಗೆ:—

ಕಂ|| ಶ್ರೀಗಂ ಧರಿತ್ರಿಗಂ ವಾ |
ಕ್ಶ್ರೀಗಂ ಸಲೆ ಸವತಿ ಯೆನಿಸಲಾಪುಣ್ಯಸುಧಾ ||
ಭೋಗಿಗೆ ಮಾದೇವಿ ಮನೋ |
ವೇಗೆ ಮನೋನಯನೆ ತನ್ಮದಾಸ್ಪದಮೆನಿಕುಂ || ೮೫ ||

**ವ||** ತನ್ಮಿಥುನಕ್ಕೆ ಹೇಮರಥನೆಂಬೊಂ ಮಗನಾದೊಂ, ಶಂಖಿಕಾಚರದೇವಿಯುಂ ತತ್ಪಲ್ಯೋಪಮಾಯುಷ್ಯವಿರಾಮದೊಳನೇಕಜನ್ಮಾತಿಕ್ರಮಣದಿಂ ಬಂದೀತಂಗೆ ಮನೋವೇಗೆಯಾದಳ್, ಈತನ ತಂದೆ ವಿದ್ಯುತ್ಪ್ರಭನುಂ ರಾಜ್ಯಭಾರಮನೀತಂಗಿತ್ತು ಪರಮತಪೋರಾಜ್ಯದೊಳ್ ನಿಂದನಿಂದೀತನು ಮಾಖೇಚರಿಯುಮಮಿತವಾಹನಭಟ್ಟಾರಕರಂ ಬಂದಿಸಿ ಬರುತ್ತಮೆಮ್ಮ ಮೇಗೆತ್ತಂ ವಿಮಾನಂ ಪಾಱದಿರೆ ಮುನಿದು ಕೃತಕಾದ್ರಿವೆರಸೆತ್ತುತ್ತಿರೆ:—

ಕಂ|| ವಾಮಪದಾಗ್ರದಿ ನೊತ್ತೆ ರ |
ಸಾಮಗ್ನಂ ಖಚರನೊಳಱೆ ಕೇಳ್ದು ತದೀಯ ||
ಪ್ರೇಮದಿನೆನ್ನಂ ಬೇಡಿದ |
ಳೀಮಾನಿನಿ ಭರ್ತೃಭೈಕ್ಷಮಂ ಪ್ರಿಯಮಿತ್ರೇ || ೮೬ ||

**ವ||** ಈತಂಗಂ ಕ್ರಿಯಾವರ್ಧನತಪಃಪ್ರಭಾವದಿಂ ದೇವಲೋಕದೊಳಮಾವಿದ್ಯಾಧರಲೋಕದೊಳಮಮಿತತೇಜೋತಿಶಯಮಾದುದೀತಂಗೀಖೇಚರಿ ಮೂಱನೆಯ ಭವದೊಳ್ ಪೆಂಡತಿಯಪ್ಪುದಱಿಂದಮಾತನ ಮೇಗಿನಿವಿಱದು ಮೋಹಮಾದುದೆಂದು:—

ಕಂ|| ಪರಿವಿಡಿಯಂ ತೊಡರದೆ ಜಿನ |
ಚರಣಂ ಪ್ರಿಯಮಿತ್ರೆಗಂತದಂ ಪೇೞ್ವುದುಮಂ ||
ತಿರೆಯಿರೆ ಪುಟ್ಟಿದುದಾ ಹೇ |
ಮರಥಂಗಂ ಪವನವೇಗೆಗಂ ನಿರ್ವೇಗಂ || ೮೭ ||

**ವ||** ಅಂತು ವೈರಾಗ್ಯಮನಸ್ಕರಾಗಿ ಮೇಘರಥನಂ ಬೀೞ್ಕೊಂಡು ಪೋಗಿ ಘನರಥತೀರ್ಥಕರ ಸಮವಸರಣದೊಳ್ ಹೇಮರಥಂ ಜಾತರೂಪಧರನಾದೊಂ, ಪವನವೇಗೆಯುಂ ಸುಲೋಚನಾರ್ಯಿಕಾ ಕ್ರಮಕಮಳಸಮೀಪದೊಳ್ ತಪೋಧನೆಯಾದಳಿತ್ತ ವಿನೇಯನಿಕಾಯಾಂಬುಜಭಾನುವಪ್ಪ ಮೇಘರಥ ನರಮನೆಯಂ ಪೊಕ್ಕಿರ್ದೊಂದುದಿವಸಂ ಫಾಲ್ಗುಣನಂದೀಶ್ವರದೊಳ್ ಕೃತಮಹಾತ್ರಿರಾತ್ರಾಭಿಷವೋಪವಾಸನಾಗಿ ಜಗತ್ತ್ರಿತಯತಿಲಕನನರ್ಚಿಸಿ ನಂದೀಶ್ವರಂಗೆಯ್ದು ಜಿನಮಂದಿರದ ಮುಂದಣ ಮಂಡಪದೊಳ್ ನಿಂದಿರ್ಪುದು ಮೊಂದು:—

ಕಂ|| ಪಾರಾವತಮಂ ಗಿಡಿಗಂ |
ಭೋರೆಂದೋರಂತೆ ಮುಟ್ಟೆ ಬೆನ್ನಟ್ಟೆ ಧರಾ ||
ಧಾರನೆ ಯೆನ್ನಂ ಕಾವುದ |
ಕಾರಣಮಾಶ್ಯೇನಕೋಪಮುಪಗತಪಾಪಾ || ೮೮ ||

**ವ||** ಎಂದು ಸೌಜನ್ಯಕಂದಾಂಕುರನಪ್ಪ ಮೇಘರಥಧರಾಧೀಶ್ವರನ ಮುಂದೆ ಬಂದು ಬಿೞ್ದ ರ್ದರಾಜಕಪೋತದ ಪೆಱಗನೆ ಬಂದೆಱಗಿ:—

ಕಂ|| ಗಿಡಿಗನದಂ ಕಾಯಲ್ ಕಾ |
ದೊಡೆ ಮೇಘರಥಾವನೀಶ ಮದ್ಭಕ್ಷ್ಯಮಿದಂ ||
ಕುಡದೊಡೆ ಮಿಗೆ ಪಸಿದಾನೀ |
ಗಡೆ ಸಯೆ ಸಾವದ್ಯಮಲ್ತೆ ನಿನಗೆನೆ ನೃಪನುಂ || ೮೯ ||

**ವ||** ಸಕಲಜೀವದಯಾಪರನಪ್ಪುದಱಿನರಸನಂಜದಿರೆಂದು ಗಿಡಿಗನಂ ನೋಡಿ:—

ಮ|| ಪಸಿವಿಂದಂ ನಿನಗಾದ ತೃಷ್ಣೆಯಣಮಲ್ತೀ ಕೋಪ ದುರ್ವನ್ಯಜ |
ನ್ಮಸಮುತ್ಪನ್ನಮದಂತುಟಲ್ತೆ ಖಗ ಜಂಬೂದ್ವೀಪದೊಳ್ ಭಾರತೋ ||
ರ್ವಿ ಸಲೀಲಂ ಸೊಗಯಿಕ್ಕು ಮಲ್ಲಿಯ ಪುರಂ ಕೇಳ್ ಪದ್ಮಿನೀಖೇಡ ಮಿಂ |
ದ್ರಸಮಂ ತನ್ನಗರಾಧಿರಾಜನಧಿಪಂ **ಶ್ರೀವರ್ಮ**ನೆಂಬೊಂ ನೃಪಂ || ೯೦ ||

**ವ||** ಆತನರಸಿ **ಶ್ರೀಮತಿ**ಯೆಂಬೊಳ್, ಮತ್ತಮಾಪೊಟಲೊಳ್ ರಾಜಶ್ರೇಷ್ಠಿ **ಸಾಗರಸೇನಂಗ ಮಮೃತಮತಿ**ಗಂ ಪುಟ್ಟಿದ **ದತ್ತ**ನುಂ **ನಂದಿಷೇಣ**ನುಂ ಎಂಬರ್ ತಂದೆಯ ಪರೋಕ್ಷದೊಳಕ್ಷೂಣ ಕನಕರಾಶಿಯಂ ಬಸನಕ್ಕೆ ತವಿಸಿ ಬಿಯಂ ನಡೆಯದಿರೆ ನಡುವಿರುಳ್ ಕರ್ಪಟಮಂ ಪಱಿದುಟ್ಟು ನಾಗ ಪುರಕ್ಕೆ ಪೋಗಿ ಸೋದರಮಾವಂ **ಭದ್ರಮಿತ್ರ**ನಲ್ಲಿ ಮೊದಲ್ಗೊಂಡು ಸ್ಥಳಯಾತ್ರೆಗೆ ಪೋಗಿ ಸಂಖ್ಯಾ ತೀತಸಾರಧನಮಂ ಪಡೆದು ಬರ್ಪೆಡೆಯೊಳ್ ಶಂಖನದೀತೀರದ ಜಂಬೂದ್ರುಮತಳದೊಳ್ ವಿತ್ತ ನಿಮಿತ್ತದಿ ನೊರ್ವರನೊರ್ವರಿಱಿದು ಸತ್ತರ್ ಅವರೊಳಗೆ ದತ್ತನೀ ಪಾರಾವತಂ, [ನಂದಿಷೇಣಂ ಗಿಡಿಗಂ ನೀನಾದಯ್,ಆ ಬದ್ಧವೈರದಿನಿನಿತುಕಱುಪ್ಪಂ ಕಾಯ್ಪಂ ನಿನಗಾದುದೆಂದರಸಂ ಪೇಳ್ವುದುಂ ದೃಢರಥಂ ಮೇಘರಥಮಹೀಪತಿಯಂ:—

ಕಂ|| ಮಾನಿಸರ ನುಡಿವ ತೆಱದಿಂ |
ಶ್ಯೇನನು ಮರಪೊಱಸಮಿಂತು ಗಳಪಿದಪುದಿದಂ ||
ಶ್ರೀನಾಥ ಬೆಸಸಿ ಮವಧಿ |
ಜ್ಞಾನದಿ ನಱಿದೆಸೆ ನೃಪೇಂದ್ರ ನದುವಂ ಪೇಳ್ಗಂ || ೯೧ ||

**ವ||** ಈ ಜಂಬೂದ್ವೀಪದ ಪೂರ್ವವಿದೇಹದ ಸೀತಾನದಿಯ ತೆಂಕದಡಿಯ ವತ್ಸಕಾವತೀ ವಿಷಯದ ವಿಜಯಾರ್ಧಪರ್ವತದ ದಕ್ಷಿಣಶ್ರೇಣಿಯ ಸುಜಯಂತಪುರವನಾಳ್ವೊಂ **ಸಂಜಯ**ನೆಂಬೊಂ ಖಚರನಾನಪರಾಜಿತನಾದಂದೆನ್ನೊಳೆ ನಿಂದು ಕಾದಿ ಸತ್ತು ಭವಪರಿಣಾಮುಪರಾವರ್ತನದಿಂ ಬಂದು ವಿಂಧ್ಯಾಟವೀಮಧ್ಯದೊಳ್ **ಸೋಮ**ನಾಮಧೇಯತಾಪಸಂಗಂ **ಶ್ರೀದತ್ತೆ**ಗಂ **ಸೋಮಿಲ**ನೆಂಬೊಂ ಮಗನಾಗಿ ತಾಪಸವೃತ್ತಿಯೊಳ್ ನೆಗಟ್ದು ನಿರ್ವೃತಿವಿದೂರನಾಗಿಯುಂ ನಿರ್ವೃತಿನಾಮನದೀತೀರದ ಕಾಶ್ಯಪಾಶ್ರಮದೊಳ್ ಮುಡಿಪೀಶಾನಕಲ್ಪದೊಳ್ **ಸುರೂಪ**ನೆಂಬೊಂ ದೇವನಾಗಿರ್ದೀಶಾನೇಂದ್ರನ ಸಭೆಯೊಳೆಮ್ಮಂ ಬಣ್ಣಿಸೆ ಕಣ್ಣಿ ಕಸಮಂ ಸೈರಿಸದಂತೆ ತಾನೊಂದುಪಚಾರಧರನಾಗಿಯುಮಸ್ಮದ್ಗುಣ ಚ್ಛೇದಕಸಮರ್ಥಕನಾಗಿ ಬಂದೀಗಳೆಮ್ಮ ಗುಣಾಪಹಾರಾರ್ಥಂ ಬಂದೀಶ್ಯೇನಪಾರಾವತಂಗಳೊಳ್ ಪರಕಾಯಪ್ರವೇಶದಿಂ ನುಡಿವುದದುಕಾರಣದಿನೀಪುರುಷ ಭಾಷಾನುವಾದಂಗಳೊಳವೆಂಬುದುಂ:—

ಕಂ|| ಸುರಕಾಯಸ್ಥಿತಿ ಸಮನಿಸು |
ತಿರೆ ಪರಕಾಯಪ್ರವೇಶ ಮೇವುದದೆಂಬಂ ||
ತಿರೆ ಪಕ್ಷಿಶರೀರದಿ ನವ |
ತರಿಸೆ ಸುರಂ ತನಗೆ ನೊಟ್ಗಿ ಪೊಡೆವಡೆ ನೃಪನುಂ || ೯೨ ||

**ವ||** ಸ್ವಾಗತಪುರಸ್ಸರಂ ಸಂಭಾಷಿಸಿ ಬನ್ನಿಮೆಂದೇಱಲಿಕ್ಕಿಸೆ ಕುಳ್ಳಿರ್ದು:—

ಮ|| ಸ್ರ|| ಸಭೆಗೀಶಾನೇಂದ್ರಸೊಂದಂದದಿನಱಿಯನೆನಲ್ ಬಣ್ಣಿಸಲ್ಕಿನ್ನನಾಂ ನಿ ||
ನ್ನಭಿರೂಪಾಕಾರಸತ್ಯವ್ರತ ಗುಣಗಣಶೀಲಂಗಳಂ ಬಣ್ಣಿಪರ್ ಪೋ ||
ವ ಭವಾಯತ್ತಂ ವಿರೋಧಂ ಮನದೊಳೆನಗೆ ನಿಶ್ಶಲ್ಯಮಿನ್ನೆಂದು ನಾಕ |
ಪ್ರಭವಪ್ರೋದ್ಯನ್ಮಾಲೆಯಂ ಭೂಪತಿಯನೊಸೆದೊಱಲ್ದರ್ಚಿಸಿರ್ದಂ ಸುರೇಂದ್ರಂ || ೯೩ |

ವ|| ಇರ್ದನಿಸಾನುಂ ಬೇಗದಿಂ:—

ಕಂ|| ಜನಪತಿಗೆಱಗಿ ಪುನರ್ದ |
ರ್ಶನಮಕ್ಕೆಂದಮರನವನಿಪಾಲನ ಸಭೆ ತ ||
ನ್ನನೆ ನೋಡೆ ಮುಗಿಲ ತೆಗಳಿಗೆ |
ಯ ನೆಗೆದ ಪೊಱಿಗಳೊಳದೃಶ್ಯನಾದಂ ನಭದೊಳ್ || ೯೪ ||

ವ|| ತದನಂತರಂ ಗಿಡಿಗನುಂ ರಾಜಕಪೋತಮುಂ ಪರಿತ್ಯಕ್ತಾಹಾರ ಶರೀರಂಗಳಾಗಿ ಮುಡುಪಿ ಭವನಾಮರಲೋಕದೊಳ್ ಮಹರ್ಧಿಕರವರಾದರರಸನುಂ ನಂದೀಶ್ವರಮಹಿಮೆಯ ಮಹಾತ್ರಿರಾತ್ರದ ಪಾರಣೆಗೆ ವಂದು ಪಾರಣಾವ್ಯಾಪಾರಮನಿನಿಸಾನುಂ ಮಾಣಿಸಿ ದ್ವಾರಾಪೇಕ್ಷೆಗೆಯ್ಯುತ್ತಿರ್ದನಮನಗಾರ ವೇಳೆಯೊಳ್ ಮಾಸೋಪವಾಸಮಂ ನೆಱಪಿ:—

ಕಂ|| ಚರಿಗೆವುಗೆ ಬೋಧಸಿಧಿ ದಮು |
ವರಮುನಿಯುಂ ಭುವನನಾಥ ನಿದಿರ್ಗೊಂಡು ಮನೋ ||
ಹರಪಾತ್ರ[ದಾನಮಂ ಮೇ] |
ಘರಥಂ ಕುಡೆ ನೆಗಟ್ದುವೊಡನೆ ಪಂಚಾಶ್ಚರ್ಯಂ || ೯೫ ||

ವ|| ತದನಂತರಂ ಭಟ್ಟಾರಕರರಸನಂ ಪರಸಿ ಬಿಜಯಂಗೆಯ್ದುರುರ್ವರಾಸ್ಯತಿಲಕನಪ್ಪ ಮೇಘರಥ ನರೇಂದ್ರನುಪ[ವಾ]ಸದ ಮೇಗೆ ದೊರೆಕೊಂಡುತ್ತಮಪಾತ್ರದಾನದ ಸಂತಸದಿಂ ತಣಿ ದುದಂ ಪುನರುಕ್ತಂಮಾಳ್ಪಂತೆ ದಿವ್ಯಾಹಾರಮಂ ಪಾರಿ ಸುಖಮಿರೆ ಮತ್ತೊಂದುಚತುರ್ದಶೀವಾಸರ ರಜನೀಸಮಯದೊಳ್ ಮೇಘರಥಂ ಮನಃಪ್ರೀತಿರಥನಪ್ರತಿರಥನುಪವಾಸನಿರತಂ ಜಿನಮಂದಿರದ ಮುಂದಣ ಮಂದರದಲ್ಲಿ ರಾತ್ರಿ ಪ್ರತಿಮಾಯೋಗದೊಳಿರೆ:—

ಕಂ|| ಸಾ [ಂದ್ರಾ] ತಿವಿತತ ನೀಶಾ |
ನೇಂದ್ರಂ ಪೊಡೆವಡೆ ನೆಲಕ್ಕೆ ದಿವಿಜರ್ ನುತದೇ ||
ವೇಂದ್ರ ಭವನ್ನಮನಕ್ಕೆ ಜಿ |
ನೇಂದ್ರಂ ದೊರೆ ಬೆಸಸದೇಕೆ ನೆಲನೆಱಗಿದಪ್ಪೈ || ೯೬ ||

ವ|| ಎಂಬುದು ಮೀಶಾನೇಂದ್ರಂ:—

ಉ|| ಅಪ್ರತಿಮಂ ನೃಪೇಂದ್ರನುಪವಾಸವಿಧಾನದಿನಿರ್ದನಲ್ತೆ ರಾ |
ತ್ರಿಪ್ರ[ಮಿ]ತಂ [ಮಹಾ]ಜಿನಗೃಹಾಗ್ರದ ಮಂದರದಲ್ಲಿ ಸರ್ವಲೋ ||
ಕಪ್ರಿಯನಪ್ಪ ಮೇಘರಥ [ನಾಮುನಿ]ಗಾನತನಾದೆ ನಿಂ ತ್ರಿಲೋ |
ಕಪ್ರಭುವಪ್ಪನಾತನೆನೆ ಗರ್ವದಿ ನಿರ್ವರಪೂರ್ವರೂಪೆಯುರ್ || ೯೭ ||

ಕಂ|| ಅಮರಿಯರಾತನ ನಿಯಮುಮ |
ನಮೋಘ ನವಯುವದಿ ನಟಿಸುವೆ ಮುಂದಿಟ್ಟತಂದು ||
ತ್ತಮಯೋಗ ಭಂಗಮಂ ಮಾ |
ಡೆ ಮಂದರಾಚಳ ನಿರಾಕುಳಂ ಜಿನಚಂದ್ರಂ || ೯೮ ||

ಅರಜನಿಯಂ ವಿರಜನಿಯಂ |
ಪರಾಜಿತಂ ಮಾಡಿ ಭಾವಿಸುತ್ತಿರ್ದಂ ಪ ||
ನ್ನೆರಡು ಮನುಪ್ರೇಕ್ಷೆಗಳಂ |
ಗಿ[ರಿ] ನೆರೆಯದುವೆನೆ ಪರಲದೇಂ ನೆರೆದಪುದೇ || ೯೯ ||

**ವ||** ಆ ದಿವಿಜವನಿತೆಯರನಿತಾನುಂ ತೆಱದ ಶೃಂಗಾರಚೇಷ್ಟೆಗಳನುಪಯೋಜಿಸಿಯುಮೆಂತು ಮೇಗೆಯ್ದು ಮಾಜಂಗಮಮೇರುವೆನಿಸಿದ ಸೌಜನ್ಯಕಂದಾಂಕುರನಂ ಸಂಚಳಿಸಲಾಱದೆ ಸಿಗ್ಗಿನನು ಕಂಪೆಯಂ ತಱಿ ವಿನಯವಿನಮಿತೋತ್ತಮಾಂಗೆಯರ್ ಬಿಚ್ಚಳೆಯುಂ ಮೆಚ್ಚಿಯುಂ[ಪ್ರವ್ರ]ಜ್ಯಾಶ್ರಮ ಗುರೂರ್ವರಾಸ್ಯತಿಲಕಂ ಯಾಮಿನೀವಿಯೋಗಮಂ ನಿರ್ವರ್ತಿಸಿ ರಾಜಮಂದಿರಕ್ಕೆ ವಂದು ಪಾರಣಾವಿಧಿ ಯೊಳಮೃತಾಹಾರಮನಾರೋಗಿಸಿ:—

ಕಂ|| ಪೊರೆಯದಪೋಲ್ ಕೀರಂ ನೀ |
ರರುಹಂ ಸಪ್ತಾಂಗ ರಾಜ್ಯ ಭರದೊಳ್ ಸಿಲ್ಕೆ ಮೇ ||
ಘರಥಂಗೆ ತಪಂ ಗೆಯ್ವಂ |
ತಿರ ರಾಜ್ಯಂಗೆಯ್ಯೆ ಪೋಯ್ತುಮೇಯಂ ಪ್ರಾಯಂ || ೧೦೦ ||

**ವ||** ಅಂತು ರಾಜ್ಯಂಗೆಯ್ಯುತ್ತಿರ:—

ಕಂ|| ದಯಿತಾಸೌಂದರ್ಯದ ಲೀ |
ಲೆಯ ಕಾಂತೆಯ ಮಾತು ಪುಟ್ಟಿ ಮೇಘರಥಮನಃ ||
ಪ್ರಿಯೆಯಾಗಿರ್ದಾಪ್ರಿಯಮಿ |
ತ್ರೆಯ ರೂಪಂ ಸಭೆಗೆ ಪೊಗಟ್ದನೀಶಾನೇಂದ್ರಂ || ೧೦೧ ||

**ವ||** ಅಂತಿಂದ್ರನ ಪೊಗಟ್ಟೆಯಂ ಕೇಳ್ದಟ್ಟಿಯಿಂದಿರ್ವರ್ ದೇವಿಯರಾಕೃತಿಯ ಪರಾವರ್ತನದಿಂ ಮಾನವಸ್ತ್ರೀರೂಪದಿಂ ಪ್ರಿಯಮಿತ್ರೆಯಂ ನೋಡಲ್ಬಂದರಮನೆಯ ಬಾಗಿಲೊಳ್ ನಿಂದು ದೌವಾರಿಕ ನಿವೇದಿತನಿಜಾಗಮನೆಯರ್ ಪ್ರಿಯಮಿತ್ರೆ ಮಜ್ಜನಂಬುಗುವಿನಮಲ್ಲಿರ್ದು ತದವಸಾನದೊಳಶೇಷ ಭೂಷಣಭೂಷಿತೆಯಂ ಪಡಿಯಱಂ ಕಾಣಿಸೆಯುಂ ಕಂಡೀಶಾನೇಂದ್ರನ ಪೇಟ್ದ ವಿವರವಿಾಕೆಯ ರೂಪಳುಂಬಮಾದೊಡಂ ನಮ್ಮ ಮುನ್ನ ನೋಡಿದಾಲಿಗೀಗಳ್ ಕಿಂಚಿನ್ಮಾತ್ರಂ ಕುಂದಿರ್ದುದೆಂದು ತಮ್ಮೊಳ್ ನುಡಿವರನದೇನೆಂದಱಿಪಿರಂದರಸಿ ಬೆಸಗೊಳೆ ಮಗುಟ್ದು ಮದನೆ ನುಡಿದೊಡೆ ನೀಮೊಂದಂ ಮುನ್ನೇಗಳ್ ಕಂಡಿರೆಂಬುದ ವಿಾಶಾನೇಂದ್ರಂ ಬಣ್ಣಿಸೆ ತಮ್ಮ ಬಂದುದನದೃಶ್ಯರೂಪದಿನಭ್ಯಂಗನ ಕಾಲದೊಳ್ ಕಂಡುದುಮಂ ಸಪ್ರಪಂಚ ಮಱಿಪಿ ರೂಪಂ ಬಣ್ಣಿಸಿ ಪೋಪುದುಮಲ್ಲಿ:—

ಕಂ|| ಮಾನಿಸರೊಳ್ಪಂ ಬಾಱುಮ |
[ದೇನೊ] ಪ್ಪಮದೇ ನಸಾರವಿಸ್ತಾರನುದೇಂ ||
ಮಾನಮುದೇಂ ವಿಪುಳಮುದೇಂ |
ದೀನಮುದೇಂ ಸ್ತೋಕಸುಖಮುದೇನಧ್ರುವಮೋ || ೧೦೨ ||

ವ|| ಎಂದು ದೀನಜನದುರ್ಲಭಬುದ್ಧಿಯಪ್ಪ ಪ್ರಿಯಮಿತ್ರೆ ತನ್ನಂತರಂಗದೊಳ್ ಬಗೆದದುವೆ ಪೊಱ್ಱಾಗೆ ಪೋಗಿ ನಿಜಾಧಿಪತಿಗದೆಲ್ಲಮನಱಿಪುವುದುಮಾ ಮಹಾನುಭಾವಂ:—

ಮ|| ಸ್ರ|| ಮನದೊಳ್ ನಿರ್ವೇದಮಾದಂ ದೊರಕೊಳೆ ಭವಸಂಬಂಧದೊಳ್ ತೊಟ್ಟ ಸಂಭಾ ||
ವನೆ ಚಿತ್ತಂಬೊಕ್ಕು ಹಸ್ತಾಮಳಕದ ತೆಱದಿಂ ತೋಱಿ ಪಾಱಿೞಿ ದುರ್ಭಾ ||
ವನೆ ಲಕ್ಷ್ಮೀವಲ್ಲಭಂ ಪೊಲ್ಲದು ತಡೆದೊಡದಕ್ಕಿನ್ನೆಗಂ ಕೆಮ್ಮಗಿರ್ದಂ |
ದನವದ್ಯೋದ್ಯೋಗನಾಗಳ್ ಪಿಡಿದು ದೃಢರಥಂಗೆಂದನಾ ರಾಜರಾಜಂ || ೧೦೩ ||

ಚಂ|| ಗುಣನಿಧಿ ನಂದಿವರ್ಧನನ ನಾಡುವನಾಳ್ವೆಸಕೆಯ್ಸಿ ವಿಶ್ವಧಾ |
ರಿಣಿಯನವಜ್ಞೆಗೆಯ್ಯದೆನಗಂ ಬೆಸಕೆಯ್ವೊಡೆ ಪಾಸಾಂತ ಬ ||
ಲ್ಕಣಿಯನಘಾರಿಯಂ ತವಿಪಕಾಲಮದಿನ್ನೆನಗೆಂದು ಪುಂಡರೀ |
ಕಿಣಿಗೆಣೆ ಪುಂಡರೀಕಿಣಿ ಭವದ್ಭುಜರಕ್ಷಿತೆಯಕ್ಕೆ ನಿಕ್ಕುವಂ || ೧೦೪ ||

ಕಂ|| ಎನೆ ದೃಢರಥನೆಂದಂ ನಿಮ |
ಗಿನಿತುಂ ಬೆಸಕೆಯ್ಸಿದೀಕುಲಶ್ರೀ ಮತ್ತಂ ||
ತೆನಗೆ ಹಿತಂ ಮಾಱ್ಪಳ ನಿಂ |
ತನಿಷ್ಟಮುಂ ಕೂರ್ಪಂತು ಕೆಯ್ಕೊಳಿಸುಗುಮೋ || ೧೦೫ ||

ವ|| ಎಂಬುದುಮಾತನ ಮನದ ಪರಿಚ್ಛೇದಮನಱಿದು ನಿಜಕುಲನಂದನವರ್ಧನನಿಮಿತ್ತಂ ನಂದಿವರ್ಧನಂಗೆ ವಸುಂಧರಾಭಾರಮನಿತ್ತು ಮೇಘರಥಂ ದೃಢರಥಸಮೇತಮನೇಕರಾಜನಿಕುರುಂಬಬಲಂ ಬೆರಸು ತ್ರೈಲೋಕ್ಯಾದಿರಾಜಂ ಘನರಥತೀರ್ಥಕರನಾತಂಗೆ ಮುಕ್ತಿಕಂಠಿಕಾಹೇಮಕಂಠ ............ ಯುಗದೀಕ್ಷಾಪರಿಗ್ರಹನಾದಂ. ಪ್ರಿಮಮಿತ್ರೆಯುಮನೇಕರಾಜಕುಲಸ್ತ್ರೀಸಮನ್ವಿತೆ ಸುವ್ರತಾರ್ಯಿಕಾಸನ್ನಿಧಾನದೊಳಂ ಗುಣರೂಪ ಸಮನ್ವಿತೆಯಾದಳ್ ಮೇಘರಥಮುನೀಂದ್ರನುಂ ದೃಢರಥಯತೀಂದ್ರಂ ಬೆರಸು ದ್ವಾದಶಾಂಗ ಚತುರ್ದಶಪೂರ್ವಮಂ........ಭೆ........ಕಲ್ತು ತ್ರಿಜಗದ್ಗುರುನಿವಾಸಮನಗಲ್ದೇಕ ವಿಹಾರದೊಳ್ ಮಹಾರಣ್ಯನಿವಿಷ್ಟಂ ಮೊದಲಸಾಕಾರನಿರಾಕಾರ ಭೇದಭಿನ್ನಮಪ್ಪನಶನ ತಪದೊಳಮೆರಡನೆಯ...............ವಸಾನದೊಳ್ ಮೆಱೆವವಮೋದರ್ಯ ತಪದೊಳಂ, ಮೂಱ[ನೆಯ...........ಗ್ರಾಸಪರಿಮಾಣದೊಳ್ ಉಣ್ಬಾವೃತ್ತಿಪರಿಸಂಖ್ಯಾನ ತಪದೊಳಂ ನಾಲ್ಕನೆಯ ಸರ್ವರಸ...................ನಾವ್ಯವಹಾರ ರೂಪರಸಪರಿತ್ಯಾಗ ತಪದೊಳಂ, ಅಯ್ದನೆಯ ಮೃಗಪಶುಸ್ತ್ರೀನಪುಂಸಕವ್ಯಪೇತ ಸ್ಥಾನಾವಾಸಲಕ್ಷಣಮಪ್ಪ [ವಿ] ವಿಕ್ತಾವಾಸ ತಪದೊಳಂ, ನೆಱೆಯೆ ನೆಗಱ್ದಾಱನೆಯ ಕಾಯಕ್ಲೇಶತಪದೊಳ್........ಕಾಲದೊಳಂ ಭಯಂಕರಾಕಾರಮಪ್ಪ ಕಾರಕಾರಿರುಳೊಳ್:—

ಕಂ|| ಪೋಟಲ ಪಾವಡಱೆ [ಸಿ]ಡಿಲ್ |
ಬೀೞೆ ನುರಂ ಮುಱಿಯೆ ಗಾಳಿ ಕೊಳೆ ವಿಟಪಂ ಪಾ ||
ಱೀಱೆ ಚಿರಂ ಮರನೊದಲೊಳ್ |
ಬೀೞಲ್ ನಿಲ್ವಂತೆ ನಿಶ್ಚಲಂ ಮುನಿ ನಿಂದಂ || ೧೦೬ ||

ವ|| ಮತ್ತಂ ಹೇಮಂತ ಶಿಶಿರದೊಳ್—

ಕಂ|| ಅವಿರಳಶಿಶಿರಕಣಂ [ತಲೆ |
ನವಿರೊಳ್] ಪನಿಪುಲ್ಲ ತೆಱನನನುಕರಿಸಿರೆ ಯೋ ||
ಗವಶೀಕೃತಾಂ[ಗ] ಕಂ ಬೆ |
ಳ್ವವಾಸದೊಳ್ ಮೇಘರಥಮುನೀಂದ್ರಂ ನಿಂದಂ || ೧೦೭ ||

ಉ|| ಪೊಂಪುೞಿವೋಯ್ತು ದೀಪ್ತತಪಮೆಂಬಿನಮರ್ಕಕರಂಗಳತ್ತಮಿ |
ತ್ತಂ ಪುದಿದುಷ್ಣರಶ್ಮಿ ಪುರುಷಾಕೃತಿಯಂತಿರೆ ನಿತ್ಯಯೋಗನಿ ||
ಷ್ಕಂಪಮುವಂಗೆ ಶಾಂತಮನುತಾಪಮು ನಾಱಿಸಿ ತಂ[ದುದಂ]ದು ಬ |
ರ್ದೊಂ ಪರೆದಿರ್ದವೋಲ್ ಮುನಿಗೆ ಕಲ್ಲೆಲೆ ಬಲ್ಲೆಲೆಯಂ ನಿದಾಘದೊಳ್ || ೧೦೮ ||

ವ|| ಮತ್ತಮೊಳಗಣಾಱುಂತಪದೊಳಗಂ ಪ್ರಾಯಶ್ಚಿತ್ತ ವಿನಯ ವೈಯಾಪೃತ್ಯ ಸ್ವಾಧ್ಯಾಯ ಧ್ಯಾನಕಾಯೋತ್ಸರ್ಗಂಗಳಂ ನಿಟ್ಟೆವಡಿಸಿ ಮೂಲೋತ್ತರಗುಣಂಗಳನುತ್ತರೋತ್ತರಂ ಪೆರ್ಚಿಸಿ:—

ಕಂ|| ಸಂಶಯ[ಮಣ]ಮಿಲ್ಲದೆ[ತಪ] |
ದಿಂ ಶಮದಿಂ ತತ್ಕ್ಷುಧಾಪಿಪಾಸಾದಿ ದ್ವಾ ||
ವಿಂಶತಿ ವಿಷಮಪರೀಷಹ |
ವಂಶಮನಶ್ರಮದಿನಾಮುನೀಂದ್ರಂ ಗೆಲ್ದಂ || ೧೦೯ ||

ಆದಿವ್ಯತಪೋಧನ ನ |
ಕ್ಷೋದಂ ಧ್ಯಾನಿಸಿದ ನನಿತುಮಂ ಕ್ರಮದಿಂ ಪು |
ಣ್ಯೋದಯ ಗಿರೀಂದ್ರತಟದೊಳ್ |
ದ್ವಾದಶವಿಧ ಭೇದದಿಂದನುಪ್ರೇಕ್ಷೆಗಳಂ || ೧೧೦ ||

ವ|| ಮತ್ತಮುತ್ತಮಕ್ಷಮಾದಿದಶಕುಲಧರ್ಮನಿರ್ಮಿತಶರೀರಮೇಕಶರೀರಮಾದ ರತ್ನತ್ರಯ ಮನೆ ಪೋಲ್ತು:—

ಕಂ|| ಕಸವರಮಂ ಕಸಮುಂ ಪೂ |
ಜಿಸುವನು ಮೇಳಿಸುವನುಂ ಸಮಾನಂ ಪ್ರತಿಭಾ ||
ಷಿಸೆ ಪಂಚಮಹಾವ್ರತ] ಪಂ |
ಚಸಮಿತಿಮಿಳಿತತ್ರಿಗುಪ್ತಿಗುಪ್ತಂ ಮುನಿಪಂ || ೧೧೧ ||

ಜಾತಾಭಿಜಂಗಮಾಗಮ |
ಜಾತಕ್ಷ(ಮ)ವಿತತೆಯಾಯ್ತು ಮುನಿಪತಿಯೆಸೆದಿ ||
ರ್ಪಾತನು ಸಪ್ತರ್ಧಿ ಸಮು |
ಸ್ವೇತಂ ವ್ರತನಿಯಮಯುಕ್ತ್ವಗಸ್ಥೀಭೂತಂ || ೧೧೨ ||

ಚಾರಣಗುಣದಿಂದಂ ಸಂ |
ಸಾರಾರ್ಥಮಪಾರ ಚೈತ್ಯವಂದನೆಗೆಂದಂ ||
ದೋರಂತೆ ಪೋಗಿ ಗಗನವಿ |
ಹಾರದಿನುರ್ವೀವಿಹಾರಮಂ ಮುನಿ ಬಿಸುಟಂ || ೧೧೩ ||

ಆಪರಮಮುಮುಕ್ಷು ದುರಾ |
ರೋಪಗುಣಶ್ರೇಣಿಯಂ ಯಥಾಕ್ರಮಮವ್ಯಾ ||
ಕ್ಷೇಪದಿ ನೇಱಿ ಮುನೀಂದ್ರಕ |
ಳಾಪಕ್ಕೆ ನಿಮಿರ್ಚಿದಂ ಪ್ರತಿಚ್ಛಂದತೆಯಂ || ೧೧೪ ||

**ವ||** ಅಂತುತ್ತರಮುತ್ತರೋತ್ತರವಾಗೆ ಸಮ್ಮೇದತಪಃಪ್ರಾಸಾದಕ್ಕೆ ಕಳಶಮಿಡುವಂತಾ ಮಹಾಮುನೀಂದ್ರಂ:—

ಕಂ|| ಸಮ್ಯಕ್ತ್ವಶುದ್ಧಿ ವಿನಯತೆ |
ಸಮ್ಯಕ್ಛೀಲತೆ ನಿರಂತರಧ್ಯಾಯಮನಃ ||
ಸಮ್ಯಧಿಗಮ್ಯತೆ ಪತಿಗತ |
ಗಮ್ಯಮಜೇಯತ್ವ ಮಮಲಜಿನಪತಿ ಮತದೊಳ್ || ೧೧೫ ||

ಹಿತಸಾಧುಸಮಾಧಿ ವ್ಯಾ |
ಪೃತಿ ಗುರುವಂದಿತ ಜಿನಪ್ರವಚನ ಷಡಾವ ||
ಶ್ಯತೆ ಯೆನಿಸಿ ನೆಗೞ್ದ ವೀಜಿನ |
ಪತಿಶಾಸನ ದೀಪಕತೆ ಶ್ರುತಾಭಿಪ್ರಣಯಂ || ೧೧೬ ||

ಎಂಬ ಪದಿನಾಱುಭಾವನೆ |
ಯಂ ಬಹುವಿಧಮಱಿದಹರ್ನಿಶಂ ಭಾವಿಸೆ ಬೋ ||
ಧಾಂಬುಧಿ ತೀರ್ಥಕರತ್ವಮ |
ನಿಂ ಬರ್ಪ ಭವಕ್ಕೆ ನೆರಪಿದಂ ಮುನಿನಾಥಂ || ೧೧೭ ||

**ವ||** ಅಂತು ತೀರ್ಥಕರಪುಣ್ಯಮಂ ನೆರಪಿಕೊಂಡು:—

ಕಂ|| ಸೊಡರೊಳ್ ಬತ್ತಿಯು ಮೆಣ್ಣೆಯು |
ಮೊಡನಱದವೊಲಾಯುವುಂ ಶರೀರಮುಮ[ಮ]ಳಂ ||
ತೊಡದವೆ ನೋಂತಂ ಮುನಿ ಮು |
ನ್ನೊಡವುಟ್ಟಿದುವೊಡನೆ ತವುವು ದೌಚಿತ್ಯಮೆನಲ್ || ೧೧೮ ||

**ವ||** ಅಂತಾಯತಿತಿಲಕಂ ಘಂತಿಯೊಳ್ ಪ್ರಾಯೋಪಗಮನಂಗೆಯ್ವುದುಂ ಯಥಾಗಮಾರ್ಥ ದ್ರವ್ಯಂಗಳನನುಕ್ರಮದಿಂದಱಿವಾಜ್ಞಾನಿಚಯಮುಮ, ನಪಸಾರಿತ ಸಂಸಾರಿಜೀವಂಗಳ್ ಸಂಸಾರದೊಳ್ ತೊಳಲುತ್ತಿರ್ಪುದೆಂಬಪಾಯವಿಚಯಮುಮಂ, ನಾನಾವಿಧಕರ್ಮವಿಪಾಕವಿಚಯಮುಮು, ನೂರ್ಧ್ವಾಧೋಮಧ್ಯಗತಾಸಮವಸ್ಥಿತಲೋಕಸ್ಥಿತಿಸ್ಮರಣಪರಿಣತಸಂಸ್ಥಾನವಿಚಯಮುಮಂ ಜೇೞೀ ನೇಱಿ ಹೃದ್ಗತಂಮಾಡಿ ಧರ್ಮಧ್ಯಾನಮಯನಾದನಾಮುನಿನಾಥಂಗಂ:—

ಕಂ|| ಅವಬೋಧಂ ವಿಷಯಪರಿ |
ಪ್ಲವಂ(ಮನೋವಚನಕಾಯನಿಯಮಂ ಪಾರಿ ||
ಪ್ಲವ)ಮಿನಿತಿಲ್ಲದೆ ಮೂಱುಂ |
ಭುವನಮ ನೆಱಗಿಸುವ ಸಮತೆ ಸಮನಿಸಿದಪುದೇ || ೧೧೯ ||

ವ|| ಎಂಬಿನಂ ಮೇಘರಥ ಸಂಯಮಿ ನಿಜಪರ ನಿರಪೇಕ್ಷನಾಗಿ:—

ಕಂ|| ಇಂತೊಂದುತಿಂಗಳಂ ತವೆ |
ನೋಂತೊಡಲಂ ಬಡಬಡಪ್ಪುದುಂ ಬಿಸುಟಂ ಕಾ ||
ಲಾಂತರದೊಳೊರ್ವನೊಳೋ |
ರಂತಗಲದೆ ನಿಲ್ವರಾತ್ಮಹಿತ ಯುತಮತಿಗಳ್ || ೧೨೦ ||

ವ|| ಅಂತು ಮುಡುಪಿ ಪಂಚಾಣುತ್ತರಂಗಳ ನಾಭಿಯುಪ್ಪ ಸರ್ವಾರ್ಥಸಿದ್ಧಿಯೊಳ್ ಪುಟ್ಟಿದನಂದು

ಕಂ|| ದ್ವಾದಶಯೋಜನಮಿತಿ ಪರ |
ವಾದಿ[ಯ]ವಾದಕ್ಕೆ ಪೊಱಗು ಮುಕ್ತಿಯ ಸುಖದೊಂ ||
ದಾದಾನಮನುಪಮಾನ ಮ|
ನಾದಿನಿರಸ್ತಾವಸಾನ ಮನಘಸ್ಥಾನಂ || ೧೨೧ ||

ಚಂ|| ಅದರ ಪರಾರ್ಧ್ಯ ನೀಲಮಣಿಕುಟ್ಟಿಮಭೂತಳದರ್ಪಣೈಕಬಿಂ |
ಬದೊಳಹಮಿಂದ್ರದಿವ್ಯತನು ಬಿಂಬಿಸ ರೂಪಿದು ಬಿಂಬಮಿಂತಿದೆಂ ||
ಬುದನಱಯಲ್ಕೆ ಬಾರದದಱುತ್ತಮಭಿತ್ತಿಗಳೊಳ್ಪು ಬೇಱೆ ಭಿ |
ತ್ತಿ ದಲದು ನಾಕಲೋಕಶಿಖರೋಪಮಮಾರದನೆಯ್ದೆ ಬಣ್ಣಿಪರ್ || ೧೨೨ ||

ಕಂ|| ಅಮಿತಗುಣರತ್ನ ಪರಿಲಂ |
ಬಮಾನ ಲಂಬೂಷಭೂಷಿತಂ ಸುರಲೋಕ ||
ದ್ರುಮಫಲಮಿಾಷತ್ಪ್ರಾಗ್ಭಾ |
ರಮೆಂಬ ಮಾಡಕ್ಕೆ ನೆಲೆಯ ಬಾಗಿಲ್ವಾಡಂ || ೧೨೩ ||

ವ|| ಮತ್ತಮಲ್ಲಿ ಪುಟ್ಟಿದ:—

ಕಂ|| ಅಹಮಿಂದ್ರರಧಿಕಭಕ್ತಿಯಿ |
ನಹರ್ನಿಶಂ ತಮ್ಮ ನೆಲೆಗಳಿಂ ತಳರದೆ ಪಾ ||
ಪಹರಂಗೆಱಗುವರನಿಸಿದ |
ಮಹಿಮೆಯ ಪಟಿಗಟಿದ ಪರಮಕೋಟಿಯೊಳಿರ್ಪರ್ || ೧೨೪ ||

ಮೂಱುಂಜಗದಖಿಲಸುಖಂ |
ಬೇಱದು ಬೇಱಾಗಿ ತೂಗೆ ಗೆಲ್ಲಮದಕ್ಕಂ ||
ದೇಱುಬರೆ ರಾಗಮುಂ ಮೆ |
ಯ್ದೋಱರೆ ಸರ್ವಾರ್ಥಸಿದ್ಧಿ ವೆಸರನ್ವರ್ಥಂ || ೧೨೫ ||

ವ|| ಮತ್ತಮಹಮಿಂದ್ರದೇಹಪ್ರಮಾಣಂ:—

ಕಂ|| ತ್ರಿದಶರಭಿಷೇಕದಿಂದೊ |
ಪ್ಪಿದ ಪಳಿಕಿನ ಜೈನಬಿಂಬಮಂ ಪೂಜಿಸಿ ಪೀ ||
ಠದೊಳಿರಿಸಿವಂತೆ ಸೊಗಯಿಸು |
ವುದು ನಿರ್ಮಳಮೊಮ್ಮೊಳಿಂ ಶರೀರಮುದಾರಂ || ೧೨೬ ||

ವ|| ಅಲ್ಲಿ:—

ಮ|| ಮನಮೊಲ್ದಿರ್ಪಹಮಿಂದ್ರರಾಯು ಪೆಱದೇಂ ಮೂವತ್ತುಮೂಱಿಂಬುರಾ |
ಶಿ(ನಿಕಾಶಂ) ಪದಿನಾಱುತಿಂಗಳ ಬಱಿಕ್ಕಂತೊಂದುಪಕ್ಷಕ್ಕೆ ಮೆ ||
ಲ್ಲನೆ ಸುಯ್ವರ್ ನೆನೆವರ್ ಸುಧಾಶನಮನೇಕಾಗ್ರಂ ತ್ರಯಸ್ತ್ರಿಂಶದು |
ಕ್ತಿನಯೋಪೇತಸಹಸ್ರಹಾಯನದಿನಾಕಲ್ಪೋತ್ತರಾವಾಸಿಗಳ್ || ೧೨೭ ||

ಕಂ|| ಒದವುವುದು ನಿಷ್ಟ್ರವೀಚಾ |
ರದಿನವರ್ಗೆ ಮನೋಜಪರಮಸುಖಮಿನ್ನವರ ||
ಭ್ಯುದಯಮನದನಿನ್ನೇವೇ |
ಳ್ವುದೊ ದೇವರ ದೇವರಪ್ಪ ಭವಸಂಭವದಿಂ || ೧೨೮ ||

ವ|| ಅಲ್ಲ ಮೇಘರಥಯತೀಂದ್ರನಹಮಿಂದ್ರನಾದೊಂ, ದೃಢರಥಯತೀಂದ್ರನುಮಾತ್ಮಿಕಾ ಸಂಸಾರಕಾಲದೊಳ್ ಬಱಿಯಂ ಯಮನಿಯಮಮುದೇಕವಿಹಾರದಿನಗ್ರಮುನೀಂದ್ರಚಾರಿತ್ರನಿರ್ವಿಶೇಷ ಶುಭಭಾವನಾಭಾವಿತಾತ್ಮಂ ನಿಜಾಯುರವಸಾನದೊಳ್ ಪ್ರಾಯೋಪಗಮನೋತ್ತಮಮರಣದಿಂ ಪ್ರಾಣ ಪರಿತ್ಯಾಗಂಗೆಯ್ದು ಸರ್ವಾರ್ಥಸಿದ್ಧಿಯೊಳ್:—

ಕಂ|| ಸ್ಫುರಿತರುಚಿರುಚಿ ರನವಪ |
ದ್ಮರಾಗವೈಡೂರ್ಯವಜ್ರಮರಕತಕಿರಣೋ ||
ಚ್ಛುರಣಸ್ತಬಕಿತತನುಸುಮಂ |
ದರಪಿಭ್ರಮನಿಂದ್ರಚಂದ್ರನೆಂಬಹಮಿಂದ್ರಂ || ೧೨೯ ||

ವ|| ಆಗಿ ಪುಟ್ಟುವುದುಮಿಂದ್ರಚಂದ್ರನೊಳ್ ನೆರೆದು ಮಹೇಂದ್ರಾಮರೇಶ್ವರನಭೂತೋಪಮ ದಿವ್ಯಸುಖಮನನುಭವಿಸಿ:—

ಕಂ|| ಒಡವುಟ್ಟಿದ ತಳದಳಿಸುವ |
ತುಡುಗೆಯ ದುಗುಲದ ನಮೇರುದಾಮಕದೊಳ್ ಪ ||
ಚ್ಚುಡಿದುದು ಪರಾರ್ಧ್ಯಕೂಟದ |
ಜೆಡಂಗೊಡಂಬಟ್ಟುದಿರ್ವರಹಮಿಂದ್ರರೂಳಂ || ೧೩೦ ||

ಚಂ|| ಕಱಿದಭವಕ್ಕೆ ಪೇಸುವಡೆವಾಸುರಕರ್ಮದ ತಲ್ಪನರ್ಥಿಸು ||
ತ್ತಱಿವೊಡನಿರ್ದೊಡಂಬಡುವ ಯೋಜಿಪ ಬಾಜಿಪ ತತ್ವಗೋಷ್ಠಿಯೊಂ ||
ದುಱಿಯದೆ ಭಾವಿತಾತ್ಮರಹಮಿಂದ್ರರೊಡಂಬಡೆದಿಚ್ಛೆ ರೂಪಮಂ |
ನೆಱಿಲುಮನೆಯ್ದೆ ಪೋಲ್ತಗಲರಲ್ಲ ಮಹೇಂದ್ರನುಮಿಂದ್ರಚಂದ್ರನುಂ || ೧೩೧ ||

**ವ||** ಮತ್ತಿತ್ತ ಜಂಬೂದ್ವೀಪದ ಭರತಕ್ಷೇತ್ರಕ್ಕೆ:—

ಕಂ|| ಲಲಿತಾನ್ಮತರುಗೆ ಪೊಸಗೊಂ |
ಚಲಂತೆ ಗಗನಕ್ಕೆ ಶಿಶಿರನಂತೆ ಕೊಳಕ್ಕು ||
ಳ್ಪಲರ್ದಬ್ಜದಂತೆ ಕುರುಜಾಂ |
ಗಲವಿಷಯಂ ನಯನವಿಷಯಸುಖಮಂ ಪಡೆಗುಂ || ೧೩೨ ||

ಮ|| ಅದರೂರ್ಗಳೊಳಬ್ಜಮಿಲ್ಲದ ಸರಸ್ಸಂಘಾತಮಿಲ್ಲಾಮ್ರ ಮಿ |
ಲ್ಲದ ಕಾಡಿಲ್ಲಳಿಯಿಲ್ಲದಬ್ಜವನಮಿಲ್ಲುದ್ಯಾನಸಂತಾನಮಿ ||
ಲ್ಲದ ಬಾಗಿಲ್ಲ ಮುನೀಂದ್ರರಿಲ್ಲದಗಮಿಲ್ಲಾತೋದ್ಯದುದ್ಯೋಗಮಿ |
ಲ್ಲದ ಜೈನಾಲಯಮಿಲ್ಲ ನೋಡದರೊಳಂ ಗರ್ಭಸ್ಥಿತರ್ ಪುಟ್ಟಿಯುಂ || ೧೩೩ ||

ಚಂ|| ವನಲತೆಯಾದ ಕಲ್ಪಲತೆ ವನ್ಯಮಹೀರುಹಮಾದ ಕಲ್ಪನಂ |
ದನತರು ದೇವದಾರುಕುಜಮಾದ ನಮೇರುಕುಜಂ ವಿಲಾಸವ ||
ಜ್ಜನಪದಮಾದ ಸಗ್ಗಮವನೀಶ್ವರರಾದ ಸುರೇಶ್ವರರ್ ಚರ ||
ದ್ದ್ವನಗಜಮಾದ ದಿವ್ಯಗಜಮೆಂಬುದನಾನೆಲನುಂಟುಮಾಡುಗುಂ || ೧೩೪ ||

ಮ|| ಹಿಮಮುಂ ಗ್ರೀಷ್ಮಮುಮೆಂಬಿವಾರಿತುಗಳುಂ ಶೀತಕ್ಕಮುಷ್ಣಕ್ಕಮ |
ಗ್ರಿಮಧಾಮಂಗಳಸೌಖ್ಯದಂಗಳದಱಿಂದಂ ತಮ್ಮ ತಮ್ಮಂದಿನಂ ||
ದಮನಾಱುಂ ರಿತು ಪತ್ತುವಿಟ್ಟುವದಱಿಂ ನಿಂದಂತೆ ಕಾರುಂ ಬಸಂ |
ತಮೆ ನಾಡೊಳ್ ವಿಷಮರ್ತುಗಳ್ ಪುಗುಗುಮೇ ಪುಣ್ಯಪ್ರಜಾವಾಸದೊಳ್ || ೧೩೫ ||

ಕಂ|| ಎರಡನೆಯ ಪಾರಿಜಾತದ |
ಮರನೆಂದೆಂಬಪೊಲದಕ್ಕಮೆಣೆಯಿಲ್ಲದಱಿಂ ||
ಕುರುಜಾಂಗಲಮಗ್ಗಳಮು |
ತ್ತರಕುರುಗಂ ದೇವಕುರುಗಮತಿನುತವಿಷಯಂ || ೧೩೬ ||

ನಾಕಸುಖಶೇಷಮಂ ನಾ |
ಕೌಕರ್ ಬಂದದಱೊಳನುಭವಿಪ್ಪುದಱಿಂದೇ ||
ಕಾಕೃತಿ ಕುರುಜಾಂಗಲಮುಂ |
ನಾಕಮುಮದು ಕಿಱುಕುಳಂಗೆ ಬಣ್ಣಿಸಲಱಿದೇ || ೧೩೭ ||

ಆಕುರುಜಾಂಗಲ ವಿಷಯಮ |
ಪೇಕಾಂತೆಗೆ ಪೊಸತೆ ಸಮೆದ ಮುತ್ತಿನ ಮುಡಿ ಧಾ ||
ತ್ರೀಕರ್ಣಪೂರಮವನಿ |
ಸ್ತ್ರೀಕರಲೀಲಾಂಬುಜಂ ಧರಿತ್ರೀತಿಳಕಂ || ೧೩೮ ||

ಧರಣೀಹಾರಂ ಹಸ್ತಿನ |
ಪುರಮಮರಪುರೋಪಹಾಸಿ ಭೂವನಿತೆಯ ಕ ||
ರ್ಪುರದ ಕರಂಡಗೆ ಸೌಖ್ಯದ |
ಪರವಿ ಪೊಸವೇಟದಿರ್ಕೆ ಸಯ್ಪಿನ ತಾಣಂ || ೧೩೯ ||

ಅದಱ ಪೊಱವೊಟಲ ಸಪ್ತ |
ಚ್ಛದಗಂಧದ ಸೊವಡು ಮುಟ್ಟೆ ಮದಕರಿಕುಳಮೋ ||
ವದೆ ಬಳ್ಳಿವಾಯ್ದು ಗರಿ ತು |
ಳ್ಕಿದ ಗಿರಿ ಪರಿವಂತೆ ಪರಿದು ಮುರವಾಯ್ದಿ ಕುಂ || ೧೪೦ ||

**ವ||** ಮತ್ತಮಲ್ಲಿಯೆ:—

ಕಂ|| ಚಾಮೀಕರ ಕಳಶಮೆ ಕುರು |
ಭೂಮಿಗೆ ತಾಂ ನೇಲೆ ಮಾಡಮಂ ಬಳಸಿ ನಭ ||
ಶ್ಯಾಮಂ ನಂದನವನಮಭಿ |
ರಾಮಘನಪ್ರಾವೃಷೇಣ್ಯಪಟಲಮನಿಱಿಕುಂ || ೧೪೧ ||

ಮ|| ನವನಿರ್ಯತ್ಸಹಕಾರವಾರಿ ಮದಮುಂ ತತ್ಪಲ್ಲವಂ ಕರ್ಣಪ |
ಲ್ಲವಮುಂ ಪೂತೆಳಗೊಂಬು ಕೊಂಬನಳಿ ತದ್ಗಂಡಸ್ಥಳೋದ್ದೇಶ ಸಂ ||
ಭವಮುಕ್ತಾಳಿಯನೆಯ್ದೆ ಪೋಲೆ ಬಿಡುತಂದುಗ್ರದ್ವಿಪಂ ಬಂದು ತಾಂ |
ಗುವುದೆಂಬಂದೆಳಮಾವಿನೊಳ್ದ್ವಿಪಮೆ ಗೆತ್ತೀಂ ಸೊರ್ಕು ಸ್ಫೈತಿರ್ಕುಮೋ ||೧೪೨ ||

**ವ||** ಎನಿಪಳವಿಗಗ್ಗಳಮಾಗಿ ಸೊಗಯಿಸುವ ಪುರಬಹಿರ್ಭಾಗದೊಳ್:—

ಶಾ|| ಏಳಾಲುಂಗಲವಂಗಭೂರ್ಜಲವಲೀನಾರಂಗಜಂಬೀರಹಿಂ |
ತಾಳಾನೋಕಹಸಂಕುಳಂ ಬಳಸಿ ತೞ್ತಿತ್ತಂ ಪುರೇಶಂಗೆ ದಿ ||
ಕ್ಪಾಳರ್ ಪಚ್ಚೆಯ ಕೋಂಟೆಯಂ ಸಮೆದರಂಬಾಳೋಕಮಂ ಮಾಡುವಿಂ |
ದೋಳಾರೂಢವಿಟೀವಿಟಾನನಗಣಾಂದೋಳಂ ತದಾರಾಮದೊಳ್ || ೧೪೩ ||

**ವ||** ಅದಱಂದೊಳಗೆ ಪೂರ್ವಾಪರದಿಗ್ಭಾಗದ ಸಮಭೂತಳಪ್ರದೇಶದೊಳಪೂರ್ವಶಿಲ್ಪಿಕೃತಮಪ್ಪ ಲೆಕ್ಕವಲಗೆಯಂ ಕಾಡಿಗೆಯೊಳ್ ಪುಟ್ಟಿಸಿ ಪೊಟ್ಟಿಗವಡಿಕೆಯೊಳೊರಸಿದಂತೆ ಮಿಂಚಿ ಸೆಳೆದು ನೋಡಿದ ದಿಟ್ಟಿ ತಿಮಳ್ವನ್ನೆಗಂ ನುಣ್ಪಂ ತಿಣ್ಪುಮನೊಳಕೊಂಡು ಪುರೋಭಯಪಕ್ಷದೊಳ್:—

ಚಂ|| ಹಯದ ಮನಕ್ಕಮೇಱದನ ಬಿನ್ನಣಕಂ ದೊರೆಯಾಗಿಯುಂ ನೆಗ |
ೞ್ತಿಯ ಪಣಿದಕ್ಕೆ ಮಿಕ್ಕೆಸೆವ ತಕ್ಕಿನ ಬೀರರನಟ್ಟಿ ಕೊಳ್ವಳು ||
ರ್ಕೆಯ ತವಿಗೋಲಮಿಲ್ಲದಿರೆಯುಂ ವಿಭುಗೞ್ತಿಯ ಸೆಂಡನಾಡಲಾ |
ನೆಯ ಪರಿನೋಡಲೆಂದೊಲೆದು ಮಾಡಿದ ವಾಹಳಿಗಳ್ ಮನೋಹರಂ || ೧೪೪ ||

ಪೃಥ್ವೀವೃತ್ತಂ|| ಅವಂ ಪೊಱಗುಮಾಡಿ ರುಗ್ಮಿಕುಳಶೈಳಮಂ ಗೆಲ್ದು ರು ||
ಗ್ಮಿವಿಸ್ಫುರಿತಮಪ್ಪ ಕೋಂಟೆ ಸಲೆ ಗೊಂಟುಗೊಂಡಿರ್ದುದೆಂ ||
ಬ ವರ್ಣನೆಗೆ ತಕ್ಕುದೇ ದಲೆ[ನಲಂ]ತದಂ ಸುತ್ತಿ ದು |
ಗ್ಧವಾರ್ಧಿಗೆಣೆಯಾದಗೞ್ ಸೊಗಯಿಸಿರ್ಕುಮಚ್ಛಾಂಬುವಿಂ || ೧೪೫ ||

ಕಂ|| ಆಕೋಟೆಯೊಳಗೆ ಮೂಱುಂ |
ಲೋಕಂ ಬಿರ್ದಿರ್ದುದಕ್ಕು ಮೆಂಬಳವಿಗೆ ವಂ ||
ದೇಕದ್ವಿತ್ರಿ ಚತುಶ್ಶಾ |
ಲಾಕೀರ್ಣಂ ಪುರವರಂ ಕರಂ ಸೊಗಯಿಸುಗುಂ || ೧೪೬ ||

ಚಂ|| ಪಡೆದ ಧನಕ್ಕೆ ಲೆಕ್ಕಮಿಡಲಿಂದ್ರನಗಂ ಬಳಪಂ ಧರಾತಳಂ |
ಕಡಿತಮಹೀಶ್ವರಂ ತಗುಳೆ ಭಾಜಿಸುವೊಂ ಸುರಮಂತ್ರಿ ಕೂಡುವೊಂ ||
ತೊಡ(ಱ)ದಿದಂತ್ಯಮಿಲ್ಲ ಪವಣೆಂಬ ಪೊಗಟ್ಟಿಯ ಸೂಳೆಗೇರಿಯಂ |
ಗಡಿಯ ದಗುಂತಿ ಪೆಂಪುವಡೆದಾ ಪೊಟಲೊಳ್ ನೆರೆದೊಪ್ಪಿ ತೋಱುಗುಂ || ೧೪೭ ||

ವ||ಮತ್ತಮಲ್ಲಿ:—

ಮ||ಸ್ರ|| ಕರುಮಾಡಂ ರಮ್ಯಹರ್ಮ್ಯಾಚಳದಳವಿಗಳುಂಬಂ ಹಿಮಾದ್ರೀಂದ್ರಸಾನೂ |
ತ್ಕರಕಾಂತಂ ಬಳ್ಳಿಮಾಡಂಗಳ ಬಳಗಮದೇನೆಂಬ ಪೆಂಪುರ್ವದೇನೆಂ||
ಬಿರವಿಂದೊಳ್ಪಿಂಬದೇನೆಂಬ ದಳಬೆಸನದೇನೆಂಬ ಮಿಕ್ಕೊಳ್ಪದೇನೆಂ |
ಬರಸಂಪತ್ತೊಳ್ಪದೇನೆಂಬಮಿತಗುಣಮದೇನೆಂಬ ಚಿತ್ರಪ್ರಪಂಚಂ || ೧೪೮ ||

ಕಂ|| ವಿವಿಧವಿನೋದಸುಖಂ ವೈ |
ಶ್ರವಣಂ ಧನದಾದ್ರಿಯೊಳ್ ಸುಖಂ ವಸಿಯಿಸುವಂ ||
ತವನಿಸನಾವಾಡದೊಳು |
ದ್ಭವಾಂಬುನಿಧಿ ವಿಶ್ವಸೇನನನುವಿನಮಿರ್ಕುಂ || ೧೪೯ ||

ವ|| ಆಮಹೀಮಂಡಳೇಶ್ವರಂಗೆ: –

ಮ|| ಹಿಮದಿಂ ಸೇತುವನೆಯ್ದೆ ನೀಳ್ದ ರಜತಪ್ರಾಕಾರದಾಕಾರಮಂ |
ಹಿಮರಶ್ಮಿದ್ಯುತಿಕೀರ್ತಿ ಪೋಲ್ತ ತೆಱದಿಂದೆಂಬಂತೆ ಶೂನ್ಯಾ ||
ಭ್ರಮಾರ್ಗಮನಾಜ್ಞಾಂಗನೆ ಪೋಗಿ ಸೇದೆಗಿಡವಂತಾಕಾಶದೊಳ್ ಬಟ್ಟೆಯಂ |
ನಿಮಿರ್ವನ್ನಂ ಬಿದಿ ಸೇತುವಂ ಸಮೆದನೆಂಬಾಶಂಕೆಯಂ ಮಾಡುಗುಂ || ೧೫೦ ||

ಸುಮನೋಮಾಲೆಯುಮೊರ್ಮೆಯುಂ ಹಿಮದೊಳೇಂ ಬಾಡಿರ್ದಗಲ್ದಿರ್ಕುಮ |
ಗ್ರಿಮಭೂಪಾಲಶಿರೋಗ್ರಮಂ ಮೆಱೆದುದಾರಾಜಾಧಿರಾಜಾಜ್ಞೆಯಂ ||
ದಮನೆಂದುಂ ನಿಖಿಲಾವನೀಪರಧಿಪರ್ ಮಾಣಿಕ್ಯಪರ್ಯಂಕ ಕೀ |
ರ್ತಿಮುಖಾಧಾರಕಿರೀಟದಿಂದಮೆನೆ ಸಂದೊಂ ವಿಶ್ವಸೇನಾಧಿಪಂ || ೧೫೧ ||

ಕಂ|| ಕೆಳೆಯರ ಪಗೆವರ ಪೆಂಡಿರ |
ವಿಳೋಳಹಾರಾವನದ್ಧಕಂಠಂಗಳಿಳಾ ||
ತಳನಾಥನ ಮಧ್ಯಸ್ಥಿತೆ |
ಯಳವಿಯನಳವಲ್ಲದೆಳೆಗೆ ಗೋಸನೆಗೊಳುಗುಂ || ೧೫೨ ||

ವ|| ಮತ್ತಮಾಪರಮಕ್ಷತ್ರತೇಜೋರಾಶಿಗೆ:—

ಕಂ|| ಮುನಿಸೆಂಬ ಕಿಚ್ಚನೊಳೆ ಬೆಂ |
ದು ನಿಲ್ಲದಂಬುಧಿಯನೋಡಿ ಪೊಕ್ಕರಿನೃಪಸಾ ||
ಧನ ದಿರವಿನಂದ ಮೆಂತೆನೆ |
ತನುನಿರ್ವಾಪಣನಿಮಿತ್ತದಿರವಂ ಪೋಲ್ಕುಂ || ೧೫೩ ||

ಆತನ ಚಾಗಂ ಪೆರ್ಮ‌ಟಿ |
ಚಾತಕಪೋತಕಮನಲಸೆ ಕೊಳ್ವವೊಲರ್ಥಿ ||
ವ್ರಾತಮನಲಸಿಸಿದುದು ಪೆ |
ರ್ಮಾತಿನ ತೊಡವಿಂ ಮದಾಂಧಕರಿಯಿಂ ಹರಿಯಿಂ || ೧೫೪ ||

ಉ|| ಆವಿಜಯಾಂಗನಾನಿಳಯಬಾಹುಗೆ ರಾಜಮುನೀಶ್ವರಂಗೆ ಮಾ |
ದೇವಿ ಮದೇಭಗಾಮಿನಿ ಜಗತ್ರಿತಯಾಂಬಿಕೆ ನಾಮದಿಂದ ವೈ ||
ರಾವಧು ಚಕ್ರವರ್ತಿಯ ಜಿನೇಂದ್ರನ ಕಾಮನ ಜನ್ಮಭೂಮಿ ಲೀ |
ಲಾವಿಲಸನ್ನಿಧಾನಮಭಿರಾಮತೆಯೊಡ್ಡು ವಿಲಾಸದಾಲಯಂ || ೧೫೫ ||

ಕಂ|| ಗುಣಶೀಲವ್ರಾತದ ಮೇ |
ಗಣಾಯ ಮಾಯತಿಯ ಮೇಗಣಜೀವಜೀವಿನ ಮೇ ||
ಗಣ ರೂಪುಂ ರೂಪಿನ ಮೇ |
ಗಣ ಕಾಂತತೆಯಾತ್ರಿಲೋಕಜನನಿಗೆ ಸಹಜಂ || ೧೫೬ ||

ಮ|| ನಡೆ ನೋಡಲ್ ದಿವಿಜೇಂದ್ರನೆಯ್ದೆ ಪೊಗಟಲ್ ನಾಗಾಧಿಪಂ ಭಾವದೊಂ |
ದೆಡೆಯಂ ಭಾವಕನಾಗಿ ಪೋಲೆ ಬರೆಯಲ್ಕಾ ವಿಶ್ವಕರ್ಮಂ ದಲಾ ||
ಪ್ಪೊಡೆ ನಾಮಾರ್ಪೆಮೆ[ಮೆಂತು]ಮೆಂದು ವಿಬುಧರ್ ಮೌನವ್ರತಂಗೊಂಡರೆಂ |
ದೊಡೆ ಪೇಟ್ ಮಾನಿಸರಣ್ಣ ಬಣ್ಣಿಸುವರಾರ್ಯೈರಾಮಹಾದೇವಿಯಂ || ೧೫೭ ||

ಚಂ|| ಸುರಪತಿ ಸೂತ್ರಧಾರನಮರಾವಳಿ ಶಿಲ್ಪಿಗಣಂ ಧನೇಶ್ವರಂ |
ಬರೆದು ಪವಣ್ಗೆ ಚಾಣ್ಗವರೆ ನಿರ್ಮಿಸಿದಂ ಪುರಮಂ ನೃಪಂ ಜಗ ||
ದ್ಗುರುಜನಕಂ ನೃಪಾಂಗನೆ ಜಿನಾಂಬಿಕೆ ಬಣ್ಣಿಸಲಾರ್ಪೊನಾವೊನಾ |
ಪುರಮುಮ ನಾನೃಪೇಂದ್ರನುಮನಾ ನೃಪಕಾಂತೆಯುಮಂ ಕವೀಶ್ವರಂ || ೧೫೮ ||

**ವ||** ಅಂತು ವಿಶ್ವಸೇನಾವನೀನಾಥನುಮೈರಾಮಹಾದೇವಿಯುಂ ಧರ್ಮಾನುರಾಗದೊಳಂ, ದಾನವಿನೋದದೊಳಂ, ಪರೋಪಕಾರವ್ಯಸನದೊಳಂ, ಅರಿಷಡ್ವರ್ಗವಿಜಯದೊಳಂ, ತತ್ವಭಾವನೆಯೊಳಂ ಕೃತವ್ಯಾಪಾರರುಮುದಿತಾಭ್ಯುದಯಪರಂಪರರುಮಾಗಿ ರಾಜ್ಯಸುಖಮನನುಭವಿಸುತ್ತಿರೆ:-

ಕಂ|| ಆಜನಪದದವರಮರಸ |
ಮಾಜದ ನೆಗಟ್ದುದನೆ ನೆಗಟಿ ನೆಲನುಂ ದಿವಮುಂ ||
ರಾಜೇಂದ್ರನುಮಿಂದ್ರನುಮಧಿ |
ರಾಜಾಂಗನೆಯುಂ ಪುಳೋಮಸುತೆಯಂ ಪೋಲ್ಕುಂ || ೧೫೯ ||

ಅಂತು ಮಹಾದೇವಿಯುಮಖಿ |
ಲಾಂತಃಪುರಮುಂ ಕುಳೀನ ರಾಜಕಮುಂ ಸಾ ||
ಮಂತರು ಮಿಂ ಬೆಸಕೆಯ್ಯೆ ಜ |
ಗಂ ತನ್ನಂ ಪೊಗಟಿ ವಿಶ್ವಸೇನನೃಪೇಂದ್ರಂ || ೧೬೦ ||

ಸುಖಸಂಕಥಾವಿನೋದದಿ |
ನಖಿಂಗಭೂಮಂಡಲೈಕಪತಿ ದಕ್ಷಿಣದೊಳ್ ||
ಸುಖಮಿರಸುಗೆಯ್ಯೆ ಕುರುಕುಲ |
ಶಿಖಾಮಣಿಪ್ರತಿಮನಾಗಿ ನೃಪನಪ್ರತಿಮಂ || ೧೬೧ ||

**ವ||** ಪೂರ್ವೋಕ್ತಸರ್ವಾರ್ಥಸಿದ್ಧೀಶ್ವರಂ ಮಹೇಂದ್ರಾಮರಂ ಮೂವತ್ತುಮೂಱುಸಾಗರೋಪಮಾಯುಷ್ಯಂಬರಮನನ್ಯಸಾಮಾನ್ಯದಿವ್ಯಸುಖಮನನುಭವಿಸುತ್ತುಮಿರೆ ಪರಮಾಯುರವಶೇಷಮಱು ದಿಂಗಳುಂಟಿನ-—

ಮ|| ಸ್ರ|| ಸುರವಿಜ್ಞಾನೋಪಯೋಗಂ ಸುರಪತಿಗುಪವಿಷ್ಟಾಸನಾಕಂಪದಿಂದಂ |
ಬರೆ ಕಂಡೈರಾಮಹಾದೇವಿಯುರುದರದೊಳಂಬರ್ಪ ಲೋಕೇಶನಂ ಬೆ ||
ಚ್ಚರಮಾವಿತ್ತೀಶನಂ ಪೇೞ್ವುದು ಮೊಸೆದಱುದಿಂಗಳ್ವರಂ ಪಂಚರತ್ನೋ |
ತ್ಕರದಿಂ ಸಾರ್ಧತ್ರಿಕೋಟಿಪ್ರಮಿತಿಯ ಮೞೆಯಂ ಪಣ್ಣಿದಂ ಲೋಕಪಾಳಂ || ೧೬೨ ||

ಕಂ|| ಆರತ್ನದ ಮೞೆ ಪಟ್ಟಣ |
ಭಾರ ಮಿದೆಸೆ ವಿಶ್ವಸೇನನರಮನೆಯೊಳ್ ಭೋರ್ ||
ಭೋರೆನೆ ಪಂಚಾಶ್ಚರ್ಯ ಸ |
ಮಾರಂಭಯುತಂ ತಗುಳ್ದು ಕಱೆದುದು ನಭದಿಂ || ೧೬೩ ||

**ವ||** ಮತ್ತಂ ಸೌಧರ್ಮೇಂದ್ರನಖಿಲಜಗದ್ಗುರುಜನನಿಯಪ್ಪೈರಾವತೀಮಹಾದೇವಿಯಂ ಕೆಯ್ಗೆಯ್ಯಲ್:—

ಕಂ|| ಅತಿಶಯಪದ್ಮಾದಿ ಸರ |
ಸ್ಥಿತಿಯೊಳ್ ವಸಯಿಸುವರಂ ವಿನೂತ್ನಶ್ರೀಹ್ರೀ ||
ಧೃತಿ ಕೀರ್ತಿಬುದ್ಧಿ ಲಕ್ಷ್ಮೀ |
ಪ್ರತಿತರ್ ದೇವಿಯರನಱುವರಂ ಬೆಸವೇೞ್ದಂ || ೧೬೪ ||

**ವ||** ಮತ್ತಂ ರುಚಕಾಚಳದ ಮೂಡಣಡೆಸೆಯೊಳನಿಂದಿತ[ಮೆಂಬ]ಸ್ವಸ್ತಿಕಮೆಂಬ ಕಾಂಚನಮೆಂಬ ವಿಡೂರಮೆಂಬಂಜನಮೆಂಬರಿಷ್ಟಮೆಂಬಂಜನಮೂಲ[ಕ]ಮೆಂಬ ಕನಕಮೆಂಬ ಕೂಟತಳಂಗಳೊಳವ ನಲಂಕರಿಸಿರ್ಪ ವಿಜಯೆ ವೈಜಯಂತೆ ಜಯಂತೆ ಯಪರಾಜಿತೆ ಯಾನಂದೆ ನಂದೋತ್ತರೆ ನಂದೆ ನಂದವರ್ಧನೆಯರೆಂಬ ಮಹತ್ತರದಿಕ್ಕುಮಾರಿಯರೆಣ್ಬರುಮಂ, ಪ್ರಸವೋತ್ಸವೋತ್ಸವದೊಳ್ ತುಂಗ ಭೃಂಗಾರುಗಳಂ ಪೊತ್ತು ನಡೆಯಲಿಂದ್ರಂ ಬೆಸಸಿದಂ, ಮತ್ತಾಗಿರಿಯ ತೆಂಕಣ ದರಿಯ-—

ಕಂ|| ರುಚಕಮಮೋಘಂ ವಿಮಳಂ |
ರುಚಕೋತ್ತರಮುಚಿತಸುಪ್ರಬುದ್ಧಂ ಭದ್ರಂ ||
ರುಚಿವನ್ಮಂದರಮಪವರ |
ಕಚಾರುತರಸು ಪ್ರತಿಷ್ಠ ಮೆಂಬ ನಿತಂಬಂ || ೧೬೫ ||

ವ|| ಆಕೂಟಾಷ್ಟಕದೊಳ್:—

ಕಂ|| ಪ್ರತಿದಿವಸಂ ರಮಿಯಿಪ ದೇ |
ವತಿಗಳ್ ಸುಪ್ರಣಿಧಿ ಸದ್ಯಶೋಧರೆ ಲಕ್ಷ್ಮೀ ||
ಮತಿ ಕೀರ್ತಿಮತಿ ವಸುಂಧರೆ |
ನುತಸುಸ್ಥಿತೆ ಸುಪ್ರಬುದ್ಧೆ ಚಿತ್ರಿಕೆ ಯೆಂಬಳ್ || ೧೬೬ ||

ವ|| ಅವರನಮರರಾಜಂ ಸಿರಿಗನ್ನಡಿವಿಡಿಯಲಪ್ಪಯ್ಸಿದಂ, ಮತ್ತಂ ತದದ್ರೀಂದ್ರದ ವಾರುಣ ದಿಶಾಭಾಗದ ರತ್ನಾರುಣಮಪ್ಪ:—

ಕಂ|| ಕುಮುದಂ ನಳಿನಂ ಪದ್ಮಂ |
ಕಮಳಂ ಸೌಮನಸಮುಂ ಯಶೋಭದ್ರಕಮು ||
ತ್ತಮಲೋಹಿತಾಕ್ಷಮುಂ ಕುಸು |
ಮಮೆಂದು ಪೆಸರ್ವೆಸರೊಳೆಸೆವ ಕೂಟಾಷ್ಟಕದೊಳ್ || ೧೬೭ ||

[ಆಪ್ಪೊತ್ತೊಳ್] ನೆಲಸುವಿಳಾ |
ದೇವಿ ಸುರಾದೇವಿ ಪೃಥ್ವಿ ಪದ್ಮಾವತಿ ಸ ||
ದ್ಭಾವದ ಕಾಂಚನೆ ನವಮಿಕೆ |
ಲಾವಣ್ಯದ ಸೀತೆ ಭದ್ರೆ ಯೆಂಬೆಣ್ಬರುಮಂ || ೧೬೮ ||

ವ|| ನಾಕನಾಯಕಂ ತ್ರಿಲೋಕಗುರುಸವಿತ್ರಿಗೆ ಸೀಯನಪ್ಪ ಗೇಯದಿಂ ಪೊಟ್ಟುಗಳಿಯಲ್ ನಿಯಮಿಸಿದಂ. ಮತ್ತಮಾಧರಣೀಧರ ರಾಜಾಧಿರಾಜನಪ್ಪ:—

ಕಂ|| ವಿನುತ ರುಚಕಾದ್ರಿಯುತ್ತರ |
ವನದೊಳ್ ಸೊಗಯಿಸುವ ಕುಂಡಳ ಸ್ಫಟಿಕಾರ್ಕಂ ||
ಜನ ಕಾಂಚನ ರುಚಿರ ಸುದ |
ರ್ಶನ ರಜತಾಂಕಿತ ವಿಚಿತ್ರಕೂಟಾವಳಿಯೊಳ್ || ೧೬೯ ||

ಒಸೆದಿರ್ಪ ಶ್ರೀಹ್ರೀಧೃತಿ |
ಲಸದಾಸ್ಯೆ ವಿಬುದ್ಧೆ ಪುಂಡರೀಕಿಣಿ ಭಾವ ||
ಪ್ರಸರದೆ ಕಡುಗಾಡಿಯೊಳುಂ |
ಬೆಸೆವಾರುಣಿ ಮಿಶ್ರಕೇಶಿ ಯೆಂಬೆಣ್ಬರುಮಂ || ೧೭೦ ||

ವ|| ಕುಳಿಶಾಯುಧನರ್ಹನ್ಮಾತೆಗೆ ಧವಳಚಮರರುಹಂಗಳನಿಕ್ಕಲ್ ನಿಯೋಜಿಸಿದಂ, ಮತ್ತ ಮಾಪರ್ವತದ ಪೂರ್ವದಿಗ್ಭಾಗದ ನಾಲ್ಕುಕೂಟಂಗಳಪ್ಪ:—

ಕಂ|| ನಿತ್ಯಾವಲೋಕ ವಿಮಳಂ |
ನಿತ್ಯೋದ್ಯೋತಸ್ವಯಂಪ್ರಭಂಗಳೊಳಿದಾ ||
ದಿತ್ಯಕ್ಷಣರುಚಿತನುರುಚಿ |
ಮತ್ಯಬಲೆಯರಂ ಪ್ರದೀಪತತಿಯಂ ಬೆಳಗಲ್ || ೧೭೧ ||

ತ್ರಿಶಿರೆಯುಮಂ ಚಿತ್ರೆಯು [ಮಂ] |
ವಿಶೇಷದಿಂ ಕನಕಚಿತ್ರೆಯೆಂಬಳುಮನಘಾಂ ||
ಕುಶಮಣಿ ಸೂತ್ರಾಮಣಿಯುಮ |
ನಶೇಷಜಿನಜನನಿಗಮರರಾಜಂ ಪೇೞ್ದಂ || ೧೭೨ ||

ವ|| ಮತ್ತಮಾರುಚಕಾಚಳದ ವಿದಿಗ್ಭಾಗಸ್ಥಿತಕೂಟಂಗಳಪ್ಪ:—

ಕಂ|| ರುಚಕಮಣಿಪ್ರಭವೆಂಬ |
ಯರ್ ಚಾರುರುಚಕೋತ್ತರಂಗಳೊಳ್ ರಮಯಿಸುವಾ ||
ರುಚಕೆ ರುಚಕಾಸ್ಯೆ ರುಚಕಾಂ |
ತೆ ಚಟುಲೆ ರುಚಕಪ್ರಭಾಖ್ಯೆಯೆಂಬಮರಿಯರಂ|| ೧೭೩ ||

ವ|| ಮತ್ತಂ ತದದ್ರೀಂದ್ರದ:—

ಕಂ|| ರತ್ನೋಚ್ಚ್ರಯ ರತ್ನಪ್ರಭ |
ರತ್ನಲಸತ್ಸರ್ವರತ್ನ ಕೂಟಾದಿಗಳೊಳ್ ||
ಯತ್ನದಿನಿರ್ಪಮರಸ್ತ್ರೀ |
ರತ್ನಂಗಳನರ್ಹದಂಬಿಕಾಸೇವನೆಯೊಳ್ || ||೧೭೪ ||

ಅಪರಾಜಿತೆ ವಿಜಯೆ ಜಯಂ |
ತೆ ಪೆಸರೊಳಾವೈಜಯಂತೆ ಯೆಂಬಿವರಂ ನಾ ||
ಕಪತಿ ನಿಯೋಜಿಸಿದಂ ವಿ |
ಷ್ಟಪತ್ರಯಾಧೀಶ ಜನನಿಗಿಸುವೆಸಗೆಯ್ಯಲ್ || ೧೭೫ ||

ವ|| ಮತ್ತಮನ್ಯಕುಲಶಿಖರಿ ಶೇಖರಂಗಳಪ್ಪ ಕೂಟಂಗಳೊಳಿರ್ಪ:—

ಉ|| ಹಾವವಿಲಾಸಭಾವರಸರಂಜಿತೆ ಮಾಳಿನಿ ಪುಷ್ಪಚೂಳೆ ಚೂ |
ಳಾವತಿ ಚಂಕನತ್ಕನಕಚಿತ್ರಿಕೆ ಮಾಳಿನಿ ಕಾಂತಿಮತ್ಸುರಾ ||
ದೇವಿ ವಿಳಾಸದಾತ್ರಿಶತೆ ಕಾಂಚನದೇವತೆಯೆಂಬೊರಂ ಜಿನೇಂ |
ದ್ರಾವಸಥೈಕಗರ್ಭಪರಿಶೋಧನೆಗಟ್ಟಿದನಿಂದ್ರನಟ್ಟಿಯಿಂ || ೧೭೬ ||

ವ|| ಅಂತಮರೇಂದ್ರನಿಂದ್ರಾಣಿಯ ದೂರೆಯರಾದೆಲ್ಲರು(ಮಂ)ರಮಣಿಯ ರಹಸ್ಯವ್ಯಾಪಾರಕ್ಕಂ ಪರಿಚಾರಿಕಾಕೃತ್ಯಕ್ಕಮಟ್ಟುವುದುಮನಿಬರುಂ ಬಂದು:—

ಕಂ|| ಸಂಗತಸುರಸುದತಿಯರ |
ಸ್ವಾಂಗಂ ಬೆರಸೆಱಗೆ ಜಿನನ ಜನನಿಯ ಪದಪ ||
ದ್ಮಂಗಳೊಳೊಪ್ಪಿದುವಳಿಕುಳ |
ಮಂ ಗೆಲ್ದು ತದೀಯಕುಟಿಳಚಳದಳಕಂಗಳ್ || ೧೭೭ ||

ವ|| ಅಂತನಿಬರಮರಿಯರಲಸದ್ವೈರಾಮಹಾದೇವಿಯನೋಲಗಿಸುತ್ತಿರೆ:—

ಕಂ|| ಪರಮಜಿನಜನನಿಗೊರ್ವಳ್ |
ಸುರವಧು ಕೊಡೆವಿಡಿದು ನಳಿನಿಯೊಡವೆಳೆದು ರಜಂ ||
ಬೊರೆದು ಕೊಡೆಯೆಲೆಯ ಕೆಳಗಿ |
ರ್ದ ರಾಜಹಂಸಿಯ ವಿಳಾಸಮಂ ನೆನೆಯಿಸಿದಳ್ || ೧೭೮ ||

ತ್ರಿದಶನದೀಸಲಿಲದ ಪೂ |
ರದಿನಂಗನೆ ನಯದೊಳಭಿಷವೋತ್ಸವಮನೂಡ ||
ಚಿರದಳೆನೆ ಜಿನಜನನಿಗೆ ರಾ |
ಗದಿನಿಕ್ಕಿದಳೊರ್ವಳಮರಿ ಚಮರೀರುಹಮಂ || ೧೭೯ ||

ಕವಿತೆಗೆ ವಾಗ್ದೇವತೆ ಕಿ |
ಟ್ಟವಳಿಗೆವಿಡುವಂತೆ ತಂಬುಲಂದೀವಿದ ಪೂಂ ||
ಗವಳಿಗೆಯಂ ಪಿಡಿದಂಬಿಕೆ |
ಗವಟಯ್ಸಿದಳೊರ್ವಳಿಂದ್ರವಧು ತಂಬುಲಮಂ || ೧೮೦ ||

ಅನುದಿನಮೊರ್ವಳ್ ಗೀರ್ವಾ |
ಣನಾಥವಧು ನಾಕಲೋಕದಿಂ ಬಂದರ್ಹ ||
ಜ್ಜನನಿಗೆ ನಂದನವನಗತ |
ವನಲತೆವೋಲ್ ತಂದು ನೀಡುಗುಂ ಪಣ್ವಲಮಂ || ೧೮೧ ||

ಸುಕುಮಾರಸುರಭಿಸಂತಾ |
ನಕಕುಸುಮದ ಬಣ್ಣವಾಸಿಗಂಗಳನೆತ್ತು ||
ತ್ತುಕಳಂಕಮೂರ್ತಿಗಾಗಾ |
ಡಿಕಾರ್ತಿಗಮರಿಯರಿ ಮಾಲೆಗಾರ್ತಿಯರಾದರ್ || ೧೮೨ ||

ಮಂಡಲದ ತುಡುಗೆಯಂ ಕೆ |
ಯ್ಕೊಂಡುಂ ಬಗೆಯಱಿದು ತುಡಿಸಿಯುಂ ಮದವದ್ವೇ ||
ತಂಡವ್ಮೃದುಗತಿಗೆ ಮಾಣಿಕ |
ಭಂಡಾರದ ಬೆಸನನಮರಿಯರ್ ನಡೆಯಿಸುವರ್ || ೧೮೩ ||

ಅತಿಶಯಮೆಸದಿರೆ ಮೃದುಪಾ |
ದತಳಂಗಳನೂಡಿ ಯಾವಕದ್ರವದಿಂದಂ ||
ಪ್ರತಿದಿನ ಮಾದೇವಿವಿಳೇ |
ಪಿತಕರ್ಮಮನೊರ್ವಳಮರವಧು ಕೆಯ್ಕೊಂಡಳ್ || ೧೮೪ ||

ತ್ರಿದಶಾಂಗನೆಯರ್ ತ್ರಿಸ್ಥಾ |
ನದೊಳ್ ಪ್ರಸನ್ನಾಧಿಯಪ್ಪಲಂಕಾರಂಗಳ್ ||
ಪದಿಮೂಱುಮೆಸೆಯೆ ಕೊಳೆ ಪಾ |
ಡಿದರೋಲಗಸಾಲೆಯೊಳ್ ಜಿನೇಂದ್ರಾಂಬಿಕೆಯಾ || ೧೮೫ ||

ಕಂ|| ರಂಗದೊಳಮರಾಂಗನೆ ಗ |
ತ್ಯಂಗಂ ನೃತ್ಯಾಂಗಮಂಗಹಾರಂ ರಸವ ||
ದ್ಭಂಗಿಯಸಿತಸಿತುಮಂ ಲಲಿ |
ತಾಂಗಿಗೆ ತೋಱಿದಳಪೂರ್ವಸಂಗೀತಕದೊಳ್ || ೧೮೬ ||

ವ|| ಮತ್ತಮೊರ್ವಳ್:—

ಚಂ|| ನಯಮಳವಟ್ಟ ಜೀವೆಯಳವಟ್ಟಧರೋತ್ತರತಂತ್ರಮಪ್ಪ ತಂ |
ತ್ರಿಯೊಳನುವಾದಿಯಾಗೆ ಪೊಸಮೂರ್ಛನೆ ರಂಜಿಸೆ ಮಂದ್ರತಾರಗೀ ||
ತಿಯ ಪವಣೊಪ್ಪೆ ರಾಜಮಹಿಷೀಸಭೆಯೊಳ್ ಕಡುಜಾಣೆಯುಂ ಪ್ರವೀ |
ಣೆಯುಮೆನೆ ವೀಣೆಯಂ ಮಿಡಿದಳಳ್ಕಿರ್ದಯಂ ಮಿಡಿದಳ್ ಪ್ರಗೀತರಾ || ೧೮೭ ||

ಕಂ|| ಅಮರ್ದಸೆವ ಪುರ್ವಮಂ ನೊಸ |
ಲುಮನೊರ್ವಳ್ ಸಮಱವಮರಿ ಹೇಮಾಂಬುಜದೊಳ್ ||
ಸಮನಿಸಿದ ಶೈವಲಪ್ರಸ |
ರಮನೋಸರಿಸುವ ಚಳೋರ್ಮಿಯಂ ಪೋಲ್ತಿರ್ದಳ್ || ೧೮೮ ||
ಆರೋಗ್ಯಂ ಮಾಟ್ಪಮೃತಾ |
ಹಾರಮನಂಬಿಕೆಗೆ ಬೋನಮೆತ್ತುವ ದಿವಿಜ ||
ಸ್ತ್ರೀರುಚಿರಭೋಜನಾಂಗಲ |
ತಾರಮಣೀಯತೆಯನೇಂ ಪುದುಂಗೊಳಿಸಿದಳೋ || ೧೮೯ ||
ಸ್ಮರಹರನ ತಾಯ್ಗೆ ಸುರವಧು |
ಸಿರಿಗನ್ನಡಿವಿಡಿವತೆಱನದಂತೆಸೆ ತತ್ಸಂ ||
ದರಿಯ ಮೊಗಕ್ಕಾಬಿಂಬನೆ |
ದೊರೆ ಪೆಱತಿಲ್ಲೆಂಬ ಬಗೆಯ ಪೆಱತೆಸಲಱಿಯಂ || ೧೯೦ ||
ಆಪೂತಚರಿತ್ರೆಗೆ ಮೆ |
ಯ್ಗಾಪಾಗಿ ಕೃಪಾಣಪಾಣಿಪಲ್ಲವೆಯರ್ ದೇ ||
ವಾಪಗೆಯ ಕೆಲದ ಖಡ್ಗಿಕ |
ಳಾಪಮ ನನುಕರಿಸಿದರ್ ಸುರೇಂದ್ರಾಂಗನೆಯರ್ || ೧೯೧ ||
ನಿಱಿಸಿದ ವಿಚಿತ್ರವೇತ್ರದ |
ತುಱುಗಲ್ ಪೊಲಸತೆಯ ಬೀಟಲಂ ಪೋಲ್ತಿರೆ ಕಂ |
ಣಱಿದು ಮಹಾದೇವಿಗೆ ಪಡಿ |
ಯಱವೆಸನಂ ಕೆಲಬರಮರಿಯರ್ ಕೈಕೊಂಡರ್ || ೧೯೨ ||

ವ|| ಮತ್ತಮಾಹಾರೋತ್ತರಾನ್ನವಾಸಕಾಧಿಷ್ಠಿತಮನಃಪ್ರಸಾದಪ್ರದವಿನೋದದರ್ಶನಪ್ರಸ್ತಾವಘಟನಾವಸರಪ್ರಾಪ್ತವೈದಗ್ಧ್ಯಜನಸಂಭಾಷಣಗೋಷ್ಠಿ ಸಿದೇಶಚತುರವಚನೋಪಪನ್ನಗರ್ಭಾಧ್ಮಾತಪರಿಜ್ಞಾನೋದ್ರೇಕಮಮರೀಸ್ಫುಲಕರತಂತನ್ಯಮಾನ ಸಂತಾಂತರಪ್ರಹೇಳಿಕಾಸಮಸ್ಯಾಸಮಾಸೋದಿತಕಾಲದೊಳ್ ದೇವಿಗೊರ್ವಳ್ ಸುರವಾಮನೇತ್ರ:—

ಕಂ|| ಅಡರಿ ತೊಡರ್ದಿರ್ದೊರ್ದರ್ಪಂ |
ತಡರ್ದಹಿತರನಿಱಿದು ಪಗೆಯ ಕಾಲಂ ಪಿಡಿವಂ ||
ಕುಡು ಬೆಸನಮನೆಮ್ಮಂದಿಗೆ |
ಮಿಡುಕನೆನೆ.................................... || ೧೯೩ ||

ವ|| ಮತ್ತಂ:—

ಕಂ|| ಚಾಂಡಾಲಪತಿಯ ಮನಮೆರ್ದ |
ಗೊಂಡು ಮನಃಪದ್ಮಮುಕುಳಮುಂ ಸವಿವಳಿಯುಂ ||
ಕಂಡೊಡೆ ಮುನಿವಾ ನರರುಂ |
ಪೆಂಡಿರುದಾರತೆಗದೇಕೆ ಮುನಿವರೊ ದೇವೀ || ೧೯೪ ||

ವ|| ಮತ್ತಂ:—

ಕಂ|| ಲವಲೀ ಲವಂಗ ಪಲ್ಲವ |
ಸವಿಪಲ್ಲವಮನವಯವದೆ ದುಃಖದವುದಱಿಂ ||
ಲವಲೀ ಲವಂಗ ಪಲ್ಲವ |
............ಮೆರಡೆ ನಿಜಯಶಃಸುಕುಮಾರಂ || ೧೯೫ ||

ತಾಳದೊಳೆಸೆವಳಿಯುಂ ಹಿಂ |
ತಾಳದೊಳೆಸೆವಳಿಯುಮುರದೊಳೆಸೆವಳಿಯುಂ ತಾಂ ||
ಮೇಳಿಸುತಮಿರ್ಪುದುಂ ಚದು |
ರೇಳಿಗೆ ತಾವಿಳಿಯಲಾಗ ತಿಳಿವವನೆಗ್ಗಂ || ೧೯೬ ||

ಇಂತಿರೆ ದಿವಿಜೇಂದ್ರನ ಬಱಿ |
ರಂತಃಪುರವಧುವಿರಾವಪೊಱ್ಟಂ ಪದದೊಳ್ ||
ತಂತಮ್ಮ ನಿಯೋಗದೊಳಿರೆ |
ಸಂತತ ಮಱುದಿಂಗಳೊಂದುದಿವಸದ ತೆಱದಿಂ || ೧೯೭ ||

ಚಂ|| ಅನುದಿನಮಾಱುದಿಂಗಳಮರಾಂಗನೆಯರ್ ದಿವಿಜೇಂದ್ರಲೋಕಸಂ |
ಜನಿತ ಮಹೌಷಧಿಪ್ರಕರದಿಂ ಜನಮಾತೆಗೆ ಮಾಡೆ ಗರ್ಭಶೋ ||
ಧನೆಯನದೀನಮಾನುಷಮನಲ್ದೊರೆಯಾಗೆ ಶರೀರಮುಜ್ವಜ |
ನ್ಮನೆ ಸಮೆದಿಂದುಕಾಂತವನಕಾಂತೆವೊಲೀಂ ತೆಸತೆಳ್ಪುವೆತ್ತುದೋ || ೧೯೮ ||

ವ|| ಮತ್ತಮುಮರಮಹತ್ತರಿಕಾನಿವಹಂ ಪ್ರತ್ಯೇಕನಾಮಗ್ರಹಣದಿಂ ನಿಪುಣಿಕೆ ಚಂದ್ರಿಕೆಯಮೃತಮತಿ ಲವಲಿಕೆ ಪದ್ಮಿನಿ ಮನೋಹರಿ ಮಾಳತಿಕೆ ಉತ್ಪಳಿಕೆ ಮಂದಾರಿಕೆ ಯವನಿಕೆ ಪ್ರಭಾವತಿ ಚಿತ್ರಲೇಖೆ ಮಯೂರಿಕೆ ಚೂತಲತಿಕೆ ಮೃಣಾಳಿಕೆ ಯೆಂಬವರ್ಗೆ ತಕ್ಕ ಪೆಱಪ್ರಮೊಳಗಣಬೆಸಂಗಳಂ ನಿಯೋಜಿಸುವುದುಂ:—

ಮ|| ಅವರೊಂದೊರ್ವರೊಳಿಕ್ಕೆಯುಂ ಸೆಣಸಿ ಕೊಳ್ ಕೊಳ್ಳೆಂದು ಕೆಯ್ಗೆಯ್ಯೊಳೊ |
ಪ್ಪುವ ಹಾರಂ ಮೊಲೆಯೊಳ್ ತೊಡಂಕೆ ವಳಯಂ ಕರ್ಣಾಂತಮುಂ ತಾಳ್ದಿ ಸಾ ||
ರ್ದವತಂಸಂ ಕದಪಂ ಪಳಂಚೆ ಬೆಸದೊಳ್ ತಳ್ದೊಯ್ದರಾ ದೇವಿಯು |
ದ್ಭವಮುಂ ವಿಭ್ರಮಲೀಲೆಯುಂ ನಗುವಿನಂ ಸ್ತ್ರೀರಾಜ್ಯಸಾಮ್ರಾಜ್ಯಮುಂ || ೧೯೯ ||

**ವ||** ಅಂತೊಂದು ಪುಣ್ಯದಿನದೊಳ್:—

**ಚಂ||** ಅವಿರಳಪಾಣಿಪಲ್ಲವೆ ಕುಚೋನ್ನತಮಂಜರಿ ಬಾಹುಶಾಖೆ ಸು |
ಚ್ಛವಿದಶನಾವಳೀಮುಕುಳೆ ಷಟ್ಪದಕುಂತಳೆ ಪತ್ರಭಂಗಪ ||
ಲ್ಲವಿತಕಪೋಲಪತ್ರೆ ತನುಮಧ್ಯೆ ವಚಃಪರಪುಷ್ಟನಾದೆ ಪು |
ಣ್ಯವತಿ ನೃಪೇಂದ್ರಕಾಂತೆ ನವಕಲ್ಪಲತಾಕೃತಿಯಿಂದಮೊಪ್ಪಿದಳ್ || ೨೦೦ ||

**ವ||** ಅಂತಳವಲ್ಲದೊಪ್ಪಿ ತಲೆನೀರ್ಮಿಂದು ರಜನೀಸಮಯದೊಳ್ ಪವಡಿಸಿ ಮನೋಹರ ಮುಹೂರ್ತದೊಳ್:—

**ಕಂ||** ಐರಾವತಕರಿಯಂ ಮದ |
ವೈರೇಯಕಭಾರಚಂಚರೀಕಮನಿಂದು ||
ಕ್ಷೀರರುಚಿಯಂ ವೃಷೇಂದ್ರನ |
ನಾರಮಣೀರತ್ನಮಿರುಳ ಕಡೆಯೊಳ್ ಕಂಡಳ್ || ೨೦೧ ||

ಅಗರಾಜಸಾನುಗತನಂ |
ಮೃಗರಾಜನ ನಿಭಯುಗಾಭಿಷೇಕಜಲೌಘ ||
ಸ್ಥಗಿತೆಯ ನಬ್ಜಾಸನೆಯಂ |
ಮೃಗಾಕ್ಷಿ ಬೆಳಗಪ್ಪ ಜಾವದಾಗಳ್ ಕಂಡಳ್ || ೨೦೨ ||

ಲೋಳದಳಿನೀಲಕುವಳಯ |
ಮಾಳೆಗಳೆರಡಂ ತದೀಯಮೈತ್ರೀರಸಸಂ ||
ಪಾಳಸಮನ್ವಿತಹಿಮರುಚಿ |
ಮಾಳೆಯನಂಬಿಕೆ ನಿಶಾಂತದೊಳ್ ವೀಕ್ಷಿಸಿದಳ್ || ೨೦೩ ||

ಪೊಸತಲರ್ದಂಭೋರುಹದೆಸೆ |
ವೆಸಳಂತಳವಡಿಸಿ ಕಿರಣಮೊಗೆದರುಣನನಾ ||
ಗಸಗಂಗೆಯ ಮಡುವಿನೊಳೊಡ |
ನೆಸೆವೆಳವಾಳೆಗಳ ನೆರಡನಂಬಿಕೆ ಕಂಡಳ್ || ೨೦೪ ||

ತಳದಳಿಸುವ ಕೆಂಬೊನ್ನಮು |
ಕ್ಕಳಸಮನಮೃತೋದಭಾನುಚುಂಬಿತಗಗನ ||
ಸ್ಥಳಮಂ ಸೊಗಯಿಪ ತಾಮರೆ |
ಗೊಳನಂ ಪ್ರತ್ಯೂಷದೊಳ್ ಜಿನಾಂಬಿಕೆ ಕಂಡಳ್ || ೨೦೫ ||

ಧೃತವಿದ್ರುಮಕಂಬುಲತಾ |
ಪ್ರತಾನನೀಳೋರ್ಮಿಮಾಳೆಯಂ ಜಳನಿಧಿಯಂ ||
ನುತಹರಿಪೀಠಮನಂಬಿಕೆ |
ನಿತಂಬಭರಚಲಿತಚಲನೆ ಕನಸಂ ಕಂಡಳ್ || ೨೦೬ ||

ಪ್ರಚುರನವವೈಜಯಂತೀ |
ವಿಚಿತ್ರಮಂ ಸುರವಿಮಾನಮಂ ನಾನಾರ ||
ತ್ನ[ಚಯ]ಮನಹಿಗೃಹಮಂ ಘನ |
ರುಚಿ ರಜನೀಚರಮದೊಳ್ ಜಿನಾಂಬಿಕೆ ಕಂಡಳ್ || ೨೦೭ ||

ಪಸರಿಸಿದ ಪಂಚರತ್ನದ |
ಪಸರದ ಪೃಥುರಾಶಿ ಗಗನಮಂ ತಾಗೆ ಪೊದ |
ಱಿದ್ದೆಸೆದಿರೆ ಕೃಶಾನುಶಿಖಿ ದೆಸೆ |
ದೆಸೆಯೊಳ್ ಜಿನಪತಿಯ ಜನನಿ ಪರಿವೀಕ್ಷಿಸಿದಳ್ || ೨೦೮ ||

**ವ||** ತದನಂತರಮಭ್ಯುದಯನಿಶ್ರೇಯಸಸುಖನಿಮಿತ್ತಂಗಳುಮುದಿತೋದಿತನುಂ, ಶಲಾಕಾ ಪುರುಷನುಂ, ಚಕ್ರವರ್ತಿಯುಂ, ಮನ್ಮಥನುಂ, ತೀರ್ಥಂಕರಪರಮದೇವನುಮಪ್ಪ ಸುಪುತ್ರೋತ್ಪತ್ತಿ ಹೇತುಭೂತಂಗಳುಮಪ್ಪ:—

ಉ|| ಈಪದಿನಾಱುಮೊಳ್ಗನಸನಂಬಿಕೆ ಕಂಡು ನಿಶಾಂತದೊಳ್ ಪಯೋ |
ಜೋಪಮವಕ್ತ್ರೆ ತಳ್ಪತಳದಿಂದೊಸೆದೆಟ್ದು ದಿನಾದಿಸತ್ಕ್ರಿಯಾ ||
ವ್ಯಾಪೃತಿಯೆಲ್ಲಮಂ ನೆಱೆಯನುಷ್ಠಿಸಿ ಪೋಗಿ ನೃಪಂಗೆ ಪೇೞೆ ಕೇ |
ಳ್ದಾ ಪುರುಷೋತ್ತಮಂ ತಿಳಿಪಿದಂ ಕನಸಂ ನೆನಸಾಗೆ ರಾಗದಿಂ || ೨೦೯ ||

ಮ|| ಸ್ರ|| ಗಜದಿಂ ಗಂಭೀರಭಾವಂ ವೃಷಭದಿನಭನಂ ಸಿಂಹದಿಂ ಬಂಹಿಮಸ್ಯಾ |
ದ್ವಿಜನಬ್ಜಾವಾಸೆಯಿಂ ಶ್ರೀಗಧಿಪನಮಳದಾಮಂಗಳಿಂ ಭೋಗಿ ನೀಲಾಂ ||
ಬುಜಲೀಲಾಕಾರದಿಂ ಕಾಂತಿಯುತನಿನನಿನತ್ಯೂರ್ಜಿತಂ ಬಾಳೆಯಿಂದಂ |
ಗಜಜೈತ್ರಂ ಕುಂಭದಿಂದುತ್ತಮನಮಲಪಯಸ್ಸದ್ಮದಿಂ ಶುದ್ಧವೃತ್ತಂ || ೨೧೦ ||

ಕಂ|| ವಾರಿಧಿಯಿಂ ಸುಖನಿಧಿ ಕಂ |
ಠೀರವವಿಷ್ಟರದಿನಧಿಕನಮರಾಲಯದಿಂ ||
ಧೀರಂ ಫಣಿಗೃಹದಿಂದಂ |
ವೀರಂ ಮಣಿಗಣದಿನಜರನನಲನಿನನಘಂ || ೨೧೧ ||

ಕನಸು ಪದಿನಾಱುಮಂ ಕಂ |
ಡನಂತರಂ ವದನವನಜಮಂ ಪುಗುವ ಮೃಗೇಂ ||
ದ್ರನುಮಂ ಕಂಡುದಱಿಂ[ದಂ] |
ನಿನ[ಗುದಯಿ]ಪನಘವಿಘಾತಿ ಘಾತಿ ಜಿನೇಂದ್ರಂ || ೨೧೨ ||

**ವ||** ಎಂದರಸಿಗನೋಘಂಗಳಪ್ಪ ಕನಸಿನ ಫಲಂಗಳುಮಂ ನಿವೇದಿಸುವುದುಂ, ಪಗಲ ಪದ್ಮ ಸರಸಿಯಂತರಸಿ ವಿಕಸಿತಮುಖಾರವಿಂದೆಯಾಗಿ ನಿವಾಸಕ್ಕೆ ಪೋಗಿ ಸಂತಸದಿನಿರ್ಪುದುಂ ಸರ್ವಾರ್ಥ ಸಿದ್ಧಿಯಿಂದಂ ಮಹೇಂದ್ರಾಮರಂ ಜಿನಚಂದ್ರಂ ಫಾಲ್ಗುನಶುದ್ಧಪಂಚಮಿಯುಂ ಭರಣಿನಕ್ಷತ್ರಮುಂ ದೊರೆಕೊಳೆ ತ್ರಿಲೋಕಾಂಬಿಕೆಯ ಗರ್ಭಕ್ಕವತರಿಸಿ ಪ್ರವರ್ಧಮಾನದಶಾಧೀಶನಿರೆ:—

ಅಕ್ಕರಂ|| ಬಸಿಱ ತೆಳ್ಪುಮಂ ತ್ರಿವಳಿಗಳೊಳ್ಪುಮಂ ಕುಚಚೂಚುಕಂಗಳ ಬಣ್ಣಮುಮ |
ನಸಿಯ ಬಾಸೆಯ ಮುನ್ನಿನ ರುಚಿಯುಮಂ ಮುಖಪೂರ್ವಚ್ಛವಿಯುಮಂ ಕಿಡಲೀಯದೇ ||
ನೆಸೆದು ಸೊಗಯಿಸಿ ತೋಱತೋ ಜಗದೀಶನಿರೆ ಗರ್ಭಂ ಬಳೆದು ಶಾರದ ನೀರದ |
ಪ್ರಸರದೊಳಗಣ ಚಂದ್ರಬಿಂಬದ ಪೋಲ್ ಚೆಲ್ವುವೆತ್ತುವೈರಾಮಹಾದೇವಿಯಾ || ೨೧೩ ||

ಕಂ|| ಅತಿದೀಪ್ತಿಬೋಧಮಯನಾ |
ಗಿ ತಣ್ಣದೊಂ ಜನನಿಯುದರದೊಳ್ ರತ್ನಸ್ತ್ರೀ ||
ಪ್ರತಿಕೃತಿಯೊಳರ್ಕಬಿಂಬ |
ಪ್ರತಿಬಿಂಬಂ ನೆಲಸಿ ಪೀಡೆಯಂ ಮಾಡುಗುಮೇ || ೨೧೪ ||

ವ|| ಮತ್ತಂ ರತ್ನಪ್ರತಿಬಿಂಬಬಿಂಬಿತಮಣಿದೀಪಪ್ರತಿಬಿಂಬದಂತಾನುಮಾಕಾಶಸ್ಫಟಿಕಾಂತರಿತ ದಹನಾರ್ಚಿಯಂತಾನುಮಚ್ಛಸಲಿಲವ್ಯವಹಿತಪದ್ಮರಾಗಮಣಿಯಂತಾನುಂ ತನ್ನ ಬೆಳಗೆ ಬೆಳಗಾಗೆ ಶುದ್ಧಗರ್ಭಾವಾಸದೊಳ್ ಜಿನಾರ್ಭಕಂ ಬಳೆಯೆ ವಿಶ್ವಸೇನಮಹೀಪಾಲಂ ಪ್ರಜಾಪಾಲನಪಾರಾಯಣ ನಾಗಿ ಯುಗ್ರಮನಪ್ರೇಕ್ಷಿತಮಗ್ರಾವ್ಯಧರ್ಮ(ರ)ತನಾಗಿ ಮಹಾದೇವಿಯ ಸಮೀಪದೊಳ್ ತದಾನ ನಾವಲೋಕನಮಾತ್ರ ಪರಿಪೂರ್ಣಾನಂಗವ್ಯಾಪಾರಪ್ರವಿಚಾರನಾಗಿ ಮತ್ತಮಾಮಹಾ ದೇವಿಯುಂ ತಾನುಂ:—

ಕಂ|| ಅಂಗವ್ಯವಧಾನದೊಳಮ |
ಪಾಂಗಸಮೀಪತೆಯೊಳಂ ನೃಪೇಂದ್ರಂ ಪೋಲ್ತಂ ||
ಗಂಗಾಶೀಕರಕಣಗಣ |
ಸಂಗಸಮಾಸನ್ನಪಾರಿಜಾತದ್ರುಮಮಂ || ೨೧೫ ||

ವ|| ಅನಂತರಂ ನವಮಾಸಾವಸಾನದೊಳ್ ಕಾರ್ತಿಕಶುದ್ಧಚತುರ್ದಶಿಯುಂ ಭರಣಿನಕ್ಷತ್ರಮು ಮಾಗೆ ಬೆಳಗಪ್ಪ ಜಾವದ ಬ್ರಾಹ್ಮಮೆಂಬ ಮುಹೂರ್ತದೊಳ್:—

ಮ|| ಸುರವೃಂದಾರಕವೃಂದಮರ್ತ್ಯಪತಿನಾಗಾಧೀಶಚೇತೋಮುಖಾಂ |
ಬುರುಹಂಗಳ್ ಮುದಿತಂಗಳಾಗೆ ಕುಮುದಧ್ವಾಂತೈಕನಿರ್ಭೇದನ ||
ಸ್ಥಿರವಿಜ್ಞಾನಮರೀಚಿ ಸಂದ ಜಿನಚಂದ್ರಾರ್ಕೋದಯಂ ಲೋಕದೊಳ್ |
ಕರಮೊಪ್ಪಿರ್ದುದುದಾತ್ತಜೈನಸಮಯೋತ್ತುಂಗೋದಯಾದ್ರೀಂದ್ರದೊಳ್ || ೨೧೬ ||

**ಗದ್ಯ**

ಇದು

ಜಿನೇಂದ್ರ ಚರಣ ಸರಸೀರುಹ ಶಿಲೀಮುಖಾಯಮಾನ

**ಶ್ರೀಮದುಭಯಕವಿ ಚಕ್ರವರ್ತಿ**

ನಿರ್ವರ್ತಿತಮುಂ

**ಅಮ್ಮನಭಕ್ತಾಭಿಧಾನ ವಿದ್ಯಾನಿಧಾನ ಮಲ್ಲಪಾರ್ಯ**

ತದನುಜಾತಾಭಿಜಾತ ಸಾರಸ್ವತ

**ಪುನ್ನಮಾರ್ಯ**

ಕಾರಿತಮುಮಪ್ಪ

**ಪುರಾಣಚೂಡಾಮಣಿಯೊಳ್**

ನವಮಾಶ್ವಾಸಂ.

|| ಶ್ರೀ ||

# ಶಾಂತಿಪುರಾಣಂ.

## ದಶಮಾಶ್ವಾಸಂ.

ಕಂ|| ಶ್ರೀಮಜ್ಜಿನಚಂದ್ರ ಸುಧಾ |
ಧಾಮೋದಯ ವಿಭ[ವ]ಮಂ ನೆಱಂ ಬಡೆದನ್ತೊಲಂ ||
ದಾಮಹಿಯುತ್ಸವ ಮೆಂಬುದ |
ಸಾಮಾನ್ಯಮದೃಷ್ಟಪೂರ್ವಮಶ್ರುತಪೂರ್ವಂ || ೧ ||

ವ|| ಅಂತಾತ್ರಿಲೋಕಚೂಡಾಮಣಿಯುದಯದೊಳ್ ಮಂದಮಂದಾಯಮಾನಪವನವಿಳಸನ ಮುಮಪಾಂಸುಲದಿಗ್ವಿನಿತಾವದನಲಕ್ಷ್ಮಿಯು ಮಭಿನವನಮೇರು ಮಂದಾರ ಪಾರಿಜಾತಕುಸುಮವರ್ಷ ಮುಮಿತಸ್ತತಸ್ಸಂಚಲದಮರಕರಪರಿತಾಡ್ಯಮಾನಮಹನೀಯದೇವದುಂದು ಭಿನಿಘೋಷ ಲೀಲೆಯುಂ ಗಗನದಿಗವನೀವಳಯವಿಲಂಬಿವ್ಯತಿಕರಮಪ್ಪದುಂ ಭವನನಿಳಯವ್ಯಂತಿರಾವಾಸಜ್ಯೋತಿರಮರ ಕಲ್ಪಾಲಯಚತುರ್ಭೇದಭಿನ್ನಮಪ್ಪ ದೇವಲೋಕದೊಳ್ ಶಂಖಪಟಟ ಕಂಠೀರವ ಘಂಟಾರವಂಗಳೊ ರ್ಮೊದಲೆಸೆವುದುಮರ್ಹದ್ದ್ವಿತೀಯಕಲ್ಯಾಣಮನಱಿದು ಸಮುದ್ರವೇಳಾವಿಳಾಸೋಪಹಾಸಿಯಾಗಿ ನಾಲ್ಕುಂ ದೇವಲೋಕದೊಳ್ ಶೋಭಿಸುತ್ತಿರ್ಪನ್ನೆಗಂ:—

ಉ|| ಆಸನಕಂಪದಿಂದಮಿಱಿದಾಸನದಿಂ ಕರಪದ್ಮಕುಟ್ಮಲೋ |
ದ್ಭಾಸಿಲಲಾಟಪಟ್ಟರತಿಸಂಭ್ರಮದಿಂ ಪೊಡೆವಟ್ಟು ನೂಱನೂ ||
ರ್ಭಾಸಿರಮಂ ವಿಗುರ್ವಿಸಿ ವಿಮಾನದ ಯಾನದ ವಾಹನಂಗಳ |
ಗ್ರೇಸರಸದ್ವಿಮಾನಮುಮನರ್ಚನೆಯೊಳ್ ದೊರೆಕೊಂಡ ಚೆಲ್ವುಮಂ || ೨ ||

ವ|| ಅವಗಯಿಸಿ:—

ಕಂ|| ತಳರ್ದರ್ಗಳ್ ಜಿನಪುಣ್ಯಾ |
ನಿಳಚಳಿತ ಚತುರ್ವಿಧಾಮರೇಂದ್ರಾಂಬುಧಿ ಕ ||
ಣ್ಗೊಳಿಸಿದುದು ದೇವಸಮಿತಿಯ |
ವಿಳಾಸಮಂ ನೆಱೆಯೆ ಪೊಗೞಲಾರ್ಪೊಂ ನೇಱಿರ್ಪೊಂ || ೩ ||

ವ|| ಅಂತು ಮೂವತ್ತಿರ್ವರಿಂದ್ರರುಂ ಪರಿವೇಷ್ಟಿಸಿ ಬರೆ ಸೌಧರ್ಮೇಂದ್ರನೈರಾವಣಕರೀಂದ್ರ ಮನೇಱಿ ಸಾಮಾನಿಕತ್ರಯಸ್ತ್ರಿಂಶಲ್ಲೋಕಪಾಲಪಾರಿಷದಾತ್ಮರಕ್ಷಕಾಭಿಯೋಗ್ಯಕಿಲ್ಬಿಷಿಕಾದಿ ಪರಿವಾರ ಪರೀತರಾಗಿ ಹಸ್ತ್ಯಶ್ವರಥಪದಾತಿವೃಷಭಗಂಧರ್ವನರ್ತಕೀವಾರಸಪ್ತಾನೀಕಂ ಬೆರಸು ಜಿನೇಂದ್ರ ದ್ವಿತೀಯಕಲ್ಯಾಣೋತ್ಸುಕರಾಗಿ ಬರೆವರೆ:—

ಕಂ|| ರಾಗಂ ಮೆಯ್ಯೊಳ್ ಪೊಂಪುಳಿ |
ವೋಗೆ ಪೊನಲ್ವರಿಯೆ ನೃತ್ಯವಾದನ ಗೀತೋ ||
ದ್ಯೋಗದ ಸಂಗೀತಕರಸ |
ಮಾಗಳ್ ಸುರಗಗನಗಮನಮೋನೊಪ್ಪಿದುದೋ || ೪ ||

ಕಂ|| ಆಗಸದೊಳಡರ್ದು ಪರದಿರ |
ದೀಗಡೆ ನಿರ್ವಾಣರೇಖೆಗೊಂಡನೊ ಬಿದಿಯಂ ||
ಬೀಗಮನಿಕೆಯಂತಾದೇ |
ವಾಗಮ[ನ]ದ ಚೆಲ್ವುವಾಗಗೋಚರಮಲ್ತೇ || ೫ ||

ವ|| ಎಂಬಿನಂ ಬಂದು ಹಸ್ತಿನಪುರಮನೆಯ್ದಿ ವಿಶ್ವಸೇನಮಹಾರಾಜನ ರಾಜಮಂದಿರದೊಳಮರೇಂದ್ರಸಮೇತಮಮರನಿಕಾಯಮಿರೆ ಪರಮಪವಿತ್ರೆ ಪುಲೋಮಪುತ್ರಿ ಪರಿವಾರದೇವೀಸಮನ್ವಿತೆ ಪೋಗಿ ಮಹಾದೇವಿಯ ಪ್ರಸೂತಿಕಾ ನಿಕಾಯ್ಯಮಂ ಪೊಕ್ಕು:—

ಕಂ|| ಗಂಗಾಸಿಕತಿಳತಳದು |
ತ್ಸಂಗದೊಳೆಸೆವೊಂದು ಹೇಮಪದ್ಮಮೆ ಗೆತ್ತಿಂ ||
ದ್ರಾಂಗನೆ ನೋಡಿದಳಂಬಿಕೆ |
ಯಂಗೋಪಾಂತದ ಜಿನೇಂದ್ರದಾರಕರವಿಯಂ || ೬ ||

ವ|| ಕಂಡು ಮೂಮೆ ಬಲಗೊಂಡೆಱಗಿ ಪೊಡೆವಟ್ಟುಮಟ್ಟಿಕೆಱೊಳ್ ನಿಂದು ಭಾವಿಸಿ ನೋಡಿ:-

ಕಂ|| ತೆಂಬಲರಲೆಪದ ಪೂಲತೆ |
ಯೆಂಬಿನ ಮಂಕುರಿಸೆ ಪುಳಕಮೊರ್ಮೊದಲೊಳೆ ಬಿ ||
ಲ್ಲುಂ ಬೆಱಗುವಮಾಗಿ ಸತಿ ಚೋ |
ದ್ಯಂ ಬಟ್ಟಳಜಾತಪೂರ್ವವಿಸ್ಮಯದಿಂದಂ || ೭ ||

ವ|| ಅಂತು ಜಿನಾರ್ಭಕನಂ ನೋಡಿ ತದೀಯಾಂಗಸಂಗತಲಕ್ಷಣವ್ಯಂಜನಂಗಳಂ ನೋಡಲಱಿಯದೆಯುಂ, ಎತ್ತಿಕೊಳಲಣ್ಮದೆಯುಮಿರ್ದಿಂದ್ರನಾಜ್ಞೆಯಂ ಬಗೆದು ಕಿಱಿದು ಶಂಕೆವೆರಸು:—

ಕಂ|| ಒಳ್ಳಾನೆಗೋಡಲರಿಯದ |
ಬೆಳ್ಳಾಳವೊಲಗಿದು ಕಂಡು ಲಾವಣ್ಯರಸಂ ||
ತಳ್ಪಂಕುಗುಟ್ಟಿ ಮುಳ್ಳಿಸಿ |
ದಳ್ಳಿಱಿದಾಡುವ ಜಿನೇಂದ್ರಶಿಶುವಂ ತಳದಿಂ || ೮ ||

ಅಕ್ಕರಂ|| ನಿಡಿಯ ಬಳ್ಳಿಯ ತುಱುಗೆವೆಗಣ್ಗಳಂ ಕೆನ್ನೆಯ ನೆಯ್ದಿದ ಪುರ್ವುಗಳಂ |
ಪೊಡವಿ ಷಟ್ಖಂಡಕ್ಕಡಿಯಿಡುವಡಿಗಳಂ ತೊಳಗಿ ಬೆಳಗುವ ಪೆಱೆನೊಸಲಂ ||
ಪಡೆದ ಕಾಮದೇವತ್ವಮನವಗಯಿಸುವಂತಿರ್ದ ರೂಪಿನ ಬಾಲಕನಂ |
ಬಡವಂ ಮಾಣಿಕಂಬೆತ್ತಂತೆ ರಾಗದಿನೆತ್ತಿಕೊಂಡಿಂದ್ರನ ದೇವಿ ಬಂದಳ್ || ೯ ||

ವ|| ಅಂತೈರಾದೇವಿಯ ಮುಂದೆ ಮಾಯಾರ್ಭಕನನಿರಿಸಿ ಜಿನಾರ್ಭಕನನೆತ್ತಿಕೊಂಡು ಬರೆ ಸುರಸುಂದರಿಯರ ತಳ್ತು ಪಿಡಿದ ವಜ್ರದ ಕೊಡೆಗಳನೆಳಲ್ಗಳೊಳಂ, ಗೊಂದಳದಿನಿಕ್ಕುವ ಚಾಮರಂಗಳ ತಣ್ಗಾಳಿಯೊಳಂ, ಮಂಗಳಗೀತೆಪೂತೆಯರ ಪಿಡಿದ ಮಂಗಳೋಪಕರಣವಾದ್ಯದೊಳಂ ವಿಸ್ಮಿತನಾಗಿ ತ್ರಿಭುವನಮೂಲಸ್ತಂಭಂ ಸಕಳಕಳಾಧರಲೀಲಾವಳಂಬಿತವದನೇಂದುಸಾಂದ್ರಚಂದ್ರಿಕಾ ಮೃತಚ್ಛಟಾಸ್ಫೋಟಿತಸುರಾಧೀಶನೆಟ್ಟಿಂದುದಂ ಕಂಡು:—

ಮ|| ಜಯ ಜೀವಾಧಿಪ ನಂದ ನಂದ ಸುಚಿರಂ ವರ್ಧಸ್ವ ವರ್ಧಸ್ವ ಯೆಂ |
ದು ಯಥಾರ್ಥಂ ಸ್ತುತಿಗೆಯ್ದು ರತ್ನಮಕುಟಂ ನ್ಯಿರ್ಯಾಣಮುಂ ತಾಗೆ ದಂ ||
ತಿಯ ಮೇಗಿರ್ದು ವಿನಮ್ರನಾಗೆ ದಿವಿಜೇಂದ್ರಂ ತನ್ಮನೋನೀತಿಭ |
ಕ್ತಿಯ ಪೆಂಪಂ ಪವಣೆಯ್ದೆ ಪೇಟಲಱಿಯೆಂ ವಾಗ್ಗೋಚರಾತೀತಮಂ || ೧೦ ||

ಕಂ|| ಆಯೆಡೆಯೊಳಱಿಗೆ ದಿವಿಜನಿ |
ಕಾಯಂ ತನ್ಮಣಿಕಿರೀಟಕುಳಚಳನದೊಳಿಂ ||
ದ್ರಾಯುಧಮಯಮಾದುದು ನಿಖಿ |
ಳಾಯತನೃಪಭವನಭುವನದಿಗವನಿಮಧ್ಯಂ || ೧೧ ||

ಚಂ|| ಅಮರರ ದಂತಿ ನಿರ್ವಿಸೆಯುಂ ಶಚಿ ನೀಡೆಯುಮಿಂದ್ರನಾಂತು ಸಂ |
ಭ್ರಮಮನನಾಗಿ ಬಾಗಿ ಕೊಳೆಯುಂ ಜಿನಬಾಲಕನೇಱಿಯುಂ ಸಸಂ ||
ಭ್ರಮ ಸುರವರ್ಧಮಾನಪಟಹಧ್ವನಿ ಪೊಣ್ಮೆಯು ಮುತ್ಸವಂ ಮನೋ |
ರಮಹೃದಯಂಗಮಾನುಷಮುಮಾದುದು ಜನ್ಮದೊಳಿಂದ್ರವಂದ್ಯನಾ || ೧೨ ||

ವ|| ಅಂತು ಜಿನದಾರಕನಂ ಪಾರಿಜಾತಪಲ್ಲವಾಯಮಾನನಿಜಕರಪಲ್ಲವಂಗಳಿನೆತ್ತಿಕೊಂಡೈರಾವತಬಂಧುರಸ್ಕಂಧದೊಳಿಟ್ಟು ಪರಮೌದಾರಿಕಶರೀರಸ್ಪರ್ಶನಸುಖಾನುಭವನಿಮೀಳಿತಲೋಚನಂ ಸೌಧರ್ಮೇಂದ್ರ ನಿಂದ್ರಾಣಿಯಂ ಪೆಱಗನೇಱಿಸಿಕೊಂಡುತ್ತರಾಭಿಮುಖನಾದಾಗಳ್:—

ಕಂ|| ಜಿನನ ತನುಜ್ಯೋತ್ಸ್ನೆಯಿನಿಂ |
ದ್ರನಯನಕುವಲಯವನಂಗಳಲರ್ದುವಿಭಂ ಕಾಂ ||
ಚನಶಿಖರದ ಹಿಮವದ್ಗಿರಿ |
ಯೆನಿಸಿದುದಘಹರನ ಕನಕತನುಸುಚ್ಛವಿಯಿಂ || ೧೩ ||

ವ|| ಆಗಳೀಶಾನೇಂದ್ರಂ ಮುತ್ತಿನ ಮುರಿದ ಲಂಬಣಂಗಳಿಂ ನೇಲ್ವ ಸೌಗಂಧಿಕದ ಸೂಸಕಂಗಳಿಂ ಪದ್ಮರಾಗ(ದ) ಮಣಿಚೂಳಿಕೆಯಿಂದಂ ನಯನಮನೋಹರಮಪ್ಪ ಚಂದ್ರಕಾಂತಧವಳಾತಪತ್ರಮಂ ಪಿಡಿಯೆಯುಂ; ಸನತ್ಕುಮಾರಮಾಹೇಂದ್ರಪತಿಗಳಿಂದ್ರಾಯುಧೋಪಮಾನಪರಾರ್ಧ್ಯಮಣಿಮಯೂಖಮಾಳಿಕಾದುರಾಲೋಕನನಕ್ಷತ್ರಮಾಳಾಕಳಾಪಕಕ್ಷಂಗಳಪ್ಪ ಪಕ್ಷಗಜಂಗಳನೇಱಿ ಗಂಗಾತರಂಗಧವಳವಿಲೋಲಚಾಮರಂಗಳನಿಕ್ಕೆಯುಂ; ನಾಕಲೋಕಚಂದನಚರ್ಚಾಚರ್ಚಿತಸುರಭಿನಮೇರು ಮಂದಾರ ಪಾರಿಜಾತ ಕುಸುಮಾರ್ಚಿತ ದೇವಾಂಗಪಟಪ್ರಚ್ಛದಾಚ್ಛಾದಿತಪಂಚ ರತ್ನಮಯವೇದಿಕಾವಿರಾಜಮಾನಸಮುತ್ತುಂಗಮಣಿಪೀಠಪ್ರತಿಮಮಪ್ಪ ಸೌಧರ್ಮೇಂದ್ರನುತ್ಸಂಗದೊಳ್ ತೀರ್ಥಕರಕುಮಾರಂ ಬರೆ ಚತುರ್ವಿಧಾಮರನಿಕಾಯಂ ನಡೆಗೊಂಡಾಗಳ್:—

ಕಂ|| ಸುರಕರಿಗೆ ಮೊಗಂ ಮೂವ |
ತ್ತೆರಡದಱೊಂದೊಂದು ಮೊಗಕೆ ಕೋಡೆಂಟೆಂಬಾ ||
ಗಿರಿ ಕೋಡೊಳೊಂದು ಕೊಳನಾ |
ಸರದೊಳ್ ನವನಳಿನಲತೆಗಳೋರೊಂದವಱೊಳ್ || ೧೪ ||

ಸರಸಿರುಹಲತೆಗೆ ಮೂವ |
ತ್ತಿರಡಂಬುಜಮಂಬುಜಕ್ಕಮೆಸಳ್ಗಳ್ ಮೂವ ||
ತ್ತಿರಡವಱ ಮೇಗೆ ಕುಣಿವರ್ |
ಸುರವನಿತೆಯರಿಂದ್ರನಾಜ್ಞೆಯಿಂದೋರೋರ್ವರ್ || ೧೫ ||

ಎಸಳ ಮೊನೆ ಕೂರಿತಡಿಗೆಂ |
ಬ ಸಂಕೆಯಿಂ ಮೆಟ್ಟದಂತೆ ಮುಟ್ಟದೆ ಕುಣಿದಾ ||
ಗಸಮೆಂಬ ರಂಗದೊಳ್ ಬ |
ಣ್ಣಿಸರಮನಾಡಿದರನೇಕರಮರಾಂಗನೆಯರ್ || ೧೬ ||

ಸರಸಿರುಹದ ಮೇಗಾಡುವ |
ಸುರಸುದತಿಯರಾಟದಂದಮೆಂತೆನೆ ಸಿರಿಯಂ ||
ಪರಿಭವಿಸಿ ತಂದು ಪೊಸಯಿಪ |
ಸಿರಿವಂತಿಕೆಯಿಂದೆ ಕಾಲೊಳೊದೆದಪರೆನಿಕುಂ || ೧೭ ||

**ವ||** ಅನಿವಿರಿದುಮಹಿಮೆಗೆ ನೋಂತ ತೀರ್ಥಕರಬಾಲಕನಂ ತಮ್ಮನೆ ನೋಡಿಸುವ ಬಗೆಯಿಂ:-

ಕಂ|| ಬಗೆದಂದಮುಪ್ಪ ತನು ಬಗೆ |
ವುಗೆಯುಂ ಬಗೆದಂದಮುಪ್ಪ ಕೆಯ್ತಂ ಚಿತ್ತಂ ||
ಬುಗೆಯುಂ ಪಪ್ಪದ ದೇವರ್ |
ತೆಗೆದರ್ ಕಿಱುಕಿಱದೆ ದುರಿತಹರಣನ ಬಗೆಯಂ || ೧೮ ||

**ವ||** ಮತ್ತಮಾದಿವಿಜವಂದಿಸಂದೋಹಂ:—

ಕಂ|| ಪೊಗಟ್ದರ್ ತಮ್ಮಱುವನಿತನೆ |
ಪೊಗಟ್ವುಪಮೆಗಳುಂಬಮಾದ ಜಿನನಂ ಕೆಯ್ದಾ ||
ವಿಗೆ ಬೆಳಗುವನಿತನಲ್ಲದೆ |
ದಿಗವನಿಗಗನಾಂತರಾಳಮಂ ಬೆಳಗುಗುಮೇ || ೧೯ ||

**ವ||** ಅಂತಮರಸಮಿತಿ ಸುರಕರಿಯಂ ಬಳಸಿ ಬರುತ್ತುಂ:—

**ಹರಿಣೀವೃತ್ತಂ||** ಪರಮ ದಯೆಗೆಯ್ ನಿನ್ನೊಳ್ ತೊಟ್ಟೊಂದು ಭಕ್ತಿಯನಾದರಂ |
ಬೆರಸು ಪೆಱತೊಂದೇಮುಟ್ಟಾವೊಲ್ಲೆಮಂತದನೆಂಬ ತ ||
ತ್ಸುರಸಮುದಯಂ ಚೇತೋವಾಕ್ಕಾಯಶುದ್ಧಿಗಳೊಳ್ ತಮೋ |
ಹರನನೆಱದರ್ ದುಷ್ಕರ್ಮಾರಾತಿ ಹೇತಿವಿಭೀತಿಯಿಂ || ೨೦ ||

ಕಂ|| ದುರಿತಾರಿಯನಭವಂ ಗೆ |
ಲ್ದಿರೆ ಮೊಟಗುವ ವಿಜಯಪಟಹದಂತೆ ನವಾಂಭೋ ||
ಧರರವದಿ ನೇಟುಕೋಟಿಯು |
ಮರೆ ಸುರದುಂದುಭಿಗಳೊಡನೆ ಮೊಟಗಿದುವಾಗಳ್ || ೨೧ ||

ವ|| ಅಂತು ನಭೋಯಾನದಿಂದಮಮರನಾಹಿನಿ ಬರ ಪರಿಕಲಿಸಿಯುಂ, ತುಱುಂಬಿಯುಂ, ನಿಗುಂಬಿಸಿಯುಂ, ಕೇಳಿಸಿಯುಂ ನಡೆದು ದಿಗಂತಪರ್ಯಂತಮಾನಾಕಲೋಕಮೆಲ್ಲಂ ಕಿಟ್ಟಿಟ್ಟು ಬರ ಕವಿದ ಮಣಿಮುಕುಟದ ತೊಟ್ಟಾಭರಣದುಟ್ಟ ದುಗುಲದ ಕಿಕ್ಕಿಱಿಗಿಱಿದ ಧವಳಛತ್ರಂಗಳೊಳ್ ತಳ್ಪೊಯ್ದು ಯಾನವಿಮಾನಂಗಳೊಳ್ ಪಾಯ್ದಾಯ್ದು ತಟ್ಟಿಕ್ಕುವ ಧವಳಚಮರರುಹಂಗಳ ಮುಂದೆ ಪೊಳೆವ ದುಗ್ಧಾಬ್ಧಿಫೇನಪಿಂಡಪಾಂಡುರಂಗಳಪ್ಪೊಷ್ಠರಂಗಳೊಳಂ ದಂದಶೂಕಬೃಂದದಂತೆ ವನ ಪಾವನದೊಳ್ ಮೆಯ್ವಡೆದ ಮತ್ಸ್ಯಮಕರಸಿಂಹವ್ಯಾಘ್ರಾದಿಪತಾಕಾನೀಕದೊಳಂ ದೆಸೆಗೆ ಬೆಸೆದು ಬಿಱನೆ ಬೀಱುವ ಪೊಸಸಿರಿವಂತನಂತೆ ವಾತಪೂರಣಂಗಳೊಳಂ ಪರಭಾಗಂ ಬಡೆದು:—

ಕಂ|| ಅತಿಶಯಪಂಚರುಚಿ ಪ್ರತಿ |
ಕೃತಿ ಹರಿತಂ ತಾಮ್ರಕೃಷ್ಣಪೀತಸಿತ ಶ್ರೀ ||
ಧೃತವಾಗಿ ಸೂಯಿಯಾಣದ |
ವಿತಾನಮಂ ಪೋಲ್ತುದಖಿಳಧರಣೀಮಾರ್ಗಂ || ೨೨ ||

ವ|| ಮತ್ತಂ:—

ಕಂ|| ವಸುಧೆಯೊಳೆಸೆದಿರ್ದಭಿಷೇ |
ಕ್ಷಿಸುವ ಜನಕ್ಕೆಯ್ದೆ ಜಿನನ ಜನ್ಮೋತ್ಸವಮಂ ||
ಬೆಸಕೆಯ್ದು ಮಣಿವಿತಾನದೊ |
ಳೆಸೆದಂತೆಸೆದತ್ತಶೇಷದೇವ ನಿಕಾಯಂ || ೨೩ ||

ವ|| ಅಂತು ಪಿರಿದಪ್ಪುದಱಿಂದನೇಕಮುಖದೊಳ್ ನಡೆವ ಸುರಕೋಟಿಯಂ ಕಂಡು ಸೌಧರ್ಮೇಂದ್ರಂ ಜಿನಾಭಿಷೇಕಕ್ಕೆ ನಿಂದಕೃತ್ರಿಮಹೇಮಪಟ್ಟಕಾಕಾರದಿಂ ಪವಿತ್ರಮಾದಮರಗಿರೀಂ ದ್ರಕ್ಕೆನಡೆಯಿಮೆಂದು ಗಿರಿದುರ್ಗಕ್ಕೆ ಕಯ್ವಾಸುವಂತೆ ಸನ್ನೆಗೆಯ್ದು ಚಾಮರಮಂ ಬೀಸುವುದುಂ:—

ಮ|| ಬಗೆಯಲ್ ಬಾರದ ದೇವರಾಜಬಲಮಂ ಭೋರೆಂದು ಪೋಪೋ ಪುಗಲ್ |
[ಪುಗಲಿ] ತ್ತತ್ತ ದಿವೌಕದಿಂ ಪೊಱಗೆ ನಿಲ್ ನಿಲ್ ಪಿಂಗು ನೀನೆಂಬ ದಂ ||
ದುಗದಿಂ ದೇವರ ದಂಡಧಾರರೆರಡುಂ ಪಕ್ಷಂಗಳೊಳ್ ಸಾರೆ ನೂ |
ಲ್ದೆಗೆದಂತಿಂದ್ರಗಿರೀಂದ್ರ ಮೆಯ್ದುವಿನೆಗಂ ಪೋಯ್ತಾಗಳಿಂದ್ರದ್ವಿಪಂ || ೨೪ ||

ವ|| ಅಂತು ಜ್ಯೋತಿರ್ಲೋಕಂಗಳ ವಿಮಾನಂಗಳ್ ತೊಲಗೆಯುಮಿದಿರಾದ ಜಲಧರಪಟಲಂ ಗಳರಲೆಯುಂ ದಿವಿ(ಜ)ಕರ್ಮಕರ್ಬಟ್ಟೆಯಂ ಸಮಱಿ ಬಂದು ಮುಂದರಪ್ರಥಮಕಂದರದ ಭದ್ರ ಶಾಳವೇದಿಕೋಪಾಂತದೊಳ್ ನಿಂದು:—

ಕಂ|| ಇದು ಶತಸಹಸ್ರಯೋಜನ |
ಮುದಗ್ರಮಿದನಡರ್ವ ತೊಡರ್ವ ಗಸಣಿಯೊಳೇನಂ ||
ಬುದನೆಂದು ದಿವಿಜಗಜಮಂ |
ಬುದಮಾರ್ಗಕ್ಕೊಗೆದುದೊಗೆವ ರಜತಾದ್ರಿಯವೋಲ್ || ೨೫ ||

ಆಗಿರಿಯ ದರಿಯ ಕರ್ಪೂ |
ರಾಗುರುಕುಜತತಿಯ ಮೇಗಣಿಂ ಪೋಗೆ ಮರು ||
ನ್ನಾಗಂ ಬಿಳಿಯ ಮುಗಿಲ್ಗಳ |
ಮೇಗಂ ನಡೆವಿಂದುಬಿಂಬಮೆನಿಸಿದುದಾಗಳ್ || ೨೬ ||

ವ|| ಅಂತಮರಮಹೀಧರಂಬಿಡಿದು ಮೇಗಣ್ಗೊಗೆವಿಂದ್ರಕರೀಂದ್ರದ ಬಱವಱಯನೆ:—

ಕಂ|| ಓರಂತು ಪೋಪ ದಿವಿಜರ |
ಹಾರಿ ತಟಂಬಿಡಿದು ಪೊಕ್ಕು ಪೋಱಮಡುವೊಂದಾ ||
ಕಾರಂ ಗಿರಿರಾಜನ ನವ |
ಹಾರದ ಲಂಬಣಮನೇನದನುಕರಿಸಿದುದೋ || ೨೭ ||
ನವಕುಸುಮಾವಚಯಕ್ಕಮ |
ರವನಿತೆಯರ್ ತಗುಳೆ ಪಾರಿಜಾತಾವಳಿ ಸೋ ||
ಲ್ತುವರ್ಗೆ ಕರಂ ಮುಗುಱ್ದುಂ ಪ |
ಲ್ಲವಿಸಿದುವೆನಿಸಿದುವು ತಳದ ವೆಳ್ಪಂ ಕೆಂಪುಂ || ೨೮ ||

ವ|| ಅಂತು ಪೋಗಿ ಪಾಂಡುಕವನದ ಮೂಡಣದೆಸೆಯೊಳ್ ನೂಱುಯೋಜನವಾಯಾಮದೊಳಮಯ್ವತ್ತುಯೋಜನವಿಸ್ತಾರದೊಳಮೆಂಟುಯೋಜನಮುತ್ಸೇಧದೊಳಮಮರ್ದು ಚಂದ್ರಸ್ವರೂಪದೊಳಮೊಪ್ಪಿ:—

ಕಂ|| ಕುಳಿಶಾವಳಿಗಳನಮರ್ದಿಂ |
ತೊಳೆದಡಿಗಲ್ಲಿಕ್ಕಿ ಬೆಳ್ಳಿಯಿಟ್ಟಗೆಯಿಂ ಚೌ ||
ಪಳಿಯಿಕ್ಕಿದಂತೆ ತೊಳತೊಳ |
ತೊಳಗಿ ಬೆಡಂಗಿಡಿದ ಪಾಂಡುಕಾಹ್ವಯಶಿಲೆಯೊಳ್ || ೨೯ ||

ವ|| ಪೂರ್ವಾಭಿಮುಖಮಾಗಿ ನಿಂದು ಮೃಗೇಂದ್ರಾಸನದೊಳ್ ಜಿನೇಂದ್ರದಾರಕನನಿರಿಸೆ ಸಿಂಹಾಸನದಿಕ್ಕೆಲದೊಳಂ ಕಿಗ್ಗದುವಾಗಿರ್ದ ಮಣಿಮಯಭದ್ರಾಸನದೊಳ್ ಸೌಧರ್ಮೇಶಾನೇಂದ್ರರಿರ್ದು ವಿರಚಿಸೆ:—

ಮ|| ನವಮುಕ್ತಾಫಳಮಧ್ಯವಿದ್ರುಮಮಣಿಪ್ರಾಲಂಬಿ ಲಂಬೂಷಮೆ |
ಯ್ದುವ ರೋಚಿರ್ನಿಚಯೋಜ್ಜ್ವಳಂ ಸುರಭಿದಾಮೋಲ್ಲಾಸಿ ಮಂದಾರಪ ||
ಲ್ಲವಮುತ್ತೋರಣಮಿಂದ್ರಲೋಕವಸನಾವಷ್ಟಂಭಿತಸ್ತಂಭವಿ |
ದ್ಧವಿತಾನಂ ಮಣಿಕೇತನಂ ಸಮೆದುದುದ್ಯೋತಾತಪಂ ಮಂಡಪಂ || ೩೦ ||

ವ|| ಅದಱೊಳಗಣ ಮೃಗೇಂದ್ರವಿಷ್ಟರದೊಳ್ ಕೂಸಾಗಿಯುಂ ಪ್ರಭಾವಿಶೇಷದಿಂದೆರಡನೆಯ ಮಂದರದ ಚೂಳಿಕೆಯಿರ್ಪಂತಿರಿರ್ದ ಜಿನೇಂದ್ರಂಗೆ ಸೌಧರ್ಮೇಂದ್ರಂ ಜನ್ಮಾಭಿಷೇಕೋದ್ಯುಕ್ತನಾಗಿ ದಕ್ಷಿಣೇಂದ್ರಂಬೆರಸು ನಿಂದಿರ್ದ ಸಾಮಾನಿಕದೇವರಂ ಜಿನರಾಜಂಗೆ ಮೆಯ್ಗಾಪಾಗಿರಿಸೆ:—

ಕಂ|| ಸುರಪತಿ ಶಿಖಿ ದಂಡಧರಂ |
ನಿರುತಿ ಜಳೇಶಂ ಸಮೀರಣಂ ಧನದನುಮೀ ||
ಶ್ವರನೆಂಬ ಲೋಕಪಾಲರ |
ನಿರವೇೞ್ದುವರವರ ದೆಸೆಯೊಳನುಚರಸಹಿತಂ || ೩೧ ||

ಮಹಿಳಾಸಹಿತಂ ವಾಹನ |
ಸಹಿತಂ ಸಂಗೀತಸಹಿತಮತಿಶುದ್ಧಮನ ||
ಸ್ಸಹಿತಂ ನಿಜವಿವಿಧಾಯುಧ |
ಸಹಿತಂ ನಿಲವೇಟ್ಟಿ ನೆಲೆಯೊಳಿರೆ ದಿಗಧೀಶರ್ || ೩೨ ||

ವ|| ಇತ್ತ ಜಿನಬಾಲಕಾಧ್ಯಾಸಿತಪ್ರದೇಶದೊಳ್:—

ಕಂ|| ಲಸದಗುರುಸುರಭಿಸಾರ |
ಪ್ರಸರಂ ನವಧೂಪಧೂಮಮಮರಾದ್ರಿಯನಾ ||
ಗಸಮನಮರೇಂದ್ರರಂ ದಿ |
ಕ್ಪ್ರಸರಮನೇಂ ಪುದಿದು ನಿಲೆ ಪುದುಂಗೊಳಿಸಿದುದೋ || ೩೩ ||

ವ|| ಅಲ್ಲಿಂ ಬಱಿಯಂ:—

ಕಂ|| ಕನಕಾದ್ರಿಶಿಖಾವಳನ |
ರ್ತನಕ್ಕೆ ಲಯಮೆಳಸೆ ದಿವಿಜದುಂದುಭಿ ಶಂಖ ||
ಸ್ವನದೊಡನೆ ಮೊಟಗಿದುವು ಜಿನ |
ಜನನಾಭಿಷವಪ್ರಸಂಗಮಂಗಳವಿಧಿಯೊಳ್ ||೩೪ ||

ಮ|| ಸಮಶುದ್ಧಸ್ಫುಟಮಪ್ಪುದೊಂದು ಸುತಿಯಂ ಪ್ರಾರಂಭಿಗಂ ಮಾಡೆ ತಾ |
ಳ[ಮ] ನುದ್ದಂಬಿಡಿದಂಗವರ್ತನೆಯೊಳಾಭೋಗಂ ಪೊದಟಿಲ್ದೊಪ್ಪೆ ಬಂ ||
ಹಿಮವನ್ಮಂದರಕಂದರಪ್ರತಿರವಂ ಕೂಟಕ್ಕೆ ಮೆಯ್ಯೊಡ್ಡೆ ಪಂ |
ಚಮಮಾಂಗಲ್ಯದೊಳಿಂದ್ರಗಾಯಕರದೇನಿಂಬಿಂ ನಯಂಬೆತ್ತರೋ || ೩೫ ||

ವ|| ಮತ್ತಂ ತ್ರಿಭುವನೈಕ(ಸಕಲ) ಚಕ್ರವರ್ತಿಯ ನಾಲ್ಕುಂದೆಸೆಯೊಳಂ ಸೂಟ್ಸೊಟಿರ್ೋಳ್:-

ಕಂ|| ಅಮರರ ಗಾಣರ ಮುಖರಿಗ |
ಳಮರ್ದಂ ಕೆದಱದವೊಲೆಳಸೆ ಗಾಣತಿಗೆಯ್ದು ||
ತ್ತಮಮಧ್ಯಮನೀಚಲಯ |
ಕ್ರಮತಾಳದಿನ್ನೆಸೆಯೆ ಪಾಡಿದರ್ ಮಂಗಳಮಂ || ೩೬ ||

ವ|| ತದನಂತರಂ ಪ್ರಥಮಲೋಕಾಮರೇಶನುಮಿಶಾನೇಶನುಂ ಚಂಚತ್ಪಂಚರತ್ನಗೋಶೀರ್ಷಚಂದನ ನಿರ್ಮಲಾಕ್ಷತಾರ್ಘ್ಯಮನೆತ್ತಿದಿಂ ಬಱಿಯಿಂ:—

ಕಂ|| ಸುರಪತಿಯುಗಳಂ ಕಳಶೋ |
ದ್ಧರಣೋದಿತಮಂತ್ರದಿಂದಮೋಂಕಾರಪುರ ||
ಸ್ಸರಮಮರದ್ರುಮಪಲ್ಲವ |
ಪರಿಶೋಭಿತಶಾತಕುಂಭಕುಂಭದ್ವಯಮಂ || ೩೭ ||

ವ|| ಪದ್ಮಾದಿ ಸರೋವರವಾರಿಪೂರಿತಮನೆತ್ತಿಕೊಳ್ವುದುಮುಱದನಿಬರಿಂದ್ರರುಮಭಿಷೇಕಮಂಗಳ ದ್ರವ್ಯಂಗಳಂ ಕೂಡಿ ಶಚೀದೇವಿ(ಶಕ್ರ) ಕರತಳಕ್ಕವಂ ನೋಡಿ ನೀಡೆ ಪುರೋಡಾಶಕಷಾಯಸ್ನಾನೀಯೋದ್ವರ್ತನಸಂಚಾವಳಿಸ್ನಾನೋಪಕರಣಂಬೆರಸು ಜಗದೇಕಬಂಧುವಂ ಮಜ್ಜನಂಬುಗಿಸಿ:—

ಕಂ|| ನೀರೊಳ್ ಪಂಚಮಜಲಧಿಯ ||
ನೀರ ಪವಿತ್ರಂ ಪವಿತ್ರಮಲ್ಲವು ಪೆಱವೆಂ ||
ದೋರಂತು ತದಂಭೋಧಿಯ |
ನೀರಂ ತರವೇಟ್ಟಿನಮರರಿಂದಮರೇಂದ್ರಂ || ೩೮ ||

ತರವೇಟಲೊಡಂ ಸುರರೂ |
ರ್ವರೊರ್ವರ್ಗಂ ಕಟಾಯೆ ತೀನತೀನಂ ತಳರ್ದುರ್ಗಂ ||
ಭರದಿಂ ನೀರಂ ಮೊಗೆದುಂ |
ಪರಿತಂದರ್ ಕನಕಕಳಶವಿಶದೋದಕಮಂ || ೩೯ ||

ವ|| ಸೌಧರ್ಮೇಶಾನೇಂದ್ರರ ಕೆಯ್ಯೊಳ್ ನೀಡುತ್ತುಮಿರೆಯಿರೆ ಮೇರುವಿನ ಪಂಚಮ ಸಮುದ್ರದೆಡೆಯೊಳ್ ನಿಂದಮರಸಮಾಜಮೊಂದೋರೂರ್ವರ ಕೆಯ್ಗೆ ಯ್ಗೆ:—

ಕಂ|| ಕುಡೆಯುಂ ಕೊಳೆಯುಂ ನಭದೊಳ್ |
ಬೆಡಂಗುವೆತ್ತಮರಕರದಿನಮರಕರಕ್ಕೇಂ ||
ನಡೆದುವು ಹಿಮಕರನೆಡೆಗೊಡ |
ನಡರ್ವಂತಿರಲೋಳಿವೋಳಿಯಿಂ ಕಳಶಂಗಳ್ || ೪೦ ||

ಎರಡೆರಕದಿಂದವಂ ಕೊಳ |
ಲರಿದೆಂದನಿತರ್ಕಮನಿತು ಭುಜಮಂ ಹರಿ ವಿ ||
ಸ್ತರಿಸಿದನಣಿಮಾದಿಗುಣೋ |
ತ್ಕರಮುಳ್ಳಮರಂಗೆ ಭುಜವಿಗುರ್ವಣೆ ಪಿರಿದೇ || ೪೧ ||

ವ|| ಅಂತು ಕಳಧೌತಕಳಶಸಹಸ್ರಂಗಳಿಂದಭಿಷೇಕಂಗೆಯ್ಯೆ:—

ಕಂ|| ಜಿನಚಂದ್ರಕುಮಾರಂ ಕ್ಷೀ |
ರನೀರಪೂರಪ್ಲವಾಂತರಸ್ಥಂ ಪೋಲ್ತಂ ||
ಕನಕರುಚಿಯಿಂದಮಾಪಳಿ |
ಕಿನ ಕೊಡನೊಳಗಿರ್ದ ನಂದದೀವಿಗೆಯಿರವಂ || ೪೨ ||

ವ|| ಅಂತಾಕ್ಷೀರವಾರಿಧಿವಾರಿಯೆಲ್ಲಮನೊರ್ಮೊದಲೊಳೆ ಪೊಯ್ವಂತೆ ಪೊಯ್ದ ಪಯಃಪ್ರವಾಹಮಂ ಬಾಲಕನಬಲಂ ಸೈರಿಸನೆಂಬ:—

ಕಂ|| ಸಂದಯದ ಮನದ ನಾಕಜ |
ಸಂದೋಹದ ಬಗೆಯನಘಹರಂ ಕಳೆಯಲ್ಕಃ ||
ಎಂದುಸಿರ ಗಾಳಿಯೊಳ್ ತಿರಿ |
ತಂದರ್ ತರಗೆಲೆವೊಲಮರರಂಬರತಳದೊಳ್ || ೪೩ ||

ವ|| ಬಟಾಯಂ:—

ಕಂ|| ಉಸಿರನೊಳದೆಗೆವುದುಂ ದೇ |
ವಸಮಿತಿ ತಂತಮ್ಮ ನೆಲೆಗಳೊಳ್ ನಿಂದಸಮಂ ||
ಜಸಿಕೆಯನುಱದು ಪರಿಚ್ಛೇ |
ದಿಸಿದುದು ಜಿನಪತಿಯನಂತವೀರ್ಯಸ್ಥಿತಿಯಂ || ೪೪ ||

ವ|| ಅನಂತರಂ ಪುರಂದರಂ ಪುನರಾರಬ್ಧ ಜನ್ಮಾಭಿಷೇಕನಾಗಿ:—

ಉ|| ಶ್ರೀರಮಣೀಪ್ರಿಯಂಗಮೃತಮಂಗಳಮಜ್ಜನಮಂ ಜಿನಂಗೆ ವಿ |
ಸ್ತಾರಿಸೆ ಪೊನ್ನ ಪೊಚ್ಚಪೊಸವಪ್ಪ ಕೊಡಂಬೆರಸಾಳಿಗಟ್ಟಿ ಘೋರ್ ||
ಘೋರೆನೆ ಪೋಪ ಬರ್ಪಮರಸಂಹತಿ ಪೋಲ್ತುದು ಮಂದರಾದ್ರಿಗಂ |
ಕ್ಷೀರಪಯೋಧಿಗಂ ಹರಿಯ ಕಟ್ಟಿದ ಜಂಗಮಸೇತುಬಂಧಮಂ || ೪೫ ||

ವ|| ಎನಿಸಿದಮರಸಮಿತಿಯ ತಂದ ಪಾಲ್ಗಡಲ ಪಾಲಂ ಪುಷ್ಕಲಾವರ್ತಬಲಾಹಕಾಂಬುದಂಗಳ್ ಕನಕಾಚಳಚೂಳಿಕೆಯೊಳ್ ಸುರಿವುತಿರ್ಪಂತಿಂದ್ರರುಂ ಭಗವದುಷ್ಣೀಷದೊಳ್ ಸುಱಿಯೆ:—

ಕಂ|| ಜಿನನುರದೊಳೆಸೆವ ಪಾಲಿನ |
ಪೊನಲ್ ಸಯಂಬರದ ಮುಕ್ತಿಕನ್ಯಕೆ ಸುರರಾ ||
ಜನ ಮುಂದೆ ಮಾಲೆಯೂಡಿದ |
ಮನೋಜ್ಞಸಿತಸಿಂಧುವಾರಮಾಲೆಯನಿಱಕುಂ || ೪೬ ||

ಆ ಕುರುತಿಲಕನ ಮೆಯ್ಯೊಳ |
ನೇಕಪಯಃಕಣಗಣಂ ಪೊದಟ್ದುವು ಮುಕ್ತಿ ||
ಶ್ರೀಕಾಂತೆಯಿತ್ತ ಮುತ್ತಿನ |
ವೈಕಕ್ಷದ ತೆಱನನಭಿಷವೋತ್ಸವವಿಧಿಯೊಳ್ || ೪೭ ||

ಬಳಸಿದ ಬಂಬಲ್ಗುರುಳೊಳ್ |
ಪೊಳೆವ ಪಯಃಕಣಿಕೆ ಸಿಂಧುವಾರಲತಾಂತಾ ||
ವಳಿಯೆನಿಸಿ ತುಱುಗೆ ಮಜ್ಜನ |
ವಿಳಾಸಮಂದೆಂ ವಿಳಾಸಮಂ ತಾಳ್ದಿದುದೋ || ೪೮ ||

ವ|| ಮತ್ತಂ ತತ್ಸಮಯದೊಳ್:—

ಕಂ|| ಖಚಿತಹರಿನೀಲ ಮರಕತ |
ರುಚಿರಂ ಚೆಂಬೊನ್ನಕಳಶಮಿಂದ್ರಧನುಃಶ್ರೀ ||
ನಿಚಿತಂ ನವಸಾಂಧ್ಯಜಳದ |
ರುಚಿಯಂ ಕೆಯ್ಕೊಂಡುದಮರ ಕರಪಲ್ಲವದೊಳ್ || ೪೯ ||

ವ|| ಅದಲ್ಲದೆಯುಮುಭವನ ಜನ್ಮಾಭಿಷವೋತ್ಸವದೊಳ್ ದುಗ್ಧೋದಧಿದುಗ್ಧಮಾಗಿ:—

ಕಂ|| ತ್ರೈಲೋಕ್ಯತಿಲಕಜಿನಪತಿ |
ಬಾಲಕಜನ್ಮಾಭಿಷವಣಯೋಗ್ಯಮಿದೆಂದಿಂ ||
ದ್ರಾಳಿ ಸಮೆಯಿಸಿದ ಬೆಳ್ಳಿಯ |
ಕೋಳಿಯ ನಾಂತಂತಿರೆಸೆದು ದಿಂದ್ರನಗೇಂದ್ರಂ || ೫೦ ||

ಪಾಲ್ಗಡಲ ನೀರ ಪರಿವ ಪೊ |
ನಲ್ಗಳ್ ಸುರಗಿರಿಯ ಸಿರಿಯ ನೇರಾಣಿಯ ತಾ ||
ಱಲ್ಗಳ್ವಿಡಿದಿಳಿ(ದಂ)ದೇ |
ಱಲ್ಗೆ ಱಗಿದುವಾಜಿನೇಂದ್ರಸವನೋತ್ಸವದೊಳ್ || ೫೧ ||

ವ|| ತದನಂತರಮಾದಿತ್ಯಂಗೆ ಸೊಡರಿಡುವಂತೆ ಭಕ್ತಿನಿಮಿತ್ತದಿಂ:—

ಕಂ|| ಸೌರಭನಿಧಿ ತೀರ್ಥಕರಕು |
ಮಾರಕನೆಂದಱಿದುಮಾಜಗತ್ಪತಿಗಿಂದ್ರಂ ||
ಸಾರಸುಗಂಧವಿಳೇಪನ |
ಭೂರಿಜಳಸ್ನಪನವಿಧಿಗೊಡರ್ಚಿದನಾಗಳ್ || ೫೨ ||

ವ|| ಆಗಂಧಸ್ನಪನೋದಕಂ ಮೇರುಮಹೀಧರಜಾಂಬೂನದನಿತಂಬಂಬಿಡಿದಿೞಿದು ಕಾಳಾಗುರು ಮಿಶ್ರಪಯಸ್ಸ್ರೋತಸ್ಸಮುದಿತಂ ಸೌಮನಸಮನೆಯ್ದಿ:—

ಕಂ|| ಅಕಳಂಕಜಿನಾಭಿಷವೋ |
ತ್ಸುಕದೊಳ್ ನಾಂದಾಱಿಸಲ್ಕೆ ಪರಪಿದ ಕುಟಿಳಾ ||
ಳಕದೊಳ್ ತಗುಳ್ದ ಶೀತೋ |
ದಕಮೆನೆ ಕುರ್ಬುರಿತಮಾಗಿ ಸೊಗಯಿಸಿ ತೋರ್ಕುಂ || ೫೩ ||

ವ|| ಎಂಬಿನಂ ಗಂಧೋದಕದಿನಮರೇಂದ್ರನಭಿಷೇಕಂಗೆಯ್ಯೆ:—

ಕಂ|| ಆಗಂಧೋದಕಕತಿಪಯ |
ಭಾಗಮ ನೆಲೆಮುಟ್ಟಿ ಮೇಗಣಿಂ ಮೇಗೆಯೆ ಕೊ ||
ಳ್ವಾಗಡಿನ ಮುಕುಟದೊಳ್ ತಳ |
ವಾಗಡಿನಗಿಬಿಗಿ ತಗುಳ್ದುದಮರೇಶ್ವರರೊಳ್ || ೫೪ ||

ವ|| ಅಂತು ನೆಱಿಯೆ ಜನ್ಮಾಭಿಷೇಕಮಂ ವೃತ್ರಹಂ ನಿರ್ವರ್ತಿಸಿ ದಕ್ಷಿಣೇಂದ್ರನುಂ ಶಚಿಯುಂ ಬೆರಸು:—

ಮ|| ಜಳದಿಂದಂ ಬಳಮಂ ಸುಗಂಧರಸದಿಂ ಸೌಗಂಧ್ಯಮಂ ಪುಷ್ಪಸಂ |
ಕುಳದಿಂ ಪೂಜ್ಯತೆಯುಂ ಸಿತಾಕ್ಷತದಿನುದ್ಯದ್ವೃತ್ತಮಂ ಚಂದ್ರಿಕೋ ||
ಜ್ಜ್ವಳಸಾನ್ನಾಯ್ಯದಿನಿಂದುಲಕ್ಷ್ಮಿಯನುದಂಚದ್ದೀಪದಿಂ ಕಾಂತಿಯಂ |
ವಿಳಸದ್ಧೂಪದಿನೈಶ್ಯಮಂ ಫಲದಿನವ್ಯಾಬಾಧೆಯಂ ಮಾಡುಗುಂ || ೫೫ ||

ಕಂ|| ಜಿನಪತಿಪದಪಂಕಜಮಂ |
ದಿನಿತರ್ಚನೆಯಿಂದಮಿಂದ್ರನರ್ಚಿಸಿ ಮನದಿಂ ||
ತನುವಿಂ ವಚನದಿನೇಕಾ |
ಗ್ರನಾಗಿ ಪೊಡವಟ್ಟನೆಱಗೆ ಮಕುಟಂ ಧರೆಯೊಳ್ || ೫೬ ||

ವ|| ಅಂತರ್ಚಿಸಿ ಪೊಡಮಟ್ಟು ಪರಮೌದಾರಿಕದಿವ್ಯಶರೀರನುಂ, ತೃಣೀಕೃತತ್ರಿಭುವನ ಸಕಲ ಸೌಂದರ್ಯಾತಿಶಯಸುಂದರಾಕಾರಸುಮಪ್ಪ ತೀರ್ಥಕರಕುಮಾರಂಗೆ ಸೌಧರ್ಮೇಂದ್ರಂ ಪ್ರಸಾಧಿತ ವಿಷ್ಟಪತ್ರಿತಯನಪ್ಪುದನಱಿದು ಪ್ರಸಾಧನಪ್ರಾರಂಭಂ ಗೆಯ್ಯೆ:—

ಕಂ|| ತೊಡವಿಂಗೆ ತೊಡವು ನಿರತಂ |
ತೊಡವೇಂ ಪೆಱತುಂಟೆ ಜಿನನ ತೊಡವೆನೆ ಮತ್ತಾ ||
ತೊಡವೆಡ್ಡಮಪ್ಪ ರೂಪಿನ |
ಬೆಡಂಗು ಭೂಷಣವಿಶೇಷಮಂ ಬಾರಿಸದೇ || ೫೭ ||

ವ|| ಎಂದು ಪ್ರಥಮಕಲ್ಪಾಮರೇಂದ್ರಂ ಸಾಂದ್ರಭಕ್ತಿಪ್ರಬೋಧಿತಾಶಯಕುಶೇಶಯನಾಗುಣ ಗಣಮಣಿಭೂಷಣಂಗೆ ದಿವಿಜೇಂದ್ರಲೋಕೋತ್ತಮಭೂಷಣಂಗಳಂ ತುಡಿಸೆ:—

ಮ|| ಮಣಿಬಂಧಂ ಮಣಿಯಿಂ ಕಟೀನಿಕಟಮಾಚಿಂಬೊನ್ನ ಚೆಲ್ವಪ್ಪ ಕಿಂ |
ಕಿಣಿಯಿಂ ವೃತ್ತಘನಪ್ರಕೋಷ್ಠಯುಗಳಂ ಮೇಲಾದ ಮಾಣಿಕ್ಯಕಂ ||
ಕಣದಿಂ ತೋಳೆಸೆದಿರ್ದ ತೋಳ್ವಳೆಗಳಿಂದುಷ್ಣೀಷಪಟ್ಟಂ ಶಿಖಾ |
ಮಣಿಯಿಂ ಕಂಧರಮಾರದಿಂ ನೊಸಲುದಾರಾಶ್ವತ್ಥಪತ್ರಾಂಕದಿಂ || ೫೮ ||

ವ|| ಅಲಂಕೃತನಾಗಿಯುಂ ನಿಸರ್ಗಸುಂದರನಪ್ಪುದಱಿಂದಮಲಂಕಾರಕ್ಕೆ ತಾನಲಂಕಾರ ಮಾದೊಡಂ ಲೋಕವ್ಯವಹಾರಾಪೇಕ್ಷೆಯಿಂ ಪ್ರಸಾಧಿತಂಮಾಡಿ:—

ಕಂ|| ಮುದ್ರಸಹಜಾತವಿದ್ಧ |
ಚ್ಛಿದ್ರಾಸ್ಪಿತಕರ್ಣಯುಗಳಪಾಳಿಗಳೊಳ್ ಸಂ ||
ವಿದ್ರುತರಜಂಗೆ ಹರಿ ವಿಲ |
ಸದ್ರುಚಿಮದ್ವಜ್ರಕುಂಡಲಂಗಳನಿಟ್ಟಂ || ೫೯ ||

ವ|| ಇಟ್ಟು ಜಿನೇಂದ್ರಭಾನುವನಟ್ಟಿರ್ತು ನೋಡಿ:—

ಕಂ|| ಭವನ ತನು ಭಾಳವಮಂಡದ |
ನವಮಂಡನದಿಂದಮೊಪ್ಪೆ ನಯನದ್ವಯದಿಂ ||
ತವೆ ನೋಡಲ್ ನೆಱಿಯದೆ ನಯ |
ನವಿಹ್ವಲಂ ಹರಿ ಸಹಸ್ರಲೋಚನನಾದಂ || ೬೦ ||

ವ|| ಆಗಿಯುಂ ಮನಂ ಸಂತಸಂಬಡೆ ಪರಿಪುಷ್ಟಹರ್ಷೋತ್ಕರ್ಷಚಿತ್ತನಾಗಿ ಯಾದಿಮಾರ್ಗಪ್ರ ಹಿತಮತಿಯಾಗಿ ಪಾಂಡುಕಶಿಲಾತಳಮೆ ರಂಗಭೂಮಿಯಾಗೆ, ದಿವಿಜವಾದಕಕರಹತತತವಿತತಘನ ಸುಷಿರಾವನದ್ಧವಾದಿತ್ರಂ ಸಂಗೀತತೂರ್ಯಮಾಗೆ, ಗೀರ್ವಾಣಮಂಗಳಗಾಯಕರ್ ಸಂಗೀತಗಾಯಕ

ರಾಗೆ, ನಿಳಿಂಪಭಾರತಿಕರಿ ನಟ್ಟುವರಾಗೆ, ಸನ್ಮಾರ್ಗನಾಟಕಾರಂಭಪ್ರಸ್ತುತಪವಿತ್ರಸೂತ್ರಧಾರನೆ ಮುಂದೆ ನಿಂದು ಪುಷ್ಪಾಂಜಳಿಯಂ ಕೆದಱಿ:—

ಕಂ|| ಆಲಲಿತಕುಸುಮತತಿ ಯಾ |
ಬಾಲಕಪದಪದ್ಮಮೂಲಮಂ ಬಳಸಿದುವೊ ||
ಡ್ಡೋಲಗಕೆ ಪುಷ್ಪರಾಜನ |
ನೋಲಗಿಸಲ್ ಬಂದ ಪುಷ್ಪನಿಚಯದ ತೆಱದಿಂ || ೬೧ ||

ವ|| ಪುಷ್ಪಾಂಜಳಿವಿಕ್ಷೇಪಂಗೆಯ್ದುಱಿಗೆ ಪೊಡವಟ್ಟುಸರಸಾಗಮಪ್ರಾರಂಭನಿರತನನುವೈಶಾಖ ಸ್ಥಾನಸ್ಥಿತನಾಗಿ:—

ಮ||ಸ್ರ|| ವಿಭು ಮೂವತ್ತಿರ್ವರಿಂದ್ರರ್ ತನಗೆ ವಶವಿಧೇಯರ್ ದಿವೌಕಾತ್ಮತೇಜಃ |
ಪ್ರಭೆ ಮತ್ತೊಂದಿಲ್ಲ ತತ್ವಂ ಮತಿಗೆ ವಿಮಲಮೇಕಾಂತವೈರಾಗ್ಯಮಸ್ಮ ||
ತ್ಪ್ರಭು ಕೂಸಿಂದಿರ್ದನಿಲ್ಲುತ್ತಮಸಮರಸವತ್ತಾಂಡವಾರಂಭಣಕ್ಕಾ |
ರಭಟೀವೃತ್ತಪ್ರವೃತ್ತಂ ಸುರಪರಿವೃಢನೊಲ್ದಾಡಿದಂ ಭಕ್ತಿಯಿಂದಂ || ೬೨ ||

ವ|| ಅಂತು ನಾಟ್ಯನಿಬಂಧನಮೆ ಸುರೇಶ್ವರರೂಪದಿಂದಮಾಡುವಂತಾಡೆ ತ್ರಿಲೋಕಾಧಿಪತಿ ನೋಡೆ ನಾಟ್ಯರಸಕೂಪಾರಂ ಮೇರೆದಪ್ಪಿಕಪ್ಪಂಗವಿಯಾಗಿ ಕವಿಯೆ:—

ಕಂ|| ಆರಸದೊಳ್ ಬಳೆದ ಲತಾ |
ಕಾರಮನನುಕರಿಸೆ ದಿವಿಜರಾಜನ ಭುಜವಿ ||
ಸ್ತಾರದೊಳಾಡಿದರಮರಿಯ |
ರೋರೊಂದರೊಳಣ್ಬರೊಂದಿ ಗೊಂದಳದಿಂದಂ || ೬೩ ||

ವ|| ಅಂತಾಡೆ:—

ಕಂ|| ಜಂಭಾರಿ ವಿಕೃತಮಾಡುವ |
ರಂಭಾನಟಿಯಂತೆ ಲಾಸ್ಯದೊಳ್ ತಾಂಡವಮು ||
ಜ್ಜೃಂಭಿಸ ಗಣಿಕೆಯರೊಡನಾ |
ರಂಭಿಸಿದನಪೂರ್ವನರ್ತನಾರಂಭಣಮಂ || ೬೪ ||

ವ|| ಅಂತು ದ್ರುತಲಲಿತರಸಾಯತ್ತಮಪ್ಪಾರಭಟೀವೃತ್ತಿಯೊಳಂ ತಾನುಂ ತನ್ನ ಭುಜತರು ವನದೊಳಾಡುವಚ್ಚರಸೆಯರುಮಾಡಿ ರಂಜಿಸಿರೆ ಜಿನಪತಿಸ್ನಪನದ ಕಡೆಯೊಳ್:—

ಕಂ|| ಲೋಲಭ್ರಮರಂ ಭ್ರಮರೀ |
ಮಾಲೆ ತೆಱಂದಿಱಿಯೆ ತಾಂ ತೆಱಂದಿಱಿವವೊಲು ||
ನ್ಮೀಲಿತಮನನಮರೀಸಮು |
ಲೀಲಂ ಹರಿ ಬವರಿಗೊಟ್ಟನಾಟ್ದು ಬೆಡಂಗಿಂ || ೬೫ ||

ವ|| ಅಂತಿಂದ್ರನಾನಂದನೃತ್ಯಮನಾಡಿದ ಪರಿಸಮಾಪ್ತಿಯೊಳ್ ಐರಾವತದ ಬೆಂಗೆ ವಂದ ನಿಜ ಪರಮಸ್ವಾಮಿಯಂ ನಿಷಾದಿಯಂತೆ ನಿಬಿಡನಿಬದ್ಧಪವಿತ್ರಕ್ಷ್ಮಾವೇಃಪಚ್ಛದೋಪಚಿತಸುಖಾಸನಾಂಕಿತಮಂ ನಿಜಾಂಕಮನೇಱಿಸಿ ಕೊಂಡು ಹಸ್ತಿನಪುರಾಭಿಮುಖನಮರಸಮಿತಿವೆರಸು ಅಮರೇಂದ್ರನಮರಗಿರೀಂದ್ರದ ಚೂಳಿಕೆಯಿಂ ಭದ್ರಶಾಳಂಬರಮಾದಭಿರಾಮತೆಯಂ ನೋಡುತ್ತುಂ:—

ಪಿರಿಯಕ್ಕರಂ|| ಎಳೆಯೊಳಟ್ಟಿದು ಸಾಸಿರಯೋಜನಂ ಗಗನಕ್ಕೆ ತೊಂಭತ್ತೊಂಭಯ್ಸಾಸಿರಂ |
ಬಳೆದುದಂತಿದಂ ಚಂದ್ರಾದಿತ್ಯಗ್ರಹನಕ್ಷತ್ರತಾರಕಾನಿಕರಮೆಂದುಂ ||
ಬಳಸುತ್ತಿರ್ಪುದು ನಾಲ್ಕುಪವನಗಳೊಳ್ ಪದಿನಾಱಕೃತ್ರಿಮಜಿನಗೃಹಂಗಳ್ |
ಕುಳನಗಂಗಳ ಕುಲದೈವಮಧಿರಾಜಂ ತಾಯ್ಗಿರಿ ಮೇರುಮಹೀಧರೇಂದ್ರಂ || ೬೬ ||

ಇದಱ ತಪನೀಯಸಾನುಗಳ್ ಜಿನಸವಗಂಧೋದಕಂಗಳಿಂ ಪೂವಲಿಯಂ |
ಮುದದೆ ತಲೆಯೊಳ್ ಪೊತ್ತಂತಿರ್ಪುವು ಮೇರುಪೆಂತಂತತಿವಿಭಕ್ತಂ(ಗಳ್) ||
ಮದನವೈರಿಗಾಸಂದಿಯಾದುದು "ಯಥಾರಾಜಾ ತಥಾಪ್ರಜಾಃ" ಎಂಬ ಪಡೆ |
ದಿದನೆ[ಪಡೆವಾತಂ]ನುಡಿವುತ್ತುಮಮರೇಂದ್ರನೆಯ್ದಿದಂ ಹಸ್ತಿನಪುರವರಮಂ ||೬೭||

ವ|| ಎಯ್ದಿ ಬಹಿರ್ಭಾಗದೊಳ್ ನಿಂದು ವಿಶ್ವಸೇನಮಹಾರಾಜಂಗೆ ಪೊೞಲಂ ಬೇಗವಷ್ಟಶೋಭೆಯಂಗೆಯ್ಯಲ್ವೇೞ್ದಟ್ಟುವುದುಂ:—

ಚಂ|| ಪುರನಿಕರಂ ತ್ರಿವಿಷ್ಟಪಮೊ ಪೇೞ್ ದಿವಿಜೇಂದ್ರನಿವಾಸಮೋ ಸಮೋ |
ಪುರಮೊ ವಿಮಾನನೋ ಭವನಮೋ ಸುರಭೂರುಹರಾಜಿಯೋ ವನೋ ||
ತ್ಕರಮೊ ಸುರೇಂದ್ರನೋ ನೃಪನೊ ದೇವನೊ ಮರ್ತ್ಯನೊ ಪೇೞಿಮೆಂಬಿನಂ |
ನರಪತಿ ಮಾಡಿದಂ ಪುರಕೆ ಪೊಂಪುೞಿಯಪ್ಪಿನಮಷ್ಟಶೋಭೆಯಂ || ೬೮ ||

ವ|| ಅಂತಷ್ಟಶೋಭೆಯಂ ಮಾಡೆ:—

ಕಂ|| ಗುಡಿ ತುಱುಗಿ ಲತೆಯ ಪೊಸದಾಂ |
ಗುಡಿ ಯೆನಿಸಿದುದವನಿಪತಿಯ ಕಳ್ಪುನಾಡದೊಳಂ || ೮೮
ಗಡಿಯೊಳ್ ವೇಶ್ಯಾವಾಟದೊ |
ಳಿಡೆಗಿಱಿದ ವಿಶಿಷ್ಟಸೌಧಭವನಾವಳಿಯೊಳ್ || ೬೯ ||

ರಾಣಿಯವಾಸದ ಪೊಸನೇ |
ರಾಣಿಯ ಮಾಡಂಗಳೊಳಗೆ ಕೆಯ್ಗೆಯ್ದಿರೆ ರು ||
ದ್ರಾಣಿ ವರುಣಾನಿ ನೆಗೞ್ದಿಂ |
ದ್ರಾಣಿಯೆನಲ್ತಕ್ಕುಮಿಕ್ಕ ಮಹಿಷೀಬೃಂದಂ || ೭೦ ||

ಮಣಿಕುಟ್ಟಿಮಭೂಮಿಗೆ ಕಿ |
ಟ್ಟಣಿಯದಿದೆನೆ ಪೋಲೆ ನಿಮಿಱೆ ಪಾಸಿದ ಕಾಡೋ ||
ಹಣದಿಂ ನೃಪೇಂದ್ರಭವನಾಂ |
ಗಣಮೊಪ್ಪಿದುದುರ್ವರಾಸ್ಯತಿಲಕನ ಬರವಿಂ || ೭೧ ||

ವ|| ಅಂತು ಪಸದನರಾಜಲಕ್ಷ್ಮಿಯ ಮೊಗಮಿರ್ಪಂತಿರ್ದ ಮರಕತತೋರಣದ ಮುಂದೆತ್ತಿದ ಮುತ್ತಿನ ಮಂಡವಿಗೆಯೊಳಗೆ:—

ಕಂ|| ಹಾರದ ಲಂಬೂಷಂ ಕೇ |
ಯೂರದ ಪೊಸಗಂಬಮೆಸೆವ ಮುತ್ತಿನ ಕಡೆ ವಿ ||
ಸ್ತಾರಿಸಿದ ಪಂಚರತ್ನದ |
ತೋರಣಮೊಪ್ಪಿದುದು ನಡುವೆ ನಿಲೆ ಹರಿಪೀಠಂ || ೭೨ ||

ಆ ಹರಿಪೀಠದೊಳಪಗತ |
ಮೋಹನನಿದಿರ್ವೋಗಿ ತಂದು ಕುಳ್ಳಿರಿಸಿ ಸುರ ||
ವ್ಯೂಹಕ್ಕಂದಾಸನಸಂ |
ದೋಹಮನವರವರ್ಗೆ ತಕ್ಕುದಂ ತರಿಸಿ ನೃಪಂ || ೭೩ ||

ವ|| ತಾನುಂ (ತನಗೆ) ತಕ್ಕಾಸನದೊಳ್ ಕುಳ್ಳಿರೆ:—

ಕಂ|| ಆದಿನದೊಳ್ ಹಸ್ತಿನಪುರ |
ಕಾದುತ್ಸವಮೆಳೆಯೊಳೆನಿತೆನಲ್ಕೆಡೆಗಾಣ ||
ಲ್ಕೋದಿದಗಾಳುಗಮಾನಿತ |
ಮಾದುದಸಂಜಾತಪೂರ್ವವಿಸ್ಮಯದಿಂದಂ || ೭೪ ||

ವ|| ಆಗಳ್ ಸೌಧರ್ಮೇಂದ್ರಂ ವಿಶ್ವಸೇನನೃಪೇಂದ್ರನುಮನೈರಾಮಹಾದೇವಿಯುಮನಮರಲೋಕಾಂಬರಸ್ರಗ್ವಿಲೇಪನಾಲಂಕರಣಗಳಿಂದಂ ಪೂಜಿಸಿ ಜನ್ಮಾಭಿಷೇಕವೃತ್ತಕಮನವರ್ಗೆ ತಿಳಿಯೆ ಪೇಟ್ದು:—

ಉ|| ಈಪರಮೇಶ್ವರಂ ತ್ರಿಜಗದೀಶ್ವರನೀಹತಕಲ್ಮಷಂಗೆ ಮಾ |
ತಾಪಿತೃಭಾವಮೆಂದು ನಿಮಗಾದುದು ನೀಮೆಮಗಂದು ದೇವತಾ ||
ರೂಪಮತೀತಜನ್ಮಸಮುಪಾರ್ಜಿತಪುಣ್ಯಫಲೈಕಕಾಲಕೂ |
ಳೋಪಪರಂಪರಾಸಮಧಿಕಂ ನಮಗಿಂತಿರೆ ಮುನ್ನೆ ನೋಂತರಾರ್ ||೭೫ ||

ವ|| ಎಂದು ಪರಮಾಶ್ಚರ್ಯಪರ್ಯಾತೀತ ಶಿರಃಕಂಪಂಬೆರಸು:—

ಕಂ|| ಸುರಪತಿ ಕೆಯ್ಮುಗಿದು ಚರಾ |
ಚರಗುರುಗಂ ಗುರುಗಳೆನಿಸಿದಾಯಿರ್ವರ್ ಮು ||
ನ್ನೆರಪಿರ್ದಗಣ್ಯಪುಣ್ಯಾ |
ಸ್ಥಿರತ್ವಮಂ ನೆಗಟ್ಟಿ ಪೊಗಟಲಱಿಯಂ ಸಭೆಯೊಳ್ || ೭೬ ||

ವ|| ಅನಂತರಂ ಯಥೋಕ್ತವಿಧಾನದಿ[ಂಶುಭದಿ]ನಮುಂ:—

ಕಂ|| ಪ್ರಕಟಮು ಮಪ್ಪಂತಿರೆ ಜಾ |
ತಕರ್ಮದೊಸಗೆಯುಮನೊಸೆದು ಮಾಡಿಸೆ ಬಳಿಕ ||
ರ್ಭಕಜಿನಶೀತಾಂಶುಗೆ ನಾ |
ಮಕರಣದುತ್ಸವದೊಳುತ್ಸವಂ ಬೆರಸಾಗಳ್ || ೭೭ ||

ವ|| ತನ್ನಿಷ್ಕ್ರನಾಗಿ ತಾರಾತರಳಮುಕ್ತಾಫಲಾಂಗುಲಿಕಪ್ರಾರಂಭದೊಳ್, ಪರಿಚಿತಚಾಮೀಕರ ವೇದಿಕಾ ಸನಾಥದೊಳಪರಿಮಿತರುಂದ್ರೇಂದ್ರಚಾಪ ಪ್ರತಾನಾನೂನಾಂಶುಲಲಿತದೀಪ್ಯಮಾನಮಣಿಭಿತ್ತಿ ಸಮುಭದ್ಯೋತಿ(ತ)ನೀರಂಧ್ರಜಾಲಾಂತರಾಳದೊಳ್, ಸತತದಹ್ಯಮಾನಕಾಲಾಗುರೂದ್ಧೂಪೋದ್ದಾಮ ಧೂಮಾಮೋದಮತ್ತಮಧುಕರನಿಕರಝುಂಕಾರಪರೀತದಿಗಂತರಾಳದೊಳ್ ಘನವ(ನ) ಮೇರುಮಂದಾರ ಪಾರಿಜಾತ ಸಂತಾನಕಕುಸುಮಮಂಜರೀಮಧ್ಯಲಂಬಮಾನಸಿಂಜಾನಮಣಿಕಿಂಕಿಣೀಕ್ವಣಿತದೊಳ್ ಮಂಗಳಾಳಂಕರಣಾಭಿರಾಮ ರಾಜಭವನಲಕ್ಷ್ಮೀ ಶಿರೋಮಂಡನೋಪಮಾನ ಮೌಕ್ತಿಕ ಮಣಿಮಯ ಮಂಡಪದೊಳ್:—

ಮ|| ಪಸೆಯೊಳ್ ಪಾಸಿದ ಬೊಂಗಮುಲ್ಲವದ ದೇವಾಂಗಂ ಮಣಿಸ್ತಂಭದೊಳ್ |
ಪೊಸವತ್ಯಂಗಮಪೂರ್ವಮಾಗೆ ಹರಿ ಪೌರೋಹಿತ್ಯಮಂ ತಾಳ್ದೆ ರಾ ||
ಗಿಸಿ ಚಕ್ರಾಂಗನೆ ದಾದಿಯಾಗೆ ತಕೆ ದೇವೇಂದ್ರಾಳಿ ಮುಂದಿರ್ದು ಘೋ |
ಷಿಸೆ ಸಿದ್ಧಸ್ತುತಿಯಂ ಜನಂಗೆಸೆದುದಂತಾನಾಮಕರ್ಮೋತ್ಸವಂ || ೭೮ ||

ವ|| ಅನಂತರಂ ವಿಶ್ವಸೇನಾವನಿನಾಥನುಮೈರಾಮಹಾದೇವಿಯುಂ ಕುರುಕುಲಾಗ್ರಗಣ್ಯರಪ್ಪ ಬಂಧುಗಳುಂ ಮುಕುಳಿತಕರಕಮಳರ್ ಬಳಸಿಯುಮಿರೆ:—

ಉ|| ಆದಿಜಿನೇಶ್ವರಂ ಮೊದಲ ಚಕ್ರಿಗೆ ಭಾವಿಜಿನೇಂದ್ರನಾಮತೀ |
ರ್ಥೋದಯಮಾಳೆಯಂ ಬೆಸಸೆ ತಜ್ಜನಭಾಷಿತಮಾತ್ಮಚಿತ್ತಮಂ ||
ಭೇದಿಸಿದಂತೆ ಲೋಕಪತಿಗಿಟ್ಟನನುಸ್ಮೃತಮಾತ್ರಪಾಪವಿ |
ಚ್ಛೇದನಮಂ ಜಗತ್ಪ್ರಥಮಮಂಗಳಮಂ ಹರಿ ಶಾಂತಿನಾಮಮಂ || ೭೯ ||

ವ|| ಅಂತು ತೀರ್ಥಕರನಾಮಕರ್ಮೋನ್ನತಂಗೆ ಶಾಂತಿನಾಮಮನಿಟ್ಟು ದಿವಿಜೇಂದ್ರವೃಂದಂ ಬೆರಸಿಂದ್ರನೊಸಗೆಮರುಳ್ಗೊಂಡು ಪಿಷ್ಟಾತಕಕೇಳೀವಿಧಾನಾನಂತರಂ:—

ಕಂ|| ಆನಾಮಕರಣದೊಳ್ ಪೊಸ |
ತಾನಂದಂ ಬಗೆಯನುಗಿಯೆ ಪುನರುಕ್ತತೆಯಿಂ ||
ದಾನಂದನೃತ್ಯಮಂ ಹರಿ |
ತಾನಾಡಿದನೊಸಗೆಯೆಸಕಮಿರ್ಮಡಿಸುವಿನಂ || ೮೦ ||

ವ|| ಅಂತು ನಿರ್ವರ್ತಿತತ್ರಿಭುವನಪತಿಭವೋತ್ಸವನಾಗಿ ಸಮವಯಾದಿವಿಜಯವಯಸ್ಯರುಮ ನಮರಧಾತ್ರೀಜನಮುಮಂ, ದಿವಿಜಾಂಗರಕ್ಷಕರುಮಂ, ಸುರಲೋಕಕ್ಷೀರಪಯೋರಸಂಗಳುಮಂ, ಗೀರ್ವಾಣಮಹಾನಸಿಕನಿಕರಮುಮಂ, ದೇವಸ್ನಪನಕಾರಿಕಾನಿಕಾಯಮುಮಂ ನಿಯೋಜಿಸಿ ಸುರಪತಿ ಜಗತ್ಪತಿಗೆಱಗಿ ತತ್ಪಿತೃಗಳುಮಂ ಬೀೞ್ಕೊಂಡು ಕಲ್ಪಾಮರಪುರಸ್ಸರಂ ನಿಜನಿವಾಸಕ್ಕೆ ಪೋದನಿತ್ತ ತೀರ್ಥಕರಕುಮಾರಂ ಪ್ರತಿದಿವಸಪ್ರವರ್ಧಮಾನನಾಗಿ ನೋಡುವ ಜನದ ಕಣ್ಗಂ ಮನಕ್ಕಂ:—

ಕಂ|| ಸವವಯಸದಿವಿಜಖೇಟಕ |
ನವಸೇಟಕನಿಕರಮಗಲದಿರಲಬ್ಧಿಯ ಮೇ ||
ರುವ ಕೆಲದ ಗಿರಿಕದಂಬಕ |
ದವಷ್ಟೆಯಂ ಪೋಲ್ತುದಾಕುಮಾರನ ಕೆಲದೊಳ್ || ೮೧ ||

ವ|| ಅಂತಾಕುರುವಂಶಶಿಖಾಮಣಿ ಜಿನಚಂದ್ರದೇವಂ ಬಳೆಯುತ್ತುಂ:—

ಚಂ|| ಅಡಿಯಿಡುವಂತಿರಪ್ಪುನೆಯ ಚಕ್ರಿಪದಕ್ಕೆ ಜಿನಾರ್ಭಕಂ ತಳ |
ರ್ನಡೆ ನಡೆದಂ ಜಿನೋಕ್ತಿ ಮೊದಲಲ್ತು ಮದಂಗದೊಳೆಂಬವೊಲ್ ತೊದ ||
ಳ್ನುಡಿ ನುಡಿದಂ ಗಭೀರತರರಾಜಕವೃತ್ತಿಯನೆಂದುಮೆಯ್ದೆ ಬ |
ಲ್ವಿಡಿವಿಡಿದಂ ಜಗಜ್ಜನಕನಂ ಶಿಶುವೆಂಬುದೊ ಮರ್ತ್ಯನೆಂಬುದೊ || ೮೨ ||

ವ|| ಮತ್ತಮೋರೊಂದುದಿವಸಂ ಕುಳ್ಳಿರ್ದಲ್ಲಿ:—

ಕಂ|| ಉಡೆಯ ಮಣಿಕಿಂಕಿಣೀರವ |
ಮುಡಂಗೆ ಕೆಯ್ನೊಡಿ ನುಡಿಯೆ ಕರವಳಯರವಂ ||
ಪೊಡರೆ ಹರಿಪೀಠದೊಳ್ ದಾಂ |
ಗುಡಿವಿಟ್ಟುದನಂತಕಾಂತಿ ಶಾಂತೀಶ್ವರನಾ || ೮೩ ||

ವ|| ಅಲ್ಲದೆಯುಂ ಗಂಭೀರೋದಾರಸಾರಪರಿಹಾಸರಸಪ್ರಾಯವಚನಂಗಳೊಳ್:—

ಕಂ|| ಪೊಗಸಲರ್ದಂಬುಜದಲರೊಳ್ |
ಸೊಗಯಿಪ ಕುಳಿಶಾಳಿ ಪುಟ್ಟಿತೆಂಬಂತಿರೆ ಪೋ ||
ಲ್ವೆಗೆ ವಂದ ಪಲ್ಗಳಿಂ ನಗೆ |
ಮೊಗವಿಾಯದೆ ಸುರರ ನಟ್ಟ ದಿಟ್ಟಿಯನುಗಿಯಲ್ || ೮೪ ||

ವ|| ಅಂತುಮಲ್ಲದೆ ನಿಸರ್ಗಮಧುರಾಕಾರದಿಂ ಮನೋಹರನಾಗಿ:—

ಮ|| ನಯದಿಂದಂ ಬರೆವಂತೆಯುಂ ಕಡೆದು ತಂದಿಟ್ಟಂತೆಯುಂ ಮೂಡಿದಂ |
ತೆಯು ಮೊಲ್ದಚ್ಚಿಸಿದಂತೆಯುಂ ದೃಢತರಂ ಬೆಚ್ಚಂತೆಯುಂ ಸಾರ್ಚಿದಂ ||
ತೆಯುಮುತ್ಪಾದಿಸಿದಂತೆಯುಂ ನಿಜಿಸಿ ಕಾಲ್ಗೊಂದಂತೆಯುಂ ನೆರ್ಮಿದಂ|
ತೆಯುಮಿರ್ಕುಂ ಜಿನಬಾಲರೂಪಮೆರ್ದೆಯೊಳ್ ಮುಂ ಕಂಡಗಲ್ದಿರ್ದರಾ || ೮೫ ||

ವ|| ಅದಲ್ಲದೆಯುಂ:—

ಕಂ|| ನೆರೆದೋಲಗಿಪಮರನರೋ |
ತ್ಕರಜಲಧರವಳಯದೊಳಗೆ ಕಾಂತಿಯ ಪುದುವಿಂ ||
ಪರಿವೇಷಂಗೊಂಡ ನಿಶಾ |
ಕರನಂ ಪೋಲ್ತುಂ ಕುಮಾರನೊಡ್ಡೋಲಗದೊಳ್ || ೮೬ ||

ವ|| ಅದಲ್ಲದೆಯುಂ:—

ಪಿರಿಯಕ್ಕರಂ|| ನಡೆಯೆ ನಡೆದುಂ ಕುಳ್ಳಿರೆ ಕುಳ್ಳಿರ್ದುಂ ನಿಲೆ ನಿಂದುಂ ಪವಡಿಸೆ ಪಕ್ಕದಿರ್ದುಂ |
ನುಡಿಯೆ ಜೀಯೆಂದುಂ ಬಾಯ್ಗಳಂ ಮುಚ್ಚಿರ್ದು ದಿವ್ಯನಿನಾದಮನಾಲಿಸಿಯುಂ ||
ಮಿಡುಕದುಸಿರದೆ ನುಡಿಯದೆ ಮೋನಂಗೊಂಡಿನಿಸಿರ್ದಧಿಪತಿಗೆ ನಿಚ್ಚಂ [ಮೆಚ್ಚಂ]
ಪಡೆದು ನಚ್ಚಿನ ನಾಕಿನಿಕಾಯಮುಮಗಲದಹೋರಾತ್ರಮೋಲಗಿಕುಂ || ೮೭ ||

**ವ||** ಅಂತು ವಯೋಬಾಲಕನುಂ ಜ್ಞಾನವೃದ್ಧನುಮಪ್ಪ ಜಗದ್ಗುರುಗೆ ಸುರಸಮುದಯಂ ಕರ್ಗಸ್ಕಿಗೆಯ್ಯುತ್ತಿರೆ:—

ಕಂ|| ಜಡೆಯಿಡೆಯೊಳ್ ಕುರುಳೆಡೆ ಗಿಱು |
ದೆಡೆಗಿಱುದೆಡೆಗಿಱುದು ತೊಡರದೆಡೆದೊಟ್ಟೆಡೆದೊ ||
ಟ್ಟೊಡನೊಡನೆ ಪೊಳೆವುವಾವಿಭು |
ಗೆಡೆಯುಡುಗದೆ ಬೀಸುವಮರಚಾಮರದೆಲರಿಂ || ೮೮ ||

**ವ||** ಮತ್ತಮಾಸೋಮವಂಶಲಲಾಮನಪ್ಪ:—

ಕಂ|| ಪ್ರಿಯಮೂರ್ತಿ ತಾಯುಮಂ ತಂ |
ದೆಯುಮಂ ಜಿನಚಂದ್ರಶಿಶು ಮನಂಗೊಳಿಸಿದನೇ ||
ಱಿಗ್ಗಯ ಪಾಡಿವದಿಂದು ಧರಿ |
ತ್ರಿಯುಮಂ ಜಳನಿಧಿಯುಮಂ ಮನಂಗೊಳಿಸುವವೋಲ್ || ೮೯ ||

ಚಂ|| ಕರಿ ಹರಿ ಹಂಸ ಮಲ್ಲ ಶುಕ ಶಾರಿಕ ಲಾವುಕ ಸಿಂಹ ಕೇಕಿ ನಾ |
ನರ ಮೃಗ ರೂಪಧಾರಿ ಸುರಕೋಟಿ ವಿನೋದದ ತೋಟಿಯೊಳ್ ಚರಾ ||
ಚರಗುರುವಿಂಗೆ ಪೊಟ್ತುಗಳೆಯುತ್ತಿರೆ ಪೋದುವು ಪೊಟ್ತುಗಳ್ ನಿರಂ |
ತರಮೆನೆ ಬಾಳಕೇಳಿಯತಿಲೀಲೆಯನಾಂತುದು ಶಾಂತಿನಾಥನಾ || ೯೦ ||

**ವ||** ಆ ಬಾಳಕೇಳಿಗಳಿಂ ಬೞಿಯಂ ಪದವಾಕ್ಯಪ್ರಮಾಣಾನುಗತಮಪ್ಪ ವ್ಯಾಕರಣಮುಮಂ, ಜಾತಿವೃತ್ತಾರ್ಥಕಮಪ್ಪ ಛಂದಸ್ಸ್ಥಿತಿಯುಮಂ, ಶಬ್ದಾರ್ಥವಿಷಯಮಪ್ಪಲಂಕೃತಿಯುಮಂ, ಅಭಿಧಾನ ಲಿಂಗಾಂಗೀಕೃತಮಪ್ಪ ನಿಘಂಟುಸಮಯಮುಮಂ, ತತಾರ್ಯವೃತ್ತಕಮಪ್ಪ ನಾಟ್ಯವಿದ್ಯೆಯುಮಂ, ಯೋಗಕ್ಷೇಮಾಧೀನಮಪ್ಪ ನೀತಿಶಾಸ್ತ್ರಮುಮಂ, ವಶ್ಯವೇಶ್ಯಾಚಾರಮನೋವೃತ್ತಿಯಪ್ಪ ಕಾಮ ತಂತ್ರಮುಮಂ, ಚಿಕಿತ್ಸಿತಾಗೂಢಪ್ರೌಢಮಪ್ಪ ಗದಾಂಗಮುಮಂ, ಪೞವುಂ ವಿದ್ಯಾಕಳಾಕಳಾಪ ಮುಮಂ ತ್ರಿದಶವರ್ಗಕ್ಕುಪದೇಶಂಗೆಯ್ಯುತ್ತುಂ ಬಾಲಭಾವಮಂ ಪೆಱಗಿಕ್ಕಿ ಯೌವನಪ್ರಾದುರ್ಭಾವ ಕ್ಕಿದಿರಾಗಿ:—

ತಿವದಿ|| ಎಯ್ದದ ಬಗೆಯನೆ ಮೆಯ್ದಪ್ಪಂತೆಸೆತು |
ಮೆಯ್ದರೆ ವಧುವರ್ ಬಂಧರೂಪಿಂಗಾ |
ಯ್ದೊಯ್ದನ್ನನಪ್ಪ ಪರಮನಂ || ೯೧ ||
ಅಂತುಮಾರೂಪನೆ ಚಿಂತಿಸಿ ಚಿಂತಿಸಿ |
ಕಾಂತೆಯರ್ ಪತಿಗೆ ರತಿ ಸೋಲ್ತು ಕೆಂದಳೆ |
ರಂತಲರ್ಗಣೆಗೆ ಡೊಣೆಯಾದರ್ || ೯೨ ||

**ವ||** ಅಂತುಮಾಭುವನತ್ರಯವಿಜಯಿಯಪ್ಪ ರೂಪಾತಿಶಯದೊಡನಮಳ್ಪಳೆದಂತೆ ಬಳೆದನಿಸರ್ಗ ಶೌಚಾದಿಗುಣಂಗಳಿಂ ಬಿಣ್ಗುಂಡಿಕ್ಕಿದ ಭೈತ್ರಮುಮಂ, ನಿಶ್ಚಲಪ್ರದೀಪ ಪವಿತ್ರಪ್ರದೀಪಮುಮಂ, ಪೋಲ್ತು ಸಭಾಂಭೋಧಿಮಧ್ಯದೊಳ್ ತೀರ್ಥಕರಕುಮಾರನಾ:—

ಕಂ|| ಪ್ರೋವ ಭವಂಗಳ ಸಕುಲದ |
ಯಾವತಿಶಯಫಲದಿನಾದ ರೂಪನೆ ಮಗುಟ್ದು ||
ತ್ಪಾದಿಸಿದುದು ಜವ್ವನಮಿಂ |
ದೂದಯಮುಂಗಜನ ಜಯ[ಮು]ನುತ್ಪಾದಿಪವೋಲ್ || ೯೩ ||

ಲಾವಣ್ಯಮವಯವಂಗಳ |
ನಾವರಿಸಿದುದಮೃತಕಳೆಗಳಿಂದಂ ಬಿಂಬಂ ||
ತೀವಿರ್ದವಯವಂಗಳ |
ನಾವರಿಸಿದ ಕಾಂತಿಯಂತೆ ಶಾಂತೀಶ್ವರನಾ || ೯೪ ||

**ವ||** ಮತ್ತಂ ಗೋಕ್ಷೀರಕ್ಷತಜತ್ವಮುಂ, ನಿಸ್ವೇದಮುಂ, ಸಮಚತುರಶ್ರಮಪ್ಪ ಸಂಸ್ಥಾನ ಸಂಹನನಮುಂ, ಅತಿಶಯರೂಪತೆಯುಂ, ಅತ್ಯಂತಸುರಭಿನಿಶ್ವಾಸತೆಯುಂ, ತಿಲಮಸೂರಿಕಾದಿಮ ಶತವ್ಯಂಜನಮುಂ, ಶ್ರೀವೃಕ್ಷಸ್ವಸ್ತಿಕನಂದ್ಯಾವರ್ತಪ್ರಮುಖಾಷ್ಟೋತ್ತರಶತಪ್ರಶಸ್ತಲಕ್ಷಣಮುಂ, ವಿಷಾಗ್ನಿಪಾಷಾಣಶೀತಾತಪವೃಷ್ಟಿ(ಕಾಷ್ಟ)ನಿರ್ಭೇದತೆಯುಂ, ವಿಕಚಕರ್ಣಿಕಾರವರ್ಣಮುಂ, ಕಫ ವಾತಪಿತ್ತದೋಷದೂರತೆಯುಂ, ಜರಾಮಯವ್ಯಾಬಾಧಾಬಾಧಿತ್ವಮುಂ, ಗಂಭೀರಮೃದುಮಧುರ ವಾದಿತೆಯುಂ, ವಜ್ರವೃಷಭನಾರಾಚಾಸ್ಥಿಸಂಧಿಬಂಧಮುಂ, ಚತ್ವಾರಿಂಶಚ್ಚಾಪದ್ವಯಸಪರಮೌದಾ ರಿಕದಿವ್ಯಮೂರ್ತಿಯುಂ, ಲಕ್ಷಸಮಾಸಮ್ಮಿತಾನಪವರ್ತಿತದೀರ್ಘಾಯುಷ್ಯಮುಂ ತನಗನುಸಂಗತ ಮಾಗೆ ಯೌವನಪ್ರಾಪ್ತನಾಗಿ ಕುಮಾರಕಾಲದೊಳ್ಪತಯ್ದಾಸಿರವರ್ಷಂ ನೆಱೆಯೆ ಪದಿನಾಱನೆಯ ತೀರ್ಥಾಧಿನಾಥನಪ್ಪುರ್ವರಾಸ್ಯತಿಲಕಂ:—

ಚಂ|| ಅಡಸಿದ ಪಾರಿಜಾತಕದ ಕಪ್ಪುರವಳ್ಳಿಯ ನೇಲವತ್ತಿಯಾ |
ಯ್ದಡಕೆಯ ಘೀಮಸೇನಿಕದ ತಂಬುಲದಿಂ ವಿಭು ಪೋಲ್ತನೋಲಗಂ ||
ಗುಡುವಡೆಯೊಳ್ ಮುಖಾರ್ಪಿತಮುದಂ ಕಟಶೋಧನದಿಂ ಪ್ರಭೇದಮು |
ಕ್ಕಡಸಿದ ಬೀರನಾಮದ ಕಳಂಬೆರಸಿರ್ದಮರೇಂದ್ರದಂತಿಯಂ || ೯೫ ||

**ವ||** ಮತ್ತಮೆತ್ತರಮನೆಯೊಳಗೆ ಪಾದಮಾರ್ಗದಿಂ:—

ಕಂ|| ಶ್ರೀಗಧಿಪನೊಳಗೆ ಪೊಱಮಡು |
ವಾಗಡಿನ ವಿಳಾಸಮುಮುರಸವಿುತಿಯ ಕಣ್ಗಿಂ ||
ಬಾಗೆ ನದೀಗಮುನಪ್ರ |
ತ್ಯಾಗಮನದ ಸುಪ್ರತೀಕಗಜಮನೆ ಪೋಲ್ತಂ || ೯೬ ||

**ವ||** ಅಂತುದಿತೋದಿತನಪ್ಪನುಮಾಸರ್ವಾರ್ಥಸಿದ್ಧಿಯಿಂದಂ ಬಂದು **ವಿಶ್ವಸೇನ**ಮಹಾರಾಜಂಗಂ **ಯಶಸ್ವತಿ**ಮಹಾದೇವಿಗ**ಮಿಂದ್ರಚಂದ್ರಂ** ಚಕ್ರಾಯುಧನೆಂಬೊಂ ಮಗನಾಗಿ ಪುಟ್ಟಿಬಳೆಯೆ:—

ಕಂ|| ಗುಣನಿಧಿಯನಾತನಂ ತ |
ತ್ಕ್ಷಣತತ್ಪರನಕ್ಷಿಪಕ್ಷ್ಮಪಾಳಿಪವಿಕ್ಷೇ ||
ಪಣಮಾತ್ರಮುಮಘರುಚಿವಾಃ |
ಕಣರವಿ ಜಿನಚಂದ್ರದೇವನಿಟಿಪನೆ ಮನದಿಂ || ೯೭ ||

ಕಂ|| ಅಂದಮುಮತಿಶಯಮುಮಂ ಬಿಸ |
ವಂದಮು ನುೞಿದೇಕರೂಪಮಾಯ್ತೆನೆ ವಿದ್ಯಾ ||
ಸಂದೋಹದೊಳಣ್ಣನ ಪಡಿ |
ಚಂದಂ ಚಕ್ರಾಯುಧಂಗೆ ಗುರು ಪೆಱನೊಳನೇ || ೯೮ ||

ಕಳಿದಭವದೊಳ್ ವಿರಾಮಂ |
ಗಳೊಳೊದವಿದ ಮೋಹದಿಂ ವಿಚಾರಕ್ಕೆ ಪವ ||
ಣ್ಗಳಿದ ಗುಣದಿಂ ಕಱಂ ಪೞು |
ಗಱದುದು ದಯೆ ತಮ್ಮನೊಳ್ ಜಗತ್ತ್ರಯಪತಿಯಾ || ೯೯ ||

ವ|| ಅಂತುತ್ಪನ್ನದೋಹದಹೃದಯಾಯತದ್ಯುತಿಯಮಪೂರ್ವಗೀರ್ವಾಣಜಂಗಮಮಹಿರುಹಂಗಳಿರ್ಪಂತೊಂದುಪೊೞ್ತುಮಗಲದಿರೆ ಮತ್ತೊಂದುಪವಿತ್ರದಿನದೊಳ್ ವಿಶ್ವಸೇನಮಹಾರಾಜನುಮೈರಾಮಹಾದೇವಿಯುಂ ಭಗವತ್ಸಿಂಹಾಸನಾಸನ್ನವರ್ತಿಗಳ್ ಮುಕುಳಿತಕರಕಮಳರಾಗಿ:—

ಉ|| ವೀರ್ಯಮನಂತವೀರ್ಯಮೞಿವಪ್ರತಿಮಂ ಸುಖಮಾತ್ಮಭಾವಿ ಗಾಂ ||
ಭೀರ್ಯಮಮಾನುಷಂ ನಿನಗೆ ದೇವರ ದೇವ ವಿಡೂರಭೂಮಿ ವೈ ||
ಡೂರ್ಯದಿನೆಂತು ಶುಕ್ತಿ ನವಮೌಕ್ತಿಕಜನ್ಮದಿನೆಂತು ಪೂಜ್ಯಮಂ |
ತಾರ್ಯ ಭವದ್ಗುರುತ್ವಮೆ ಮದೀಯಗುರುತ್ವಸಮಗ್ರಕಾರಣಂ || ೧೦೦ ||

ಕಂ|| ನಿನಗೆ ಗುರುವಾದಕಾರಣ |
ದಿನೆಮಗೆ ಸುರಪತಿಕಿರೀಟಮೆಱಗಿದುದಾಕಾಂ ||
ಚನಗಿರಿಗೆ ಸುರರಕೃತ್ರಿಮ |
ಜಿನಾಲಯಸ್ಥಿತಿಯಿನೆಱಗುವಂದಮನಿಂದ್ಯಾ || ೧೦೧ ||

ಚಂ|| ಮಹಿಮೆ ಜಗತ್ತ್ರಯಪ್ರಭುತೆಗಾಸ್ಪದಮಾಮುದಿದರ್ಕಮುಗ್ಗಳಂ |
ಮಹಿಮೆಯನಾಹೊ ಮಾಟ್ಪರಿದು ನಿನ್ನೊಡವುಟ್ಟಿದುದೀಗಳಾದೊಡಂ ||
ಮಹಿತ ನಿಜೈಕರಾಜ್ಯಭರದೊಳ್ ನಿಲವೇೞ್ಪುದು ನೀನಮೋಘನ |
ಪ್ರಹತಸಮಸ್ತನಾಕನರಲೋಕಫಣೀಶ್ವರಲೋಕಶಾಸನಾ || ೧೦೨ ||

ವ|| ಎಮ್ಮ ಸುಡಿ 'ಮುನಿಗೆ ಕಿನಿಸುವೋದಿ'ರೆಂಬ ಸುಡಿಯನೆ ಪೋಲ್ತುದಱಿಂದಮಿದಂ ದಿವ್ಯಚಿತ್ತದೊಳವಧರಿಸಿ ಯುಕ್ತತರವಿಚಾರದೊಳ್ ನೆಗೞ್ವುದೆಂದ ತಂದೆಯ ತಾಯ ಮಾತಿಗೆ ದರಹಸಿತವದನಾರವಿಂದನಾಗಿರ್ದುದಱಿಂದನಕ್ಷರವ್ಯಕ್ತಮಪ್ಪೊಡಂಬಡನಂ ವಿಶ್ವಸೇನಪ್ರಮುಖಸೇನಾಭಿಜ್ಞಾನತೆಯಿಂ ರಾಜಲೋಕಮಱಿದತ್ಯುತ್ಸುಕರಾಗಿ ಶಶಿವಂಶಕೇತುಗೆ ರಾಜ್ಯಾಭಿಷೇಕಂಗೆಯ್ಯೆ:—

ಕಂ|| ಸರಸೀಸರಿತ್ಸಮುದ್ರೋ |
ತ್ಕರಂಗಳಿಂ ತಂದು ಕನಕಕಳಶದ ನೀರ್ಗಳ್ ||
ಸುರಿದುವು ವಿಭುಶಿರದೊಳ್ ಶೈ |
ಲರಾಜಮಸ್ತಕದೊಳೆಱಗಿದಬ್ದಜಲಂಬೋಲ್ || ೧೦೩ ||

ವ|| ಅಂತು ರಾಜ್ಯಾಭಿಷೇಕಂಗೆಯ್ದಿಂ ಬೞಿಯಂ:—

ಕಂ|| ಎತ್ತಿದ ಪಟ್ಟಮುಮಂ ಕವಿ |
ದುತ್ತಮಮಕುಟಮುಮನುತ್ತಮಾಂಗದೊಳಾಂತುಂ ||
ಟಿತ್ತದ ಬಸಿರ್ಗಂ ಪಟ್ಟಮ |
ನೆತ್ತಿಸಿದಂ ಮಕುಟಬದ್ಧರಿಂ ಜಿನಚಂದ್ರಂ || ೧೦೪ ||

ವ|| ಮತ್ತಂ:—

ಕಂ|| ಏವಾತೊ ಕೋಟಿ ಕೋಟಿ |
ಗ್ರಾವಾಧಿಪರೞಗೆ ಮುಂದೆ ನುಡಿದು ಜಗಚ್ಚೂ ||
ಡಾಮಣಿಗೆ ಮಕುಟಬದ್ಧಮ |
ಹಾಮಂಡಳಪತಿಗಳಾದರೆಣ್ಬಾಸಿರ್ವರ್ || ೧೦೫ ||

ಬಲ್ಲರಿಗೆ ದಿವ್ಯಸಂಭವ |
ಮಲ್ಲದೆ ದೊರೆಗರ್ಭಸಂಭವಂಗಳ್ಗಲ್ಲಿ ||
ಲ್ಲಿಯುಮೆನೆ ಪಿರಿದುಂ ತಲೆ |
ವಲ್ಲಿದುವಱುವತ್ತುಸಾಸಿರಂ ಮದಕರಿಗಳ್ || ೧೦೬ ||

ಅಕ್ಷೂಣರಥಂ ತ್ರಿಂಶ |
ಲ್ಲಕ್ಷಂ ಹರಿ ಷಷ್ಟಿಲಕ್ಷಮಾಪಾದಾತಂ ||
ಲಕ್ಷಾಲಕ್ಷಮದಂ ಪ[ರಿ] |
ವೀಕ್ಷಿಸಲರಿದುಱದಿದಿರ್ಚಿ ಕಾದುವರೊಳರೇ || ೧೦೭ ||

ವ|| ತದನಂತರಂ:—

ಮ|| ಬಲವದ್ರಾಜಿತರಾಜಕಪ್ರಭೃತಿಕೃತ್ಯಾಕೃತ್ಯಪಕ್ಷಕ್ಕಮಾ |
ತ್ಮಲಸನ್ಮಂಡಲಮಂತ್ರವಂ ತೆಗೆ ಮನಂ ಮೆಯ್ದಾರದಾದೇವನು ||
ಜ್ಜ್ವಲತತ್ವಾಗಮನಕ್ಕೆ ತನ್ನ ತನುವಂ ತಂದಿರ್ದುಮೇನೆಯ್ದೆ ಮುಂ |
ಡಲನಾಥತ್ವಮನೆಯ್ದಿದಂ ಸುಕೃತಿಗಾಷಾಡ್ಗುಣ್ಯಮೇಂ ಬಾಟಿತ್ತಿಯೋ || ೧೦೮ ||

ವ|| ಮತ್ತಮಾರಾಜ್ಯಾಶ್ರಮ ಮುನೀಶ್ವರಂಗೆ:—

ಮ|| ಅರಿಭೂಪಾಳಕರಿಲ್ಲ ಮಧ್ಯಮನೃಪೋದಾಸೀನರಿಲ್ಲಾ ಮಹೀ |
ಶ್ವರನುಂತುಂ ವಿಜಿಗೀಷು ಚಾರರಹಿತಂ ವಿಶ್ವೇಕ್ಷಣಂ ವೃದ್ಧಿಗೋ ||
ಚರಸೇವಾನುತದೂರತತ್ವವಿನಯಂ ಶಾಂತೀಶ್ವರಂ ನಿತ್ಯಶಾಂ |
ತರಸಂ ಭೂಮಿಪಧರ್ಮಶಾಸನಮಿದೇನನ್ಯೋನ್ಯವೈರುಧ್ಯಮೋ || ೧೦೯ ||

ವ|| ಅಂತುಮಲ್ಲದೆ:—

ಮ|| ಸ್ರ|| ಉಪಮಾತೀತಂ ಜಗಕ್ಕದ್ಭುತಮೊದವೆ ಪಯೋರಾಶಿಯಂ ತಾಗೆ ತದ್ಭೂ |
ಮಿಪಶಾಂತಂ ಕ್ಷತ್ರತೇಜಂ ಹಿಮಮಳುರ್ವರ್ಪೊಲಬ್ಬಂಗಳಂ ಗರ್ವಮದ್ಭೂ ||
ಮಿಪರಂ ತಳ್ತಿಳ್ವಿಕೊಂಡತ್ತದು ಪಿರಿದೆಸೆವಂ ದೇವದೇವಂಗೆ ಮಾಡಿ |
ತ್ತಪವರ್ಗಶ್ರೀಯನೇಂ ಶಾಂತತೆ ಬಹುಗುಣಮೋ ನೀತಿಶಾಸ್ತ್ರೋಪದಿಷ್ಟಂ || ೧೧೦ ||

ಕಂ|| ಮುಂತಿರೆ ಕೂರ್ಪು ನಯಜ್ಞತೆ |
ಪಿಂತಿರೆ ರಿಪುಮಂಡಳಂಗಳಂ ಕೊಂಡಿರೆ ನಿ ||
ಶ್ಚಿಂತಮನಸಿ ಕೂರ್ಪಂತ |
ರ್ಪಂತುಪಶಮಮಿರ್ದುದಾನರೇಂದ್ರೋತ್ತಮನೊಳ್ || ೧೧೧ ||

ವ|| ಮತ್ತಮಾಪರಮಪುಣ್ಯಮೂರ್ತಿ(ಯ)ಯಶೋರಾಜ್ಯದೊಳ್:—

ಕಂ|| ರಾಜವತಿಯಾಯ್ತು ರಿಪುಮಹಿ |
ರಾಜನ್ವತಿಯಾಯ್ತು ತನ್ನ ಧರೆಯೆನೆ ವಿನಮ ||
ದ್ರಾಜಕನಳವಡಿಸಿದನಧಿ |
ರಾಜತೆಯಂ ಶಾಂತಿನಾಥನಖಿಳಾವನಿಯೊಳ್ || ೧೧೨ ||

ಉ|| ಕೋಪದ ತಣ್ಪು ತಣ್ಪುವೆರಸಂಬರದೊಳ್ ಸಿಡಿಲಂತೆ ಸರ್ವದಿ |
ಗ್ವ್ಯಾಪಕಮಾಗೆ ಗುಪ್ತಮಕರಪ್ರಕರಂ ಶರಧೀಶನಂತರ ||
ದ್ವೀಪಮನೆತ್ತಿಕೊಳ್ವತೆಱದಿಂ ಸಮುಸಿದ್ಧಿಯೆ ಸಿದ್ಧಿಯಾಗೆ ತ |
ದ್ಭೂಪತಿ ಕೊಂಡನನ್ಯಮಹಿಕಾಂಡಮನುಂಡಿಗೆ ಸಾಧ್ಯಮಪ್ಪಿನಂ || ೧೧೩ ||

ಕಂ|| ಅಹಿತರ್ ಸಂಧಿಯುಮಂ ವಿ |
ಗ್ರಹಮುಮನಾತನೊಳೊಡರ್ಚರೇಕೆನೆ ಸರ್ವ ||
ಸ್ವಹರಣಮಂ ಸಂಧಿ ಶಿರಃ |
ಪ್ರಹರಣಮಂ ತಮಗೆ ವಿಗ್ರಹಂ ಮಾಳ್ಪುದಱಿಂ || ೧೧೪ ||

ವ|| ಬಂದು ಲೋಕಮೆಲ್ಲಂ ಪೊಗೞೆ ಮತ್ತೊಂದು ಶುಭದಿನದೊಳ್ ಸಿಂಹಾಸನಾ[ಸೀನ] ನಾಗಿರ್ದ ಜಿನಚಂದ್ರದೇವನಂ ಕಂಡಾಯುಧಾಧ್ಯಕ್ಷನಷ್ಟಾಂಗಮೆಱಗಿ ಪೊಡೆವಟ್ಟು ಮುಂದೆ ನಿಂದು ಮುಕುಳಿತಕರಕಮಳನಾಗಿ:—

ಮ|| ದಿವಮೆಂತಂತೆ ಶತಾರಮಗ್ರಿಮಸಹಸ್ರಾರಂ ಸಹಸ್ರಾರಮ |
ಪ್ರವಿಲಕ್ಷ್ಯಂ ದಿನಪೋಪಮಾನವಳಯಂ ಜಾಜ್ವಲ್ಯಮಾನಂ ಮರು ||
ನ್ನಿವಹಾನಂದಕೃತಸ್ವನಂ ಕುಸುಮವೃಷ್ಟ್ಯಗ್ರೇಸರಂ ಬಂದುದಿಂ |
ದು ವಿಯಚ್ಚಕ್ರದಿನಸ್ತ್ರಶಾಲೆಗೆ ಮಹಾಚಕ್ರಂ ಮಹೀವಲ್ಲಭಾ || ೧೧೫ ||

ಕಂ|| ಎಂದೀಬಿನ್ನಪಮನವ |
ಸ್ಪಂದಮನಂತೆಯ್ದೆ ಕೇಳ್ದು ಮನುಜೋಕ್ತಿಪರಿ ||
ಸ್ಪಂದಮತಿ ಕೇಳದಂತಿ |
ರ್ದಂದಪಗತಚಳನಜಳಧಿಯಂ ವಿಭು ಪೋಲ್ತಂ || ೧೧೬ ||

ವ|| ಅಂತುದಾಸೀನಮಾನಸಂ ಮಸಕಮಿಲ್ಲದ ಸಾರ್ವಭೌಮಂ ಪೇರಡ್ಡಮಾಗಿ ಕೆಲದ ಚಕ್ರಾಯುಧನೊಳ್ ತಮ್ಮಂಗಬಾಹ್ಯವಸ್ತುವಂ ಪರಿತಂಮಾಡುತ್ತಿರೆ ಮತ್ತಂ ಕುಲವೃದ್ಧರ್ ತದೀಯಾಭಿಮುಖರಾಗಿ ಬಿನ್ನಪಂಗೆಯ್ದೊಡವರುಪರೋಧದಿಂದೆಂತಾನುಂ ಮೊಗಮಿತ್ತು ನೋಡಿ ಪೇೞಿಮದರ್ಕೇಗೆಯ್ವುದೆನೆ ಮುಕುಳಿತಪಾಣಿಪಂಕರುಹರಾಗಿ:—

ಕಂ|| ಮಂಡಳಪತಿಯ್ಯೆ ಮುಂ ಷ |
ಟ್ಖಂಡಕ್ಷ್ಮಾಪತಿಯೆ ಯಿಾಗಳದಱಂದಮುದೇ ||
ಭಂಡಮೆನಗೆನ್ನದೇೞ್ ಬಗೆ |
ಗೊಂಡರ್ಚಿಸು ಚಕ್ರರತ್ನಮಂ ಕುರುತಿಲಕಾ || ೧೧೭ ||

ವ|| ಅದಲ್ಲದೆಯುಂ ಪೂರ್ವಚಕ್ರಾಯುಧರನುಕ್ರಮಮನಱಯೆ ಬಿನ್ನಪಂಗೆಯ್ದೆವದಱಂದೆ ಮೇಲಪ್ಪುದಂ ದೇವರ ಚಿತ್ತಮಱಗುಂ:—

ಕಂ|| ಎನೆ ದರಹಸಿತಾಸ್ಯಂ ಶಾಂ |
ತಿನಾಥನೆಂತೆಂತೊ ಚಕ್ರಮಂ ಪೂಜಿಸೆ ಮು ||
ನ್ನಿನ ಚಕ್ರವರ್ತಿಗಳ ತೆಱ |
ದಿನಾಮುಮಱಗುವುದು ನಿಮಗೆ ಹೃದಯಂಗಮಮೇ || ೧೧೮ ||

ಕುಲವೃದ್ಧರಿರೆಂದುಮನಾ |
ಕುಲವೃದ್ಧಿವಿಶೇಷವಿದ್ಯರಿರ್ ನಿಮ್ಮ ವಚೋ ||
ಜಲಮಾಲವಾಲಜಲಕೃತ |
ವಿಲಾಸನೃಪಭೂರುಹಕ್ಕೆ ಹಿತಕರಮೆ ವಲಂ || ೧೧೯ ||

ಮುದುಗಣ್ಗಳುಚಿತಮಂ ನುಡಿ |
ವುದು ದಲ್ "ಸ್ವಮತೇ ನಿವಾರಕಾಭಾವಾ"ತೆಂ ||
ಬುದನೆ ಬಗೆದುಚಿತಮಂ ಬಗೆ |
ಯದೆ ನುಡಿದೊಡಮೆಮಗೆ ಲಂಘನೀಯಮಪೇಯಂ || ೧೨೦ ||

ಬಗೆಗೆಱಗೆ ಸಿದ್ಧಪರಮೇ |
ಷ್ಠಿಗಳಲ್ಲದೆ ರಮ್ಯರಲ್ಲರುೞದ ಸಮಸ್ತೋ ||
ರ್ವಿಗಳೆಮ್ಮಂಘ್ರಿಯುಗಕ್ಕೆಱ |
ಗುಗುಂ ಸ್ಫುರದ್ದೀಪವರ್ತಿನಿಧಿಗೆಱಗುವವೋಲ್ || ೧೨೧ ||

ವ|| ಅದಲ್ಲದೆಯುಮಿಾಶರೀರದೊಳ್ ಘಾತ್ಯಘಾತಿದುರಿತವಿನಾಶಮುಮನಂತಚತುಷ್ಟಯಮುಂ, ಕೇವಲಲಬ್ಧಿಲಾಭಮುಮಪ್ಪುವನಱದು ಮಿಾಚಕ್ರಲೋಹಖಂಡಕ್ಕಂ ಕುಡುಗಲ್ಗಮೆಱಗಿ ಮೆಂಬೊಡದುವುಮಂ ನೀಮಱವಿರೆಮಗೆ ಮಹತ್ತರವಚನಮಮೋಘಂ ಮಾನ್ಯಮೆ:—

ಚಂ|| ಎನೆ ಯೆನೆ ಚಕ್ರರತ್ನಮಮರಾಳಿವೃತಂ ಬಲಗೊಂಡು ಶಾಂತಿನಾ |
ಥನ ಪದಪಂಕಜಕ್ಕೆಱಗೆ ಮುನ್ನಿದನರ್ಚಿಸು ಪೂಜಿಸೆಂದು ಪೇ ||
ೞ್ದನು ಮೆಱಗೆಂದು ಪೇೞ್ದನು ಮಿದಾದಿಯ ಚಕ್ರಿಗಳಂದಮೆಂದು ಪೇ |
ೞ್ದನು ಮಿದು ಚೋದ್ಯಮೆಂದು ಬೆರಗಾಗಿ ನಿಜೋಕ್ತಿಗೆ ತಾಮೆ ನಾಣ್ಚಿದರ್ || ೧೨೨ ||

ವ|| ಅಂತಿನಿವಿರಿದಾಶ್ಚರ್ಯಮುಂ ಜಗತ್ಕ್ಷೋಭಮುಮಾಗಿಯಾಚಕ್ರೋತ್ಪತ್ತಿಯಪ್ಪುದುಮಧಿರಾಜಯಶಶ್ಚಂದ್ರಿಕೆ ಜಿನರಾಜಚಂದ್ರೋದಯದೊಳ್ ಮಸುಳಿಸುಂ ಕನಸಿನೊಳ್ ರಥಾಂಗಧರಯಕ್ಷರೂಪಮುಂ ಕಂಡು ನೆನಸೆಂದು ತಂತಮ್ಮ ನೆಲೆಗಳೊಳ್ ಪುರಸ್ಥರಾಜಕೋಟಿ ಪೆಳ್ವಳಿಸೆಯುಂ ಇಂತು ನಿರತಿಶಯಪುಣ್ಯಪ್ರಭಾವಭೂತಚಕ್ರೋತ್ಪತ್ತಿ ನಾಡೆಯುಂ ವಿಸ್ಮಯಂಮಾಡೆ ಮಱುದೆಸವಂ ಮುನ್ನಿನ ಚಕ್ರೋತ್ಪತ್ತಿಪೂಜಾನುಭಾಷಿಗನಪ್ಪ ಪ್ರಧಾನಂ ನಿಂದಿರ್ದು ವಿಜಯಪ್ರಸಂಗವಿಜ್ಞಾಪನಮುಖರಮುಖನಾಗಿಯುಮತೀತದಿವಸಸ್ವವಚನಕೃತಾರಂಭಕ್ಕೆ ಸಿಗ್ಗಾಗಿ ಚಕ್ರಾಯುಧನಂ ಬಿನ್ನಪಂಗೆಯ್ಯಲ್ವೇಟ್ಟಿಪ್ಪುದುಮಾತಂ ಬಂದು:—

ಮ|| ಶ್ರವಣೋಪಾಂತದೊಳಿರ್ದು ಹಸ್ತತಳಮುಂ ವಕ್ತ್ರಾಬ್ಜದೊಳ್ ಸಾರ್ಚಿ ವೈ |
ಶ್ರವಣಂ ವಜ್ರಧರಂಗೆ ಬಿನ್ನವಿಸುವಂತಂಭೋಧಿವೇಳಾಪಳೀ ||
ತವನಶ್ರೇಣಿಯನುರ್ವರಾವನಿತೆಯಂ ಬಾಯ್ಕೇಳಿಸಲ್ವೇಟ್ಟಿಪ್ಪುದೆಂ |
ದವನೀವಲ್ಲಭವಲ್ಲಭಾನುಜ(ನು)ದಾತ್ತಂ ಬಿನ್ನಪಂ ಗೆಯ್ವುದುಂ || ೧೨೩ ||

ವ|| ಅಪ್ರತಿಹತನಿಜಾಜ್ಞಾರೂಢ ತ್ರೈಲೋಕ್ಯಶೇಖರಂ ತನಗೆ ನಿಸ್ಸಂಶಯಮಾಗಿ ಯುಪವನಪ್ರತಿಕೂಲಪ್ರಿಯಹಿತವಾದಿಯಪ್ಪುದಱಿಂ ಸಂತೆಗೆಯ್ವೆನೆಂಬುದುಂ ಚಕ್ರಾಯುಧನಾಯುಧಾಧ್ಯಕ್ಷಾಪ್ತಪುರುಷರುಮೊಂದೆ ಸರದೊಳ್ ಮಹಾಪ್ರಸಾದಮೆಂದಾಸ್ಥಾನಮಧ್ಯದಿನೆಟ್ಟು ಬಂದು ಹಸ್ತಿನಪುರಾಂತರಾಳದೊಳ್ ದಿಗ್ವಿಜಯಘೋಷಣಾಪ್ರವರ್ತನಪರರಾಗಿ ಪೊಱಲ ಪೂರ್ವದಿಗ್ಭಾಗಂಗಳೊಳ್ ಶಿಬಿರನಿವೇಶೋಪಕಾರ್ಯವಿರಚನಪರರಾಗಿ ಪ್ರಾರಂಭಮುಂ ಪಡೆವಳಸಿಂದಂ ಮಾಡಲ್ವೇಟ್ಟು ದಿಗ್ವಿಜಯಭೇರಿಯಂ ಪೊಯ್ಸಿದಾಗಳ್:—

ಮ|| ಮದಮುಂ ದಿಗ್ಗಜಮೆತ್ತಿ ಕಟ್ಟಿ ದಿಗಧೀಶರ್ ದೇವದೇವಂಗದಾ |
ವುದೊ ಭೂಲೋಕದ ಸಾಧ್ಯಸಾಧನಗಳಿಂ ತ್ರೈಲೋಕ್ಯಸಾಮ್ರಾಜ್ಯಸಂ ||
ಪದುಪೇತಂಗೆನೆ ಬಂದು ಮುಂದೆ ನಿಲೆ ಮೂವತ್ತಿರ್ವರಿಂದ್ರರ್ ಕಲಂ |
ಕಿದುವಂತಬ್ಧಿಗಳಂದದೇನೆಸೆದುದೋ ಗಂಭೀರಭೇರೀರವಂ || ೧೨೪ ||

ವ|| ಅಂತು ದಿಗ್ವಿಜಯಭೇರಿಯ ನಿನಾದದೊಡನೊಡನ:—

ಕಂ|| ಅಸಮರವಮೋಕಶಂಖ |
ಪ್ರಸನ್ನಗಂಭೀರನಿನದಮೆಸೆದುದು ವಿಜಯ ||
ಪ್ರಸರಮನಶೇಷವಸುಮತಿ |
ಗೆ ಸಾರುವಂತಾಮಹಾಮಹೀವಲ್ಲಭನಾ || ೧೨೫ ||

ವ|| ತನ್ನಿನದಶ್ರವಣಸಮುಪಜನಿತ ಪ್ರಯಾಣೋದ್ಯೋಗಮಿಳಿತಷಡ್ವಿಧಬಳಜಳನಿಧಿಯೊಳ್-

ಕಂ|| ಕಳಭಸ್ತನ್ಯಪಜವನಂ |
ಗಳನಂಜಿಸ ಹರಿಕುಳಕ್ಕೆ ನಡೆ ಮುಳಿಸಂ ಮು ||
ಕ್ಕಳಿಸಿದುವೆನೆ ಮದಮುಂ ಮು |
ಕ್ಕಳಿಸಿದುವೆಣ್ಬತ್ತುನಾಲ್ಕು ಲಕ್ಕೆ ಗಜಂಗಳ್ || ೧೨೬ ||

ಕ್ಷಿತಿಪನ ಗಜಘಟೆಗಳೊಳಾ |
ಶ್ರಿತನುಂ ಜಾನಾವಗಾಢ ನಾಮುಘಟಾಸಂ ||
ತತಿಗೆ ಸುಲಕ್ಷಣಸಂಗರ |
ನುತವಾದುವದೇಂ ಸಲಕ್ಷಣಂಗಳೊ ಕರಿಗಳ್ || ೧೨೭ ||

ವ|| ಮತ್ತಮೆರಡನೆಯ ಸೇನಾಂಗದೊಳ್—

ಕಂ|| ಸಂಗತದಶಧ್ರುವಕ್ಷೇ |
ತ್ರಂಗಳ್ ಶುಭಲಕ್ಷಣಂಗಳಮೃತೋದ್ಭವವಾ ||
ಹಂಗಳಜಮೃಗ್ಯುಳೂಕ ಭ |
ವಂಗಳ್ ಪದಿನೆಂಟುಕೋಟಿ ಜಾತ್ಯಶ್ವಂಗಳ್ || ೧೨೮ ||

ವ|| ಮತ್ತಂ ತೃತೀಯಬಲಾಂಗದೊಳ್:—

ಕಂ|| ಅರಿಷಡ್ವರ್ಗಮನವನೀ |
ಶ್ವರನಾಟಲೆಯೆ ಪೊಱಗಣರಿಗೆ ಜಯಾಂಗನೆ ಪ ||
ಲ್ಮೊರೆದಪಳೆನೆ ಪರಿದುವು ಜೀ |
ರ್ಗರೆವುತ್ತುಂ ಚತುರಶೀತಿಲಕ್ಷರಥಂಗಳ್ || ೧೨೯ ||

ವ|| ನಾಲ್ಕನೆಯ ಸೇನಾವಯವದೊಳ್:—

ಕಂ|| ದಶದಿಕ್ತಟೀತತಂ ಚತು |
ರಶೀತಿಕೋಟಿಪ್ರಮಾಣಪಾದಾತಂ ತ ||
ದ್ವಶಕಾಸ್ಪದಮಾದುದದೇ |
ನಶೇಷಗುರು ಪಿರಿಯ ಸಿರಿಯುನವಗಯ್ಸಿದನೋ || ೧೩೦ ||

ಅಂತು ಚತುರಂಗಸೇನೆ ಯು |
ಗಾಂತಕರವ ವರ್ಣವಾರವಂ ಘನರವ ಮಂ ||
ಬಂತಾಗೆ ತಾಗೆ ದಿಗ್ಭಿವ |
ರಾಂತರವಂ ಬಂದು ನಿಂದುದಂದರಮನೆಯೊಳ್ || ೧೩೧ ||

ಉ|| ಅನ್ನಗಮಂಬುಜಾಕರದ ಸೀಕರಮುಂ ನಡೆಗೊಂಡು ಮಾಳೆಸಂ |
ಪನ್ನತೆಯೊಳ್ ಪೊದಟ್ದು ಪೊಸವೂವಿನ ಕಂಪಿನೊಳಟ್ದು ಚಿತ್ತಜೋ ||
ತ್ಪನ್ನವಿಳಾಸಮಂ ವಿರಹಿಗಿರ್ಮಡಿಮಾಡಿ ಶರದ್ಭವಂ ಸಮಿಾ |
ರ [ನ್ನ] ಸುಸೋಂಕಿ ಘರ್ಮಜಲಬಿಂದುವನಾಱಿಸಿದತ್ತು ನಲ್ಲರಾ || ೧೩೨ ||

ಕಂ|| ಎರಡನೆಯ ಪಾರ್ಥಿವಶ್ರೀ |
ಸ್ವರೂಪದಿಂ ಸಿಧಿಯಧೀಶನಂ ಸಾರ್ವಂತಾ ||
ಶರದಂಗನೆ ಸಾರ್ದಳ್ ಪಂ |
ಕರುಹಾಂಕಿತೆ ವಿಶದಗಗನಹರಿದಂತರಮಂ || ೧೩೩ ||

ದಿನಪಪ್ರತಾಪಮುಂ ಶಾಂ |
ತಿನಾಥವಿನುತಪ್ರತಾಪಮುಂ ತದ್ವಸುಧೇ ||
ಶನ ಕಾಂತಿಯು ಮುಂದು ಮೃಗಾಂ |
ಕನ ಕಾಂತಿಯುಮೇಂ ದಿಗಂತಮಂ ಪರ್ವಿದುದೋ || ೧೩೪ ||

ಹರಿ ವರ್ಷಜಧನುವಂ ಸಂ |
ಹರಿಸಲೊಡಂ ಜೈತ್ರಚಾಪಮಂ ಜಿನಚಂದ್ರಂ ||
ಧರಿಯಿಸಿದಂ ಧರೆಗಿಂತಿ |
ರ್ವರುಮೇಂ ದೃಢದಿವ್ಯಚಾಪಮಾರೋಪಿತಮಂ || ೧೩೫ ||

ಕಾಶಚಮರರುಹ ದತ್ತವಿ |
ಲಾಸೆಗೆ ಸಿತಪಂಕಜಾತಪತ್ರೆಗೆ ಶರದು ||
ದ್ಭಾಸಿತಲಕ್ಷ್ಮಿಗೆ ಸದೃಶವಿ |
ಕಾಸಮಿದೆನಿಸಿದುದು ಲಕ್ಷ್ಮಿ ಶಾಂತೀಶ್ವರನಾ || ೧೩೬ ||

ಕಾಂತಿಪ್ರಸಾದಗುಣದ ದ |
ಗುಂತಿಗಳಿಂದುಗಮಿಳೀಶ್ವರೇಂದುಗಮೊಡನ ||
ತ್ಯಂತಂ ಸಮನಿಸಿ ಚಕ್ಷು |
ಷ್ಮಂತರ ಕಣ್ಗಂ ಮನಕ್ಕಮಿತ್ತುದು ಮುದಮಂ || ೧೩೭ ||

ವ|| ಮತ್ತಂ ಹಂಸಯೂಥಲೀಲೆಗಂ, ಧವಳಜಳಧರಮಾಳೆಗಂ, ಕುಮುದವಿಮಳಾಂಬುಗಂ, ಸಿಂಧೂಪಾಂತವಿಶದಕಂಬುಗಂ, ಕುರುಕುಲಲಲಾಮನಪ್ಪ ಚಕ್ರವರ್ತಿಯ ಕೀರ್ತಿಯೆ ಬಿದ್ದರ್ವಂದಂತೆಸೆವುದುಂ:—

ಕಂ|| ಧವಳೇಕ್ಷುಚ್ಛಾಯ ನಿಷ |
ಣ್ಣವಪುಗಳಂದದೊಳೆ ನೆಗಟ್ದ ಬಣ್ಣಮನಾಶ್ಚೈ ||
ಶವದಿಂ ಕಾಕಳಿಯೊಳ್ ಚ |
ಕ್ರವರ್ತಿಯಂ ಪಾಡಿ ಶಾಳಿಗೋಪಿಯರೆಸೆದರ್ || ೧೩೮ ||

ಕಳಶಜನುದಯದೊಳೊದವಿದ |
ಜಳಾಶಯಂ ತಿಳಿದುವೊಡನೆ ಕದಡಿದುವವನೀ ||
ತಳಪತಿಯ ಪಡೆಯೊಳರಿನೃಪ |
ಜಳಾಶಯಂ ಶರದಮೇಂ ವಿರುದ್ಧಾರ್ಥಕಮೋ || ೧೩೯ ||

ಅಸಮಚ್ಛದಪರಿವೀತ |
ಪ್ರಸವಾಮೋದಾಹತಂಗಳವನಿಪಕರಿಗಳ್ ||
ಪೊಸತೆ ಬಿಡುತಂದುವೊಡನೊಡ |
ನಸೂಯೆಯಿಂ ಸೆಣಸುವಂತೆವೋಲ್ ಪರಿಮಳಮಂ || ೧೪೦ ||

ನೆಲೆಯುಂ ಮಾಡಿ ಸರಿತ್ಸಂ |
ಕುಲಕ್ಕೆ ಬಟ್ಟೆಯನೆ ಮಾಡಿ ಕರ್ದಮಜಳಮಂ ||
ಸ್ಥಲಮೆನಿಸಿ ಯಾತ್ರೆಗವನೀ |
ತಲಪತಿಯುಂ ಪ್ರೇರಿಸಿತ್ತು ಪುಗಿಲೊೞ್ ಶರದಂ || ೧೪೧ ||

ವ|| ತದನಂತರಂ:—

ಕಂ|| ಬಲದ ಸುಟಿುವೆರಸಿದರ್ಚಿಯ |
ವಿಳಾಸದಿಂದಗ್ನಿರಾಜಿ ನೀರಾಜನದೊೞ್ ||
ಬಲಗೆಯ್ಯೊೞ್ ಚಕ್ರಿಗೆ ದೋ |
ರ್ವಲವಿಜಯಮನೀವ ತೆಱದಿನೇಂ ಸೊಗಯಿಸಿತೋ || ೧೪೨ ||

ವ|| ಅಂತಪರಿಮಿತಶುದ್ಧಪಾರ್ಷ್ಣಿಯುಂ, ಗುಪ್ತಮೂಲಪ್ರತ್ಯಂತನು, ಮಂಗೀಕೃತವೀರಪ್ರಸರನುಮಾಗಿ ಸೌಜನ್ಯಕಂದಾಂಕುರಂ ವಿಜಯಪ್ರಸ್ಥಾನೋದ್ಯುಕ್ತಂ ಮಂಗಳವಸದನಂಗೊಂಡು ಪರಿಪೂರ್ಣಾಬ್ಜಕುಬ್ಜಶಿರೋದ್ಧರಣನಂ, ವ್ಯೂಢೋರಸ್ಕನಂ, ಪ್ರಭೂತಾಂತರ್ಮಣಿಯುಂ, ವಿಪುಳೋಚಿತಾಂಸನಂ, ಪ್ರಶಸ್ತಾಸನನಂ,ಕಾರ್ಮುಕಪರಿಣತವಂಶನಂ,ಸಮಪಾರ್ಶ್ವ(ನ),ನಜಕುಕ್ಷಿಯುಂ, ಗೂಢಪುಷ್ಕರನಂ, ವಿಪುಳಾಯತಬಾಹುವಂ, ವರಾಹಜಘನಪರನಂ, ಸುತಾತ್ರಿಯಸ್ಥಿ ಲಾಗಲಜನ, ನುಪದಿಗ್ಧಸೇಚಕನ, ನನುಪೂರ್ವಲಾಂಗೂಲಸಂ, ಕಾಚಕಿಲ್ಯಸಂವರ್ತಕನಂ, ಪ್ರಶಸ್ತವಾಳಧಿಯುಂ, ಸಮಸುವಿಭಕ್ತಸ್ತನಾಂತರನಂ, ಸುನಿವೃತ್ತಾಯಾಮಕಾಂಡನ,ನತನೂದರನಂ, ಪರಿಪೂರ್ಣವಕ್ತ್ರದಿಕ್ಕೋಶನಂ, ಮಂತ್ರಾಧಿಕಾಖ್ಯನಂ, ಅನಿಮ್ನನಾಭಿಯಂ:—

ಕಂ|| ವಿನುತಸುಜಾತಹ್ರಸ್ವ |
ಸ್ತನಚೂಚಕನಂ ಪ್ರಪೂರ್ಣಸಪ್ತಸುರೋಚಿಃ ||
ಕನದಂಕುಶಕೃತದೀರ್ಘ |
ಪ್ರಣೂತಕೋಶನನುದೀತಜವನಂ ಯುವನಂ || ೧೪೩ ||

ವ|| ಸಮತಜ್ಞಾವಿದ್ವಸ್ಸಮತಾನುಪೂರ್ವ ಮೃದುಕಳಶವೃತ್ತಪುಷ್ಕರಗೋತ್ರನಂ, ಸುಸಂವೃತಪ್ರೋಹಪಳಿಹಸ್ತವಿಕಟಗಾತ್ರನಂ, ಸಂಜ್ಞಾತವ್ಯಷ್ಟಿಪಿಷ್ಟಕಪ್ರೋತ್ಸಂಗನಂ, ಉಪಸಂದಿಗ್ಧತರಶ್ಲಕ್ಷ್ಣಪಾರ್ಷ್ಣಿಯುಂ, ಸುಪ್ರತಿಷ್ಠಿತಾಪರನಂ, ಶ್ಲಕ್ಷ್ಣ ಪತಿವ್ರಣತಾಂಚಿತನಂ, ಸುಪಾದತಳನಂ, ಮರುದಧೀಶಸನ್ನಿಭನಂ, ಮತ್ತಂ:—ಸ್ನಿಗ್ಧಪೂರ್ವಶ್ವೇತಶ್ಲಕ್ಷ್ಣಾರ್ಧಚಂದ್ರಸದೃಶಸುಸನ್ನಿವಿಷ್ಟಾನುಪಂಶವೃತ್ತಾಂತರವಿಂಶತಿನಖನಂ, ಶ್ಲಕ್ಷ್ಣಸ್ನಿಗ್ಧಮೃದುಬಹುಳಾನುವ್ಯಾಯಮಿತಪ್ರತಿಯಾಂಕಸ್ನಿಗ್ಧಪ್ರಕಾಶಸೂಕ್ಷ್ಮಬಿಂದುಸಂದೋಹನಂ, ಮೃದುಸ್ನಿಗ್ಧಪ್ರಭೂತಸೂಕ್ಷ್ಮವರ್ಣಾನುವರ್ಣಜಯುಗ್ಮಜೈಕರೋಮಾಂಚಿತನಂ:—

ಉ|| ಚಂಪಕಸಪ್ತಪರ್ಣಮದಗಂಧಿಯ ನುತ್ತಮಪಾತ್ರವರ್ತಿ ಭೂ |
ಕಂಪನಮಂ ಕನತ್ಕನಕಮಂಡನಮಂಡಿತಮಂ ವಪುಷ್ಮಮಂ ||
ಸಂಪದುಪೇತಮಂ ತರಿಸಿ ದಿಗ್ವಿಜಯಕ್ಕೆ ಜಿನೇಂದ್ರಚಂದ್ರದೇ |
ವಂ ಪೊಱಮಟ್ಟನೇಱಿ ಜಯಮಂ ಜಯಪರ್ವತಯಾನನಾಗಮಂ || ೧೪೪ ||

**ವ||** ಮತ್ತಂ ಮಕರಣತೋರಣಾಂತರದಿಂ ನುಗುಳ್ದು ಬರ್ಪ ಚಕ್ರವರ್ತಿಯೆರಡೋಳಿಯೊಳಂ:

ಕಂ|| ಶ್ರೀಜಾಯಾಪತಿಗಕ್ಷಯ |
ಲಾಜಾಸಾರಂ ಪುರಂಧ್ರಿಯರ್ ಸೂಸೆ ಕರಂ ||
ರಾಜಿಸಿದುದಮೃತಬಿಂದುಸ |
ಮಾಜಂ ಜನ್ಮಾಭಿಷವದಿನೊಪ್ಪುವತೆಱದಿಂ || ೧೪೫ ||

ಪ್ರಾಚೀನಬರ್ಹಿರುಪಮಂ |
ಪ್ರಾಚೀಹರಿದಭಿಮುಖಂ ಮರುದ್ಧತಕೇತೂ ||
ತ್ಕೋಚಿತತರ್ಜಿತರಿಪು ಚಳಿ |
ತಾಚಳಸನ್ನಿಭಗಜಾಧಿರೂಢನಧೀಶಂ || ೧೪೬ ||

ತಳರೆ ಮಹೀರಜದಿಂ ಘನ |
ವಿಳಾಸಗಜಘಟೆಯಿನವನಿಯುಂ ನಭಕೆ ನಭ ||
ಸ್ಥಳಮುಂ ನೆಲಕ್ಕೆ ತಂದಂ |
ತೞುಂಬಮಾದುದು ತದೀಯಚತುರಂಗಬಳಂ || ೧೪೭ ||

**ವ||** ಅಂತು ಬಂದು ಮುನ್ನಮೆ ಸಮೆದ ನಾಯಕಮನೊಳಗುಮಾಡೆ ಪರಿವೇಷ್ಟಿಸಿ ರಚನಾವಿಶೇಷಂ ಬಳೆದು ಪರಿವ ರುಚಕರಚನೆ(ಯಿರ್ಪಂತೆ)ಮಾಡಮಂ ಪತ್ತಿ ಸುತ್ತಿಱಿಂದ ಕರಗದ ಡಪದ, ಡವಕೆಯ, ಮಡಿಯ, ಪರಿಯಣದ, ಬಾಣಸಿನ, ಗುಣನೆಯ, ಮಜ್ಜನದ, ದೇಹಾರದ, ರೆಂಚೆಯ, ಕೊಂಚೆಯದ, ಕೂರವದ, ಕೊಟ್ಟಗೆಯ, ಗುಡಿಯ, ಜಳಗುಡಿಯ, ಗೊಲ್ಲಣಿಗೆಯ, ಮಂಡವಿಗೆಯ, ವಿಳಾಸನಿವಾಸಂಗಳಿಂದಂ; ಎರಡೋಳಿಯ ರಾಣೀವಾಸದ ಬಳ್ಳಿಗಾವಣಂಗಳಿಂದ; ಮವಱ ಮುಂದೆ ಸಾಹಣಾಘದೊಳಗಿರಿಸುವ ಪಂಚಕಲ್ಯಾಣದ ಸೂಚೀಯಾನೆಗಳ್ಗೆಂದು ನಿಱಿಸಿದ ನಡೆಮಾಡ ಸಾಲೆಗಳಿಂದಂ; ಅಲ್ಲಿಂದಂ ಮತ್ತೊಂದು ಬಾಗಿಲಿಂ ಪೊಱಗೆ ವಂಕದಾರದೆರಡುಂ ದೆಸೆಯೊಳಂ ತುರಗಾಸುರನ ಪಡೆದೋರ್ಕೆಯಂತಿರ್ದ ದಿವ್ಯಾಶ್ವಂಗಳ ಕಟ್ಟುವ ದೀರ್ಘಪಟಮಂಡಪಂಗಳಿಂದ ಮತಿಮನೋಹರಮಾದವನಿಪತಿಯ ಭವನನಿವೇಶದಿಂದಮುಂದಂಬಡೆದ ಪೊಱವೀಡಂ ಸೋಮಾನ್ವಯಪ್ರದೀಪಂ ಪುಗುವಾಗಳ್:—

ಕಂ|| ಪಿಡಿಗಳ್ ನೃಪವಿಭವದ ಕೆ |
ಯ್ಪಿಡಿಗಳ್ ಬರ್ಪಂತಿರಂಗರಕ್ಕರ ನೆರದೊ ||
ಕ್ಕಡಿತಲೆ ಬೆಸದೊಡಲೆಯೆ ಚೆ |
ಲ್ವಿಡಿದೊಡನಂದೇಱಿ ಬರೆ ನೃಪಾಂಗನೆಯರ್ಕಳ್ || ೧೪೮ ||

ಮಂದಾಕ್ರಾಂತಂ|| ಅಲ್ಲಿಂ ಮುನ್ನಂ ನೃಪತಿ ಗಜಮಂ ಮಂಡನಾಯೋಗಹೇಮೋ |
ತ್ಫುಲ್ಲಶ್ರೀಚಂಪಕವನಮದೊಂದುರ್ವಿದಾಕಾರಮಂ ವಿ ||
ದ್ಯುಲ್ಲೀಲಾವಿಭ್ರಮದೆ ಪೊಳೆಪಂ ತಾಳ್ದಿ ಕೂರಂಕುಸಂ ಕಂ |
ಡೆಲ್ಲಂ ತನ್ನಂ ಪರಸಿ ಪುಗೆ ಬೀಡಂ ಮಹೋತ್ಸಾಹದಿಂದಂ || ೧೪೯ ||

ಕಂ|| ಗಜಧಕ್ಕೆಯ ಪಾಱು ಮಹಾ |
ಧ್ವಜದೊಜ್ವರದೇಕಶಂಖರವಿಶಶಿಬಿಂಬ ||
ಧ್ವಜದ ಧವಳಾತಪತ್ರ |
ವ್ರಜದೊಳಗನೆ ನಡೆಯೆ ಪೊನ್ನ ಸಿರಿವಟಿಯಿಗೆಯೊಳ್ || ೧೫೦ ||

ಪಂಚಮಹಾಶಬ್ದದ ನಡು |
ವಿಂಚರದಿಂದೆಸೆವ ಕನಕಕಾಹಳಜಯಘಂ ||
ಟಾಂಚಿತಮಂಗಳಪಟುಪಟ |
ಹಂ ಚಕ್ರಿಯ ಮುಂದೆ ವರ್ಧಮಾನನಿನಾದಂ || ೧೫೧ ||

ಅದಱಿಂ ಮುನ್ನಂ ಸೇನಾ |
ನಿ ದಂಡರತ್ನಂ ನಿಜಾಗ್ರದೊಳ್ ಬರೆ ಪರಮಾ ||
ಭ್ಯುದಯಕ್ಕುದಯದ ಗಿರಿ ಭೂ |
ಭೃದಖಿಳಮಣಿಮುಕುಟಕೋಟಿತಾಟಿತಚರಣಂ || ೧೫೨ ||

ವ|| ಬಂದು ರಾಜಮಂದಿರಮಂ ಪೊಕ್ಕು ಚಕ್ರವರ್ತಿಯು ನಿಜೋಚಿತಕಾರ್ಯನಾಗಿರ್ಪಿನಂ:—

ಮ|| ಕುರುವಂಶಾಂಬರಭಾನುಗಾದುದುದಯಂ ಕ್ಷತ್ರಪ್ರತಾಪಂ ನಿರಂ |
ತರಮಾಭೂಪನೊಳಿರ್ದುದಂಧತಮಸಂ ಬೆನ್ನಿತ್ತುದಾತಂಗೆ ಮಾ ||
ಣ್ದಿರನಿನ್ನೆಂಬವೊಲಸ್ತಮಸ್ತಕತಳನ್ಯಸ್ತಾತ್ಮಬಿಂಬಂ ಚರಾ |
ಚರನೇತ್ರಂ ಕಮಳೈಕಮಿತ್ರನಪರಾಕೂಪಾರಮಂ ಪೊರ್ದಿದಂ || ೧೫೩ ||

ವ|| ತದನಂತರಂ:—

ಉ|| ಎಂತಮೃತಾಬ್ಧಿಗೆನ್ನುದಯದಿಂದಭಿವೃದ್ಧಿ ಮದೀಯಕಾಂತಿ ಮ |
ತ್ಸಂತತಿ ಪೆರ್ಚಿ ಪೆರ್ಚಿನಗಮುಪ್ಪುದಱಿಂದಮನೆಯ್ದೆ ನೋಟ್ಪೆನೆಂ ||
ಬಂತಿರೆ ಶಾಂತಿನಾಥಮುಖದರ್ಪಣಬಿಂಬಿತಬಿಂಬದಿಂದೆ ದಿ |
ಗ್ದಂತಿಯ ಚೂಳಚಾಮರನಿಭಂ ಶಶಿ ಬಂದುದಯಸ್ಥನಪ್ಪುದುಂ || ೧೫೪ ||

ವ|| ಚಕ್ರವರ್ತಿಯುಂ ಕರ್ಮವೇಳೆಯೊಳ್ ಪಿರಿದುಪೊಟ್ತುನಿರ್ದೋಲಗಮಂ ವಿಸರ್ಜಿಸಲ್ವೇಟ್ಟು ಶಯನಸದನಮಂ ಪೊಕ್ಕಿನಿಸಾನುಂ ಬೇಗದಿಂ:—

ಕಂ|| ಕ್ಷೀರಾಬ್ಧಿಫೇನಧವಳೋ |
ದಾರಪ್ರಚ್ಛದದೊಳುಚಿತಶಯ್ಯಾತಳದೊಳ್ ||
ಧೀರಂ ಪವಡಿಸಿ ಪೋಲ್ಕಂ |
ಶಾರದನೀರದದೊಳೊಱಗಿದೈರಾವಣಮಂ || ೧೫೫ ||

ವ|| ಅಂತು ಪವಡಿಸಿದ ಪರಮೇಶ್ವರಂಗೆ ಮನೋಗತಮಲ್ಲದ ಕಾಮಿನಿಯಂತೆ ಯಾಮಿನಿ ತನ್ನ ಕ್ಷಣದಾಭಿಧಾನಮಂ ನನ್ನಿಮಾಡಿ ಕ್ಷಣಮಾತ್ರದಿಂ ಪೋಗೆ ಬೆಳಗಪ್ಪುದುಂ:—

ಮ|| ಜಯಲಕ್ಷ್ಮೀನಿಭೆಯಪ್ಪ ಸೂಟರಸಿಗಂ ಭೂಪಂಗವಾದಿವ್ಯಶ |
ಯ್ಯೆಯಿನೇಟಲ್ಕಿದೆ ಪೊಟ್ಟು ದಿಗ್ವಿಜಯಮಂ ನೋೞ್ಪಂ ದಲಾನೀಗಳ ||
ಟ್ಟಿಯಿನೆಂಬಂದದಿನಾಗಳೀೞಿ ದಿನಪಂ ಪೂರ್ವಾದ್ರಿಯಂ ಚಕ್ರವ |
ರ್ತಿಯ ಚಕ್ರಪ್ರತಿಬಿಂಬಮೆಂಬಿನಮದೇನಿಂಬಾಯ್ತೊ ಬಿಂಬೋದಯಂ || ೧೫೬ ||

ವ|| ಅಂತು ನೇಸಱ್ ಮೂಡುವುದುಮರಸನುಪ್ಪವಡಿಸೆ ಕೃತೋಚಿತದಿವಸಮುಖವ್ಯಾಪಾರನಾಗಿ ಪ್ರಯಾಣಪಟಹಂಗಳೆಸೆಯೆ ಪೂರ್ವಾಭಿಮುಖನಾಗಿ ಪಯಣಂಬೋಗಿ:—

ಕಂ|| ಆಪರ್ಬುಡೆಯಂ ಪ್ರಾಚೀ |
ಕೂಪಾರಕ್ಕೊಯ್ವ ನೃಪತಿಸೇನಾಪತಿ ಗಂ ||
ಗಾಪಗೆಯಂ ನಡೆಯಿಪ ಸಗ |
ರಾಪತ್ಯನ ಮಹಿಮೆಯಿಂದಮುಂದಂಬಡೆದಂ || ೧೫೭ ||

ವ|| ಮತ್ತಂ:—

ಕಂ|| ಅಪಗತಫಲತ್ವಮಂ ಭ |
ಗ್ನಪಾತಿತೋತ್ಖಾತವಿಧಿಯನೆಯ್ದಿದ ನೃಪರಿಂ ||
ದ್ವಿಪಮಾರ್ಗಮೆಂತು ಹತಪಾ |
ದಪಂಗಳಿಂ ಭಯದಮಂತೆ ಭಯದಂ ಮಾರ್ಗಂ || ೧೫೮ ||

ವ|| ಅಂತಾದಂಡನಾಯಕಂ ಪೌರಸ್ತ್ಯರಾಜನ್ಯಕಸಾಧನಪರನಾಗಿ ಮುಂದಂ ನಡೆಯೆ:—

ಕಂ|| ಭೂಜಾಂಗವೃತ್ತಿಯಂ ಬಿಸು |
ಟಾಜಗದಧಿಪಂಗೆ ವೈತಸಾವಳಿ ಪರಿವಂ ||
ದಾಜಳಕೆಱಗುವವೋಲ್ ನಯ |
ಭಾಜನರೆಱಗಿದರಜಿಂಹರೆನಿಸಿದ ಸುಹ್ಮರ್ || ೧೫೯ ||

ವ|| ಅಲ್ಲಿಂದತ್ತಂ:—

ಕಂ|| ನೌಸಾಧನೋದ್ಯತರನಂ |
ತಾ ಸೇನಾನಿ ತ್ರಿವಂಶರಂ ಕಿಟ್ಟು ಗತಾ ||
ಯಾಸಂ ನಟ್ಟಂ ನೃಪಜಯ |
ಶಾಸನಮಂ ಗಂಗೆಯೆರಡುತಡಿಯೊಳಮೊಗದೊಳ್ || ೧೬೦ ||

ವ|| ಮತ್ತಮಲ್ಲಿಯೆ:—

ಕಂ|| ಆಪಾದಪದ್ಮನತರಂ |
ತಾಪದದೊಳ್ ಕಳಮದಂತೆ ಫಲಿಳೆಯಿಸಿದರವರ್ ||
ಶ್ರೀಪತಿಗುತ್ಖಾತಪ್ರತಿ |
ರೋಪಿತರಧಿಕಂಗಶಕ್ಯಮೆಂಬರುಮೊಳರೇ || ೧೬೧ ||

ವ|| ಅಂತು ಸರ್ವಸ್ವಹರಣಾನಂತರಮುವರವರ (ನವರವರ) ನೆಲೆಯೊಳ್ ನಿಱಿಸಿ ತೀರ್ಥಕರ್ಮನಿರ್ವಾಪಣನಿಬದ್ಧಸಿಂಧುರಗೇತುಬಂಧನದಿಂದಮುತ್ಕಳಾದರ್ಶಿತನಿರ್ಗಮಮಾರ್ಗಂ ಚಕ್ರವರ್ತಿ ಕಳಿಂಗದೇಶಾಭಿಮುಖನಾಗಿ ಪೋಗಿ:—

ಕಂ|| ಪ್ರವರಾಂಕುಶಮಂ ಗಂಭೀ |
ರವೇದಿಶಿರದೊಳ್ ನಿಷಾದಿ ನಿಱಿಸುವ ತೆಱದಿಂ ||
ದವನಿಪತಿ ನಿಱಿಸಿದಂ ತೀ |
ವ್ರವೈರಿಜಯಮಂ ಮಹೇಂದ್ರಗಿರಿಮಸ್ತಕದೊಳ್ || ೧೬೨ ||

ವ|| ಅಂತು ಪೂರ್ವಮಹೇಂದ್ರಪೂಜಾವಾಪ್ತಮಹಿಮಾತಿಶಯದಿಂ ಮಹೇಂದ್ರಾದ್ರಿಸಾರಮನಾತ್ಮಾಯತ್ತಂಮಾಡಿದುರ್ವರಾಸ್ಯತಿಲಕನ ಸೈನಿಕಂ—

ಕಂ|| ಕಡಿಯೆ ಕವುಂಗುಂ ತೆಂಗುಂ |
ಪಡಲಿಟ್ಟುವು ತಮಗೆ ಸೋಲ್ತು ರಿಪುವನಿತೆಯ ಸೋ ||
ರ್ಮುಡಿಯ ನಿಱಿಪುವವೊ ಲಿಱಿಪಿದ |
ರಡತರ್ು ಕಯ್ಪಿಟ್ಟು ನಿಮಿರ್ದ ಸೀರಿಯ ಕೆಯ್ಯಂ || ೧೬೩ ||

ವ|| ಅಂತು ವಿಳಯಾನಳನಂತೆ ವನಭಂಗಂಗೆಯ್ಯೆ ಮುಳಿದು ಚಕ್ರವರ್ತಿಯ ದಂಡನಾಯಕನೊಳ್ ಗಜಪೇಶಲಸೇನಾಂಗನಪ್ಪ ಕಳಿಂಗರಾಜಂ ಬಂದು ಪಕ್ಷಚ್ಛೇದೋದ್ಯುಕ್ತನಪ್ಪ ಸುರರಾಜನ ಸೇನಾನಿಯೊಳ್ ತಾಗುವ ಪದದ ವರ್ಷನಗದಂತೆ ಬಂದು ತಾಗುವುದುಂ, ದಂಡನಾಯಕನುಂ ಕೆಲವು ಗಂಧಸಿಂಧುರಂಬೆರಸು ತೊತ್ತಳಿದುಱಿಯೆ ಕಳಿಂಗನೃಪಯೋಧರುಂ:—

ಕಂ|| ನಾರಾಚವೃಷ್ಟಿ ಮಂಗಳ |
ಧಾರಾಸ್ನಪನಮನೆ ಪೋಲೆ ಸೇನಾನಿಗೆ ಕೆ ||
ಯ್ಸಾರೆ ಜಯಲಕ್ಷ್ಮಿ ನೃಪಘಟೆ |
ಗಾರಾಜಕಮಾದುದಂದು ಕಟ್ಟುಂಗವಳಂ || ೧೬೪ ||

ವ|| ಅಂತು ಕಳಿಂಗರಾಜನ ಮದದಂತಿಗಳ್ ನುರ್ಗುನುರ್ಗಪ್ಪಿನಂ ಪರಿಯಿಸಿ ಗೆಲ್ವುದುಮೊಂದೆ ಮೆಯ್ಯೊಳೋಡುವ ಕಳಿಂಗರಾಜನೇಱಿದಾನೆಯನಾನೆಗಳೊಳ್ ಭಂಡಾರಿಸಿ ತದೀಯಶೌರ್ಯಮನೆತ್ತುಂಗೋಲ್ಗೊಳ್ವಂತೆ ಮೇಗಣಿಂ ಮೇಗೆ ಪಿಡಿದೆತ್ತಿಕೊಂಡು ಮರ್ಕಟಬಂಧದಿಂ ಕಟ್ಟಿ ತಂದು ಚಕ್ರವರ್ತಿಯ ಮುಂದಿಱಿಪುದುಂ:—

ಕಂ|| ಅರಿಗಸುರವಿಜಯಿ ಮುನಿಗುಂ |
ಧರೆ ಬರೆ ಸಿರಿ ಸಾರೆ ಧರ್ಮವಿಜಯಂ ವಿಭು ತಾಂ ||
ಕರುಣಿಸೆ ಮಹೇಂದ್ರನಾಥನ |
ಧರೆ ಯಿರೆ ಸಿರಿ ಚಕ್ರವರ್ತಿಗಾವಗಮಾದಳ್ || ೧೬೫ ||

ವ|| ಅಂತು ಕಳಿಂಗರಾಜಂಗೆ ಕೋಪೋಪನತವೃತ್ತಿಯನಿತ್ತು ಸರ್ವಸ್ವಮಂ ಕೊಂಡಾಜ್ಞಾವಿಧೇಯಮಂಮಾಡಿ ಮಹೇಂದ್ರೋಪಕಂಠದೊಳ್ ಮೂಱುಪ್ಪಯಣಂಗೆಯ್ದು ಮತ್ತಂ ಕತಿಪಯ ಪ್ರಯಾಣಂಗಳಿಂ:—

ಕಂ|| ಗಂಗೆಯ ತಡಿವಿಡಿದು ಬಲಾಂ |
ಗಂಗಳ್ ಬೇಱೊಂದು ಗಂಗೆ ನಡೆವಂತಿರೆ ಬೇ ||
ಗಂಗಿಡದೆ ನಡೆಯೆ ನಡೆದು ರ |
ಥಾಂಗಧರಂ ಬೀಡುವಿಟ್ಟನಂಬುಧಿತಟದೊಳ್ || ೧೬೬ ||

ವ|| ಅಂತು ಗಂಗಾದ್ವಾರದೊಳ್ ಚತುರಶ್ರಷಣ್ಣವತಿಗವ್ಯೂತಿಪ್ರಮಾಣದೊಳ್ ಬೀಡಂಬಿಟ್ಟು ಚಕ್ರೇಶ್ವರನಿರ್ಪುದುಂ:—

ಉ|| ಬೇಗಮುದನ್ವದಂತರನಿವಾಸಿಗಳಾಸನಕಂಪದಿಂ ನೃಪೇಂ |
ದ್ರಾಗಮಮಂ ಜಲಕ್ಕನಱಿದೀಶನನೀಗಡೆ ಕಾಣ್ಬುದೆಂದು ತ ||
ನ್ಮಾಗಧದೇವನಂ ಬಳಸಿ ಕೊಂಡಮರರ್ ಬರೆ ಬಂದು ಮಾಗಧಂ ||
ಮಾಗಧನಂತೆ ಬಿಚ್ಚಳಿಸಿ ಭೂಪನ ಬಾಗಿಲ ಕಣ್ಣೊಳಿರ್ಪುದುಂ || ೧೬೭ ||

ಕಂ|| ಅಱಿಪೆ ಮೊದಲವರ್ಗೆ ಕಿಟ್ಟಿಡಿ |
ಯಱರವರಧಿಪಂಗೆ ಬಿನ್ನಪಂಗೆಯ್ವುದು ಮಾ ||
ಮಱಿಯೆವದಂ ಚಕ್ರಾಯುಧ |
ನಱಿಗುಂ ವ್ಯಂತರರ ಕಾಣ್ಬ ಕಾಣಿಸುವೆಡೆಯಂ || ೧೬೮ ||

ವ|| ಎಂಬುದುಂ ವಾಮಕರತಳನಿಹಿತದುಕೂಲಾಂಶುಕವಸನಾಚ್ಛಾದಿತೋಸ್ತ್ರದ್ವಯದಕ್ಷಿಣಪಾಣಿ ಪಲ್ಲವಾಭಿನಯನಿವೇದಿತಾವಿನೇಯ ವಿಳಸಿತಚಕ್ರಾಯುಧಂ ನಿಂದಿರ್ದು:—

ಕಂ|| ಅಪ್ರತಿಮಾರ್ಘ್ಯಕರಂ ತ್ರಿದಿ |
ವ ಪ್ರಸ್ತುತವಸ್ತುಹಸ್ತಯುಕ್ತಂ ಶ್ರೀಪಾ ||
ದ ಪ್ರಣತನಗ್ರಹಾರದ |
ವಿಪ್ರನ ಮಾಗಧನ ಕಾಣ್ಕೆಗೇನಾಳೋಚಂ || ೧೬೯ ||

ಬರವೇಟ್ಟುದೆಂಬುದುಂ ರಾ |
ಜರಾಜನನುಮತಮನಱಿದು ಪೆರ್ವಡಿಯಱಿನಾ ||
ದರದಿಂ ಕಾಣಿಸಿದಂ ವ್ಯಂ |
ತರೇಶನಂ ಮೂಡಣಂಬುನಿಧಿಗಧಿಪತಿಯಂ || ೧೭೦ ||

ವ|| ಅಂತು ತಂದು ಕಾಣಿಸಿ ಜಗತ್ಪ್ರಾಸಾದಮೂಲಸ್ತಂಭಂಗೆ ಪೊಡವಡಿಸೆ:—

ಕಂ|| ನಡನಡ ನಡುಗಿ ತಳರ್ನಡೆ |
ನಡೆವ ವೃಕುತಂಬೊಲುದಧಿಪತಿ ನೃಪತಿಗೆ ಮೂ ||
ಱಿಡೆಯೊಳ್ ಮೊಟ್ಟಿ ಧರಿತ್ರಿಗೆ |
ಪಡೆದಂ ನಿಜಮಕುಟ ಕಿರಣವರ್ಣಾಂತರಮಂ || ೧೭೧ ||

ವ|| ತದನಂತರಂ:—

ಕಂ|| ಸೊಯಿಪ ತುಡುಗೆಗಳಂ ಪಡ |
ಲಿಗೆವೆರಸವಟಯ್ಸೆ ಭೂಷಣಾದಿಗಳಂ ಪೇ ||
ಳಿಗೆವೆರಸಿ ತೋರ್ಪ ಭಂಡಾ |
ರಿಗಳೆನಿಸಿದನಮರನಜರನಾಸ್ಥಾಯಿಕೆಯೊಳ್ || ೧೭೨ ||

ವ|| ಅಂತವಟಯ್ಸಿದ ಪರಾರ್ಥ್ಯರತ್ನಂಗಳಂ ಗೃಹಪತಿರತ್ನಂ ಕಯ್ಕೊಳಲೆಂದು ನಿಂದು ನೋಡೆ:—

ಕಂ|| ನೀಲಪಟಾಸ್ತರಣದ ಮೇ |
ಲಾಲಲಿತಾಭರಣಮೊಪ್ಪಿ ತೋಱುದುದು ಶರ ||
ತ್ಕಾಲದ ಗಗನದ ತಾರಾ ||
ಮಾಲೆಯನನುಕರಿಸಿ ದೇವದೇವನ ಸಭೆಯೊಳ್ || ೧೭೩ ||

ವ|| ಅವಂ ಗೃಹಪತಿರತ್ನಂ ಕೆಯ್ಕೊಂಡು ಮಾಣಿಕಭಂಡಾರಿಗಂಗೆ ಪ್ರವೇಶಂಗೆಯ್ದನಿತ್ತ ವ್ಯಂತರಾಮರಂ:—

ಹರಿಣೀವೃತ್ತಂ|| ಅಱಯದ ಜಡಂ ಪಾಲಂ ದುಗ್ಧಾಬ್ಧಿಗುಯ್ವವೊಲಾನುಮಿ |
ತೆಱದೆ ನೃಪತೀ ನಿನ್ನಂ ಕಾಣ್ಬಲ್ಲಿಗೀಮಣಿಭೂಷಣಂ ||
ನೆಱೆಯ ದೊಡಲಿಂ ತಂದೆಂ ಮದ್ಭಕ್ತಿಯಿಂ ಪರಮಾರ್ಥದಿಂ |
ಬಱಯುದವರಾರ್ "ಅರ್ಥೀ ದೋಷಂ ನ ಪಶ್ಯತಿ" ಯೆಂಬುದಂ || ೧೭೪ ||

ಕಂ|| ಶ್ರೀನಾಥ ನಿನ್ನ ಬರವಿಂ |
ಗೇನುಂ ಚಕ್ರಪ್ರಸೂತಿ ಕಾರಣಮಲ್ತು ||
ದ್ದಾನಿಯ ಪುಣ್ಯಮೆ ಜಗದೊಳ್ |
ತಾನೆ ಮೊದಲ್ ಕಾರಣಕ್ಕಕಾರಣಬಂಧೂ || ೧೭೫ ||

ಮನಮುಂ ತನುವುಂ ಮತ್ತೊ |
ರ್ವನರಸನಾದಂದು ಮುಕ್ತಿಯುಂ ಭುಕ್ತಿಯುಮೊ ||
ರ್ವನೊಳಿಲ್ಲನುಜೀವಿಗೆ ದೇ |
ವನುಮರಸನುಮೊರ್ವನೆಂದೊಡದನಾರ್ ಪಡೆವರ್ || ೧೭೬ ||

ವನನಿಧಿಯೊಳೆನಗೆ ಕೆಯ್ಸಾ |
ರ್ದನಿತಂ ವಸ್ತುಗಳನುಱುಪದೋಲಗಿಸಿದೆನಿ ||
ನ್ನೆನಗದುವೆ ದಿವ್ಯಮಂತ |
ರ್ಧನಕ್ಕೆ ಭವದವಧಿಬೋಧಮತಿಶಯಬೋಧಾ || ೧೭೭ ||

ಎನೆ ಮಾಗಧನಂ ಚಕ್ರೇ |
ಶನನುಜನಿರವೇಱ್ದು ಮುನ್ನಮಿಕ್ಕಿದ ದಿವಿಜಾ ||
ಸನದೊಳ್ ಬಱಯುಂ ಕುಳ್ಳಿ |
ರ್ದನನೆಂದಂ ತೊಳಗಿ ಬೆಳಗೆ ದಶನದ್ಯುತಿಗಳ್ || ೧೭೮ ||

ಪ್ರಕಟತರಂ ವೃತ್ತಿಗೆ ವಾ |
ರ್ತಿಕಮೆಂತಂತುಟೆ ಭವದ್ವಚೋವೃತ್ತಿಗೆ ಸ ||
ನ್ನಿಕುರುಂಬವಾಕ್ಯದಂಬಕ |
ಮಕಾರಣಂ ವಾಣಿ ಕಂಠಶೋಷಂ ಶೇಷಂ || ೧೭೯ ||

ಈ ನುಡಿ ನಿನಗಲ್ಲದೆ ದಿವಿ |
ಜಾನೀಕಕ್ಕಮರದವರ ವಚನಂ ಜಡಸಂ ||
ಸ್ಥಾನಮವಿಜ್ಞೇಯಮದ |
ರ್ಕ್ಕೇನಾನುಂ ನ್ಯಾಸಕಾರರಂ ತರವೇಳ್ಕುಂ || ೧೮೦ ||

ಪಟಿಗಾಂಪರ ನುಡಿ ಮುತ್ತುಂ |
ಮೆಟಿಸುಂಗೋದಂದದಕ್ಕೆ ಭಾಷ್ಯಮನೊರ್ವಂ ||
ಕಟಿಯೋದಿದಾತನಲ್ಲದೆ |
ಬಟಿವಳಿಯಿಂ ಬಂದು ಬರೆಯಲಾಗದಗಣ್ಯಂ || ೧೮೧ ||

ಸಾರತರೋಕ್ತಿಗೆ ನೆಲ್ಲುಂ |
ಮೋರುಂಗೋದಂತೆ ನೇಱಿ ಕಲ್ಪಾರ್ಪರವ ||
ರ್ಗೋರೆ ನಿಬಂಧನಟೀಕಾ |
ಕಾರಂಗಲ್ಲದೆ ಪೆಱಂಗೆ ಕೋಟಿಷ್ಕೋದಪುದೇ || ೧೮೨ ||

ವ|| ಅದಱಿಂ ಜೀವಶರೀರಸನಿಧಾನದಂತೆ ವಚನರಚನೆಯುಮರ್ಥಮುಮಿತರೇತರಶ್ರೀಯ ಮಪ್ಪುದು ನಿನ್ನ ನುಡಿಯೊಳಲ್ಲದಿಲ್ಲೆಂದು ಮಾಗಧನನತ್ಯಂತಮಾಱಿ ನುಡಿದು ರಾಜಾಧಿರಾಜಾ ನುಜನ್ಮಂ ಮತ್ತಮಿಂತೆಂದಂ:—

ಕಂ|| ಮೂವತ್ತಿರ್ಛಾಸಿರ್ವರ್ |
ದೇವರ ಮೆಯ್ಗಾಪು ದೇವದೇವಂಗವರಂ ||
ಸಾವಗಿಸಿ ತಂತ್ರಪಾಲತೆ |
ಗಾವಗಮಾಗಿಯೆ ನೃಪಾಂಘ್ರಿಯುಗಲದ ಮೊದಲೊಳ್ || ೧೮೩ ||

ಪುಗುವ ಪೊಱಮಡುವ ಪಾಳೆಯ |
ಮಗಣಿತಮಾಳವರ್ಗಳಿವರ್ಗಳೆಂಬಂತೀದಂ ||
ದುಗಮೆರಡಿಲ್ಲದೆ ನಿಮ್ಮೊಳ್ |
ತಗುಳ್ಗುಮಿಲ್ಲಿಂದಮತ್ತ ಕೆಯ್ಯೊಳ್ ಬೆಸನಂ || ೧೮೪ ||

ವ|| ಎಂದು ಮಾಗಧನನಾಳ್ವಿಸಕ್ಕೆ ಪೊಱಮಡಿಸಿ:—

ಮ|| ಸೆಣಸಲ್ ಮಾರ್ಮಲೆಯಲ್ ಬೆಸಕ್ಕೆ ಬೆಸೆಯಲ್ ದಂಡೋಪನತ್ಯಕ್ಕೆ ಟಿಂ |
ಠಣಿಸಲ್ ಪೇಟ್ದುದನಿರ್ಮೆ ಕೇಳಲರಿಯಿಲ್ಲೆಂಬನ್ನೆಗಂ ಗೆಲ್ದು ಮೂ ||
ಡಣ ರತ್ನಾಕರಮಂಬುಶೇಷಮೆನೆ ತದ್ರತ್ನಂಗಳಂ ಕೊಂಡು ದ |
ಕ್ಷಿಣರತ್ನಾಕರದತ್ತಮೆತ್ತಿನಡೆದಂ ಸೌಜನ್ಯಕಂದಾಂಕುರಂ || ೧೮೫ ||

ಗದ್ಯ

ಇದು

ಜಿನೇಂದ್ರ ಚರಣ ಸರಸೀರುಹ ಶಿಲೀಮುಖಾಯಮಾನ

**ಶ್ರೀಮದುಭಯಕವಿ ಚಕ್ರವರ್ತಿ**

ನಿರ್ವರ್ತಿತಮುಂ

**ಅಮ್ಮನಭಕ್ತಾಭಿಧಾನ ವಿದ್ಯಾನಿಧಾನ ಮಲ್ಲಪಾರ್ಯ**

ತದನುಜಾತಾಭಿಜಾತ ಸಾರಸ್ವತ

**ಪುನ್ನಮಾರ್ಯ**

ಕಾರಿತಮುಮಪ್ಪ

**ಪುರಾಣಚೂಡಾಮಣಿಯೊಳ್**

ದಶಮಾಶ್ವಾಸಂ.

|| ಶ್ರೀ ||

# ಶಾಂತಿಪುರಾಣಂ.

## ಏಕಾದಶಾಶ್ವಾಸಂ.

ಕಂ|| ಶ್ರೀಚತುರಂತೇಶಂ ಸಚ |
ರಾಚರಪತಿ ದಕ್ಷಿಣಾಭಿಮುಖನಿನನಿನನಂ ||
ತಾಚಕ್ರವರ್ತಿ ನಡೆದನ |
ವಾಚೀದಿಗ್ವಿಜಯಹೇತುವಿಂ ಜಿನಚಂದ್ರಂ || ೧ ||

ವ|| ಅಂತು ಕತಿಪಯದಿನಂಗಳಿಂ ಮಹಾಸಮುದ್ರದ ನಡುವೆ ಸೈನ್ಯಸಮುದ್ರಂ ಬರೆ ಬಂದು:-

ಕಂ|| ಸ್ಕಂಧಾವಾರೇಭ ಮದೋ |
ದ್ಗಂಧಾವಿಲೆಯಂ ಕವೇರಕನ್ನಿಕೆಯಂ ತ ||
ತ್ಸಿಂಧುಪತಿಗಿಂಬಿನಿಂದತಿ |
ಸಂಧಿಸಿದಂ ನೃಪತಿ ಬಿಟ್ಟು ತದುಭಯತಟದೊಳ್ || ೨ ||

ವ|| ಅಂತಲ್ಲಿ ಬೀಡಂ ಬಿಟ್ಟಪೂರ್ವದುಮಾದಿಗ್ದೇಶಾಧೀಶ್ವರರಪ್ಪರಸುಗಳ್ ಚಕ್ರವರ್ತಿಯ ಚರಣನಳಿನಯುಗಳಕ್ಕೆಱಗಿ ಕುಲಧನಜೀವಧನಾದಿ ಸಾರವಸ್ತುಗಳನೋಲಗಿಸಿದರಲ್ಲದೆಯುಂ:—

ಕಂ|| ವಿತತಗ್ರಿಪಂ ನಿಪಹತಿಸಿ |
ಯುತಪಲ್ಲವರೆಱಗಿ ಗಹನಮುಟಿದಿತ್ತು ವನ ||
ಸ್ಪತಿಗಳಿನಲಲ್ಲ ದವನೀ |
ಪತಿಗಳ್ ಶಾಂತೀಶನಂಘ್ರಿಗೆಱಗಿ ಮಹೀಶರ್ || ೩ ||

ವ|| ಅಂತವರಂ ಶಾಸನೋಪನತವರ್ಮಾಡಿ ಕಾವೇರೀಸ್ರವಂತೀಸಮುತ್ತರಣಾನಂತರಂ ಬರೆವರೆ:—

ಕಂ|| ಗುಣನಿಧಿಗೆ ಜಗಚ್ಚೂಡಾ |
ಮಣಿಗೆಱಗಿ ಪೆಱಂಗೆ ಭಯದಿನೆಱಗದ ಚೂಡಾ ||
ಮಣಿಗೆಱಗೆ ಚಕ್ರಿಪದದೊಳ್ |
ಫಣಮಣಿ ಪುನರುಕ್ತಿ ಪಾಂಡ್ಯಪತಿಗಾಯ್ತಾಗಳ್ || ೪ ||

ವ|| ಮತ್ತಂ ಪಾಂಡ್ಯವಿಷಯದ ವಿಷಯಸಂಧಿಯೊಳ್ ಬೀಡುವಿಟ್ಟಲ್ಲಿ:—

ಕಂ|| ನಂದನ ಭುಜಂಗವೇಷ್ಟಿತ |
ಚಂದನವರ್ಮಾರ್ಗದೊಳಿಭಂಗ ಳೊಳ್ಪಾನೆಗಳಂ ||
ತೊಂದು ತ್ರಿಸದಿಚ್ಛೇದದೊ |
ಳಂ ದಲ್ ತ[ಳ] ರವೆ ಪಯೋಧಿವೇಳಾವನದೊಳ್ || ೫ ||

ವ|| ಮತ್ತಂ:—

ಚಂ|| ದಿನಕರತೇಜಮುಂ ಕ್ರಮದಿನೊಯ್ಯನೆ[ಯಪ್ಪುದ]ದತ್ತ ದಕ್ಷಿಣಾ |
ಯನದೊಳವಾಚ್ಯರರ್ಣವನಿವಾಸಿಗಳಾಗಿಯುಮಂದು ಶಾಂತಿನಾ ||
ಥನ ವಿತತಪ್ರತಾಪಶಿಖಿ ಕಣ್ಗೆಳೊಳುಕ್ಕೆ ವಿಷಣ್ಣರಾಗಿ ತ |
ಜ್ಜನಪತಿಪಾದಪಾದಪದ ತಣ್ಣೆಲಲೊಳ್ ಕಳೆದರ್ ವಿಷಾದಮಂ || ೬ ||

ವ|| ಅಂತು ದಕ್ಷಿಣದಿಕ್ಪಾಲಪುರಸ್ಸರರವನಿಪತಿಗಳೊಳಾಳ್ತನಮಂ ಪೂಣ್ದು ಸಾರಸರ್ವಸ್ವ ನಿವೇದನಂಗೆಯ್ದು ಮುಂಗುಡಿಯ ಬಂದ ಚಕ್ರವರ್ತಿ ವೈಜಯಂತೀದ್ವಾರಾಭಿಮುಖನಾಗಿ ಬೀಡಂ ಬಿಟ್ಟೋಲಗಂಗೊಟ್ಟರ:—

ಚಂ|| ಕರಿಮಕರಾಧಿರೂಢನಸವಮಾನಸಯಂ ಸುರವೇಷ್ಟಿತಂ ಮನೋ |
ಹರಕರಯುಗ್ಮಪಾರಿತಶರಾಸಸರಾರ್ಧ್ಯಮಣಿವ್ರಜಂ ನಿಧೀ ||
ಶ್ವರಭವನಾಂತರಾಳಪದಮಾರ್ಗನುದನ್ವದುಪಾಂತ ಸಾರನಾ |
ವರತನು ಬಂದು ಕಂಡೆಱಗಿದಂ ಕ್ಷಿತಿವಲ್ಲಭಪಾದಪೀಠದೊಳ್ || ೭ ||

ಕಂ|| ಅಂತೆಱಗಿದ ವರತನುವನು |
ಪಾಂತಸ್ಥಿತಮಂತ್ರಿವರ್ಗಮೇೞೞೆ ಧರಣೀ ||
ಕಾಂತಂ ನಿನ್ನಂ ನಿಜಸಾ |
ಮಂತರ ಸಮನಾಗೆ ಬಗೆಗುಮಿನ್ನಂಜದಿರಾ || ೮ ||

ಎನೆ ವರತನು ಬಂದಧಿನಾ |
ಥನಿದಿರೊಳಿಕ್ಕಿದ ನಿಜೋಚಿತಾಸನದೊಳ್ ತಾಂ ||
ವಿನಯದಿನಿರ್ದೋಲಗಿಸಿದ |
ನಿನನಂ ಪೊರ್ದಱಸ ಕಮಳಮೋಲಗಿಸುವವೋಲ್ || ೯ ||

ವ|| ತದನಂತರಂ ತನ್ನ ತಂದನರ್ಘ್ಯರತ್ನದಿಂ:—

ಕಂ|| ವಿವಿಧಮಣಿಕಿರಣಚಯದಿಂ |
ದವನಿಪನಂ ಬಳಿದು ಕೊಟ್ಟನರ್ಥಿಜನಕ್ಕಾ ||
ದಿವಿಜೇಂದ್ರಂ ಬಳಿವಿಯ ಮಂ |
ತ್ರವಾದಿಯೆನೆ ನೆರೆದ ಮಕುಟಬದ್ಧಸಮಾಜಂ || ೧೦ ||

ವ|| ಅಲ್ಲಿಂ ಬಱಯಂ ಲವಣಾರ್ಣವದ ನಿಖಿಳವಸ್ತುಗಳಂ ಕಸ್ತೂರಿ(ಸಿ)ವಿಸ್ತಾರಿಸಿ ಪೆಸರ್ವೆಸ ರೊಳೆ ಪೇೞ್ದುವಟಯ್ಸೆ ವರತನು ತೊಟ್ಟುವೆಸನಂ ಪೂಣ್ದಾಳಾದಂ, ಚಕ್ರವರ್ತಿಯುಂ ಪಶ್ಚಿಮಾಭಿ ಮುಖನಾಗಿ ಪಯಣದ ಮೇಲೆ ಪಯಣಂಬೋಗೆ:—

ಕಂ|| ಆವಿಜಿಗೀಷುವ ಸೈನ್ಯಸ |
ಮಾವಾಸದಿನಧಿಕಮೊಪ್ಪಿ ತೋಱದುದು ಮರೀ ||
ಚಾವಿಷ್ಕೃತಹಾರೀತವ |
ನಾವಳಿ ಪರಿಭಾಸಿ ಮಲಯಪರ್ವತಕಟಕಂ || ೧೧ ||

ಕಂ|| ಅನುಭವಿಸಿದನರಸಂ ಚಂ |
ದನಾಭಿನಂದಿತತಟಂಗಳಿಂ ವರುಣಾಶಾಂ ||
ಗನೆಗೆ ಮೊಲೆಯಾದೊಲಿರೆ ನೂ |
ತನಮಲಯಾಚಳತಟಂಗಳೊಳಗೊಳಗಾಗಳ್ || ೧೨ ||

ವ|| ಅಂತು ಪಾರಾವಾರೋಪಕಂಠಂಬಿಡಿದು ನಡೆವ ಚಕ್ರವರ್ತಿಗೆ:—

ಕಂ|| ಸಾರತರತಾಮ್ರಪರ್ಣಿಯ |
ವಾರಿಯೊಳೆಳದಳಿಸಿ ಬಳೆದ ಶುಕ್ತಿಯ ಮುಕ್ತಾ ||
ಸಾರಮನೀವ ಪಯೋನಿಧಿ |
ಕೀರದ ನೃಪರಾತ್ಮಯಶಮನೀವಂತಾದರ್ || ೧೩ ||

ವ|| ಅಲ್ಲಿಂದತ್ತಂ:—

ಕಂ|| ಬಳವತ್ಸೈನ್ಯಮನವನೀ |
ತಳಪತಿ ಬಿಸುಟಂ ಪಯೋಧಿದೂರಾರ್ಜಿತಮಾಳಾ ||
ವಿಳಸದ್ವ್ಯಸನವಿಮುಕ್ತಮು |
ನಿಳಾನ್ವಿತಂ ಬರೆ ವುದಾತ್ತಮತಿ ಬಿಸುಡುವವೊಲ್ || ೧೪ ||

ವ|| ಮತ್ತಂ:—

ಕಂ|| ಭಯವಶವಿಮುಕ್ತಭೂಷಣ |
ಚಯಕೇರಳಕಾಮಿನೀಮುಖಶ್ರೀ ನೃಪಸೇ ||
ನೆಯ ಪಾದರಜದಿನಂದೇ |
ನಯತ್ನಕುಂಕುಮವಿಳಾಸಮಂ ತಾಳ್ದಿದುದೋ || ೧೫ ||

ವ|| ಅಲ್ಲಿಂ ಬೞಿಯಂ:—

ಕಂ|| ತುರಗಖುರಕ್ಷುಣ್ಣೇಳಾ |
ಪರಿಪಾಂಸುಪರಾಗಮಿಭಕಟಾಳಿಗಳೊಳ್ ಪಾ ||
ಯ್ದಿರೆ ಗಂಧನಿರ್ವಿಶೇಷಂ |
ದೊರೆಕೊಂಡುದು ಚಕ್ರವರ್ತಿ ಮದಗಜಘಟೆಯೊಳ್ || ೧೬ ||

ಚಟುಲಮುರಲಾನಿಲೋದ್ಧತ |
ಪಟುಕೈತಕಧೂಳಿ ಪಡೆದುದುರ್ವೀಶಚಮೂ ||
ಭಟ ಕೃತ್ರಿಮಕಂಚುಕ |
ಪಟವಾಸವಿಳಾಸಮಂ ಪ್ರಯಾಣಾಂತರದೊಳ್ || ೧೭ ||

ವ|| ಅಂತು ಪಯಣಂಬೋಗೆ ಚಕ್ರವರ್ತಿಯ ಕಟಕದೊಳ್:—

ಹರಿಣೀವೃತ್ತಂ|| ಪಳಿಕಿನ ಶಿಲಾಪಟ್ಟಂ ಪ್ರಸ್ಥಾನದೊಳ್ ವಿಜಯದ್ವಿಪಾ |
ವಳಿಯ ದರಿಗೊಂಡುದ್ದೇಶಂ ಚಕ್ರವರ್ತಿಯ ವಾಮದ ||
ಗ್ಗಳದ ಸಿರಿಯಂ ಪೋಲ್ವನ್ನಂ ತದ್ದ್ವಿಪಾಳಿ ದಿಗಂತದೊಳ್ |
ತಳೆದುದು ಜಯಸ್ತಂಭಶ್ರೀಯಂ ತ್ರಿಕೂಟಮಹೀಧರಂ || ೧೮ ||

ವ|| ಅಲ್ಲಿಂದತ್ತಂ ಪೋಗೆವೋಗೆ:—

ಕಂ|| ಅಪರಾಂತಮಹಿಪಸಮದ |
ದ್ವಿಪಂಗಳಂ ಪಿಡಿಯಲವನಿನಾಥನ ಸೇನಾ ||
ಧಿಪನ ತಲೆವಿಲ್ಲೆ ದಲ್ ದಾ |
ರುಪಾಶವಿಧಿಯಾಯ್ತು ಬಂದು ಕಾಣ್ಬನ್ನೆವರಂ || ೧೯ ||

ವ|| ಅಂತು ಬಂದು ಶಾಂತೀಶ್ವರಂ ನಿಜವಿಜಯಸ್ಕಂಧಾವಾರಮಂ ಸಿಂಧುದ್ವಾರಕ್ಕೆದಿರಾಗಿ ಬೀಡಂಬಿಡಿಸಿ ಸಭಾಮಂಡಲಮಧ್ಯಸ್ಥಿತಕಂಠೀರವಾಸನಾಸೀನನಾಗಿರೆ:—

ಹರಿಣೀವೃತ್ತಂ|| ದಿಗವನಿನಭೋಭೋಗಾಭೋಗಂ ಮದನ್ವಯಮಾಗೆ ವ |
ಸ್ತುಗಳ ಬಟಿಯಂ ಪಣ್ಯಾಗಾರಸ್ವವಾಹನದೇವರೊಳ್ ||
ಸೊಗಯಿಸೆ ನೃಪಾಜ್ಞಾತಂ ತಂ[ದಂ]ದುಕಾಣಿಸೆ ಭಕ್ತಿಯಿಂ |
ಜಗದಧಿಪನಂ ಕಂಡಂ ಬಂದಾಪ್ರಭಾಸಸುರೇಶ್ವರಂ || ೨೦ ||

ವ|| ಅಂತುಕಂಡೊನಂ ಪ್ರಭಾಸವ್ಯಂತರಾಧೀಶನನಾಳ್ದಲ್ಲಿಂದಂ ತಳರ್ದು:—

ಚಂ|| ಒದವಿದ ಪಾರಸೀಕಬಲಮಂ ಸ್ಥಳಮಾರ್ಗದೊಳಿಂದ್ರಿಯಾದಿವ |
ರ್ಗದ ಬಲಮಂ ಸಮಾಧಿವಿಧಿಯಿಂದೆ ತಪೋಧನನಾಗಮಜ್ಞನೊ ||
ರ್ಮೊದಲೆ ಗೆಲಲ್ಕಡಂಗುವವೊಲಾ ಜಗದೀಶನ ದಂಡನಾಯಕಂ |
ಮದವದನೇಕಪಪ್ರಕರದಿಂ ಕಡುಗೆಯ್ದು ಗೆಲಲ್ ಕಡಂಗಿದಂ || ೨೧ ||

ವ|| ಮತ್ತಮತ್ತಂ ನಡೆದು:—

ಕಂ|| ಯವನೀಮುಖಾಬ್ಜಮಧುಪಾ |
ಟವಮಂ ಸೇನಾನಿ ಕಳೆದನಬ್ಜವಿಕಾಸ ||
ಪ್ರವಣಾತಪಮಂ ಕಾಳಾಂ |
ಬುವಾಹಮೊರ್ಮೊದಲೆ ಕಳೆವ ತೆಱದಿಂದಾಗಳ್ || ೨೨ ||

ವ|| ತದ್ವಿಜಯಾವಸಾನದೊಳ್ ಜೈನಶಾಸನಚೂಡಾಮಣಿಯುದಙ್ಮುಖನಾಗಿ ಪಯಣಂ ಬರೆವರೆ:—

ಉ|| ಅತ್ಯಭಿಸಾಂದ್ರರುಂದ್ರರಜದೊಳ್ ಪರವೀರಬಳಾವಬೋಧವೈ |
ಚಿತ್ಯದೊಳುಗ್ರಶಾರ್ಙ್ಗರವವೇದಿತವೈರಿಪರಿಸ್ಫುಟಂ ಮಹೀ ||
ಪತ್ಯಖಿಳಪ್ರಚಂಡಬಲಮುಖ್ಯರುಮಂ ಸಮದಾಂಧರಪ್ಪ ಪಾ |
ಶ್ಚಾತ್ಯರುದಶ್ವಸಾಧನದೊಳಾದುದು ದಲ್ ತುಮುಲಂ ಮಹಾಹವಂ || ೨೩ ||

**ವ||** ಅಂತೊದವಿದ ಸಂಗ್ರಾಮದೊಳ್:—

ಕಂ|| ನೃಪಸೇನಾಪತಿ ಸರಥಾ |
ವಿಪರೀತಕ್ಷ್ಮಾದ್ರಪಟಳದಿಂದೆಳೆಯಂ ಪಾ ||
ವಿಪವೋಲ್ ಭಲ್ಲಚ್ಛಿನ್ನಾ |
ಧಿಪತನ್ಮೂರ್ಧಾಳಿಯಿಂದಮಾಚ್ಛಾದಿಸಿದಂ || ೨೪ ||

**ವ||** ಮತ್ತಂ ತತ್ಪಾರ್ಶ್ವಬಲದೊಳ್ ಗಾಣದೆಳ್ಳೇರೊಂದೆ ಬರ್ದುಂಕುವಂತೆ ಬರ್ದುಂಕಿದೊರಂ ಪಿರಿಯನ ಮುನಿಸೆಂಬುದು ಪ್ರಣಿಪಾತಪ್ರತೀಕಾರಮೆಂದಱಿದರಸನ ದಂಡನಾಯಕಂಗೆ ಶರಣಾಗತರಾಗಿ ನಿಜಶಿರಸ್ತ್ರಾಣಪರಾಯಣರಾದರ್, ಚಕ್ರಿಯೋಧರುಂ ವಿಜಯಶ್ರಮವಿನೇಯಪರರಾಗಿದ್ರಾಕ್ಷಾವಳಯ ಭೂಮಿಗಳೊಳ್ ವಿಶ್ರಮಿಸಿದರ್ ಮತ್ತಂ:—

ಕಂ|| ಧನದ ಹರಿದಭಿಮುಖಂ ವಿಭು |
ಜಿನಚಂದ್ರಂ ನಡೆದುದೀಚ್ಯರಂ ಕಪ್ಪಂಗೊಂ ||
ಡಿನನುತ್ತರಾಯಣದೊಳನು |
ದಿನಂ ರಸಜ್ಞಾನಿ ನೀರನೊಸೆವಂತೊಸೆದಂ || ೨೫ ||

**ವ||** ಅಂತಂತೆ ಮತ್ತೊತ್ತಿ ನಡೆದು:—

ಕಂ|| ಕ್ಷೋಣೀಶಸೈನ್ಯನಿಪತಿತ |
ಬಾಣಾವಳಿ ಹೂಣ ಭೂಮಿಪತಿಧರಣಿಯುಮಂ ||
ಪ್ರಾಣವಧೂಚಳದಳಕ |
ಶ್ರೇಣಿಯ ಕುಟಿಳತೆಯುಮಂ ನಿಮಿರ್ಚಿದುವಾಗಳ್ || ೨೬ ||

**ವ||** ಅಂತು ಪೋಗೆವೋಗೆ:—

ಕಂ|| ವ್ಯಾಳತೆ ಷಟ್ಖಂಡಮಹೀ |
ಪಾಳನೊಳಿಮುಗಾದುದೆಂದು ಕಾಂಭೋಜನೃಪರ್ ||
ವ್ಯಾಳಗಜಾಳಾನ ಚಳ |
ಕ್ಷ್ಮಾಳತಿ ಯೊಡನೊಡನೆ ತಡೆಯದೆಱಗಿದರಾಗಳ್ || ೨೭ ||

**ವ||** ಅಂತವರ್ ಬಂದು ಕಂಡಾಳಪ್ಪುದುಂ:—

ಕಂ|| ತುಂಗತುರಂಗಮಭೂಯಿ |
ಷ್ಠಂಗಳ್ ಕೊಟ್ಟಜದ ಕೊಟ್ಟ ಕಪ್ಪದ ಭಂಡಾ ||
ರಂಗಳ್ ನಿಂದುವು ರಾಜಗೃ |
ಹಾಂಗಣದೊಳ್ ಪಾರದಪ್ಪುವಣಿಗೆಯ ಪದಮಂ || ೨೮ ||

**ವ||** ಅಂತು ದಕ್ಷಿಣಭರತವಿನೀತಾಖಂಡಮನುಂಡಿಗೆಸಾಧ್ಯಮಾಗೆ ಬಾಯ್ಕೇಳಿಸಿ:—

ಮ|| ವಿಜಯಾರ್ಧಾದ್ರಿಯನೆಯ್ದಿ ತತ್ಕಟಕದೊಳ್ ಬೀಡಿಂಗೆ ಪಾಂಗಾಗೆ ತ |
ದ್ವಿಜಯಶ್ರೀಕಟಕೋಪಮಂ ಕಟಕಮಣ್ಮುಟ್ಟಾಗೆ ಬಿಟ್ಟಿರ್ಪಿನಂ ||
ವಿಜಯಾರ್ಧೇಂದ್ರಕುಮಾರನಾನಗದಧೀಶಂ ಬಂದು ಕಂಡಂ ನಮ |
ತ್ರಿಜಗನ್ನಾಥನನರ್ಘ್ಯಪಾಣಿ ವಿಜಯಾರ್ಧಂ ಬಂದು ಕಾಣ್ಬಂದದಿಂ || ೨೯ ||

ಕಂ|| ಎಱಗಿ ಪೊಡಮಡುವ ತೆಱನೆರ್ದೆ |
ಯೆಱಕಮನನುವಡಿಸಿ ಪೊಳೆವ ಮಕುಟದ ಕಿ ||
ಕ್ಕಿಱಿಗಿಱಿದ ಪೊನ್ನ ಪೊಂಗಳ |
ತುಱುಗಲ್ ಪರಿಕಲಿಸೆ ಪಾದಪೀಠದ ಮೊದಲೊಳ್ || ೩೦ ||

ವ|| ಅಂತು ಪೊಡವಟ್ಟು ಕಂಡು ತನ್ನ ತಂದನರ್ಘಮಣಿ ಪುದಿದುರ್ವರಾಸ್ಯತಿಲಕನಪ್ಪ ಚಕ್ರವರ್ತಿಯ ಪಾದಪದ್ಮಂಗಳನರ್ಚಿಸಿ ಮುಕುಳಿತಸುರಕುಮಾರಕರಕಮಳಂ ವಿಜಯಾರ್ಧಕುಮಾರಂ ವಿಜ್ಞಾಪನಮುಖರಮುಖನಾಗಿ:—

ಮ|| ಸ್ರ|| ಭಗವಜ್ಜನ್ಮಾಭಿಷೇಕಕ್ಕೆಮಗಣಮಧಿಕಾರಂ ದಲಿಲ್ಲೆಂದು ಶಕ್ರಾ |
ದಿಗಳಿಂದಂ ಸ್ನಾನಕಲ್ಯಾಣದ ವಿಧಿ ನಿಮಗಂ ತೀರ್ವುದೆಮ್ಮನ್ನರಪ್ಪ ||
ರ್ಥಿಗಳುರ್ವೀರಾಜಪೂಜಾಭಿಷವಣವಿಧಿಯಿಂ ಪೆರ್ಚುವರ್ ದೇವ ಕೇಳಿಂ |
ದಗಪುಣ್ಯಸ್ರೋತದಿಂ ಸ್ನಾನಮನೊದವಿಸಿದರ್ ದೇವದೇವಂಗೆ ದೇವರ್ || ೩೧ ||

ವ|| ಅಂತು ನುಜ್ಜನಂಬುಗಿಸಿ:—

ಕಂ|| ದಿವಿಜಪತಿ ಪೊಳೆವ ದೇವಾಂ |
ಗವಸ್ತ್ರಮಂ ಭುವನಪತಿಯನುಡಿಸಿ ನಿಜಾನ್ವಿ ||
ತವಿಶೇಷಭೂಷಣಂಗಳ |
ನವಾರಿತಂ ತುಡಿಸಿ ತೋಱಿ ಸಂಗೀತಕಮಂ || ೩೨ ||
ತನಿಗಿರ್ಚು ಕರಗಿಕುಂ ಕಾಂ |
ಚನಮಂ ಕರಗಿಕುಮೆ ವಜ್ರಮಂ ಧರಣೀಭೃ ||
ನ್ಮುನಿ ಪೂಜಿಗಾಗುಱಿದರ ಕ |
ಣ್ಮನಮೆಂಬಿವನುಗಿವುದಮರಗಣಿಕೆಯರಾಟಂ || ೩೩ ||

ಮ|| ಹರಿಪೀಠಂ ಚಮರೀರುಹಂ ಶಶಿನಿಭಂ ಛತ್ರತ್ರಯಂ ಮೌಕ್ತಿಕಾ |
ಭರಣವ್ರಾತಮುದಾತ್ತಕೇತನಚಯಂ ರಾಜ್ಯಕ್ಕೆ ಚಿಹ್ನಂಗಳಿಂ ||
ದರಸಂಗಂದವಟಯ್ಸಿದಂ ರಜತಶೈಲಾಧೀಶ್ವರಂ ವ್ಯಂತರಾ |
ಮರರಾಜಂ ವಿಜಯಾರ್ಧನಾಥನುಮನಂತಾಳ್ದಂ ಮಹೀವಲ್ಲಭಂ || ೩೪ ||

ವ|| ಅನಂತರಂ ವಿಜಯಾರ್ಧಕುಮಾರನಂ ವಿಸರ್ಜಿಸಿದಿಂ ಬಱಿಯಂ:—

ಮ|| ಮಿತಸಾರೇತರಸಾರವಾಗೆ ವಿಜಯಾರ್ಧಾದ್ರೀಂದ್ರದುದ್ದಾಮಸಾ |
ನುತಳಂ ತದ್ವಿಭವಂ ತಳಾಮಳಕಮೆಂಬಾಸ್ಫೋಟದಿಂ ಬಂದು ದೂ ||
ರತರಾಘೌಘಪರಾರ್ಧ್ಯರತ್ನನಿಚಯಾದ್ವಂದ್ವಂ ಮಹಾಪುಣ್ಯದಿಂ |
ಕೃತವಮಾಲಾಮರನಾಥನಂದೆಱಗಿದಂ ಶಾಂತೀಶಪಾದಾಬ್ಜದೊಳ್ || ೩೫ ||

ವ|| ಎಱಗಿ ಕೃತಾಂಜಳಿಯಾಗಿ:—

ಕಂ|| ಕ್ಷೋಣೀಶ ನೆಗಟ್ಟ ಸಗ್ಗದ |
ಮಾಣಿಕಚಟ್ಟರೊಳಮಮರಮಂಡಳಿಯೊಳಮಿಾ ||
ಮಾಣಿಕ್ಯದ ಬೆಲೆಯಿಡಲಾರ್ |
ಜಾಣರ್ ಬಱಿಯುಟ್ಟು ಬೆಲೆಯನಾಗಿಪೊಡವರಿಂ || ೩೬ ||

ಎಂದೋಲಗಿಸಿದ ನವಮಣಿ |
ಸಂದೋಹಮನೆಟ್ಟು ಬಂದು ಗೃಹಪತಿ ಕೊಳೆ ದೇ ||
ವಂ ದಿವ್ಯಚಿತ್ತದಿಂ ತಾ |
ಳ್ದಂ ದಿವಿಜನುಮಂದು ಚಕ್ರಿಗೊಲ್ದಾಳಾದಂ || ೩೭ ||

ಆಳಾಗಿ ವಿಪುಳರಾಜತ |
ಶೈಳಗುಹಾಮುಖವಿಘಾಟನಾರಂಭಮುಮಂ ||
ಹೇಳಾಸಾಧ್ಯಮನಾಕ್ಕೃತ |
ಮಾಳಂ ಸೇನಾನಿ ನಿನ್ನದೆಂದಱಿಪುವುದುಂ || ೩೮ ||

ಮ|| ಅಱಿದೀಶಂ ಬೆಸವೇೞೆ ಸಿಂಧುವನವೇದೀದ್ವಾರದಿಂ ಪೋಗಿ ಸು |
ತ್ತಿಱಿದೆತ್ತಂ ಬರೆ ತನ್ನವಶ್ವನಿಚಯಂ ರೂಪ್ಯಾದ್ರಿವೇದೀತಟಂ ||
ತೆಱದಿಂದಿಂಬಿನೊಡಂಬಡಂಬಡೆಯೆ ಬಂದಂದೇಱಿದಂ ತೇಜಮಂ |
ಮೆಱೆಯುತ್ತುಂ ಜಗತೀತಳಂಬರಮಿಳೇಶಾನೀಕಿನೀನಾಯಕಂ || ೩೯ ||

ವ|| ಅಂತು ವೇದಿಯ ಮೂಡಣ ದೆಸೆಯ ರತ್ನರಚಿತಸೋಪಾನಚಯಂಗಳಿಂ ಜಗತೀತಳಮನೇಱಿ ಮುನ್ನೆ ತನ್ನೊಡವಂದಶ್ವಬಲಮಂ ಪಶ್ಚಿಮಸೋಪಾನಪಜ್ತಿಗಳಿಂದಮಪರಮ್ಲೇಚ್ಛಖಂಡಮಧ್ಯಮಗಮಿಯಾಗೆ ವಿಸ್ಫುಳಿಂಗವ್ಯಾಸಂಗಮಾಗದಂತತ್ತ ಪೋಗಲ್ವೇೞ್ದು ತಮಿಸ್ರಾಗುಹೋತ್ಸಂಗಮಂ ತಾನೊರ್ವನುಮೇಱಿ ತುರುಗರತ್ನಾಧಿರೂಢಂ ಪಡುವಣಮೊಗದೆ ನಿಂದು ದ್ವಾದಶಯೋಜನಮಗಲದೆಂಟುಯೋಜನಮುತ್ಸೇಧದ ವಜ್ರದ ಪಡಿಗಳಂ ಲಕ್ಷ್ಯಂಮಾಡಿ "ಸಕಳಚಕ್ರವರ್ತಿ ಗೆಲ್ಗೆಂ"ದು ದಂಡರತ್ನದಿಂದಮಿಡುವುದುಮಾಗುಹಾಮುಖದ್ವಾರದಿಂ ಪುಟ್ಟಿದ ಗಂಭೀರಾರಾವದಿಂ:—

ಮ|| ವಸುಧಾಮಂಡಳಮಧ್ಯದೊಳ್ ನೆಲಸಿದೀಸಿನ್ನಾಜ್ಞೆಯಂ ಮಾಲತೀ |
ಕುಸುಮಸ್ರಕ್ಕೃತಿರೂಪದಿಂ ತಲೆಯೊಳಾಂತೆಂ ದೇವ ಹಾಹಾ ವಿಚಾ ||
ರಿಸದೀದಿಗ್ವಿಜಯಪ್ರಘಟ್ಟಕದೊಳುರ್ವೀಭೃತ್ಸಮಾಜಕ್ಕೆ ನೋ |
ಯಿಸಿದಂ ನಿರ್ನೆರಮೆನ್ನನೆಂದು ಮೊರೆಯಿಟ್ಟಂತಾಯ್ತು ರೂಪ್ಯಾಚಳಂ || ೪೦ ||

ವ|| ಅಂತು ಕೀಲ್ ಕಟಿಲ್ದ ಜಂತ್ರದ ಪಡಿಗಳಂತೆ ತಮಿಸ್ರಾಗುಹಾದ್ವಾರದ ವಜ್ರದ ಪಡಿಗಳ್ ಘೋಂಕೆನೆ ತೆಱೆವುದುಂ:—

ಕಂ|| ಅರರೀಪುಟಚೀತ್ಕಾರ |
ಸ್ಫುರಿತಧ್ವನಿ ರಜತಶಿಖರಿ ಸೇನಾನಿಗೆ ಪ ||
ಲ್ಮೊರೆದಪುದೆನಿಸೆ ಗುಹಾಗ |
ಹ್ವರದಿಂ ಪೊಣ್ಮಿದುದು ಘೂರ್ಣಿತಾರ್ಣವರವದಿಂ || ೪೧ ||

ವ|| ಅಂತು ಕವಾಟಪುಟಂಗಳಶ್ರಮದೊಳ್ ಗವಾಕ್ಷಕವಾಟಂಗಳಂತೆ ತೆಱೆಯೆ ಮತ್ತಾಶ್ರಮದೊಳಲ್ಲಿಂದೊಳಗೊಗೆದ ನಿರ್ಘಾತತರ್ಜಿತವೇದಸ್ವಾದಮಂ ಮುಟ್ಟಲೀಯದೆ ಸೇನಾಪತಿರತ್ನಂ ತುರಂಗರತ್ನಮನವಯವದೊಳಿನಿಸಾನುಂ ಕಣ್ಕೆತ್ತಿದಂತೆ:—

ಕಂ|| ಅಂಕಂಗುಡಲೊಡಮದು ಪಿ |
ಶ್ಯಂಕಂ ಪನ್ನೆರಡುಯೋಜನಂ ಪಾಱಿದುದ ||
ಭ್ರುಂಕಷಖುರಖುರಧಾರಾ |
ಟಂಕಾಹತಿ ಮುಗಿಲ ಮುರಿಗಳಂ ಕೆದಱುವಿನಂ || ೪೨ ||

ವ|| ಅಂತಶ್ವರತ್ನದ ವಯಃಕ್ಷೇತ್ರಧ್ರುವಲಕ್ಷಣಂ ನಿರ್ವಿಶೇಷಂಗಳನೊಂದುಮನಗಲದೆ ಕಾರುವುವು ಸಹಸ್ರಂ ರಜತಾದ್ರಿಪ್ರಸ್ಥವೇದಿಕಾವಕಾಶಂಬಿಡಿದು ಸಿಂಧುವಿನ ಪಡುವಣದೆಸೆಯ ವನವೇದಿಕೆಯ ತೋರಣದ್ವಾರದಿಂದಮತ್ತ ಪಡುವಣಮ್ಲೇಚ್ಛಖಂಡಮಂ ಮೂವಳಸುಬಳಸಿ ಸಾಧಿಸಿ:—

ಕಂ|| ಆಳರಸೆಂಬಿನಿತಂ ಮನ |
ಮಾಳೋಚಿಸಲಱಿಯದವನಿಪಾಳರ್ ಧರಣೀ ||
ಪಾಳನ ಸೇನಾಪತಿಗಿರ |
ದಾಳಾದರ್ ಕಟ್ಟುಪಟ್ಟ ವನಮದಕರಿವೋಲ್ || ೪೩ ||

ವ|| ಅಂತು ಸ್ತ್ರೀಬಾಲಸಾಧ್ಯವಾದ ಮ್ಲೇಚ್ಛಖಂಡದರಸುಗಳುಮನವರ ಕೊಟ್ಟಿಟ್ಟದ ಕುಲಧನಜೀವಧನಪರಿಕರಂಗಳುಂಬೆರಸು ಬಂದಾಸ್ಥಾನಮಂಡಳಮಧ್ಯದೊಳ್ ಇರ್ದ ಚಕ್ರವರ್ತಿಯ ಮಣಿಮುಕುಟಂ ತನ್ನತಂದ:—

ಮ|| ನೃಪರಂ ಚಕ್ರಿಪದಾಂಬುಜಕ್ಕೆಱಗವೇಟ್ಟೋರತ್ನಮಾಹೇಮಮಾ |
ದ್ವಿಪಮಾತುಂಗತುರಂಗಮಂಗಳಿವರಿತ್ತರ್ಥಂಗಳೆಂದೆಂದು ಬಿ ||
ನ್ನಪದಿಂ ಶ್ರೀಜಿನಚಂದ್ರನಂಘ್ರಿಯುಗಳಕ್ಕಾಳ್ಮಾಡಿ ತನ್ಮ್ಲೇಚ್ಛಭೂ |
ಮಿಪರಂ ಮನ್ನಣೆಯಿಂ ವಿಸರ್ಜಿಸಿದನುರ್ವೀನಾಥಸೇನಾಧಿಪಂ || ೪೪ ||

ಕಂ|| ಅಭಿಘಾತಜ್ವರಮೌಷಧ |
ವಿಭಿನ್ನಮುಪಶಮಿಸುವಂತಿರುಪಶಮಿಸಿದುದು ||
ತ್ರಿಭದಂಡನಿಹತಸಂಭೂ |
ತ ಭೂರಿಪರಿತಾಪಮಾಱುತಿಂಗಳೊಳಗದಾ || ೪೫ ||

ವ|| ಅಂತಱುದಿಂಗಳ್ವರಮಿರ್ದಾಱಿದ ತಮಿಸ್ರಗುಹಾದ್ವಾರದ ಬೆಂಕೆಯುಪಶಮಮನಱಿದು ಶುಭದಿನದೊಳುತ್ತರಭರತಮಂ ಗೆಲಲ್ ಪ್ರಯಾಣಭೇರಿಯಂ ಪೊಯ್ಸಿ ಚಕ್ರವರ್ತಿ ಪಟ್ಟವರ್ಧನಮನೇಱಿ ವಿಜಯಶಿಬಿರಮಂ ಪೊಱಮಟ್ಟು ತಮಿಸ್ರಗುಹಾದ್ವಾರದೊಳ್ ನಿಂದು ಮುಂದೆ ಬೀಡಂ ನಡೆಯಿಸಲೆಂದಿರೆ:—

ಉ|| ಮುಂದೆ ತಮಸ್ತಮಂ ಪರೆಯೆ ಬಂದ ಚಮೂಪತಿ ಕಾಕಿಣೀಮಣಿ |
ಸ್ಕಂಧನದಿಂದಮಿರ್ದೆಸೆಯ ಕೇರ್ಗಳೊಳಂ ಬರೆದೊಂದುಕೇರೊಳಂ ||
ದಿಂದುವನೊಂದುಕೇರೊಳಿನನಂ ಪಡೆಯಂ ನಡೆಯಲ್ಕೆವೇಟಿಸಿ ಭೋ |
ರೆಂದು ಗಭೀರನಾದದಿನದೇಂ ನಡೆಗೊಂಡುದೊ ಚಕ್ರವರ್ತಿಯಾ || ೪೬ ||

ಕಂ|| ಒಂದೊಂದುಯೋಜನಾಂತದೊ |
ಳಿಂದುರವಿಜ್ಯೋತಿ ಬೆಳಗೆ ಬರೆವರೆಯುತ್ತುಂ ||
ಮುಂದೆ ವರೆ ಸೈನ್ಯಪತಿ ಕೊ |
ಳ್ಪಿಂದು ಗುಹಾಂತರದೊಳಿಸೆದು ಪಡೆ ನಡೆವೆಡೆಯೊಳ್ || ೪೭ ||
ಬೆಳಗಿದುದು ಚಕ್ರರತ್ನೋ |
ಜ್ಜ್ವಳದೀಪಂ ಚರಣಮಂತರಿಕ್ಷದೊಳವನೀ ||
ತಳಪತಿ ತೇಜೋರವಿಮಂ |
ಡಳಮೆಂಬ ಜನಪ್ರಣಾದಮಂ ಪೊಸಯಿಸುತುಂ || ೪೮ ||

ವ|| ಅಂತುದೀರ್ಘೋಚ್ಛ್ರೇದನಮುಂ ನಿರಾತಂಕಮುಮಾಗಿ:—

ಕಂ|| ತುಂಗನೃಪಸೇನೆ ನಗದ ಮ |
ನಂಗೊಳಲೆರ್ದೆಪುಗುವ ತೆಱದಿನೊಳಪುಗೆ ರಿಪುರಾ ||
ಜ್ಯಾಂಗನೆ ವಿಜಯಕೆ ಮಚ್ಚಿ ಮ |
ನಂಗೊಳ್ವಂತದ್ರಿರಾಜನದನೊಳಕೊಂಡಂ || ೪೯ ||

ವ|| ಅಂತು ಮಣಿಮಯಸೋಪಾನಂಗಳೊಳಾದಮಿಱುದಿರ್ವಗೆಯಾಗಿ ಸಿಂಧುನದಿಯೆರಡುಂ ತಡಿವಿಡಿದು ಯೋಜನದ್ವಯದಗಲದೊಳ್ ನಡೆದು ಚಕ್ರವರ್ತಿಯೆಡೆಯೆಡೆಯೊಳ್ ಬರೆ ಗುಹಾಕುಡ್ಯಂಗಳೆರಡುಂದೆಸೆಯೊಳಮಿರ್ದರಡುಂಕುಂಡಂಗಳಿಂದಂ ಬಂದು ಸಿಂಧುನದೀಪ್ರವಾಹದೊಳ್ ಕೂಡೆ:—

ಕಂ|| ಜನಿತಾಭ್ಯುದಯಂಗುನ್ಮ |
ಗ್ನನಿಮಗ್ನಜಲಾಪಗಾಯುಗಂ ಗತಿಸಂರೋ ||
ಧನಮಾಗೆ ನಡೆವ ಪಡೆನಡೆ |
ದು ನಿಂದುದು ನದೀತಟದ್ವಯೋರ್ವೀತಳದೊಳ್ || ೫೦ ||

ವ|| ಅಂತು ಮೇಗಣ್ಗೊಗೆದುಮಡಿಗೆ ತೆಗೆದುಂ ಪವನವಶದಿಂ ಪರಿವ ಜಳಪ್ರವಾಹಂಗಳಿಂದಂ ವಿರುದ್ಧಸ್ರೋತಮಾದೆರಡುಂ ತೊಱೆಗಳುಮಂ ಸ್ಥಪತಿರತ್ನಪ್ರಯತ್ನನಿರ್ಮಿತಸೇತುಮಾರ್ಗಂಗಳೊಳ್ ಜಂಗಮಗಿರಿದುರ್ಗಂಬೆರಸು ನಡೆವಂತೆ ಕರಿಕರೇಣುಪರೀತಂ ಚಕ್ರವರ್ತಿ ನಡೆವುದುಂ ಆದಿತ್ಯನ ಬೞಯನುೞಯದ ದೀಧಿತಿನಿವಹದಂತೆ ಧರಣೀಶ್ವರನ ಬೆನ್ನನೆ ವಿಜಯಕಟಕಂ ಮುನ್ನಂ ನಡೆದು ಕೆಲವುಪಯಣದಿಂದಮುತ್ತರಗುಹಾದ್ವಾರದಿಂ ಪೊಱಮಡುವಾಗಳ್:—

ಮಂದಾಕ್ರಾಂತಾವೃತ್ತಂ|| ಮತ್ತೇಭಾಶ್ವಾದ್ಯಮಿತಬಳವತ್ಸೈನ್ಯಮಾದ್ವಾರದಿಂ ಬಂ |
ದೆತ್ತಂ ಬಿಟ್ಟೊಕ್ಕಲವೊಲಿರೆ ಚಕ್ರೇಶ್ವರಂ ಬಂದೊಡಾತ್ಮಾ ||
ಯತ್ತಾನೀಕಂಗಳನವನಿಪಂಗಿತ್ತು ತೆತ್ತರ್ಥಶಾಸ್ತ್ರೋ |
ದಾತ್ತಂ ದಂಡೋಪ[ನತ]ನೆನೆ ರೌಪ್ಯಾದ್ರಿ ಚೆಲ್ವಾದುದಾಗಳ್ || ೫೧ ||

ವ|| ಅಂತು ಗುಹಾದ್ವಾರದಿಂ ಪೊಱಮಡುವ ರಾಗರಸೋದ್ರೇಕದಿಂದಮೊರ್ಮೊದಲೆ ಮೊಟಗುವ ಪಲವುಂತೆಱದ ಪಱೆಗಳೆಸೆವುದ್ದಾಮರಭಸದಿಂದಂ ಮಾರ್ದನಿವಿಟ್ಟು ಮುದುಗಣ್ಣಾನಮನುಂಟು ಮಾಡಿದಂತೆ ಶಾಂತೀಶ್ವರಂಗೆ:—

ಕಂ|| ಕರ್ತಾರಂಗೆಱಗುವುದತಿ |
ವರ್ತಿತ್ವಂ ಪೊಲ್ಲದೆಂದು ಪುರುಷೂನುಗೆ ಮುಂ ||
ಮಾರ್ತಲೆಯಾದ ಚಿಳಾತಾ |
ವರ್ತರನಂದೂಱ ಕಲ್ಪಿಪಂತಾಯ್ತು ನಗಂ || ೫೨ ||

ವ|| ಅಂತು ಪೊಱಮಟ್ಟಾವಿಜಯಕಟಕಂ ಪೆಱಗುಮುಂದಸಿದುಮುಗಲಿತುಮಾಗಿ ಬರ್ಪಲ್ಲಿ:—

ಕಂ|| ಪರಮೇಶ್ವರದಿಗ್ವಿಜಯ |
ಕ್ಕೆ ರಾಗದಿಂದುರಗರಾಜನದ್ರಿದರೀಗ ||
ಹ್ವರಮಂ ಪೊಱಮಡುವವೊಲಾ |
ಗಿರಿಯಿಂ ಪೊಱಮಡುವ ಸೈನ್ಯಮೊಪ್ಪಿದುದಿನಿಸುಂ || ೫೩ ||

ವ|| ಅಂತು ಚಕ್ರವರ್ತಿ ಬಂದುತ್ತರಭರತಮಧ್ಯಮಖಂಡಕ್ಕಭಿಮುಖನಾಗಿ ಬೀಡಂ ಬಿಡೆ:—

ಕಂ|| ತಾರಾದ್ರೀಂದ್ರದ ತೋಱದ |
ತಾರಲೊಳೆಳೆದಳಿಸಿ ಬಳೆವ ತಾರಲತಾವಿ ||
ಸ್ತಾರಮನನುಕರಿಸಿದುದಂ |
ತಾರಾಜಿತರಾಜಕೀರ್ತಿ ವಲ್ಲೀವದನಂ || ೫೪ ||

ವ|| ಎಂಬಿನಮೊಂದೆರಡುಪ್ಪಯಣಂ ಗೆಯ್ದಿರ್ಪುದುಂ:—

ಶಿಖರಿಣೀವೃತ್ತಂ|| ಚಿಳಾವರ್ತರ್ ಮತ್ತೀನ[ರಿ]ಗಭಿಮುಖರ್ ಮೇಘಮುಖರೊಳ್ |
ಮಿಳತ್ಕಾರ್ಯಾಳೋಚರ್ ತಿಳಿದು ತಿಳಿನೀರಂತಪರಜರ್ ||
ಬಳಾವಷ್ಟಂಭಂಗೆಟ್ಟಡಿಗೆಱಗಿ ಕಂಡರ್ ಪಿರಿಯನೊಳ್ |
ಬಳೋನ್ಮತ್ತಂ ದಲ್ ದುರ್ಬಳಮಿಭಹಯಾನೂನರಬಳಂ || ೫೫ ||

ವ|| ಅಂತು ಕೈತವಮಿಲ್ಲದೆ ವಿಧೇಯತ್ವದ ತುದಿಯನೆಯ್ದೆ ಮಣಿಯೆಂಬ ಪಸುರ್ಮಣಿಯುಂ, ತುರಂಗಮೆಂಬ ತುರಂಗಮಮುಂ, ಕರಿಯೆಂಬ ಸೂಕರಿಯುಮಂ, ಪೊನ್ನೆಂಬ ಚಿನ್ನಮಂ, ಲಂಜಿಕೆಯೆಂಬ ಶಾಳಭಂಜಿಕೆಯುಮಂ ಉಱೆಯದಂತಿರೆ ತಂದುರ್ವರಾಸ್ಯತಿಲಕನಪ್ಪ ದೇವದೇವಂಗವಟಯ್ಸಿ ತತ್ಪರಮಪ್ರಸಾದ ನಿಷ್ಕ್ರಯಕ್ಕೆ ತಲೆಯೆಂದು ಪೂಣ್ದಾಳಾದರ್:—

ಕಂ|| ವರಚರ್ಮರತ್ನಮುಂ ಛ |
ತ್ರರತ್ನಮುಂ ತಮ್ಮತಮ್ಮ ಬೆಸಗಳ ನುಱಿದಿ ||
ರ್ಪಿರವಿಂದೆ ಜೀವರತ್ನಂ |
ಸ್ಥಿರತ್ವಮನ್ವರ್ಥಮಾಗಿ ತಳರವೆ ನೆಲೆಯಿಂ || ೫೬ ||

**ವ|| ಇತ್ತ ಸೇನಾನಿಯುತ್ತರಭರತದ ಪಶ್ಚಿಮಖಂಡಮಂ ಬಾಯ್ಕೇಳಿಸಿ ಬಂದು ವಿಜಯ ಕಟಕಂ ಬಿಡಿದು ತುಹಿನಾಚಳಸಿಂಧೂಪಾಂತದೊಳ್ ಬಿಟ್ಟಿರೆ:—**

ಕಂ|| ಭದ್ರಾಸನಮಂ ಭುಜವಿಜ |
ಯದ್ರವಿಣಂಗವನಿಪತಿಗೆ ಕೊಟ್ಟೆಱಗೆ ಯಶೋ ||
ಭದ್ರೈಕತಿರಸ್ಕೃತತುಹಿ |
ನಾದ್ರಿ ಜಗದ್ಬಂಧು ಸಿಂಧುದೇವಿಯನರಸಂ || ೫೭ ||

ವ|| ಪೋಗವೇಟ್ದು ಪ್ರಸನ್ನಕತಿಪಯಪ್ರಯಾಣಂಗಳಿಂ ಪ್ರಾಳೇಯಾಚಳಮಧ್ಯಮಕೂಟಮನೆಯ್ದೆವರ್ಪುದುಂ:—

ಕಂ|| ಹಿಮವನ್ನಿವಾಸಿ ಹಿಮವ |
ತ್ಕುಮಾರನಾಚಕ್ರವರ್ತಿಯಡಿಗೆಱಗೆ ನೃಪೋ ||
ತ್ತಮನ ಗೃಹಪತಿಗೆ ರತ್ನ |
ಪ್ರಮಾಣಗಣಿಕೆಯರ ಬೆಸನೆ ಬೆಸನಾಯ್ತಾಗಳ್ || ೫೮ ||

ವ|| ಎನೆ ಸಾರವಸ್ತುಗಳಿನೋಲಗಿಸಿ ಚಕ್ರವರ್ತಿಯ ಪರಮಾನುಗ್ರಹಾಮೃತಮನಾಸ್ವಾದಿಸಿ ಪೋಗೆ ಷಟ್ಖಂಡಭೂವಲ್ಲಭನುಂ ಹಿಮವತ್ತಟಂಬಿಡಿದು ಮೂಡಮೊಗದೆ ಪಯಣಂಬರೆ ಪಾರ್ವತೀಯೋಪಾದ ಪ್ರಧಾನಪುರಸ್ಸರನಾಗಿ ರಾಜನ್ಯಕದ ಕಾಣ್ಕೆಯಿಂದಂ:—

ಕಂ|| ಹಿಮವತ್ಸಾರತೆಯುಂ ಬಂ |
ಹಿಮಮುಂ ನೃಪನಱಿದ ನವನಿಪತಿಸಾರತೆಯಂ ||
ಹಿಮವನ್ನಗಮಱಿದುದದೇ |
ನಮೇಯಸಾರರೊ ಹಿಮಾದ್ರಿಯುಂ ಭೂಪತಿಯುಂ || ೫೯ ||

ವ|| ಎನೆ ಪಯಣಂ ಬಂದು:—

ಮ|| ಪ್ರಕಟಶ್ರೀ ಹಿಮವಾರವಾಣವಿಶದಂ ಗಂಗಾಂಶುಕನ್ಯಸ್ತಮ |
ಸ್ತಕನಗ್ರಸ್ಥನಮೇರುಶೇಖರನುಪಾತ್ತೋದಾತ್ತವಿಸ್ತಾರಕೀ ||
ಚಕವೇತ್ರಂ ಭರತಾವನೀಪತಿಮಹೀಸ್ತ್ರೀರಕ್ಷಕಂ ವೃದ್ಧಕಂ |
ಚುಕಿಮರ್ಯಾದೆಯೊಳಿರ್ದನೆಂದು ಮಹಿಪಂ ಹೈಮಾದ್ರಿಯಂ ನೋಡಿದಂ || ೬೦ ||

ವ|| ಅಂತರ್ವರಾಸ್ಯತಿಲಕಂ ನೋಡಿ ಹಿಮವತ್ಕುಕ್ಷಿಕೀಲದಿಂದೆ ಸೈತು ತೆಂಕಣಮೊಗದೆ ಪಯಣಂಬಂದು ಮೊದಲೊಳ್ ನೂಱುಯೋಜನದಗಲಮುಮನಿತುತ್ಸೇಧಮುಂ ಮೇಗಯ್ವತ್ತು ಯೋಜನ ವಿಸ್ತಾರಮು ಮಯ್ವತ್ತುಯೋಜನಮಾಟಿಕ್ಕೆಯುಮನವಗಯ್ಸಿ:—

ಕಂ|| ಇತ್ತುತ್ತರಭರತಮನಾ |
ಳುತ್ತಿರ್ದರನೇಕಚಕ್ರವರ್ತಿಗಳ ಪೆಸರ್ ||
ಸುತ್ತಿ ಬರೆದಿರೆ ನಿಬಂಧದ |
ಹೊತ್ತಗೆಯೆಂಬಂತಿರಿರ್ದ ವೃಷಭಾಚಲಮಂ || ೬೧ ||

ವ|| ಕಂಡು ತದುಪಕಂಠದೊಳ್ ಬೀಡಂ ಬಿಡಿಸಿ ಚಕ್ರಾಯುಧಪ್ರಭೃತಿಗಳುಪರೋಧದಿಂ ತದ್ಗಿರಿಗೆ ನಾಮಾಕ್ಷರನಿಕ್ಷೇಪನಿಮಿತ್ತಂ ಪೋಗಿ ನೋಟ್ಪಿನ್ನೆಗಂ:—

ಉ|| ಆನಗದೊಳ್ ವ್ಯತೀತಬಹುಚಕ್ರಿಗುಣಾನ್ವಯತತ್ಪ್ರತಾಪಸಂ |
ತಾನಲಿಪಿಪ್ರಪಂಚವಚನಾಳಿಯನೋಳಿಯೆ ಕೇಳ್ದು ಕೇಳ್ದು ವಿ ||
ಶ್ವಾನತಪಾದನಪ್ಪುದಱಿನಾತ್ಮಗುಣಸ್ತುತಿ ಸಿಗ್ಗನೀಯೆ ಲ |
ಜ್ಜಾನತಮಾದುದುನ್ನತಶಿರೋಮಣಿ ಪಂಚಮಚಕ್ರವರ್ತಿಯಾ || ೬೨ ||

ವ|| ಅಂತು ವಾಳಾಗ್ರಕ್ಕಮವಕಾಶಮಿಲ್ಲದಂತು ಕಿಕ್ಕಿಱಿಗಿಱಿದಿರ್ದ ಪುರಾತನಚಕ್ರವರ್ತಿಗಳ ನಾಮಾಂಕಮಾಳಿಕೆಯಂ ಕಂಡಱಿದು ಮಂತ್ರಿವರ್ಗಮನಱಿಪಲೆಂದು ಬಂದನಪ್ಪುದಱಿಂದಂ:—

ಕಂ|| ಮುಂ ಬರೆದಭಿಧಾನಮನಟಿ |
ದಿಂ ಬರೆವಹಮಿಕೆಯ ಪೆಸರೊಳೇವಂದಪುದೇ ||
ನುಂ ಬೇಡ ಬನ್ನಿ ಮೆಂದಧಿ |
ಪಂ ಬೀಡಂ ಬಂದು ಪೊಕ್ಕು ಸುಖದಿಂದಿರ್ದಂ || ೬೩ ||

ವ|| ಮಂತ್ರಿಮುಖ್ಯರುಂ ಪುರಾತನಚಕ್ರವರ್ತಿಪ್ರವರ್ತಿತಮಾರ್ಗಮಿದೆಂದು ಕಾಕಿಣೀರತ್ನದಿಂದಲ್ಲಿ ಮುನ್ನಿರ್ದುದೊಂದು ಪ್ರಶಸ್ತಿಯಂ ಪರಾಮೃಷ್ಟಂ ಮಾಡಿ:—

ಉ|| ಸ್ವಸ್ತಿ ಸಮಸ್ತಮಂಡಳಿಕಮಸ್ತಕಪುಷ್ಪರಜಃಪಿಶಂಗಿತಾಂ ||
ಘ್ರಿಸ್ತಬಕದ್ವಯಂ ವಿನತಪಾಪಹರಂ ಶಶಿವಂಶಸದ್ವಿಹಾ ||
ಯಸ್ತಪನಂ ಸಿಧೀಶ್ವರನಖಂಡಿತಮಂಡಳನಾಥನದ್ರಿವಿ |
ನ್ಯಸ್ತನಿಜಪ್ರಶಸ್ತಿಕೃತಶಾಂತಿ ಮಹೀಪತಿ ಸಿದ್ಧದಿಗ್ಜಯಂ || ೬೪ ||

ಮ|| ಕುರುವಂಶಂ ಪಿತೃ ವಿಶ್ವಸೇನವಿಭು ತಾಯೈರಾಮಹಾದೇವಿ ಸಂ |
ಸರಣಾಂಭೋಧಿವಿಶೋಧಿ ತೀರ್ಥಕರನುಂ ಷಟ್ಖಂಡಧಾತ್ರೀಶನುಂ ||
ಸ್ಮರನುಂ ತಾನೆನೆ ಚಕ್ರವರ್ತಿಗಳೊಳೀಶಾಂತೀಶನೊಳ್ ಮುನ್ನಮಾ |
ದರನಿನ್ನಪ್ಪರನೀಗಳುಳ್ಳ ನೃಪರಂ ಚಿಃ ಪೋಲಿಸಲ್ ತಕ್ಕುದೇ || ೬೫ ||

ವ|| ಮತ್ತಮಾವಿನೇಯನಿಕಾಯಾಂಬುಜಭಾನುವಪ್ಪ ಹಿಮಾಂಶುವಂಶಲಲಾಮಂ:—

ಚಂ|| ಜಯವಧುಗಾಣ್ಮನಾಗಿಯುಮಸೌಮ್ಯನೆ ವೃದ್ಧಪರೀತಮೂರ್ತಿಯಾ |
ಗಿಯುಮನುಶಾಸ್ಯನೇ ಮಹಿತನಾಗಿಯುಮುದ್ರುತನೇ ನಯಜ್ಞನಾ ||
ಗಿಯುಮಕೃತಜ್ಞನೇ ಸ್ವಯಥನಾಗಿಯುಮುಗ್ರನೆ ಚಕ್ರವರ್ತಿಯಾ |
ಗಿಯುಮತಿವರ್ತಿಯೇ ಮದನನಾಗಿಯುಮಿಂದ್ರಿಯವೃತ್ತವರ್ತಿಯೇ || ೬೬ ||

ವ|| ಎನೆ ನೆಗಟ್ದಿ:—

ಚಂ|| ತ್ರಿಜಗದಭಿಷ್ಟುತಂಗೆ ಜಿನಚಂದ್ರಮಹಾಮಹಿಪಾಳಕಂಗೆ ದಿ |
ಗ್ವಿಜಯಮಿದಾವಗುರ್ವು ಗಡಮಾದೊಡಮಾದಿಯ ಚಕ್ರವರ್ತಿಗಳ್ ||
ಭಜಿಯಿಸಿದೀಪದಂ ಮಸುಳ್ಗುಮೆಂಬುದಱಿಂದದನೆತ್ತಿಕೊಂಡನಂ |
ಗಜಗಜವೈರಿ ಗೆಲ್ದುದದು ಚೋದ್ಯಮೆ ಭೂಮಿಪಸಾಮಜಂಗಳಂ || ೬೭ ||

ವ|| ಎಂದು ಬರೆಯಿಸಿ ಮಂತ್ರಿಮುಖ್ಯರುಂ ಚಕ್ರಾಯುಧಂಬೆರಸು ವಿಜಯಕಟಕಮಂಪೊಕ್ಕು ಮಱುದಿವಸಂ ಪಯಣಂಬೋಗಿ ವಿಜಯಾರ್ಧಪರ್ವತದ ಕಾಂಡಕಪ್ರಪಾತಗುಹೆಗಭಿಮುಖನಾಗಿ ಬೀಡಂಬಿಟ್ಟು ಪೂರ್ವೋಕ್ತಸ್ಥಿತಿಯೊಳ್ ವಜ್ರಕವಾಟೋದ್ಘಾಟನಂಗೆಯ್ದ ದೞಿ ಬೆಂಕೆಯಾಱುವನ್ನೆಗಂ ಮೂಡಣಮ್ಲೇಚ್ಛಖಂಡಮಂ ದಂಡನಾಯಕಂ ಬಾಯ್ಕೇಳಿಸಿ ತಂದಾಮ್ಲೇಚ್ಛರಾಜರಂ ಕಾಣಿಸಿಯು ಮಾಳ್ತನಮಂ ಪೂಣಿಸಿಯುಂ ಚಕ್ರವರ್ತಿಗೆ ಸರ್ವಸ್ವಮಂ ಕುಡಿಸಿಯುಮವರಂ ದಾನಸನ್ಮಾನದೊಳ್ ಸಂತಸಂ ಬಡಿಸಿಯುಮಿರ್ಪನ್ನೆಗಂ:—

ಕಂ|| ಉಭಯಶ್ರೇಢಿಯ ಖೇಚರ |
ವಿಭುಗಳ್ ನಮಿವಿನಮಿವಂಶಸಂಭವರರಸಂ ||
ಗಿಭಹೇಮತುರಗಗಣಿಕಾ |
ಪ್ರಭೂತತರಮಪ್ಪ ಕಪ್ಪಮಂ ಪಲರಿತ್ತರ್ || ೬೮ ||

ವ|| ಮತ್ತಂ:—

ಹರಿಣೀವೃತ್ತಂ|| ತನು ಮೃದು ಕುಚಂ ಸ್ತಬ್ಧಂ ಶೀಲಂ ಕರಂ ರುಜು ಪುಷ್ಪಕೇ |
ತನನಿಭಕಚೋದ್ಬಂಧಂ ನೇತ್ರೋತ್ಪಳಂ ಚಪಳಂ ಸ್ಥಿರಂ ||
ಮನಮಸದೃಶಂ ಯತ್ನಂ ಸ್ತ್ರೀರತ್ನದೊಳ್ ಮಿಗಿಲೆಂಬ ಪೆಂ |
ಪಿನ ತನುಜೆಯಂ ಕೊಟ್ಟಂ ಶಾಂತೀಶ್ವರಂಗೆ ನಭಶ್ಚರಂ || ೬೯ ||

ವ|| ಅಂತಾಸ್ತ್ರೀರತ್ನಮಂ ಕೊಟ್ಟು ವಿದ್ಯಾಧರರಧಿರಾಜನೊಳ್ ನಂಟರುವಾದರ್:—

ಕಂ|| ಗಂಗಾದೇವಿಯುಮಲ್ಲಿ ಲ |
ತಾಂಗಿ ಜಗತ್ಪತಿಗನರ್ಘ್ಯಭೂಷಣಮುದಮಾ ||
ತಂಗವನಾಯುಜಹಯ ನಿಕ |
ರಂಗಳನವಟಯಿಸಿ ವಿನಯದಿಂ ಬೀೞ್ಕೊಂಡಳ್ || ೭೦ ||

ವ|| ಅನಂತರಮಱುದಿಂಗಳಾಱುದ ಕಾಂಡಕಪ್ರಪಾತಗುಹಾದ್ವಾರಮಂ ಪೊಕ್ಕು ಕಾಕಿಣೀಮಣಿ ರತ್ನೋತ್ಕೀರ್ಣಚಂದ್ರಾದಿತ್ಯದ್ಯೋತದೊಳ,ಮನೇಕಮಕುಟಬದ್ಧಕಿರೀಟಚೂಡಾಮಣಿಗಣಮಯೂಖ ಮಂಜರೀಪ್ರಭಾಪಟಳದೊಳಂ, ಮುಂದೆ ನಡೆವ ರಥಾಂಗರತ್ನದ ಬೆಡಂಗಿನೊಳಂ ಚಕ್ರವರ್ತಿಯ ಪಡೆ ಗಂಗಾನದ್ಯುಭಯತೀರಂಗಳೊಳ್ ಪಚ್ಚು ಪರಿಕಲಿಸಿ ನಡೆದು ಕೆಲವು ದಿನಂಗಳಿಂ ದಕ್ಷಿಣಗುಹಾ ದ್ವಾರಮನೆಯ್ದೆ ತತ್ಪ್ರದೇಶನಿವಾಸಿ ನಾಟ್ಯಮಾಲಾಮರಂ ಮಂಗಳೋಪಕರಣಂಗಳಿಂದಮಿದಿರ್ಗೊಂಡೆ ಱಗಿ ಪೊಡವಟ್ಟು ನಿಜಸಂಚಿತಾಂಚಿತವಸ್ತುಗಳಂ ತಂದು ಮುಂದಿಡೆ ಕೊಂಡು ರಥಾಂಗಾಯುಧಂ ದಕ್ಷಿಣಗುಹಾದ್ವಾರದಿಂ ಪೊಱಮಟ್ಟು:—

ಕಂ|| ತ್ವಂಗತ್ಕರಿಮಕರತೆ ಹಯ |
ತುಂಗತರಂಗತೆ ಪತಾಕಿಕಾತಿಮಿತೆ ವಿಶು ||
ದ್ಧಾಂಗತೆ ನಿಜಮೆನೆ ಗಂಗೆಯ |
ತಂಗೆವೊಲುರ್ವೀಶಸೇನೆ ತಳರ್ದುದು ಗುಹೆಯಿಂ || ೭೧ ||

ವ|| ಅಂತು ಬರೆ ಪ್ರಾಚ್ಯಮ್ಲೇಚ್ಛಖಂಡಮುಂ ದಂಡನಾಯಕನುಂಡಿಗೆಸಾಧ್ಯಂಮಾಡಿ ಪೆಱಗಣಿಂ ಕೂಡೆ ಬಂದು ತನ್ನೊಡವಂದ ಮ್ಲೇಚ್ಛರಾಜರಂ ರಾಜರಾಜಾನುಜೀವಾನುವೃತ್ತದಿಂ ಕೃತಾರ್ಥರ್ಮಾಡಿ ತತ್ಸಮಸ್ತವಸ್ತುವಂ ಭಂಡಾರಪ್ರವೇಶಂಗೆಯ್ವುದುಂ, ಕುರುವಂಶವಿಶೇಷಕಂ ಕುಬೇರಾಚಲಮನೆಯ್ದಿ ತದುಪಾಂತದೊಳ್ ಬೀಡಂ ಬಿಡಿಸಿ:—

ಕಂ|| ಹಯರತ್ನಾರೂಢಂ ಹಯ |
ಮಯಸಾಧನನಾಗಿರೀಂದ್ರಮುಂ ಬಲಗೊಳೆ ಧೂ ||
ಳಿಯ ಪುದುವಿಂದಚಲಕ್ಕುಪ |
ಚಯಮುಂ ಪಡೆವುದು ಚಲತ್ತುರಂಗಖುರಂಗಳ್ || ೭೨ ||

ವ|| ಮತ್ತಂ ತದದ್ರೀಂದ್ರಸಾನುಗಳೊಳ್:—

ಕಂ|| ಪರಿವರ್ತಿತಾವಲೋಕನ |
ನಿರತಂಗಳ್ ಬಲದ ಬಲಿದ ಕಳಕಳಮುಂ ಕೇ ||
ಳ್ದಿರದನುಗೆಯ್ಯುತ್ತುಂ ತುರ |
ಗರತ್ನಹೇಷಾರವಕ್ಕೆ ಮಾಣ್ದುವು ಹರಿಂಗಳ್ || ೭೩ ||
ಚೀರೀಚೀತ್ಕಾರಸಮು |
ಚ್ಚಾರಿತಬಹುಭೂರ್ಜಮುರ್ಮರಧ್ವನಿ ಗಂಗಾ ||
ವಾರಿಕಣಗಣಮಯುಂ ಪವ |
ನಾರಂಭಂ ಪಡೆಗೆ ಪಡೆದುದೊದವಿದ ಮುದಮುಂ || ೭೪ ||

ವ|| ಆತಂ ತೀರ್ಥಭೂತಕೈಲಾಸಪ್ರದಕ್ಷಿಣೀಕರಣಾನಂತರಂ ಕೌರವಾಧೀಶ್ವರಂ ಧೀರನುದಾರಂ ಸೌಜನ್ಯಕಂದಾಂಕುರಂ ಸ್ಕಂಧಾವಾರಮುಂ ಪೊಕ್ಕು ಮಱುದೆವಸಂ ಮುಂ ನಡೆಯೆ ನಿಚ್ಚವಯಣಂಗಳೊಳ್ ಅಱುಕೆಯ ಕೆಱೆಯ ನದೀನದಂಗಳ ಬೀಡುದಾಣಂಗಳೊಳ್:—

ಕಂ|| ಕುಸುಮಿತಮಂದಾರಚ್ಛಾ |
ಯುಸಿಕ್ತಮೃಗನಾಭಿಗಂಧರಮ್ಯಾಶ್ಮಚಯ ||
ಪ್ರಸರಂಗಳೊಳೆಳಸಿದ ಚ |
ಕ್ರಿಸೈನಿಕಂ ನೀಗಿತಧ್ವಗಮನಶ್ರಮಮುಂ || ೭೫ ||

ವ|| ಮತ್ತಂ ವಿವಿಧಪ್ರದೇಶಂಗಳೊಳ್:—

ಕಂ|| ಸರಲಾಸಕ್ತಮದೇಭ |
ಸ್ಫುರಿತಗ್ರೈವಾವಲಗ್ನರುಚಿಗಳ್ ಧರಣೀ ||
ಶ್ವರಗಜನಿಷಾದಿಗಳನನು |
ಕರಿಸಿದುವೋಷಧಿಗಳೆಣ್ಣೆಯಿಲ್ಲದ ಸೊಡರಂ || ೭೬ ||
ಆಳಾನೋದ್ಧರಿತತ್ವ |
ಗ್ಜಾಳಂಗಳ್ ಪೇಟ್ವ ಮಾಱ್ಕಿಯಿಂದಿರ್ದುವು ಭೂ ||
ಪಾಳಗಜಮಾರ್ಗಮುಂ ಪಥಿ |
ಕಾಳಿಗೆ ಪಡೆ ನಡೆದು ಬಿಟ್ಟು ಪೋಪೆಡೆಯೆಡೆಯೊಳ್ || ೭೭ ||

ಲೌಹಿತ್ಯಮನಂಬುಧಿಪರಿ |
ವಾಹಮನವನೀಶನೇಱಿ ತತ್ತಟನೃಪಸಂ ||
ದೋಹಮೆಱಗಿದುದಧೀಶಗ |
ಜಾಹತಕಾಲಾಗುರುದ್ರುಮಂಬೆರಸಾಗಳ್ || ೭೮ ||

**ವ||** ಮತ್ತಂ ಪೋಗೆಪೋಗೆ:—

ಕಂ|| ಘನವರ್ಷತರಂ ವರದು |
ರ್ದಿನಮಾರುದ್ಧಾರ್ಕ[ಮುರು]ನೃಪಾನೀಕರಜೋ ||
ವನನಿಧಿಯನಾಂತುದೆನಲಧಿ |
ಪನ ಬಲಮಂ ಕಾಮರೂಪಭೂವಿಪರಾಂತರ್ || ೭೯ ||

**ವ||** ಅಂತಿದಿರ್ವಂದು ಪ್ರಾಗ್ಜ್ಯೋತಿಷಪುರಾಧೀಶ್ವರನೆಱಗೆ:—

ಕಂ|| ತವದರಿಬಲಮಂ ತವೆ ಸೀ |
ಟ್ಟಿವನುಪಕಾರಿಗಳನಿಭಚಯಂಗಳನಧಿಪಂ ||
ಗವಟೆಯ್ಸಿದರವರತಿ ಭೀ |
ರುವುಳ್ಳೊಡೇಂ ಕೃತಮನಱಿದುಮಱಿಯದುದೆ ವಲಂ || ೮೦ ||

ಉ|| ಅಂತಖಿಳಾವನೀತಳಮನಾಪರಮೇಶ್ವರನೇಕಭೋಗ್ಯಮ |
ಪ್ಪಂತು ನಿಮಿರ್ಚಿ ಹಸ್ತಿನಪುರಾಭಿಮುಖಂ ನಡೆದಂ ಸಮಸ್ತಸಾ |
ಮಂತಕಿರೀಟಕೋಟಿಗಳೊಳಾತಪವಾರಣಶೂನ್ಯದೈನ್ಯವಿ |
ಶ್ರಾಂತಿಪದಂಗಳೊಳ್ ನೆಲಸೆ ಸೈನ್ಯರಜೋರುಣಕಾಂತಿ ರಾಜಿಗಳ್ || ೮೧ ||

**ವ||** ಅಂತು ಬಂದು ನಿಜಕುಲರಾಜಧಾನಿಯ ಸಮೀಪದೊಳ್ ಪುಣ್ಯಬೀಜದ ಬೆಳಸೊಟ್ಟಬೆಟ್ಟಾದಂತೆ ಬಿಟ್ಟಿರ್ದು [ಹಿತಪುರೋಹಿತರತ್ನದತ್ತಲಗ್ನದೊಳ್ ಚಕ್ರವರ್ತಿ ಪುರಪ್ರವೇಶಾಭಿಮುಖನಾಗಿ:—

ಕಂ|| ಎಯ್ದಿ ಪತಿ ಬರೆ ವಿಳಾಸಮ |
ನೆಯ್ದಿದಳಂಕಾರಸಾರಕೃತಶೋಭೆಯನಂ ||
ದೆಯ್ದುವವೊಲಷ್ಟಶೋಭೆಯ |
ನೆಯ್ದಿದುದಾ]ರಾಜಧಾನಿ ಪುಗೆ ಜಿನಚಂದ್ರಂ || ೮೨ ||

**ವ||** ಅಂತು ಪೊಲಿಲಂ ಪೊಕ್ಕು ರಾಜಮಾರ್ಗದೊಳಗಣಿಂ ಬಂದು:—

ಕಂ|| ಬಗೆವುಗೆ ಸಲಿಲಕ್ರೀಡಾ |
ವಗಾಹರುಚಿ ಯೂಥಪತಿಸಮನ್ವಿತಯೂಥಂ ||
ಸೊಗಯಿಪ ತಾವರೆಗೊಳನಂ |
ಪುಗುವಂತಿರೆ ಚಕ್ರವರ್ತಿ ನಿಜಮಂದಿರಮಂ || ೮೩ ||

**ವ||** ಪೊಕ್ಕು ಮಕುಟಬದ್ಧಪರಿವೃತಂ ಶ್ರೀಮಾಡದೊಳ್ ಮುನ್ನಂ ಪಸೆವರಿಸಿದ ಮೃಗಾಧಿರಾಜವಿಷ್ಟರದೊಳ್ ಕುಳ್ಳಿರ್ದು ಕಿಱಿದಾನುಂ ಬೇಗದಿಂ ಯಥೋಚಿತಸಂಭಾವನೆಯಿಂ ರಾಜನ್ಯಕಮಂ ಬೀಡಿಂಗೆ ವಿಸರ್ಜಿಸಿ ಸುಖದಿನಿರ್ದು ಕತಿಪಯದಿನಂಗಳಿಂ:—

ಮ|| ಅಪರಾಂಭೋಧಿಪರೀತಭೂತಳಜಯಕ್ಲೇಶಾಗತಾನೇಕಭೂ |
ಮಿಪರಂ ನಾಟ್ಟಧಿಪಂ ವಿಸರ್ಜಿಸಿ ಜಗಂ ತನ್ನಿಟ್ಟಕಲ್ಪೋದ್ಯದಂ ||
ಘ್ರಿಪಮೆಂತಂತೆ ಫಲಾವನಮ್ರವಿಧಿಯಿಂದೊಪ್ಪಿರ್ಪಿನಂ ಕಾಲಮು |
ಗ್ಲಪಿತಂ ಸಂದುದು ಬೇಗಮೊಂದುದೆವಸಂ ಸಲ್ವಂತು ವಿದ್ಯಾತ್ಮಕಂ || ೮೪ ||

ವ|| ಅಂತು ಭರತಾವನೀಮಂಡಳಷಟ್ಖಂಡಮಂ ಕಡಿತಕ್ಕೆ ತಂದು ಚಕ್ರೇಶ್ವರನೆಣ್ಬತ್ತು ನಾಲ್ಕುಲಕ್ಕೆ ಭದ್ರಗಜಂಗಳಿಂದಂ, [ಅನಿತೆ ರಥಂಗಳಿಂದಂ], ಪದಿನೆಂಟುಕೋಟಿ ಜಾತ್ಯಶ್ವಂಗಳಿಂದಂ, ಎಣ್ಬತ್ತುನಾಲ್ಕುಕೋಟಿ ಪದಾತಿಬಲಂಗಳಿಂದಂ, ಮೂವತ್ತಿರ್ಛಾಸಿರ್ವರ್ ಮಕುಟಬದ್ಧರಿಂದ, ಮನಿತೆವಿಷಯಂಗಳಿಂದ, ಮನಿತೆ ರಾಜಧಾನೀಭೂತಮಪ್ಪ ಪೆಸರ ಪೊಟಲ್ಗಳಿಂದ, ಮನಿತೆರಾಜ ತನೂಜೆಯರಪ್ಪರಸಿಯರಿಂದ, ಮನಿಬರ ಮ್ಲೇಚ್ಛರಾಜಪುತ್ರಿಯರಪ್ಪಂತಃಪುರಸ್ತ್ರೀಯರಿಂದ, ಮನಿಬರ ದೇವಾಂಗನಾಕೃತಾವರೋಧ ಸುಂದರಿಯರಿಂದ, ಮನಿತೆ ಸಂಗೀತಗೃಹಂಗಳಿಂದಂ, ಶ್ರೀನಿಕೇತಸ ಸಂಜಾತ ಕಾಳ ಮಹಾಕಾಳ ನೈಸರ್ಪ ಪಾಂಡುಕ ಪದ್ಮ ಪಿಂಗಳ ಮಾಣವಕ ಶಂಖ ಸರ್ವರತ್ನಂಗಳೆಂ ಬೊಂಭತ್ತು ನಿಧಿಗಳಿಂದಂ, ವಿಜಯಾರ್ಧಮಹೀಧರಜನಿತಂಗಳಪ್ಪ ಗಜಾಶ್ವಸ್ತ್ರೀರತ್ನಂಗಳಿಂದಂ, ಹಸ್ತಿನಪುರಸಂಭೂತಂಗಳಪ್ಪ ಸೇನಾಪತಿ ಗೃಹಪತಿ ಸ್ಥಪತಿ ಪುರೋಹಿತ ರತ್ನಂಗಳಿಂದಂ, ಶಸ್ತ್ರಶಾಲಾ ಜಾತಂಗಳಪ್ಪ ಚಕ್ರಾಸಿದಂಡಚ್ಛತ್ರರತ್ನಂಗಳಿಂದಂ, ಶ್ರೀಗೃಹಾದಿ ಸಮುತ್ಪನ್ನಂಗಳಪ್ಪ ಮಣಿಚರ್ಮ ಕಾಕಿಣೀರತ್ನಂಗಳಿಂದಂ, ಕೃತಸಾಗರಾಭಿಧಾನಪ್ರಾಕಾರಂಗಳಿಂದಂ, ಸರ್ವತೋಭದ್ರನಾಮಗೋಪುರಂ ಗಳಿಂದಂ, ವೈಜಯಂತಿಯೆಂಬಪ್ರಾಸಾದದಿಂದಂ, ದಿಕ್ಸ್ವಸ್ತಿಕಮೆಂಬ ಸಭಾಭವನದಿಂ, ನಂದ್ಯಾವರ್ತ ಪ್ರಕಾಶಮೆಂಬ ಶಿಬಿರನಿವೇಶಂಗಳಿಂದಂ, ವರ್ಧಮಾನಾಭಿಧಾನಪ್ರೇಕ್ಷಾಸದನಂಗಳಿಂದಂ, ಕುಬೇರ ಕಾಂತಮೆಂಬ ಕೋಶಗೃಹದಿಂದಂ, ಪುಷ್ಕಳಾವತಿಯೆಂಬ ಸೆಜ್ಜೆವನೆಯಿಂದಂ, ಜೀಮೂತಮೆಂಬ ಮಜ್ಜನನಿಕೇತನದಿಂದಂ, ಗಿರಿಕೂಟನಾಮಧೇಯದಿಗವಲೋಕನಾಗಾರದಿಂದಂ, ಗೃಹಕೂಟಾಂಕ(ದ) ವರ್ಷಾಲಯದಿಂದಂ, ಮಹಾಘರ್ಮಾಂತಾಭಿಧೇಯಧಾರಾಗೃಹದಿಂದಂ, ವಸುಧಾಧಾರಮೆಂಬ ಕೋಷ್ಠಾಗಾರದಿಂದಂ, ದೇವರಮ್ಯಮೆಂಬ(ಪಟ)ಗುಡಿಯಿಂದಂ, ಅವತಂಸಿಯೆಂಬರತ್ನಮಾಲೆಯಿಂದಂ ಸಿಂಹವಾಹಿನಿಯೆಂಬ ಶಯ್ಯೆಯಿಂದಂ, ಗಂಗಾತರಂಗಂಗಳೆಂಬ ಪೆಸರ್ವಡೆದ ಯಕ್ಷಕರವಿಧೃತಂಗಳಪ್ಪ ದ್ವಾತ್ರಿಂಶಚ್ಚಮರರುಹಂಗಳಿಂದ, ಮನುತ್ತರಮೆಂಬ ಸಿಂಹಾಸನದಿಂದಂ, ವಜ್ರಕಾಂಡಮೆಂಬ ಚಾಪ ದಿಂದಂ, ಸಿಂಹಾಟಕಮೆಂಬ ಕೊಂತದಿಂದಂ, ವಜ್ರತುಂಡಮೆಂಬ ಶಕ್ತಿಯಿಂದಂ, ಮನೋವೇಗನೆಂಬ ಕಣೆಯಿಂದಂ, ಲೋಹವಾಹಿನಿಯೆಂಬ ಸುರಿಗೆಯಿಂದಂ, ಭೂತಮುಖಮೆಂಬ ಮಣಿಖೇಟಕದಿಂದಂ, (ಸೌ)ನಂದಕಮೆಂಬ ಬಾಳಿಂದಂ, ಚೂಡಾಮಣಿಯೆಂಬ ಮಣಿಯಿಂದಂ, ಸುದರ್ಶನಮೆಂಬ ಚಕ್ರ ದಿಂದಂ, ಅಯೋಧ್ಯನೆಂಬ ಸೇನಾನಿಯಿಂದಂ, ಚಿಂತಾಜನನಿಯೆಂಬ ಕಾಕಿಣೀರತ್ನದಿಂದಂ, ಕಾಮ ವೃಷ್ಟಿಯೆಂಬ ಭಂಡಾರಿಗನಿಂದಂ, ಬುದ್ಧಿಸಾಗರನೆಂಬ ಪುರೋಹಿತನಿಂದಂ, ವಿಜಯಪರ್ವತಮೆಂಬ ಪಟ್ಟವರ್ಧನದಿಂದಂ, ಪವನಂಜಯನೆಂಬ ತುರಂಗರತ್ನದಿಂದಂ, ಭದ್ರಮುಖನೆಂಬ ತಕ್ಷನಿಂದಂ, ಗುಣರತ್ನಮೆಂಬಸ್ತ್ರೀರತ್ನದಿಂದಂ, ವಿಜಯಘೋಷಂಗಳೆಂಬ ಪನ್ನೆರಡುಪಟಹಂಗಳಿಂದಂ, ಆನಂದ ಮೆಂಬ ಪನ್ನೆರಡು ಭೇರಿಗಳಿಂದಂ, ಅಂಬರವಿಲಂಬಿಯೆಂಬ ನಾಲ್ವತ್ತೆಂಟುಕೋಟಿ ಪತಾಕೆಗಳಿಂದಂ, ಗಂಭೀರಾವರ್ತಂಗಳೆಂಬಿಪ್ಪತ್ತುನಾಲ್ಕುಶಂಖಂಗಳಿಂದಂ, ವೀರಾಂಗದಂಗಳೆಂಬ ವಲಯಂಗಳಿಂದಂ, ಅಮೃತಭಕ್ಷ್ಯಂಗಳೆಂಬ ರುಚಿಭಕ್ಷ್ಯಂಗಳಿಂದಂ, (ಮಹಾ)ಕಲ್ಯಾಣಮೆಂಬುಣಿಸಿಂದಂ, ಅಮೃತಮೆಂಬ

ಪಾನದಿಂದಂ, ಅಮೃತಕಲ್ಪಮೆಂಬ ಲೇಹ್ಯದಿಂದಂ, ತೊಂಭತ್ತಾಱುಕೋಟಿಗ್ರಾಮಂಗಳಿಂದಂ, ನಾಲ್ವತ್ತೆಣ್ಚಾಸಿರ ಪಟ್ಟಣಂಗಳಿಂದಂ, ತೊಂಭತ್ತಾಱುಸಾಸಿರದ್ರೋಣಾಮುಖಂಗಳಿಂದಂ, ಪದಿನಾಱುಸಾಸಿರ ಖೇಟಕಂಗಳಿಂದಂ, ಪದಿನಾಲ್ಸಾಸಿರಸಂವಾಹನಂಗಳಿಂದಂ, ಅಯ್ವತ್ತಾಱಂತರದ್ವೀಪಂಗಳಿಂದಂ, ನೂರ್ಛಾಸಿರಕೋಟಿಹಳಂಗಳಿಂದ, ವೊಂದುಕೋಟಿ (ಪ್ರಮಾಣ) ಸ್ಥಳಿಗಳಿಂದಂ, ಮೂಱುಕೋಟಿ ಗೋಮಂಡಳಂಗಳಿಂದ, ಮಿಪ್ಪತ್ತೆಣ್ಚಾಸಿರದುರ್ಗಭೂಮಿಗಳಿಂದಂ, ನೂಱುಕುಕ್ಷಿನಿವಾಸಂಗಳಿಂದಂ, ಪದಿನೆಣ್ಚಾಸಿರ್ವರ್ ಮ್ಲೇಚ್ಛರಾಜರಿಂದಂ:—

ಮ|| ನೆಱಿದೈಶ್ವರ್ಯದ ಮೇಗೆ ವಜ್ರ ಬೆಸದಾಳಂತಾಗಿಯುಂ ಕಲ್ಪಮಂ |
ನೆಱಿಯಭ್ಯಂತರಸಿದ್ಧಿಯಂ ಪಡೆಯನುಳ್ಳೊಂದರ್ಥಮಂ ನಿಚ್ಚಲುಂ ||
ತೆಱುವೊಂ ಚಕ್ರಿಯ ನೋಂತ ನೋಂಪಿಯ ಫಲಕ್ಕಾಂ ಸಂಖೆ ಲೆಕ್ಕಕ್ಕೆ ಕಂ |
ಡಱಿಯೆಂ ನೋಂಪಿಯ ಪೆಂಪನಾವೆಡೆಯೊಳಂ ಸ್ವರ್ಭೂರ್ಭುವರ್ಭಾಗ್ಯದೊಳ್ || ೮೫ ||

ವ|| ಅಂತುರ್ವರಾಸ್ಯತಿಲಕನಪ್ಪ ಸಕಳಚಕ್ರವರ್ತಿಸಕಳಸಾಮ್ರಾಜ್ಯಶ್ರೀಯಂ ಪಿರಿದುಮಾಶ್ಚರ್ಯದಿಂದಂ ಪಿರಿಯರಪ್ಪವರ್ ಪೊಗಟೞಿ:—

ಕಂ|| ಕೆಯ್ಸಾರ್ದಂತಾರ್ತಿತ್ತ್ವವ |
ಗಯ್ಸಿದ ಸುಖಸಂಕಥಾವಿನೋದದಿನಿಪ್ಪ ||
ತ್ತಯ್ಸಾಸಿರವರ್ಷಂ ಸಿರಿ |
ಮೆಯ್ಸೊಗಮಂ ಚಕ್ರವರ್ತಿಯೊಳ್ ಭೋಗಿಸಿದಳ್ || ೮೬ ||

ವ|| ಅಂತಿಪ್ಪತ್ತಯ್ಸಾಸಿರವರ್ಷಂ ಚಕ್ರವರ್ತಿಯ ಕಾಲಮಂ [ತೊಂದುದೆವಸಂ] ಸಲ್ವಂತು ಸುಖದಿಂದನುಪಲಕ್ಷಿತರೂಪದಿಂ ಸಲೆ ಬಱಿಯಂ ಮತ್ತೊಂದದೆವಸಂ ಯಾಮಿನೀತ್ರಿತಯಯಾಮವಿರಾಮದೊಳ್ ನಿಸರ್ಗನಿರ್ಗತನಿದ್ರಾನುಗಮನನವರತಾಳಂಬಿತ ಪ್ರಶಸ್ತಪರಿಣಾಮನಪ್ಪುದಱಿಂ ಶಾಂತೀಶ್ವರನಾತ್ಮಗತಂ:—

ಕಂ|| ಕೈಕೊಳ್ವೊಡಾತ್ಮಸುಖಮನೆ |
ಕೈಕೊಳ್ವುದು ದೇಹಿ ನೆಗಟ್ಟಿ ಪರಹಿತಮುಮನೀ ||
ಹೈಕನೆರಡರೊಳಮೊಂದಂ |
ಕೈಕೊಳ್ವೊಡೆ ಹಿತಮುಮಾತ್ಮಹಿತಮೊಂದೆ ವಲಂ || ೮೭ ||

ವ|| ಅದಲ್ಲದೆಯುಂ-—

ಕಂ|| ಧರೆ ಶಾಶ್ವತಮಲ್ತಷ್ಟಮ |
ಧರೆ ಶಾಶ್ವತಮುವನಿಚಕ್ರವಿಕ್ರಮಚಕ್ರಂ ||
ದೊರೆಯಲ್ತು ಧರ್ಮಚಕ್ರಂ |
ದೊರೆಯಕ್ಕುಂ ಭವ್ಯವಿನಮದಪ್ರತಿಬದ್ಧಂ || ೮೮ ||
ಈ ಪದಿನಾಲ್ಕುಂ ರತ್ನಕ |
ಲಾಪಂ ರತ್ನತ್ರಯಕ್ಕೆ ಒರ್ಕುಮೆ ಭೂಪಾ ||
ಟೋಪಂ ಬರ್ಕುಮೆ ವೃಜಿನವಿ |
ಲೋಪಿಜಿನೇಂದ್ರಪ್ರಶಾಂತಿಯೊರೆಗಂ ದೊರೆಗಂ || ೮೯ ||

ಸ್ತ್ರೀರತ್ನದೆಡೆಗೆ ಮುಕ್ತಿ |
ಸ್ತ್ರೀರತ್ನಂ ಸಭೆಗೆ ದೇವಮಾನವಸಭೆ ಗಂ ||
ಭೀರೋಕ್ತಿಗೆ ದಿವ್ಯಧ್ವನಿ |
ಸಾರಮುವಂ ಬಿಸುಟನಪ್ಪೊಡುಱುವಾಱಲ್ತೇ || ೯೦ ||

**ವ||** ಅದಱಿಂಪಮುಲ್ಪಮುಮನಿತ್ಯಮುಮಪ್ಪ ಜವಂಜವಾಂತರ್ವರ್ತಿಗಳೆ ಪಲರುಮಾಸನ್ನ ಭವ್ಯತಾವ್ಯಪೇತರವ್ಯವಸಾಯಪರರಾಗಿ:—

ಕಂ|| ಶಿವಸುಖಮನಱಿಯದೀ ಮಾ |
ನವಸುಖದ ನಿಮಿತ್ತದಿಂ ತಪಂಗೆಯ್ವವರೂ ||
ಪ್ಪುವ ಮಾಣಿಕಮಂ ತೌಡಿಂ |
ಗವಯುವದಿಂ ಮಾಱುಗುಡುವ ಮರುಳಂ ಪೋಲ್ಗುಂ || ೯೧ ||

**ವ||** ಇಂತೆಂದು ವಿಸ್ತರರೂಪದೊಳ್ ಸಂಸಾರತದ್ಧೇತುಬಂಧತನ್ನಿಮಿತ್ತಮೋಕ್ಷತತ್ಕಾರಣ ಪ್ರಪಂಚಮಂ ದಿವ್ಯಚಿತ್ತದೊಳ್ ಪರಮಾರ್ಥಂಗೆಯ್ದು ಪರಿನಿಷ್ಕ್ರಮಣಕಲ್ಯಾಣಾಭಿಮುಖನಾಗಿರ್ದ ಚಕ್ರವರ್ತಿಯ ಬಗೆಯ ನಱಿದು:—

ಮ|| ಮಕುಟಾಗ್ರಸ್ಥಿತಜೈನಬಿಂಬ ವಿಹಟಚ್ಚೂಡಾಮಣಿವ್ರಾತರಿಂ |
ದ್ರಕದಂಬಪ್ರತಿಬೋಧಕರ್ ಜಿನಸಮಾಳೋಚಿತ್ಯಕರ್ತೃತ್ವಭಾ ||
ವಕರಾಗೇವನ ಚಿತ್ತವಾರ್ಧಿಗಮೃತಂ ಬರ್ಪಂದದಿಂ ಸಂತತಾಂ |
ತಿಕಸಂವಾಸಿಗಳಂತೆ ತಮ್ಮ ನೆಲೆಯಿಂ ಲೋಕಾಂತಿಗರ್ ಬರ್ಪುದುಂ || ೯೨ ||

**ವ||** ದ್ವಾರಪಾಲಕರರಸಂಗವರ ಬರವನಱಿಪಿ ಬಂದು ಕಾಣಿಸೆ ಲೋಕಾಂತಿಕದೇವರವನೀಶ್ವರಪಾದಪ್ರಣತರಾಗಿ:—

ಕಂ|| ಪಂಚಮರಥಾಂಗಪಾಣಿಗೆ |
ಪಂಚಮಕಲ್ಪಪ್ರಧಾನರಮೃತಾಯುತಮಾ ||
ಡಿಂಚರದಿಂ ಬಿನ್ನವಿಸಿದ |
ರಂಚಿತದಶನಾಂಶು ಸೆಣಸೆ ಮಣಿದೀಪಿಕೆಯೊಳ್ || ೯೩ ||

ಮ|| ಇಭವಿದ್ವೇಷಿಗೆ ವಿಕ್ರಮಂ ಪರಿದಳನ್ಮಂದಾರಪುಷ್ಪಕ್ಕೆ ಸೌ |
ರಭಮರ್ಕಂಗೆ ಬಿಸಿಲ್ ಹಿಮಾಂಶುಗೆ ಹಿಮಂ ವೈಶ್ವಾನರಂಗುಷ್ಣ[ವು] ||
ತ್ರಭೆ ನೀರ್ಗಾರ್ದ್ರತೆ ಮುಳ್ಗೆ ಚೂರ್ಮನೆ ಭವಚ್ಚಿತ್ತಕ್ಕೆ ತತ್ವಜ್ಞತಾ |
ವಿಭವಂ ಸಾಜಮದಂ ನಿಯೋಜಿಸುವೆನಾನೆಂಬಂ ಮರುಳ್ಗೊಂಡನೇ || ೯೪ ||

**ವ||** ಅದಲ್ಲದೆಯುಂ ನಿನಗೊರ್ಮೆ ಶಾಂತತೆಯುಂ ಮತ್ತೊರ್ಮೆ ಸಮಾವಿಳತೆಯುಮೆಂಬ ಮಾತುಗಳ್ ಛಾಯಾತಪವಿರೋಧವಿದ್ಧಂಗಳೆಂತೆನೆ:—

ಕಂ|| ಮಳರಹಿತನೊರ್ಮೆ ವಿಳಸ |
ನ್ಮಳನೊರ್ಮೆ ಪೆಱಂ ಸದಾಚ್ಛನೈ ನೀಂ ಬೇಗಂ ||
ತಿಳಿವುದುಮಾಕದಡುವುದುಂ |
ಕುಳಪಂಪೆಯೊಳ್ ನೆಗೞ್ಗುಮುದಧಿಯೊಳ್ ನೆಗೞ್ದಪುದೇ || ೯೫ ||

ನೀರಜದ ರಜದ ಪೊರೆಪಾ |
ನೀರೇಜದ ನೀರ ಪೊರೆಪು ಪೊರೆಪೊರೆನೀಂ[ಸಂ] ||
ಸಾರಕ್ಕೆ ನಿನಗ ವಿಾಸಂ |
ಸಾರಂ ಪೊರೆಪೊರೆ ಪರಾತ್ಮಹಿತನುತಚರಿತಾ || ೯೬ ||

ಸ್ಥಿತಭೌಮೋತ್ತರದೇಯ |
ಸ್ಥಿತಿ ಬೆಸದೊಳ್ ಗರ್ಭಸಂಭವಕ್ಕಭಿಮತದು ||
ನ್ನತದಿವ್ಯಸಂಭವರ್ಗನು |
ಚಿತಮೆಂಬಂತೀಶ ನಿಮಗೆ ಪೆಱರುಪದೇಶಂ || ೯೭ ||

ವ|| ಅಂತುಪರಮೇಶ್ವರನ ಬಗೆಯಂ ನುಡಿಯೊಳಭಿನಯಿಸುವಂತೆ ನುಡಿದು ಸಾರಸ್ವತಾದಿಗಳ ಧೀಶ್ವರಂಗೆಱಗಿ:—

ಕಂ|| ಅಯ್ದನೆಯ ಗತಿಯುನಚರನ |
ನೆಯ್ದಿಪ ಬಗೆ ಕಡೆಯನೆಯ್ದಿ ಲೋಕಾಂತಿಕರಂ ||
ತಯ್ದನೆಯ ನಾಕಲೋಕಮ |
ನೆಯ್ದಿದರಯ್ದನೆಯ ಚಕ್ರವರ್ತಿಯುಮಾಗಲ್ || ೯೮ ||

ವ|| ತಪಶ್ಚರಣ ನಿಶ್ಚಿತಮನನಾಗಿ:—

ಕಂ|| ಪರಿನಿಷ್ಕ್ರಮಣಶ್ವಸನಂ |
ತರೆ ನಾಲ್ಕುಂತೆಱದ ದಿವಿಜಜೀಮೂತಕುಳಂ ||
ಬರೆ ಕೇಳ್ದಿಲ್ಲದ ಚಿತ್ರದ |
ವಿರಚನೆಯಂ ಪೋಲ್ತುದಮಳಜಳಧರಮಾರ್ಗಂ || ೯೯ ||

ವ|| ಅಂತು ಪ್ರಥಮನಾಕನಾಯಕಪ್ರಗ್ರಹಾಮರರ್ ಬಂದು ಷೋಡಶತೀರ್ಥಕರಪಾದಪಯೋಜಂಗಳ್ಗವನತಮಣಿಮಕುಟರಾಗಿ ಪರಿಚಾರಕಕೃತ್ಯದೊಳ್ ನೆಗೞೆ ಮಂಗಳಪ್ರಸಾಧನಸನಾಥನುಂ, ವಿನೀತನು, ಮವಶ್ಯಸರಸನು,ಮಪ್ಪ ನಾರಾಯಣನೆಂಬ ಪಿರಿಯಮಗಂಗೆ ರಾಜ್ಯಭಾರಮಂ ದಯೆಗೆಯ್ದು ಬಂದು ಸಿವಿಗೆಯ ನೇಱೆ:—

ಪೃಥ್ವೀವೃತ್ತಂ|| ಅದಂ ಮೊದಲೊಳೆತ್ತಿ ಪೊತ್ತು ನಡೆದರ್ ಮಹೀನಾಥರ |
ತ್ತುದಾತ್ತಖಚರೇಂದ್ರರಭ್ರಪಥದೊಳ್[ವಲಂ]ಪೊತ್ತರ ||
ತ್ತುದಗ್ರರಮರೇಂದ್ರರುಯ್ದರಮರಾಂಗನಾನರ್ತನಾ |
ಸ್ಪದಂ ಗಗನರಂಗಮೊಪ್ಪಿನೆಗಮೊಪ್ಪೆ ಪುಣ್ಯೋತ್ಸವಂ || ೧೦೦ ||

ವ|| ಅಂತು ತ್ರೈಲೋಕ್ಯಕ್ಷೋಭಕಾರಿಯಾದೊಸಗೆಯೊಳ್:—

ಉ|| ವೈಣರಸೋತ್ತರಾರವಮಯಂ ಭುವನಂ ಸುರದುಂದುಭಿಧ್ವನಿ |
ಶ್ರೇಣಿಮಯಂ ಪುರಂ ಕುಸುಮವೃಷ್ಟಿಮಯಂ ನಭಮಿಂದ್ರಸರ್ವಗೀ ||
ರ್ವಾಣಮಯಂ ಮಹೀವಳಯಮಾಗೆ ಮಹಾಮಹಮಾತ್ಮತೀಯಕ |
ಲ್ಯಾಣದೊಳಾಯ್ತು ನಿಷ್ಕ್ರಮಣದಿಂ ಭುವನತ್ರಯಚಕ್ರವರ್ತಿಯಾ || ೧೦೧ ||

ವ|| ಅಂತು ಪರಾರ್ಧ್ಯ ಶಿಬಿಕಾರೂಢಂ ಶಾಂತೀಶ್ವರಂ ಗಗನಗಮನದಿಂ ಸಹಸ್ರಾಮ್ರವನಂಬರಂ ಬರೆ ದೇವದೇವನ ಮನಮನಱಿದು ದೇವರಲ್ಲಿ ಸಿವಿಗೆಯನಿೞಿಸಲೆಂದಭಿಮುಖರಪ್ಪುದುಂ:—

ಕಂ|| ಆಕಾಶಗಂಗೆ ಧರೆಗಿೞ |
ವಾಕಾರದಿನೊಯ್ಯನೊಯ್ಯನವತರಿಸೆ ಸುರಾ ||
ನೀಕಂ ಸಹಕಾರವನ |
ಶ್ರೀ ಕಣ್ಗೊಪ್ಪಿದುದು ಜಿನವಸಂತಾಗಮದೊಳ್ || ೧೦೨ ||

ವ|| ಅಲ್ಲಿ ಸೌಧರ್ಮೇಂದ್ರಂ ನಂದಿದ್ರುಮದೊಳ್ ಮಣಿಮಯಶಿಬಿಕಾಯಾನಮನಿೞಿಪುವುದುಂ ತ್ರೈಲೋಕ್ಯಶೇಖರಂ ಸಿವಿಗೆಯಿಂದಮಿೞಿದಪಸಾರಿತವಸ್ತ್ರಾಭರಣನಾಗಿ:—

ಕಂ|| ಮಣಿಭೂಷಣದಿವ್ಯಾಂಬರ |
ಗಣಂಗಳಂ ತಣಿಯೆ ಕೊಟ್ಟು ದಿವಿಜಗಣಕ್ಕು ||
ಲ್ಬಣತೆಯನುೞಿದೊಪ್ಪಿದ ಭೂ |
ಷಣಾಂಗವೃಕ್ಷಮನೆ ಭುವನಪತಿ ತಾಂ ಗೆಲ್ದಂ || ೧೦೩ ||

ವ|| ಅಂತುತ್ತರಾಭಿಮುಖನಾಗಿ ಪಲ್ಯಂಕಾಸನದೊಳ್ ಕುಳ್ಳಿರ್ದು:—

ಕಂ|| ಶುದ್ಧಮನೋವೃತ್ತಿ "ನಮ |
ಸ್ಸಿದ್ಧೇಭ್ಯ" ಎನುತ್ತೆ ಪಂಚಮುಷ್ಟಿಯಿನಘಮೂ ||
ಲೋದ್ಧರಣಂಗೆಯ್ವವೊಲಪ |
ರುದ್ಧಾಸ್ರವನಾತ್ಮಕೇಶತತಿಯಂ ಪಱಿದಂ || ೧೦೪ ||

ವ|| ಅಂತು ಪಱಿದು ಬಿಸುಟ ಹರಿನೀಳಮದಾಳಿಕಳಭಕುಳಮಸೃಣಕುಟಿಳಸಹಸ್ರಕುಂತಳಂಗಳಂ ವಜ್ರದ ಪಡಲಿಗೆಗಳೊಳಾಂತುಕೊಂಡು:—

ಕಂ|| ಅಮರೇಶ್ವರರುಯ್ದು ತದು |
ತ್ತಮಕೇಶಮನಿಕ್ಕೆ ನೀಲಮಣಿಶಬಳಿತ ವಿ ||
ಭ್ರಮಮಂ ಪಡೆದುವು ಪಂಚಮ |
ಸಮುದ್ರವಿದ್ರುಮಲತಾಪ್ರತಾನಾವಳಿಗಳ್ || ೧೦೫ ||

ವ|| ಅಂತುಮಲ್ಲದೆ:—

ಕಂ|| ಕಂಬುಲತಾಕಾಂತೆಗೆ ನೀ |
ಲಾಂಬರಕಂಚುಕಮಿದೆಂದು ಮಿಂದಿಂದುಲಸ ||
ದ್ಬಿಂಬಕ್ಕೆ ಲಕ್ಷ್ಮಲಕ್ಷ್ಮಿ ದ |
ಲೆಂಬುದ ನೆನಿಸಿದುವಧೀಶಕೇಶಾವಳಿಗಳ್ || ೧೦೬ ||

ವ|| ಅಂತು ಜ್ಯೇಷ್ಠಮಾಸದ ಸಿತಚತುರ್ದಶಿಯೊಳ್ ಭರಣೀನಕ್ಷತ್ರದೊಳಪರಾಹ್ಣದೊಳ್ ಪರಮದೀಕ್ಷೆಯಂ ಕೆಯ್ಕೊಳ್ವುದುಮಿಂದ್ರಪ್ರಧಾನರಮರನಿಕುರುಂಬಂ ಪರಿನಿಷ್ಕ್ರಮಣಕಲ್ಯಾಣಪೂಜೋತ್ಸವಾನಂತರಂ ಪ್ರದಕ್ಷಿಣಪೂರ್ವಕಂ ಜಿನನಾಥಂಗೆಱಗಿ ನಿಜನಿವಾಸಂಗಳ್ಗೆ ಪರೆದು ಪೋಪುದು

ಮಾಮುನೀಂದ್ರೋತ್ತಮಂ ತ್ರಿರಾತ್ರಂ ದೀಕ್ಷೋಪವಾಸಂಗೆಯ್ದು ಲಬ್ಧಸಪ್ತರ್ಧಿಭೂಷಣಂ, ಮನಃಪರ್ಯಯಜ್ಞಾನಪ್ರತಿಬಿಂಬದರ್ಪಣನಾಗಿ ಚರ್ಯಾಮಾರ್ಗಮನಱಪಲೆಂದು ಅನಗಾರವೇಳೆಯೊಳ್ ಮಾದಿರಾಭಿಧಾನಪುರಕ್ಕೆ ಚರಿಗೆಗೆವರೆ ತತ್ಪುರಾಧೀಶಂ **ಸುಮಿತ್ರಂ** ಶ್ರದ್ಧಾದಿಸಪ್ತಗುಣಸಮನ್ವಿತಂ, ನವವಿಧಪುಣ್ಯಪಣ್ಯಂ ನಿಲಿಸಿ ಪವಿತ್ರಾಹಾರದಾನಮನೀವುದುಮಾತನ ಮನೆಯೊಳ್ ಪಂಚಾಶ್ಚರ್ಯಂಗಳ್ ನೆಗಟ್ದು ತದನಂತರಂ **ಶಾಂತಿಭಟ್ಟಾರಕರ್** ಸಹಸ್ರಾಮ್ರವಣಕ್ಕೆ ಬಂದುತ್ತರೋತ್ತರಸ್ಥಿತಿಯಿಂ ಯೋಗನಿಯೋಗದೊಳಿರೆ:—

ಚಂ|| ಅಪಗತರಾಜಕೀರನಿನದಂ ನಿಭೃತಾನ್ಯಭೃತಪ್ರಣಾದಮು |
ಪ್ರಪದಿತಪತ್ರಪತ್ರಿಭವನಂ ಗತಷಟ್ಪದಕಾಕಳೀಕಮು ||
ತ್ಯಪಗತಪಾಕಸತ್ವಮುಪಸಾರಿತಮಾರುತಮಾಗಿ ತಿಟ್ಟವಿ |
ಟ್ಟುಪವನದಂತುಟಾದುದು ಬನಂ ಜಿನಚಂದ್ರತಪಃಪ್ರಭಾವದಿಂ || ೧೦೭ ||

ಕಂ|| ಕತ್ತುರಿಮೃಗಮುದಮಂ ತೊಡ |
ದತ್ತಳಿಸೆ ಸುರೇಂದ್ರದಾರುರಸದಿಂ ವಿಶದೋ ||
ದಾತ್ತಶಿಲಾಪಟ್ಟಕಮಂ |
ಬಿತ್ತರಿಸಿದರಂದು ಯತಿಗೆ ವನದೇವತೆಗಳ್ || ೧೦೮ ||

ವ|| ಅಂತುಶಿಲಾಪಟ್ಟದೊಳ್ ನಿರಂತರಂ ಸೂರ್ಯರಾತ್ರಿಪ್ರತಿಮಾಪರಂಪರೆಯಂ ಪರ್ಯಾಯದಿಂದಮನುಷ್ಠಿಸುತ್ತುಂ:—

ಚಂ|| ಮದನಹರಂ ತಪೋಗ್ರಹಣದಿಂದೆ ತಗುಳ್ದಿಡೆ ಮಾಡದಂತೆ ನಿಂ |
ದುದಱನ(ನ)ಲ್ಪಕಾಲಕೃತಯೋಗಮಿದಿರ್ಚೆ ನಿಮಿರ್ಚೆ ಮುಯ್ಪಿನೊಳ್ ||
ಪುದಿದ ಕುರುಳ್ ಸಮೀರಣಸಮೀರಿತಮುಳ್ಕಿಯ ಪೂತ ಕಿಂಕಿರಾ |
ತದೊಳೆಱಗುತ್ತುಮಿರ್ಪಳಿಯ ಗಾವಳಿಯಂದದಿನೊಪ್ಪಿ ತೋಱುಗುಂ || ೧೦೯ ||

ವ|| ಮತ್ತಮೋರೂರ್ಮೆ ತನ್ಮುನಿರಾಜಂಗೆ:—

ಕಂ|| ಮುಗಮುಗಿಪ ಪುಷ್ಪವಾಟಾ |
ಳಿಗಳಳಿಗಳ್ಪೆರಸು ಪೀಠದೊಳ್ ನಿಲೆ ಪೊಗಸುಂ ||
ಪಗಲುಂ ಬಯ್ಗೆಯುಮುರಲ |
ಲ್ಲುಗೆ ಸೊಗಯಿಪನಲ್ಪಕಲ್ಪತರುಗೆಣೆಯಾದಂ || ೧೧೦ ||

ವ|| ಅದಲ್ಲತೆಯುಂ ನಿತ್ಯನಿಯಮದೊಳ್:—

ಕಂ|| ಉದಯಾಸ್ತಮಯಗತಾರ್ಕಂ |
ತದೀಯಮುನಿರಾಜಪೂಜಿತಚ್ಛಾಯೆಯನಾ ||
ತ್ರಿದಶಪತಿರಕ್ಷೆಯಂ ಮೆ |
ಟ್ಟದು ಮುಟ್ಟದು ವನ್ಯಮೃಗವನೇಚರನಿಕರಂ || ೧೧೧ ||

ವ|| ಇಂತೀಕ್ರಮದಿಂ ಷೋಡಶವರ್ಷಾವಧಿವರಂ ತಪಸ್ತಾ[ಪ]ಮಂ ತಾಳ್ದಿಯುಂ ತಪನತಾಪದೊಳ್ ಪದ್ಮಂ ಕೊರಗದಂತೆ ಪರಮೌದಾರಿಕಶರೀರಂ ಕೊರಗದಿರೆ ಮತ್ತಮೊಂದುದಿವಸಂ ತದ್ವನ

ಮಧ್ಯಸ್ಥಿತಂ ಯೋಗದೊಳ್ ಅಧ್ರುವಂ ಮೊದಲಾಗೆ ಪನ್ನೆರಡನುಪೇಕ್ಷೆಗಳು, ಮಪಾಜ್ಞಾ ವಿಚಯಂ ಮೊದಲಾಗೆ ನಾಲ್ಕುಂ ಧರ್ಮಧ್ಯಾನಂಗಳುಮಂ ಧ್ಯಾನಿಸಿ; ಶುಕ್ಲಲೇಶ್ಯಾತ್ಮಕಂ, ಅಪ್ರಮತ್ತಗುಣ ಸ್ಥಾನಸ್ಥಿತಂ, ಅಧಃಪ್ರವೃತ್ತ(ಪೂರ್ವಾನಿವೃತ್ತಿ)ಕರಣಪರಿಣಾಮಸಮಯಚೇತನಂ, ಅನಂತಾನುಬಂಧಿ ಕ್ರೋಧಮಾನಮಾಯಾಲೋಭಾದಿಕಷಾಯಮಂ ಕಿಡಿಸಿ; ಮತ್ತಮಂತರ್ಮುಹೂರ್ತಮನಿರ್ದು, ಮಿಥ್ಯಾತ್ವಸಮ್ಯಕ್ಪ್ರಕೃತಿ ಸಮ್ಯಙ್ಮಿಥ್ಯಾತ್ವಮೆಂದು ತ್ರಿವಿಧಮಪ್ಪ ದರ್ಶನಮೋಹನೀಯಮಂ ನಿರ್ಮೂ ಲಿಸಿ; ಕ್ಷಾಯಿಕಸಮ್ಯಗ್ದರ್ಶನಮನವಗಯ್ಸಿ; [ಮತ್ತ]ಮಂತರ್ಮುಹೂರ್ತಕಾಲಂ ಪ್ರಮತ್ತಾಪ್ರಮತ್ತ ಪರಿವೃತ್ತಿಸಹಸ್ರಕ್ಷಪಕಶ್ರೇಣಿಪ್ರಾಯೋಗ್ಯಾಧಃಪ್ರವೃತ್ತಕರಣಕ್ಷಪಕನಾಗಿ; ಮತ್ತಮಂತರ್ಮುಹೂ ರ್ತದಿಂ ನಿದ್ರಾನಿದ್ರಾಪ್ರಚಳಾಪ್ರಚಳಾಸ್ತ್ಯಾನಗೃದ್ಧಿನರಕಗತಿತತ್ಪ್ರಾಯೋಗ್ಯಾನುಪೂರ್ವಿತಿರ್ಯಗ್ಗತಿ ತತ್ಪ್ರಾಯೋಗ್ಯಾನುಪೂರ್ವ್ಯೇಕೇಂದ್ರಿಯವಿಕಳೇಂದ್ರಿಯಜಾತ್ಯಾತಪೋದ್ಯೋತ ಸ್ಥಾವರಸಾಧಾರಣ ಸೂಕ್ಷ್ಮಂ[ಗಳೆಂಬ]ಷೋಡಶಕರ್ಮಪ್ರಕೃತಿಗೆ ವಿಳಯಂಮಾಡಿ; ಮತ್ತಮಂತರ್ಮುಹೂರ್ತದಿನಪ್ರತ್ಯಾ ಖ್ಯಾನಕ್ರೋಧಮಾನಮಾಯಾಲೋಭಂಗಳಂ ನಿರಾಕರಿಸಿ; ಬಳಿಯಂ ಸಂಜ್ವಳನಕಷಾಯಚತುಷ್ಕ ನೋಕಷಾಯನವಕನಾಮತ್ರಯೋದಶಪ್ರಕೃತಿಗಳನರೆದು; ಮತ್ತಂ ಸ್ತ್ರೀಪುರುಷನಪುಂಸಕಭೇದ ತ್ರಿಕಮಂ ಚಿರಂತನಷಟ್ಕರ್ಮಂಬೆರಸು ಹಾಸ್ಯರತಿಶೋಕಭಯಜುಗುಪ್ಸಾಭಿಧಾನಷಟ್ಕಷಾಯ ಮುಮಂ ಕಿಡಿಸಿ; ವೇದನಬಂಧಮಂ ಸಮಯೋನದ್ವ್ಯಾವಳಿಕಾಸಮಯಂಗಳಿಂ ವಿದಾರಿಸಿ; ಗತವೇದ ನಾಗಿ, ಮತ್ತಂ ಪ್ರತಿಸಮಯೋದ್ಯೋತಸಂಜ್ವಳನಚತುಷ್ಟಯ[ಘಾತಿತಾ]ಶೇಷಾನುಭಾಗಸ್ವಕರ್ಮ ಕರಣಪೂರ್ವಸ್ಪರ್ಧಕಹತಿಯಿನಂತರ್ಮುಹೂರ್ತಮಿರ್ದು; ಪೂರ್ವಪೂರ್ವಸ್ಪರ್ಧಕಾನುಭಾಗಂ ಅಪ ಚಿತಕೃಷ್ಟಿವಿಧಿಯಿನನಂತಗುಣಹಾನಿಸ್ವರೂಪದಿಂ ಹೀನಂಮಾಡಿ ದ್ವಾದಶಸಂಗ್ರಹಕೃಷ್ಟಿಗತಂ ಮಾಡುತ್ತುಂ, ಮತ್ತಂ ಕೃಷ್ಟಿರೂಪಗತಚತುಷ್ಕಷಾಯಸಮಸ್ತಾನುಭಾಗವಿಧಿಯಿಂ ಅನಂತರಂ ಕ್ರೋಧಮಾನಮಾಯಾಸಂಜ್ವಳನಕೃಷ್ಟಿತ್ರಿಕಮಂ ಸುಟ್ಟು; ಕಷಾಯತ್ರಿಕಮಂ ಕಿಡಿಸಿದಿಂ ಬಳಿಯಂ ಲೋಭಸಂಜ್ವಳನದ ಮೊದಲ ಕೃಷ್ಟಿಗತಾನುಭಾಗಮನಱಿದು; ಮತ್ತಮದಱಿರಡನೆಯ ಕೃಷ್ಟಿಗತಾನು ಭಾಗಮಂ ಮರ್ದಿಸಿ; ಬಾದರಸಾಂಪರಾಯ ಕೃಷ್ಟಿರೂಪಾನುಭಾಗಮನನಂತಗುಣರೂಪಹಾನಿಗೆಯ್ದು ಸೂಕ್ಷ್ಮಸಾಂಪರಾಯಕೃಷ್ಟಿವಿಧಾನಾನಂತರಂ ಬಾದರಲೋಭಸಂಜ್ವಳನಮಂ ನಿಶ್ಶೇಷಂಗೆಯ್ದು ಅಪ ಗತ ಸಾಮಯಿಕಚ್ಛೇದೋಪಸ್ಥಾಪನಾಪರಿಹಾರವಿಶುದ್ಧಿಸಂಯಮಾನುಗತಾನುವೃತ್ತಿ ಗುಣಸ್ಥಾನಂ ಸೂಕ್ಷ್ಮಸಾಂಪರಾಯಕ್ಷಪಕಂ, ಸೂಕ್ಷ್ಮಲೋಭನಿರ್ಮೂಲನಂಗೆಯ್ದು, ಜಿತಾಷ್ಟವಿಂಶತಿಮೋಹನೀಯಂ, ಅತ್ತಮಿತ್ತಪನೀತ ದೋಷಜಾತಯಥಾಖ್ಯಾತಚಾರಿತ್ರಸಂಪನ್ನಕ್ಷೀಣಕಷಾಯವೀತರಾಗಛದ್ಮಸ್ಥ ಗುಣಸ್ಥಾ[ನಾ]ನೇಕತ್ವವಿತರ್ಕವಿಚಾರಧ್ಯಾನಾದಿ[ಪರಿಣತ]ನ[ಪರಿ]ಮಿತಪ್ರದೇಶಂ, ನಿರ್ಜರಾದಿ ಕರಣಪರಿಣತಂ ಕೆಲವುಸಮಯಂಗಳನಾತ್ಮದ್ವಿಚರಮಸಮಯದೊಳ್ ನಿದ್ರಾಪ್ರಚಳಾಪ್ರಳಯ ವಿದಾ ರಿತೋದಯಸಮಯದೊಳ್ ಜ್ಞಾನಾವರಣಪಂಚಕಮಂ, ದರ್ಶನಾವರಣಚತುಷ್ಕಮಂ, ಅಂತರಾಯ ಪಂಚಕಮಂ, ಸಪ್ರಪಂಚಂ ಘಾತಿಸಿ:—

ಕಂ|| ಕದಳೀಘಾತಂ ಜೀವ |
ಕ್ಕೆ ದುರಿತದಿಂದಕ್ಕುಮೆಂಬುದರ್ಹನ್ಮತಮಂ ||
ತದು ಮಾಣ್ದಿರೆ ಬೇರ್ವೆರಸಾ |
ದುದು ಜಿನನೀಘಾತಿಗಳ್ಗೆ ಕದಳೀಘಾತಂ || ೧೧೨ ||

ವ|| ತದನಂತರ ಮಾಮುನಿವೈರೋಚನನುಮಪ್ಪ ಮುನಿರಾಜಂಗೆ:—

ಹರಿಣೀವೃತ್ತಂ|| ವ್ಯವಹಿತಪದಾರ್ಥಾವಿರ್ಭಾವಪ್ರಕಾಶಕ ಮಿಂದ್ರಿಯಾ |
ವ್ಯವಹಿತಪದಂ ಪರ್ಯಾಯದೊಳ್ ತೋಕನೇತರಮಂ? ||
ಭವವಿರಹಿತಂ ಲೋಕಾಲೋಕೈಕಗೋಚರಮಕ್ಷಯಂ |
ಪ್ರವಿಮಳಗುಣೋದಾತ್ತಂ ಪುಟ್ಟಿತ್ತು ಕೇವಳಲೋಚನಂ || ೧೧೩ ||

ಮ|| ಭವದಿಂದಂ ಭವದೊಳ್ ವ್ರತಂ ದ್ವಿವಿಧಮಾಪ್ತೋದ್ದಿಷ್ಟಮುದ್ವೀರಣಂ |
ತ್ರಿವಿಧಂ ಬೋಧಿ ಚತುರ್ವಿಧಂ ನಮಿತಚಾರಿತ್ರಂ ವರಂ ಸೂಕ್ತಿ ಪಂ ||
ಚವಿಧಂ ಪ್ರಾಣ್ಯಭಿರಕ್ಷೆ ಷಡ್ವಿಧ ಮುದಾತ್ತೋದ್ವಿಕ್ರಮಾವಾಪ್ತಿ ಸ |
ಪ್ತವಿಧಂ ಪೇೞ್ವ ತಮೋಧಿಯಂ ಕಿಡಿಸಿದಂ ಸೌಜನ್ಯಕಂದಾಂಕುರಂ || ೧೧೪ ||

## ಗದ್ಯ

ಇದು

ಜಿನೇಂದ್ರ ಚರಣ ಸರಸೀರುಹ ಶಿಲೀಮುಖಾಯಮಾನ

**ಶ್ರೀಮದುಭಯಕವಿ ಚಕ್ರವರ್ತಿ**

ನಿರ್ವರ್ತಿತಮುಂ

**ಅಮ್ಮನಭಕ್ತಾಭಿಧಾನ ವಿದ್ಯಾನಿಧಾನ ಮಲ್ಲಪಾರ್ಯ**

ತದನುಜಾತಾಭಿಜಾತ ಸಾರಸ್ವತ

**ಪುನ್ನಮಾರ್ಯ**

ಕಾರಿತಮುಮಪ್ಪ

**ಪುರಾಣಚೂಡಾಮಣಿಯೊಳ್**

ಏಕಾದಶಾಶ್ವಾಸಂ

**ಸಮಾಪ್ತಂ.**

---

|| ಶ್ರೀ ||

# ಶಾಂತಿಪುರಾಣಂ.

## ದ್ವಾದಶಾಶ್ವಾಸಂ.

ಕಂ|| ಶ್ರೀಶಾಂತೀಶಂ ತ್ರಿಜಗದ |
ಧೀಶಂ ಕೇವಳವಿಬೋಧವಿನಿರೋಧಪದಾ ||
ರ್ಥಾಶೇಷರೂಪನಮರನ |
ರೇಶಸಭಾವೃತನುದಾತ್ತದಿವ್ಯನಿಧಾನಂ || ೧ ||

**ವ||** ದ್ವಾದಶಗಣಪರಿವೇಷ್ಟಿತನು,ಮಷ್ಟಮಹಾಪ್ರಾತಿಹಾರ್ಯವಿಭವೌದಾರ್ಯನುಂ, ಚತುರಾಸ್ಯನು, ಮಹಮಿಂದ್ರನಮಸ್ಯನುಂ, ಚರಾಚರೋಪಾಸ್ಯನು, ಮಷ್ಟಾದಶದೋಷದೂರನುಂ, ಪರಮೌದಾರಿಕ ಶರೀರನುಂ, ಅನಂತಚತುಷ್ಟಯಾವಷ್ಟಂಭನುಂ, ಭಗವತ್ಸ್ವರೂಪನಿರೂಪಿತನುಂ, ಜನ್ಮನಿಗಳವಿಗಳಿ ತಾತ್ಮನು ಮಾಗಿ:—

ಕಂ|| ಹರಿಪೀಠದ ಮೇಗೆ ನಿಜ |
ಸ್ವರೂಪಮಿರೆ ನೆಗೆದ ನಾಲ್ಕುಬೆರಲಳವಿಯೊಳಾ ||
ಪರಮೇಶ್ವರನಘವಿಘಟನ |
ಕರನಾಪ್ತಾಗಮ ಪದಾರ್ಥವಾಗಮೃತಮುಖಂ || ೨ ||

ಉ|| ಆಪರಮೇಶ್ವರಂ ಪ್ರಥಿತಷೋಡಶತೀರ್ಥಕರಂ ಸಚೋದ್ಯ ವಿ |
ದ್ಯಾಪರಿಪಾಕಶಾಸನಸಭಾವಳಯಂ ಗಣನಾಥಯೂಥಮಂ ||
ಕ್ಷಾಪಸಮೂಹಮಂ ತಿಳಿಪಲೊಪ್ಪುವ ದಿವ್ಯನಿನಾದದಿಂ ಜಗ |
ದ್ವ್ಯಾಪಿ ಜಿನೇಂದ್ರಶಾಸನಮತಾಶ್ರಮುಮಂ ವಿಗತಾಶ್ರಮದ್ವಯಂ || ೩ ||

**ವ||** ಇಂತೆಂದು ಬೆಸಸಿದಂ ತತ್ವವಿತತ್ವಸಂಸೇವ್ಯನಿಕುರುಂಬಾಶಯಕರ್ದಮಮವಾತ್ಮವಚನ ಬೋಧೋದಾರಕ್ಷೀರಕ್ಷಾಳಿತಮಾಗೆ:—

ಕಂ|| ಆಸ್ರವಮೆರಡುತೆಱಂ ಪು |
ಣ್ಯಾಸ್ರವಮೊಂದದಱ ವೈಪರೀತ್ಯಭವಂ ಪಾ ||
ಪಾಸ್ರುವಮುಂತವಱಕೊಳ್ ಪು |
ಣ್ಯಾಸ್ರವವಸ್ತುಸ್ವರೂಪಮುಕ್ಕುಂ ತ್ರಿವಿಧಂ || ೪ ||

ಪೃಥ್ವೀವೃತ್ತಂ|| ಮನೋವಚನಕಾಯವೃತ್ತಿ ಶುಭಮಲ್ತೆ ಪುಣ್ಯಾಸ್ರವಂ |
ಮನೋವಚನಕಾಯವೃತ್ತ್ಯಶುಭಮಲ್ತೆ ಪಾಪಾಸ್ರವಂ ||
ಜಿನಾಗಮದೊಳಿಂ ಕಷಾಯಸಹಿತಂ ತಲೋದೀತ್ತಮ |
ತ್ತನಂತಸುಖಹೃತ್ಕಷಾಯಸಹಿತಂ ಭವಾರಣ್ಯಜಂ || ೫ ||

ವ|| ಅಂತು ಶುಭಾಶುಭಂಗಳೆಂಬೆರಡುಮಾಸ್ರವಂಗಳ್ಗೆ ಹೇತುಭೂತಮಕ್ಕುಂ. ಅಲ್ಲದೆ ಸಾಂಪರಾಯಕಾಯಮುಂ, ವೀರ್ಯಪ್ರವೃತ್ತಿಯುಂ, ಮಿಂದ್ರಿಯಕಷಾಯಯೋಗ[ಮು]ವಿಲ್ಲದುದು ಪುಣ್ಯಾಸ್ರವಮಕ್ಕುಂ. ಉೞಿದುದು ಪಾಪಾಸ್ರವದ್ವಾರಂ, ಅದಂ ಮುಚ್ಚುವುದು ಸಂವರಮೆಂಬುದಕ್ಕುಂ ಮತ್ತಂ ಪೂರ್ವೋಪಾರ್ಜಿತಪರುಷಕರ್ಮನಿರ್ಜರಣಾಕಾರಣಂ ನಿರ್ಜರೆಯೆಂಬುದಕ್ಕುಂ.....[ಸತ್] ಕರ್ಮಬಂಧಂ ಶುಭಮೆಂಬುದಕ್ಕುಂ. ಅಸತ್ಕರ್ಮಬಂಧಮಶುಭಮೆಂಬುದಕ್ಕುಂ. ತದುಭಯಕರ್ಮ ನಿರ್ಮೂಲನಂ ಮೋಕ್ಷಮೆಂಬುದು:—

ಕಂ|| ಎಂದಿತು ವಸ್ತುವಂ ನಿ |
ಸ್ಸಂದೇಹಂಮಾಡಿ ಬೆಸಸೆ ತಿರ್ಯಗ್ಗಣಮುಂ ||
ತಂದಱಗುಂ ದಲೆನಲ್ ಗಣ |
ಬೃಂದಂ ಪನ್ನೆರಡುಮಱದುದೊಂದಚ್ಚರಿಯೇ || ೬ ||

ವ|| ತದನಂತರಂ ಭೂಚರಪರಮಗುರು ಲೋಕವಿಭಾಗಮುಮನಕಲಂಕಾಚಾರಸಾರಂ ಸಂಕ್ಷೇಪರೂಪದಿಂದಮಿಂತೆಂದು ಬೆಸಸುಗುಂ:—ಲೋಕಂಗಳ್ ಮೂಱಕ್ಕುಂ, ತದ್ಗತಂಗಳಪ್ಪ ಜೀವಂಗಳ ಗತಿ ನಾಲ್ಕಕ್ಕುಮವಾವುವೆಂದೊಡೆ ನರಕತಿರ್ಯಙ್ಮನುಷ್ಯದೇವಗತಿನಾಮದಿಂ, ಮತ್ತಮಲ್ಲಿ ದೇವಗತಿ ನಾಲ್ಕಕ್ಕುಮೆಂತೆನೆ:— ಭವನವಾಸಿಗ ವಾನವ್ಯಂತರ ಜ್ಯೋತಿಷ್ಕ ಕಲ್ಪವಾಸಿ ಭೇದಭಿನ್ನತ್ವದಿಂ, ಮತ್ತಮಲ್ಲಿ ಭವನಾಮರನಿಕಾಯಮುಮಸುರನಾಗಸುಪರ್ಣದ್ವೀಪೋದಧಿಸ್ತನಿತ ವಿದ್ಯುದ್ದಿಗಗ್ನಿ ವಾತಕುಮಾರನಾಮದಿಂ ಪತ್ತುತೆಱಮಕ್ಕುಂ, ವ್ಯಂತರಾಮರಭೇದಮೆಂಟುವಿಧಮಕ್ಕುಮೆಂತೆನೆ:— ಕಿನ್ನರ ಕಿಂಪುರುಷ ಗರುಡ ಗಂಧರ್ವ ಯಕ್ಷ ರಾಕ್ಷಸ ಭೂತ ಪಿಶಾಚ ಭೇದದಿಂ, ಮತ್ತಂಜೋತಿಷ್ಕರುಂ ಪಂಚವಿಧಮೆಂತೆನೆ:—ಚಂದ್ರಾದಿತ್ಯಗ್ರಹನಕ್ಷತ್ರತಾರಕಾಭೇದಭಿನ್ನವಿಧಿಯಿಂ, ಮತ್ತಮನಲ್ಪಕಲ್ಪಾಮರರುಮಿಂದ್ರಪ್ರತೀಂದ್ರಸಾಮಾನಿಕತ್ರಯಸ್ತ್ರಿಂಶಪಾರಿಷದಾತ್ಮರಕ್ಷಕಲೋಕಪಾಲಕಿಲ್ಬಿಷಾಭಿಯೋಗ್ಯ ಭೇದದಿಂ ನವವಿಧಮಕ್ಕುಮಾನಾಕಲೋಕಮುಱವತ್ತುಮೂಱುಪಟಲಮಕ್ಕುಂ—

ಕಂ|| ನಾಕತ್ರಿಷಷ್ಟಿಪಟಲಾ |
ನೀಕಂ ಗ್ರೈವೇಯಕಂಗಳೊಂಭತ್ತೊಂಭ ||
ತ್ತಾಕಡೆವರೆವನುದಿಶೆಗಳ್ |
ಲೋಕೋಪರಿಮಂಗಳಯ್ದಣೂತ್ತರೆಯಕ್ಕುಂ || ೭ ||
ಅದಱಡೆಗೀಷತ್ಪ್ರಾಗ್ಭಾ |
ರದಳವಿ ಪನ್ನೆರಡುಯೋಜನಂ ಸೌಧರ್ಮ ||
ಕ್ಕದಱಂದಮತ್ತಮೂಗಾ |
ವುದದೊಳ್ ನೆಲಸುವರನಂತಸುಖರಾಸಿದ್ಧರ್ || ೮ ||
ಅಷ್ಟಗುಣೌಘದನಂತಚ |
ತುಷ್ಟಯದ ಶರೀರಮೆನಿಸಿ ಸಿದ್ಧರ್ ಖರಕ ||
ರ್ಮಾಷ್ಟಕಮುೞಯೆ ಜಗತ್ಪ |
ರ್ಯಷ್ಟಿಗೆ ನೆಲೆಯಾದರಷ್ಟಮಾವನಿನಿಳಯರ್ || ೯ ||

ವ|| ಅಂತೆಂಟನೆಯ ಭೂಮಿಯಾಗಿರ್ದೀಷತ್ಪ್ರಾಗ್ಭಾರಭೂಮಿಪ್ರಮಾಣಮಾವುದೆಂದೊಡೆ:—

ಕಂ|| ಎರಡುವರೆದ್ವೀಪಂ ವ್ಯಂ |
ತರವಾನವತಿರ್ಯಗಾಲಯಂ ತತ್ಪ್ರಮಿತಂ ||
ವರಸಿದ್ಧಕ್ಷೇತ್ರಮಿದಂ |
ಪರಮಾರ್ಥಂ ನಂಬುಗೆಂಬುದರ್ಹದ್ವಚನಂ || ೧೦ ||

**ವ||** ಅಂತು ಸಿಗೋದಂಬೆರಸು ಸಪ್ತಭೂವ್ಯಾದಿಪರ್ಯಂತಮಪ್ಪ ಗತಿಪಂಚಕಸ್ಥಾನಂ ಲೋಕಾಕಾಶಂಗಳ್ ಸಂಗತಂಗಳಾಗೆ ಯಿದುವಂ ಧರಿಯಿಸಿ ನಿಂದ ಮಹಾವಾತಂಗಳ್ ಮೂಱಕ್ಕುಮವಾವುವೆಂದೊಡೆ:—ಘನೋದಧಿಯುಂ, ಘನಾನಿಲಮುಂ, ತನುವಾತಮುಮೆಂಬುದಕ್ಕುಮಲ್ಲಿ ದ್ವಿತೀಯ ಮಹಾವಾತದಿಂ ಮೇಲೆ ಪೋಗೆ ಮೂಱನೆಯ ಮಹಾವಾತದ ಕೆಳಗೆ ಸಿದ್ಧಪರಮೇಷ್ಠಿಗಳಿರ್ಪರ್:—

ಕಂ|| ವರಭೋಗಭೂಚರರ್ ಭೂ |
ಚರರಂಬರಚರರೆನಲ್ ಮನುಷ್ಯರ್ ತ್ರಿವಿಧರ್ ||
ಸ್ಥಿರತಿರ್ಯಗ್ಗತಿ ಭೂಮ್ಯಂ |
ತರಂಗದೊಳ್ ಸಕಳವಿಕಳಮಿಂದ್ರಿಯಮತಿಯಂ || ೧೧ ||

**ವ||** ಅವಱೊಳ್ ಪಂಚೇಂದ್ರಿಯಂಗಳ್ ಜಳಚರಸ್ಥಳಚರಗಗನಚರಪ್ರಕಾರದಿಂ ಮೂದೆಱನಕ್ಕುಂ. ವಿಕಳೇಂದ್ರಿಯಂ ತ್ರಿವಿಧಂ, ಕರ್ಮಭೇದಮುಂ ಸಾಮಾನ್ಯರೂಪದಿಂದೇಕವಿಧಂ, ಮೂಲಪ್ರಕೃತಿಭೇದದಿಂದೆಂಟುತೆಱನಕ್ಕುಂ, ಅವಾವುವೆನೆ:—ಜ್ಞಾನಾವರಣೀಯಂ, ದರ್ಶನಾವರಣೀಯಂ, ವೇದನೀಯಂ, ಮೋಹನೀಯಂ, ಆಯುಷ್ಯಂ, ನಾಮ, ಗೋತ್ರ, ಮಂತರಾಯಮೆಂಬಲ್ಲಿ **ಜ್ಞಾನಾವರಣೀಯಂ,** ಪಂಚವಿಧಮೆಂತೆನೆ:—ಮತಿಶ್ರುತಾವಧಿಮನಃಪರ್ಯಯಕೇವಲಬೋಧ[ನಿಗೂಹನ]ದಿನಕ್ಕುಂ, ಇಂ **ದರ್ಶನಾವರಣೀಯ**ಮುಂ ನವವಿಧಮೆಂತೆನೆ:—ನಿದ್ರಾನಿದ್ರಾಪ್ರಚಳಾಗ್ರಚಳಾಸ್ತ್ಯಾನಗೃದ್ಧಿನಿದ್ರಾಪ್ರಚಳಾಚಕ್ಷುರಚಕ್ಷುರವಧಿಕೇವಲಬೋಧದರ್ಶನಪ್ರಜ್ಞಾನದಿನಿನಿತುಭೇದಮಕ್ಕುಂ, **ವೇದನೀಯಮುಂ** ಸಾತಾವೇದನೀಯಮುಮಸಾತಾವೇದನೀಯಮುಮೆಂದಿರ್ತೆಱನಕ್ಕುಂ **ಮೋಹನೀಯ** ಮಿಪ್ಪತೆಂಟುತೆಱನಕ್ಕುವೆಂತೆನೆ:—ದರ್ಶನಮೋಹನೀಯಂ, ಚಾರಿತ್ರಮೋಹನೀಯಮೆಂದಿರ್ತೆಱನಕ್ಕುಮವಿಮಃಧೂತಂ, ಸಮ್ಯಗ್ಮಿಧೂತಂ, ಸಮ್ಯಕ್ತ್ವಪ್ರಕೃತಿಯುಮೆಂದು ದರ್ಶನಮೋಹನೀಯಂ ಮೂಱುಂತೆಱಂ, ಕಷಾಯನೋಕಷಾಯಭೇದದಿಂ ಚಾರಿತ್ರಮೋಹನೀಯಮಿರ್ತೆಱಂ ಅಲ್ಲಿ ಕಷಾಯಮೋಹನೀಯಂ ಷೋಡಶವಿಧಮೆಂತೆಂದೊಡೆ ಅನಂತಾನುಬಂಧಿ ಕ್ರೋಧಮಾನಮಾಯಾಲೋಭ, ಮಪ್ರತ್ಯಾಖ್ಯಾನ ಕ್ರೋಧಮಾನಮಾಯಾಲೋಭಂ, ಪ್ರತ್ಯಾಖ್ಯಾನಕ್ರೋಧಮಾನಮಾಯಾಲೋಭಂ, ಸಂಜ್ವಳನಕ್ರೋಧಮಾನಮಾಯಾಲೋಭಮೆಂದು. ನೋಕಷಾಯಂ ನವವಿಧಂ, ಹಾಸ್ಯರತ್ಯರತಿಶೋಕಭಯಜುಗುಪ್ಸಾಸ್ತ್ರೀಪುನ್ನಪುಂಸಕಭೇದದಿನಿಂತುಮೋಹನೀಯಕರ್ಮವಿಪ್ಪತ್ತೆಂಟುತೆಱನಕ್ಕುಂ, ಆಯುಷ್ಕರ್ಮಮುಂ ನರಕತಿರ್ಯಙ್ಮನುಷ್ಯದೇವಾಯುಷ್ಯಭೇದದಿಂ ನಾಲ್ಕುತೆಱನಕ್ಕುಂ, **ನಾಮಕರ್ಮಮುಂ** ಪಿಂಡಾಪಿಂಡನಾಮದಿಂ ತೊಂಭತ್ತುಮೂಱುತೆಱನಕ್ಕುಂ, **ಗೋತ್ರಕರ್ಮ** ಮುಮುಚ್ಚನೀಚಭೇದಭಿನ್ನಮಿರ್ತೆಱನಕ್ಕುಂ, **ಅಂತರಾಯಮುಂ** ದಾನಲೋಭ ಭೋಗೋಪಭೋಗವೀರ್ಯಾಂತರಾಯಪ್ರಕಾರದಿಂ ಪಂಚವಿಧಮಕ್ಕುಂ. ಇಂತುತ್ತರಪ್ರಕೃತಿಗಳಷ್ಟಾಚತ್ವಾರಿಂಶದುತ್ತರಶತಸಂಖ್ಯಾರೂಪಂಗಳಕ್ಕುಮುತ್ತರೋತ್ತರಪ್ರಕೃತಿಗಳಸಂಖ್ಯಾತಲೋಕಮಾತ್ರಂಗಳಕ್ಕುಂ:-

ಕಂ|| ಜಿನಪತಿ ಕರ್ಮಪ್ರಕೃತಿಯ |
ನನಘಂ ಸ್ಥೂಲಸ್ವರೂಪದಿಂ ಬೆಸಸೆ ಘನ ||
ಸ್ತನುವಚನಂಗಳ್ ಸಂಗತ |
ಮೆನೆ ತಂದೆಯಭಕ್ತ ಪುನ್ನವಾರ್ಯರ್ ಕೇಳ್ದರ್ || ೧೨ ||

ವ|| ತದನಂತರಂ:—

ಚಂ|| ವಿಹರಣಕಾಲಮಿನ್ನನಗೆ ಬಂದುದಿದೆಂದು ಜಿನಂ ಜನಸ್ತುತಂ |
ವಿಹರಿಸಲುದ್ಯಮಂಗೆಯಲೊಡಂ ನೆಱೆ ಪನ್ನೆರಡುಂ ಗಣಾಳಿ ಸ ||
ನ್ನಿಹಿತಪದಾರ್ಚನಾಕಳಕಳಂ ದಿವಿಜೇಂದ್ರಪುರಸ್ಸರಂ ನಭೋ |
ವಿಹಿತಗತಿಸ್ವರೂಪ ಮೆಸೆದೊಪ್ಪಿದುದೊಪ್ಪುವಗಣ್ಯಪುಣ್ಯದಿಂ || ೧೩ ||

ತರಳವೃತ್ತಂ|| ಗಗನಮುರ್ವಿಗೆ ಯೋಜನದ್ವಯವಾಗೆ ಜೈನಪದದ್ವಯಂ |
ನೆಗೆಯೆ ಮುಂದಣವೇೞು ಪಿಂದಣವೇೞು ತಾವರೆಗಳ್ ಕರಂ ||
ಸೊಗಯಿಸಿರ್ಪಿನಮಂತವಂ ಜಿನನಂಘ್ರಿಗಳ್ ನಿಜಘಾತದಿಂ |
ಸುಗಿಯೆ ಮೆಟ್ಟವೆ ಮುಟ್ಟದಾಚತುರಂಗುಳೋಪರಿಮಾರ್ಗದೊಳ್ || ೧೪ ||

ವ|| ಜಿನಚಂದ್ರದೇವಂ ನಡೆಯೆ ಧರ್ಮಚಕ್ರಂ ಮುಂದೆ ನಡೆಯೆ ನಡೆವ ನಾಲ್ಕುಂದೆಸೆಗಳೊಳಂ ನೂಱುಯೋಜನಪ್ರಮಾಣಾಂತರದೊಳಾವಜೀವಕ್ಕಂ ಪಸಿವು ಪಸವುಂ ಪ್ರಾಣವಧೆಯುಮಾಗದಿರೆಯುಂ, ಕುಸುಮಫಲಪರಿಣತಫಲದಾನಂಗಳಪ್ಪ ವನಸ್ಪತಿವೃಕ್ಷೌಷಧಿಗುಲ್ಮಂಗಳಪ್ಪನೋಕಹಜಾತಿಗಳಿಂ, ವನ್ಯಧಾನ್ಯಫಲಗ್ರಾಮಂಗಳಪ್ಪ ಬೀಜಕಾಯಂಗಳಿಂ, ಭಗವದಾಗಮನದರ್ಶನಹರ್ಷೋತ್ಕರ್ಷದಿಂ ಘನರೋಮಾಂಚಕಂಚುಕಿತಾಂಗಿಯಾಧರಾವನಿತೆಯುಂದಂಜೆತ್ತಿರೆಯುಂ, ನೀರದಮಾರ್ಗಂ ನಿರ್ನೀರದತುಷಾಪಾಂಸುಪಟಳಮಾಗೆಯುಂ, ಸ್ವಾಭಾವಿಕಕರ್ಮಕ್ಷಯಜದೇವಕೃತಂಗಳೆಂಬ ಮೂವತ್ತುನಾಲ್ಕುಮತಿಶಯಂಗಳೊಳೊಂದುಗುಂದದಿರೆಯುಮಷ್ಟಪ್ರಾತಿಹಾರ್ಯಂಗಳ್ ನಿಂದೆಡೆಯೊಳ್ ನಿರಂತರಮಿರೆಯಿರೆ:—

ಮಲ್ಲಿಕಾಮಾಲೆ|| ಚಾರುನೀರದಮಾರ್ಗದೊಳ್ ನಿಯತಂ ಪ್ರಶಸ್ತವಿಹಾರವಿ |
ಸ್ತಾರಮಾಗೆಯುಮಾಜಗತ್ರಯವಂದಿತಾಂಘ್ರಿವಿಹಾರದೊಳ್ ||
ಮೇರುಜಂಗಮಮಾದಪೋಲ್ ನಡೆದಂ ಸಧರ್ಮಪವಿತ್ರಭೂ |
ಭಾರಮಷ್ಟಮಭೂಮಿಭಾರಮಿದೆಂಬಿನಂ ಪರಮೇಶ್ವರಂ || ೧೫ ||

ಕಂ|| ಇಂದ್ರನಯನದ್ವಯಕ್ಕೆ ಜಿ |
ನೇಂದ್ರನ ರೂಪಧಿಕಮಾಗೆ ಪಡೆದಂ ಸೌಧ ||
ರ್ಮೇಂದ್ರಂ ಸಾಸಿರಕಣ್ಣನ |
ತೀಂದ್ರಿಯದರ್ಶನನಿದೇಂ ಜಿನಂ ಸುಂದರನೋ || ೧೬ ||

ಕಂ|| ಜಿನಜನ್ಮಾಭಿಷವಂ ನ |
ರ್ತನದಿಂ ಸೊಗಯಿಸುವುದಂತದಂ ಸುರರಾಜಂ ||
ಪುನರುಕ್ತಂಮಾಡೆ ಜಿನೇಂ |
ದ್ರನ ವಿಹರಣಪೂರ್ವರಂಗಮೇನೊಪ್ಪಿದುದೋ || ೧೭ ||

ಕ್ಷೀರಂ ರುಧಿರಂ ಪರಮೌ |
ದಾರಿಕತನುಗಿಲ್ಲ ನೆಟಿಲು ಪಕ್ಷ್ಮಸ್ಪಂದಂ ||
ಚಾರುನಯನದ್ವಯಕ್ಕೆ ಶಿ |
ರೋರುಹನಖಮಂದಿನಂತೆ ಬಳೆಯವು ಜಿನನಾ || ೧೮ ||
ದಿವ್ಯಧ್ವನಿ ಯೋಜನಮಾ |
ತ್ರವ್ಯವಸಿತಮಿಭವಿಚೋಧಿಪೀಠಂ ತನು ತಾ ||
ನವ್ಯಾಬಾಧಂ ಘಾತಿತ |
ಮೋವ್ಯಯದಿಂದಾಗೆ ತಳರ್ದನಾ ಜಿನಚಂದ್ರಂ || ೧೯ ||

ವ|| ಮತ್ತಮತಿಮೈತ್ರಿಯುಂ, ಸಹಸ್ರಕರಜ್ಯೋತಿಯು, ಮಾಳೋಕಪ್ರಿಯಜನನಯನ ಸುಂದರತೆಯುಂ, ಪದ್ಮರಾಗಾರುಣ ಲಸದಶೋಕಪಾದಪಮುಂ, ಪರಿಪೂರ್ಣೇಂದುಮಂಡಲಾಖಂಡಿತ ಪ್ರಭಾಪ್ರಸರಶೋಭಾಯಮಾನಚ್ಛತ್ರತ್ರಯಮುಂ, ದ್ವಾತ್ರಿಂಶದ್ಯಕ್ಷೇಂದ್ರಸರಿವೀಜ್ಯಮಾನಪಂಚ ರತ್ನಾಂಚಿತಚಾರುಚಮರೀಕರಚಮರರುಹಂಗಳುಂ,ಘರ್ಮೋರ್ಮಿಹತನಿರ್ಮಳಸಮೀರನುಂ,ನಮೇರು ಮಂದಾರಸಂತಾನಕಪಾರಿಜಾತಕುಸುಮಸ್ಪಷ್ಟವೃಷ್ಟಿಯು, ಮಷ್ಟೋತ್ತರಶತಸಹಸ್ರಸಂಖ್ಯಾತಿಚಿತಾಂಕ ಮಾಲಿಕಾಸ್ತವನನಿರತ ಭವನವನಜ್ಯೋತಿಷ್ಕೇಂದ್ರಪ್ರತೀಂದ್ರ ಸಾಮಾನಿಕದಿಕ್ಪಾಲಲೋಕಾಂತಿಕಶ್ರವಣ ಸುಂದರಧ್ವನಿಯು, ಮನವರತದಿವಿಜದುಂದುಭಿಸುರನಿಕರತಳವಿತಾಡ್ಯಮಾನಪ್ರಧ್ವಾನಮುಂ, ಭೂಚರ ಖೇಚರವಂದನಾಸುಂದರರವಪ್ರತಿನಾದಮು, ಮುದಾತ್ತವಿವರಮುಂ, ನಿಜವಾಹನವಿಹೀನವಿಸ್ಮಯ ಸ್ಮೇರವದನಸರಸಿರುಹ ದ್ವಾತ್ರಿಂಶನ್ನಾಕಾನೀಕಮುಂ ಕರಮೊಪ್ಪೆ:—

ಕಂ|| ಕನಕರುಚಿರುಚಿರವಿಂಶತಿ |
ಧನುಃಪ್ರಮಾಣಾಂಗಮೆಸೆಯೆ ಗಗನವಿಹಾರಂ ||
ತನಗೊಪ್ಪೆ ವಿಹಾರಿಸಿಯುಂ |
ಜಿನಚಂದ್ರನಘೌಘಶೇಷದೈನ್ಯದನಾದಂ || ೨೦ ||
ಅಮರಾನೀಕಮನೇಕಂ |
ಕ್ರಮಯುಗವಿನ್ಯಸ್ತಮಸ್ತಕಂ ಬಳಸಿರೆ ವಿ ||
ಶ್ರಮಿಸುವವೋಲ್ ಧರ್ಮಕ್ಷೇ |
ತ್ರಮದಾವುದೆನೆ ಸಮವಸರಣದೆಡೆಯೆನೆ ನಡೆದಂ || ೨೧ ||

ಉ|| ಆದಿವಿಚಾದಿನಾಥಮತದಿಂ ಸ್ತನಿತಾಮರಬೃಂದಮಂದು ಗಂ |
ಧೋದಕವೃಷ್ಟಿಯಂ ಸುರಿವರೊಯ್ಯನೆ ತಣ್ಣಗೆ ಕಮ್ಮನಾಗೆ ಮೇ ||
ಲಾದನಿಲಾಮರರ್ ಸುಟಿದು ಬೀಸುವರೊಪ್ಪುವ ವಾಂಶವೈಣ ಗೇ |
ಯಾದಿಗಳಿಂಪು ಪೊಂಪುಟಿ ಸುರೇಶ್ವರಗಾಯಕವಾದನೋದಿತಂ || ೨೨ ||

ವ|| ಎನಿಸೆ ಭವ್ಯಜನಶರಣಮಾದ ಸಮವಸರಣಗೋಭೂಮಿಯೊಳ್:—

ಕಂ|| ಶ್ರವಣಾಮೃತಮೆನೆ ಧರ್ಮ |
ಶ್ರವಣಂ ಮೃದುಮಧುರರುಚಿರಗಂಭೀರರವಂ ||
ಶ್ರವಣದಿನಾಟಿಸಿದಂ ವಿವಿ |
ಧವಿನೇಯಮುನಿಂತು ಶಾಂತಿಜಿನನಪವೃಜಿನಂ || ೨೩ ||

**ವ||** ಮತ್ತಂ ನಭೋಯಾನದೊಳ್ ಕಿಱಿದು ಪೊಟ್ತಾಗೆಯುಂ, ಸಭಾಸದನದೊಳ್ ಪಿರಿದು ಪೊಟ್ತು ಪೋಗೆಯುಂ, ಗಗನವಿಹಾರಮಲ್ಪಮೆನೆಯುಂ, ನಗರಮನೋಹರವ್ಯಾಪಾರಮನಲ್ಪಮೆನೆಯುಂ, ವ್ಯೋಮಯಾನಂ ತುಚ್ಛಮೆನೆಯುಂ, ಗ್ರಾಮಯಾನಮತುಚ್ಛಮೆನೆಯುಂ, ಧರ್ಮೋಪದೇಶಂಗೆಯುತ್ತುಮುತ್ತಮತೀರ್ಥೇಶ್ವರಂ ವಿಹಾರಿಸೆ:—

ಉ|| ಆ ಗತರಾಗನಂ ಬಳಸೆ ಪನ್ನೆರಡುಂಗಣಮುಭ್ರಶುಭ್ರತಾ |
ರಾಗಣದಂದದಿಂದೆಸೆದುದೀ ಭರತಾವನಿ ಭೋಗಭೂಮಿ ಭೂ ||
ಭಾಗಿ ಸುಖಾಪ್ತಿಯಂ ಪಡೆದುದುಷ್ಟಮ ಭೂಮಿ ಸಮೀಪಮಾಯ್ತು ಜೈ |
ನಾಗಮಭಾಗಿ ಭವ್ಯಜನಕೇನುಪಶಾಂತಿಯೊ ಶಾಂತಿನಾಥನಾ || ೨೪ ||

**ವ||** ಮತ್ತಮಾಪರಮೇಶ್ವರನುತ್ತಮಾಗಣ್ಯಪುಣ್ಯಾತಿಶಯಮಂ ಪೇೞ್ವೊಡೆ:—

ಉ|| ಆಡುವನಿಂದ್ರನಂಘ್ರಿನತಿಗೆಂದೆಡೆಯಾಡುವನಿಂದ್ರನೋತು ಮಾ |
ತಾಡುವನಿಂದ್ರನಕ್ಷಿಯುಗಮೆಯ್ದದೊಡಕ್ಷಿಸಹಸ್ರಸಂಖ್ಯೆಯಿಂ ||
ನೋಡುವನಿಂದ್ರನಿಂದ್ರನತಿಯುದ್ಧತಮಾಡುವನಾಜಿನೇಂದ್ರನಾ |
ಷೋಡಶತೀರ್ಥನಾಥನೊರೆಗಂ ದೊರೆಗಂ ದೊರೆಯಾರಘಾಂತಕರ್ || ೨೫ ||

ಕಂ|| ಎಂಬಳವಿಗಮಧಿಕನಘ |
ಸ್ತಂಭೇರಮವೈರಿ ಶಾಂತಿನಾಥಂ ಮಿಥ್ಯಾ ||
ಡಂಬರವಿಘಾತಿ ಘಾತಿಕ |
ದಂಬಕತರುಗಹನದಹನನೆನೆ ನೆಗೞ್ದ ಜರಂ || ೨೬ ||

ಭರತಕ್ಷೇತ್ರದಯೋಧ್ಯಾ |
ಪುರಸತ್ಪ್ರತಿಬದ್ಧಮಪ್ಪ ಮಧ್ಯಮಖಂಡಂ ||
ಸ್ಫುರಿಯಿಸೆ ಧರ್ಮರಸಾಯನ |
ಸರಿತ್ಪ್ರವಾಹದಿನಜಂ ವಿಹಾರಿಸುವೆಡೆಯೊಳ್ || ೨೭ ||

ಬಾಲಂಗಬಲೆಗೆ ಬಲಗೋ |
ಪಾಲಕವರ್ಗಕ್ಕೆ ಸಗ್ಗದಪವರ್ಗದ ಮಾ ||
ರ್ಗಾಲಂಬನಮಾದುದು ತ |
ತ್ತ್ರೈಲೋಕ್ಯಶರಣ್ಯಸೇವ್ಯದಿವ್ಯಧ್ವನಿಯಿಂ || ೨೮ ||

ಉ|| ಅಂತು ವಿಹಾರಿಸುತ್ತುಮಭವಂ ಭವಸಂಭವದೋಷದೂಷಣೋ |
ದಂತಮನಂತಸೌಖ್ಯನಿರತಂ ಭರತಾವನಿಗಷ್ಟಮಾವನೀ ||
ಭ್ರಾಂತಿಯುತಂ ಕರಂ ಜಿನನನಾಗತಭೂತಭವತ್ಸಮಸ್ತವ |
ಸ್ತ್ವಂತರಭಾಷಿ ತೋಷಿಸಿದನಿಂದ್ರನರೇಂದ್ರಫಣೀಂದ್ರಲೋಕಮಂ || ೨೯ ||

**ವ||** ಅಂತು ಧರ್ಮಕ್ಷೇತ್ರಪವಿತ್ರೀಕರಣವಿಹಾರಾನಂತರಮನಂತ ಚತುಷ್ಟಯಪುಷ್ಟಿಪರಪುಷ್ಟ [ನುಂ]ವಿಂಶತಿಧನುಃಪ್ರಮಿತಿಪರಮೌದಾರಿಕಶರೀರನುಂ, ಸಲಕ್ಷಸಂವತ್ಸರಸಂಖ್ಯಾಪರಮಾಯುಷ್ಯನು,

ಮುತ್ತಪ್ತಸುವರ್ಣವರ್ಣನುಂ, ಷೋಡಶತೀರ್ಥಕರನು, ಮೇಕಕಾಲಕಳಿತಚಕ್ರಧರತೀರ್ಥಕರಕುಸುಮ ಶರಾಗ್ರಗಣ್ಯಪುಣ್ಯತನುವಪ್ಪ ಶಾಂತೀಶ್ವರನಕಲಂಕಾಚಾರಸಾರಂ, ಸಮವಸರಣಾಗತಗಣನಾತೀತ ದ್ವಾದಶಗಣವಿನೇಯಜನಂಗಳಂ ನರನಾಕನಾಗಲೋಕಗಮನಕ್ಕೆ ಪರಸಿ ವಿಸರ್ಜಿಸಿ:—

ಮ|| ಸ್ರ|| ಪುರುದೇವಂ ದಿವ್ಯಕೈಲಾಸದೊಳಘಮಥನಂ ಪಾವೆಯೊಳ್ ವೀರನಾಥಂ |
ಸ್ಥಿರಬೋಧಂ ಚಂಪೆಯೊಳ್ ಪೆಂಪೆಸೆದಿರೆ ವಸುಪೂಜ್ಯಾತ್ಮಜಂ ನೇಮಿನಾಥಂ ||
ದೊರೆವೆತ್ತುರ್ಜ್ಜಂತದೊಳ್ ನಿರ್ಮಿದರುೞಿದ ಜಿನರ್ ಸಂದ ಸಮ್ಮೇದದೊಳ್ ಮು |
ಕ್ತರುಮಾದೇಶರ್ಕಳಿಂದಲ್ಲಿಗೆ ಮಿಗೆ ಬಿಜಯಂಗೆಯ್ದನಾಶಾಂತಿನಾಥಂ || ೩೦ ||

ಕಂ|| ಆ ಸಮ್ಮೇದಗಿರೀಂದ್ರದ |
ಭಾಸುರಮಣಿಕನಕರಜತಸಿಕತಿಳತಳದೊಳ್ ||
ಮಾಸಾವಧಿಯೆನೆ ಯೋಗಸ |
ಮಾಸಾದಿತವಿಧಿಯಿನಮರೆ ಕಾಯೋತ್ಸರ್ಗಂ || ೩೧ ||

ವ|| ಅಂತು ತಿಂಗಳ್ವರಮೆಡೆಯುಡಿಯದೆ ನಿಂದು:—

ಕಂ|| ಪ್ರತಿಮಾರೂಪಮಘಾತಿ |
ಪ್ರತಿರೂಪದ ಗರ್ವಪರ್ವತಾರೂಢತೆಯಿಂ ||
ಶತಖಂಡಂ ಮಾಡಿದುವೇ |
ನತರ್ಕ್ಯಮೋ ಜಿನನ ಪಡೆದಘಾತಿವಿಘಾತಂ || ೩೨ ||

ಅೞಿವುದುಮಘಾತಿಗಳ್ ಪೂ |
ವೞಿಗಱಿದುದು ನಭದಿನಮರಪಟಹಧ್ವನಿಗಳ್ ||
ಮೊೞಗಿದುವೌದಾರಿಕತನು |
ನೆಲಲಂತಿರೆ ನೆಲಕೆ ವಂದುದಘವಿಘಟನದಿಂ || ೩೩ ||

ಮುಕ್ತಿಶ್ರೀಯೊಳ್ ತನಗಾ |
ಸಕ್ತಿಯೊಳಿರದೊಸೆದು ನೆರೆದನಜರಂ ವನಿತಾ ||
ಸಕ್ತಿಯ ವರಂಗೆ ನೆರೆವನು |
[ರಕ್ತಿ]ಯನೊದವಿಸುವ ಮೆಚ್ಚದೇನಚ್ಚರಿಯೋ || ೩೪ ||

ವ|| ಆಗಳ್ ಪರಿನಿರ್ವಾಣಕಲ್ಯಾಣಸೂಚನಾಚಿಹ್ನಂಗಳ್ ತಂತಮ್ಮ ಲೋಕಂಗಳೊಳ್ ನೆಗೞೆ ನೆಗೞ್ದ ಭವನಾಮರವ್ಯಂತರಜ್ಯೋತಿಷ್ಕಕಲ್ಪವಾಸಿ ದೇವನಿಕಾಯಂ ವಿವಿಧಾರ್ಚನಾಸಮಗ್ರಾಗ್ರಹಸ್ತರಾಗಿ ಬಂದು ಬಲವಂದು ನಿಂದು ತಮ್ಮ ತಂದರ್ಚನೆಗಳಿಂ ಜಿನನಾಥಶರೀರಮನರ್ಚಿಸಿದರ್ ಕಿಱಿದು ಬೇಗದಿಂ:—

ಹರಿಣೀವೃತ್ತಂ|| ಬೆಸಸೆ ಬೆಸನಂ ಸೌಧರ್ಮೇಂದ್ರಂ ಫಣೀಂದ್ರಸುರೇಂದ್ರರಾ |
ರ್ದೊಸೆದು ಮಕುಟಾಯತ್ತಾಗ್ನಿಸ್ಫಾರದಿಂ ಜಿನದೇಹಮಂ ||
ಭಸಿತಮುಮಪ್ಪನ್ನಂ ಸಂಸ್ಕಾರಿಸಿದರ್ ತ್ರಿಪುಂಡ್ರಮಂ |
ನೊಸಲೊಳಿಡೆ ತಾನಿಂದ್ರಂ ತಾಮಿಟ್ಟರಗ್ನಿಕುಮಾರಕರ್ || ೩೫ ||

ವ|| ತದನಂತರಂ:—

ಕಂ|| ಅಮರಸಮಾಜಂ ತದ್ಭ |
ಸ್ಮಮನಂಗೋಪಾಂಗನಿಕಟತಟದೊಳ್ ಪೂಸಿ ||
ರ್ದಮಗೆ ಜಿನಪತಿಯ ಮಹಿಮೆಯ |
ಸಮಗ್ರಸಾಮಗ್ರಿಯಕ್ಕುಮೆಂದೊಡಗುಣಿದರ್ || ೩೬ ||

ಧರ್ಮಾನುರಾಗದಿಂ ಸೌ |
ಧರ್ಮೇಂದ್ರಂ ಮಾಡೆ ಮತ್ತಿನಿಂದ್ರರು ಮದನೇಂ ||
ನಿರ್ಮಿಸಿದರೂ ಜಿನಧರ್ಮದ |
ಪೆರ್ಮೆಗೆ ರಾಗಿಸರೆ ಭವ್ಯರಱಿವಿನ ದಿವ್ಯರ್ || ೩೭ ||

ವ|| ಅಂತು ಮೂವತ್ತಿರ್ವರಿಂದ್ರರುಮಾನಂದನೃತ್ಯಮನಾಡೆಯುಂ, ಕಿನ್ನರರ್ ಕೊಳೆ ಪಾಡೆಯುಂ, ಅಮರತೂರ್ಯಂಗಳ್ ತಾಳಂಗಳೊಳ್ ಕೂಡೆಯುಂ, ಆಡಿ ಬಳಲ್ದಮರರೆಟ್ಟು ನೋಡೆಯುಂ, ಪರಮನ ಚರಮಕಲ್ಯಾಣಂ ಪರಿಪೂರ್ಣಮಾಗೆ:—

ಕಂ|| ಪರಮಜಿನಶಿಷ್ಯರಂ ಗಣ |
ಧರರಂ ಮಕುಟಾಗ್ನಿಯಿಂದಮಗ್ನಿಕುಮಾರರ್ ||
ಸುರಪತಿಮತದಿಂದಂ ಸಂ |
ಸ್ಕರಿಸಿದರರ್ಹತ್ಸ್ವರೂಪಮೆಂದತಿಮುದದಿಂ || ೩೮ ||

ಆಸನ್ನಭವ್ಯರರ್ಹ |
ಚ್ಛಾಸನದೊಳ್ ಭಕ್ತರೆಂದೊಡಿಂ ಪ್ರತ್ಯಕ್ಷೋ ||
ದ್ಭಾಸಿಯನೀಕ್ಷಿಸಿ ಜಿನನಂ |
ಶಾಸನದೀಪಕರ ಭಕ್ತಿ ಕಿಱಿದಾದಪುದೇ || ೩೯ ||

ಆಸಮಯದೊಳಂದರ್ಹ |
ಚ್ಛಾಸನಬದ್ಧಪ್ರಸಿದ್ಧಭವಸಂತತಿಯಂ ||
ಭಾಸುರಕುಳಿಶದೆ ಬರೆಯಿಸಿ |
ವಾಸವನೆಱಗಿದನದಕ್ಕೆ ಭಕ್ತಿಯ ಭರದಿಂ || ೪೦ ||

ಅಭವಂಗೆ ಕಾಲಲಬ್ಧಿಯ |
ವಿಭವಂದೊರೆಕೊಂಡ ಭವದಿನರ್ಹಲ್ಲಕ್ಷ್ಮೀ ||
ಪ್ರಭುತೆವರಂ ಬರೆಯಿಸಿ ಭ |
ಕ್ತಿಭಾರಮಂ ಸಫಲಮೆನಿಸಿ ನಿಱಿಸಿದನಿಂದ್ರಂ || ೪೧ ||

ಅಯ್ದುಂ ಕಲ್ಯಾಣಂಗಳ |
ನೆಯ್ದಿಸಿ ಷೋಡಶಜಿನೇಂದ್ರನಂ ಮುಕ್ತಿಯನಿ ||
ನ್ನೆಯ್ದು ಪುದುಮರಿದೆ ಹರಿಗಾ |
ರೆಯ್ದಿದನಾರ್ ನಂಬರಖಿಳಭುವನತ್ರಯದೊಳ್ || ೪೨ ||

ಎಂದು ವಿನೇಯೋತ್ಕರಮುಭಿ |
ವಂದಿಸಿ ಶಾಂತೀಶ್ವರಂಗೆ ಪರಿಚಾರಕರಾ ||
ದಂದುಮುಳವಳವಿಗಟಿಯೆ ಪು |
ರಂದರತತಿ ನೆಗಟ್ದುದಿಂತು ನೋಂತರು ಮೊಳರೇ || ೪೩ ||

**ವ||** ಮತ್ತಮಾಸರ್ವಗೀರ್ವಾಣನಾಥನಕ್ಷೂಣವಿಶೋಧಿಪರಿಣಾಮಸಂ ತಭೋಗಂತಮಗಮುಳ್ಳುದಱಿಂದಂ ಶಚೀಮಹಾದೇವಿಯುಂ, ಲೋಕಪಾಲರುಂ, ಬ್ರಹ್ಮಲೋಕನಿಳಯರಪ್ಪ ಲೋಕಾಂತಿಕರುಂ, ದಕ್ಷಿಣೇಂದ್ರರು, ಮಯ್ದಣೂತ್ತರೆಗಳೊಳ್ ಮಧ್ಯಮವರ್ತಿಯಪ್ಪ ಸರ್ವಾರ್ಥಸಿದ್ಧಿಯಹಮಿಂದ್ರರುಂ:—

ಕಂ|| ಭವವಲ್ಲೀದಳಫಲವಮಾ |
ಲವಿಷಯಮಮಂ ಪಱಿದು ಮುಱಿದು ಕುಡಿಯಂ ಬಂದಾ ||
ದಿವದಿಂದಂ ಮುಕ್ತಿವಧೂ |
ವಿವಾಹಮಲ್ಲದೆ ವಧೂವಿವಾಹಮನೊಲ್ಲರ್ || ೪೪ ||

ಮೊದಲಿಂದ್ರಂಬೆರಸಿಂದ್ರರು |
ಮುದಿತೋದಿತರಂತನಂತ ಸುಖತನುಗಳಘಾ ||
ಸ್ಪದತನುಹರರೆಂದೆಂದುಂ |
ಮುದದಿಂ ಮುಕ್ತಿಯೊಳೆ ನಿಲ್ಲದಿರ್ಪರೆ ಸಿದ್ಧರ್ || ೪೫ ||

ಉ|| ಇಂತು ಚರಾಚರೈಕಸುಖಕಾರಣನಂ ದಿವಿಜರ್ ಚತುರ್ವಿಧರ್ |
ಶಾಂತಿಜಿನೇಂದ್ರನಂ ನೆರೆದಹರ್ನಿಶಮೋಲಗಿಸುತ್ತುಮಿರ್ದು ಕಾ ||
ಲಾಂತದೊಳಾಜಿನಂ ವೃಜಿನಮಂ ತವಿಸುತ್ತೆ ನಿರಾಸ್ರವಂ ತ್ರಿಲೋ |
ಕಾಂತಮನೆಯ್ದೆ ತಾಮುಮಿರದೆಯ್ದಿದರಾತ್ಮನಿಕೇತನಂಗಳಂ || ೪೬ ||

**ವ||** ಮತ್ತಮಾಜಿನೇಂದ್ರನ ಪರಮಚರಮೌದಾರಿಕಶರೀರಸಂಸ್ಕಾರಭೂಮಿಪ್ರದೇಶಕ್ಕೆ ತ್ರಯನಿಯಮಮಂ ತಪ್ಪದೆ ಕರಣತ್ರಿತಯಶುದ್ಧಿಪುರಸ್ಸರಂ ದ್ರವ್ಯಭಾವನಾರ್ಚನಾಸಮೇತಂ:—

ಕಂ|| ಇಂದ್ರರ್ ಬಂದೆಱಗುವರಹ |
ಮಿಂದ್ರರ್ ತಮ್ಮಿರ್ದ ನೆಲೆಯೊಳಿರ್ದೆಱಗುವರ ||
ಗ್ನೀಂದ್ರರ್ ಸೊಡರಿಂದೆಱಗುವ |
ರೇಂ ದ್ರವ್ಯದ ಭಾವದರ್ಚನಾವಿಧಿ ಪಿರಿದೋ || ೪೭ ||

ಉ|| ಶಾಂತಿಜಿನೇಂದ್ರಪಾದಕಮಲದ್ವಯಮಂ ಪ್ರತಿಮಾಸ್ವರೂಪದಿಂ |
ಚಿಂತಿಸಿದೊಂಗೆ ಕರ್ಮಮಲನಿರ್ಮಥನಂ ದೊರೆಕೊಳ್ಗುಮೆಂದೊಡೇಂ ||
ಭ್ರಾಂತೊ ಶರೀರಪೂಜೆಯಿನದೇವಿರಿದಿಂದ್ರಫಣೀಂದ್ರರುಂದ್ರಮ |
ರ್ತ್ಯೇಂದ್ರರತಿಕ್ರಿಯಾವಿಭವಮಂ ಭವಭಂಜನಶಕ್ತಿತತ್ವಮಂ || ೪೮ ||

ಕಂ|| ಷೋಡಶಜಿನಪತಿನುತಚರ |
ಣಾಡಂಬರಮಘವಿಘಾತಿ ಯೆನೆ ತತ್ಪ್ರತಿಮಾ ||
ನೀಡಾಗಮನಮುಮಚರ್ಾ |
ಕ್ರೀಡನಮುಂ ಮುಕ್ತಿಹೇತುವಪ್ಪುದು ಪಿರಿದೇ || ೪೯ ||

ಸ್ರ|| ಈಷತ್ಪ್ರಾಗ್ಭಾರಮೆಂಬೆಂಟನೆಯ ನೆಲನುಮಂ ದಾಂಟಿ ತೀರ್ಥೇಶ್ವರಂ ನಿ |
ರ್ದೋಷಂ ಮೇಗತ್ತ ಮೂಗಾವುದಮೊಗೆದು ನಭೋವೀತನಾಗಿರ್ದನಾಸಂ ||
ತೋಷಕ್ಕಾವೈಭವಕ್ಕಾಮದರಹಿತಮುದಕ್ಕಾಸುಖಾವಾಪ್ತಿಗಾ ನಿ |
ಶ್ಶೇಷಾಘೌಘಚ್ಛಿತ್ತಿಗಾಮೋಕ್ಷದ ಪದವಿಗದೇಂ ನೋಂತನೋ ಶಾಂತಿನಾಥಂ || ೫೦ ||

ಕಂ|| ಅಡಕಿಲ ಮಡಕೆಗಳೆಂಟುಂ |
ಬೆಡಂಗು ನಿಲೆ ನೆಲವುವಿಡಿದು ನಿಲ್ವಂತೆಂಟುಂ ||
ಪೊಡವಿಗಳಂ ತಾಳ್ದಿದುವೂ |
ಗಡಿಸದೆ ಮೂಱುಂ ಮಹಾನಿಲಂಗಳ್ ಕ್ರಮದಿಂ || ೫೧ ||

ವ|| ಅವಱ ಪೆಸರ್ಗಳುಂ ಘನೋದಧಿ, ಘನವಾತ, ತನುವಾತಂಗಳೆಂಬುವುವವಱೊಳಗೆ ಘನೋದಧಿಯೆಂಬ ಮೊದಲ ಮಹಾವಾತಮಂ ಘನವಾತಮೆಂಬೆರಡನೆಯ ಗಾಳಿಯಂ ಕಿಱಿದು ಮೇಗೆ ಪೋಗೆ ಮೂಱನೆಯ ತನುವಾತಮೆಂಬ ಗಾಳಿಯ ಮೇಗೆ ಕ್ಷಾಯಿಕಸಮ್ಯಕ್ತ್ವಮು, ಮನಂತಜ್ಞಾನಮು ಮನಂತದರ್ಶನಮು, ಮನಂತವೀರ್ಯಮುಂ, ಸೂಕ್ಷತ್ವ(ಮು), ಮವಗಹನಮು, ಮವ್ಯಾಬಾಧಂಗಳೆಂಟುಂ ಗುಣಂಗಳಾತ್ಮಾಯತ್ತಮಾಗೆ ಷೋಡಶತೀರ್ಥಕರಪರಮೇಶ್ವರಂ ಪರಮಪದಪ್ರಾಪ್ತನು, ಮನಂತಸುಖಾಮೃತತೃಪ್ತನು ಮಾಗಿರ:—

ಕಂ|| ಸಾಸಿರದೆಂಟುಪೆಸರ್ಗಳ್ |
ವಾಸವನಿಡೆ ನೆಗಟ್ದುವವನೆ ಸುರರುಂ ಪಿರಿದುಂ ||
ಗೋಸನೆಗೊಳುವಂತಾ ಜಿನ |
ವಾಸಸ್ಥಿತಿ ಶಾಂತಿನಾಥನಂ ಸ್ತುತಿಯಿಸುವರ್ || ೫೨ ||

ಎರಡುವರೆದ್ವೀಪದ ಮಂ |
ದರಂಗಳೆಯ್ದುವಱೊಳೊಂದಱೊಳ್ ಪದಿನಾಱು ||
ಗಿರಿಯುಮಕೃತ್ರಿಮಜಿನಮಂ |
ದಿರಂಗಳೊಳಗೊಳಗೆ ಶಾಂತಿಜಿನಸಂಸ್ತುತಿಗಳ್ || ೫೩ ||

ಭೂತಭವಿಷ್ಯತ್ಸಂಪ್ರತಿ |
ಗೀತಸ್ತುತಪೂಜಿತಾರ್ಹದಭಿವರ್ಣನದೊಳ್ ||
ಮಾತೇಂ ಶಾಂತೀಶ[ಕಥಾ] |
ಖ್ಯಾತಿ ದಲೆಲ್ಲೆಡೆಯೊಳಂ ಮಹೀಮಂಡಳದೊಳ್ || ೫೪ ||

ಚಂ|| ತ್ರಿಜಗದಭಿಷ್ಟುತಂ ತ್ರಿಜಗದಾಶ್ರಯಣಂ ತ್ರಿಜಗಜ್ಜನಸ್ತುತಂ |
ತ್ರಿಜಗದುಪಾಸಿತಂ ತ್ರಿಜಗದುಲ್ಲಸಿತಂ ತ್ರಿಜಗನ್ಮನೋಹರಂ ||
ತ್ರಿಜಗದಲಂಕೃತಂ ತ್ರಿಜಗದೇಕಮತಂ ತ್ರಿಜಗತ್ಸುಖಾಸ್ಪದಂ |
ತ್ರಿಜಗದಘಚ್ಛಿದಂ ತ್ರಿಜಗದೀಶನುತಂ ಕಥೆ ಶಾಂತಿನಾಥನಾ || ೫೫ ||

ಕಂ|| ಕಾಂತಜನಾಂತರದೊಳ್ ಸಲೆ |
ಶಾಂತಿಪುರಾಣಮೆ ಪುರಾಣಚೂಡಾಮಣಿ ಯಿಂ ||
ದಿಂತು ಪೆಸರಿಡುಗುಮೇ ಮತಿ |
ವಂತಂ ಕವಿಚಕ್ರವರ್ತಿ ಸಮೆದೀಕೃತಿಯಂ || ೫೬ ||

ಮ|| ಜಿನಚಂದ್ರಂ ವಿಭು ಶಾಂತಿನಾಥನಜರಂ ಶ್ರೀಶಾಂತಿತೀರ್ಥೇಶ್ವರಂ |
ಜಿನನಾಥಂ ಭವಬದ್ಧನಾಮುಯುಗಳಂ ಶ್ರೀಷೇಣನೇಂದೀ ಜಿನೇಂ ||
ದ್ರನ ಜನ್ಮಂಬರವಾವಿಶೇಷಣವಿಶೇಷ್ಯದ್ವಂದ್ವಮದ್ವಂದ್ವಮಾ |
ಜಿನಚಂದ್ರಪ್ರಭುಗಂ ಜಿನಾಧಿಪತಿಗಂ ಭೂಲೋಕನಾಕೌಘದೊಳ್ || ೫೭ ||

ಉ|| ಷೋಡಶತೀರ್ಥನಾಥಮುದನತ್ತ್ವದ ಪಂಚಮಚಕ್ರವರ್ತಿತಾ ||
ನೀಡದಗಣ್ಯಪುಣ್ಯದಮನಂತಸಿತಾಂತದ ಶಾಂತಿಕಾಂತೆಯೊಳ್ ||
ಕೂಡಿದ ಕೂಟದಗ್ಗಳದ ಮೋಕ್ಷದ ದೀಕ್ಷೆಗೆ ನೋಂತ ಪೆಂಪು ನಾ |
ಡಾಡಿಯೆ ಶಾಂತಿನಾಥಜಿನಚಂದ್ರಮುನೀಂದ್ರನದೇಂ ಕೃತಾರ್ಥನೋ || ೫೮ ||

ಮ|| ಜಿನಚಂದ್ರಂ ಕೃತಿನಾಥ[ನಾದನವನುಂ ತಾಂ]ಶಾಂತಿನಾಥಂ ಪುರಾ |
ತನಕಾವ್ಯಂಗಳು ಮಿಾಗಳಾದ ಶುಕಥಾಕಾವ್ಯಂಗಳುಂ ಪೋಲ್ವುವಿ ||
ಲ್ಲ "ನಭೂತೋ ನಭವಿಷ್ಯತಿಕ್ರಮು" ಮುದಕ್ಕೀಪ್ರೌಢಿಯುಂ ಮಲ್ಲಪ |
ಯ್ಯನುಮತ್ಯುನ್ನತಪುನ್ನಮಯ್ಯನುಮಧೀಶಪ್ರೀತಿಯುಂ ಮಾಡಿದರ್ || ೫೯ ||

ಕಂ|| ಜಿನಚಂದ್ರಂ ಮುನಿಚಂದ್ರನೆ ಶಾಂ |
ತಿನಾಥನೀಶಾಂತಿನಾಥ ನಾ. ಜಿನಚಂದ್ರಂ ||
ಜಿನಚಂದ್ರಮುನೀಂದ್ರನೆ ಶಾಂ |
ತಿನಾಥನಾದೊಂ ಭವಾವಳೀಪಿರಮಣದೊಳ್ || ೬೦ ||

ಉ|| ಅಮ್ಮನಭಕ್ತನುಂ ಗುಣಗಣಾಶ್ರಯನಾತನ ತಮ್ಮನಪ್ಪ ಪು |
ನ್ನಮ್ಮನುಮಟ್ಟಿಯಿಂ ಗುರುಸಮಕ್ಷಪರೋಕ್ಷವಿನೇಯವೃತ್ತಿಯಿಂ ||
ದಮ್ಮನದುಕ್ಕೆವಂ ತಗುಟಿಶಿ ನಿರ್ವಹಣಸ್ಥಿತಿಗುಯ್ದರೀಪುರಾ |
ಣಮ್ಮಹಿರತ್ನಮಿಂತಿದೆಯುಳಂಕೃತಿ ತಾಂ ಕವಿಚಕ್ರವರ್ತಿಯಾ || ೬೧ ||

ಕಂ|| ತಂದೆಯುಭಕ್ತಂ [ಬುಧಜನ] |
ವೃಂದಾರಕನೆನಿಪ ನಾವ್ಪೂ ನಾತನ ತಮ್ಮಂ ||
ಸಂದ ವಿಭು ಪುನ್ನಮಯ್ಯನಿ ||
ದಂ ದುಗ್ಧಾಂಬುಧಿಯನೆಯ್ದೆ ಪರಿಯಿಸಿ ನೆಗಟ್ದಂ || ೬೨ ||

ದ್ವಿಜಕುಲತಿಲಕೋಪಮರ |
ಗ್ರಜಾನುಜರ್ ಮಲ್ಲಪಯ್ಯಪುನ್ನಮಯಂಗಳ್ ||
ನಿಜಗುರುಪರೋಕ್ಷವಿನಯದಿ |
ನಜಿತರ್ ಜಿನಚಂದ್ರಕೃತಿಗೆ ಕಲಶಮನಿಟ್ಟರ್ || ೬೩ ||

ಇದಿರ್ಗೆ ಬರೆ ಪುನ್ನಿಗಂ ಕಿಡಿ |
ಸದಿರಂ ಕವಿಗಮಕಿವಾದಿವಾಗ್ಮಿಗಳ ಕವಿ ||
ತ್ವದ ಗಮಕಿತ್ವದ ವಾದಿ |
ತ್ವದ ವಾಗ್ಮಿತ್ವದ ಪೊಡರ್ಪುಮಂ ದರ್ಪಮುಮಂ || ೬೪ ||

ಪ್ರಕಟಂ ಲೋಕೋತ್ತರಲೌ |
ಕಿಕಪರಿಣತಿ ಪುನ್ನಿಗಂಗೆ ಶಾಂತೀಶ್ವರರಾ ||
ಮಕಥಾಪ್ರಶಸ್ತಿಯಿಂದಾ |
ದ ಕೃತಿಗಳಂ [ಕೃತಿಯುಗಂಗಳ]ನ್ನನ್ನವೊಳವೇ || ೬೫ ||

ಕಂ|| ವಿದಿತಭುವನೈಕರಾಮಾ |
ಭ್ಯುದಯಕ್ಕಂ ಜಲೆಗಮಾವುದಂತರಮಿಂತೀ ||
ಪದಿನಾಲ್ಕುಂ ಭುವನಂಗಳ್ |
ಪದಿನಾಲ್ಕಾಶ್ವಾಸರಚನೆಗಂ ಜಲಿಯುಕ್ಕುಂ || ೬೬ ||

ಶಾಂತಿಪುರಾಣದ ರೇಖೆಗ |
ಳಂತುಟಿದಟಿಗವಿಯ ರೇಖೆ ಬಕ್ಕುಂ ಮೆ ಶಶಭೃ ||
ತ್ಕಾಂತಿಗೆ ಮಿಂಚುಂಬುಟು ಸಮ |
ನೆಂತಕ್ಕುಮೊ ದೊರೆಗಮೊರೆಗಮೊಣೆಗಂ ತೊಣೆಗಂ || ೬೭ ||

ಪನ್ನೆರಡಾಶ್ವಾಸಂಗಳ |
ಬಿನ್ನಣದ ತೆರಳ್ಕೆಯುಂಪಿನೊಪ್ಪಿನ ರಸಮುಂ ||
ಭಿನ್ನರಸಂಗಳ ಸಮುಕ |
ಟ್ಟುನ್ನಿಟ್ಟನೆ ಮೆಜಿಗುಮುಜಿಯೆ ಶಾಂತಿಪುರಾಣಂ || ೬೮ ||

ನೇರಿದುವೆನಿಪೆರಡುಂ ಕವಿ |
ತಾರಸವಿಸಾಸವಣಸೂರ್ವನೊಳ್ ನೆಲಸಿದುವಿಂ ||
ನಾರಾರ ಕವಿತ್ವಮುಮವಿ |
ಚಾರಿತರಮಣೀಯಮಲ್ಲ ಪುರುಳರಸುವುದೇ || ೬೯ ||

ಎರೆದೆಡೆವರ್ಪವನುಂ ಮ |
ಚ್ಚರಿಸುವನುಂ ನುಡಿಗೆ ಸಕ್ಕದಂ ಕನ್ನಡಮುಂ ||
ಬೆರಡುಂ ಕವಿತೆಯ ಬಲ್ಮೆಗೆ |
ಬೆರಲೆತ್ತಿದನಿಳೆಯೊಳೀಕುರುಳ್ಗಳಸವಣಂ || ೭೦ ||

